# ಯುಗಾವತಾರ ಶ್ರೀರಾಮಕೃಷ್ಣ

(ನಾಲ್ಕು ಸಂಪುಟಗಳಲ್ಲಿ)

**ಸಂಪುಟ ೧**

ಸ್ವಾಮಿ ಪುರುಷೋತ್ತಮಾನಂದ





ಶ್ರೀರಾಮಕೃಷ್ಣಾಶ್ರಮ
ಬೆಂಗಳೂರು

YUGĀVATĀRA ŚRĪ RĀMAKRṢṆA (Vol–I) – The first of the FOUR volumes of a comprehensive biography of Sri Ramakrishna in Kannada by Swami Purushottamananda.
Published by Swami Harshananda, President, Sri Ramakrishna Ashrama, Bangalore 560019.

Second Edition: September 1990. Pp. 294 + xviii
Price: Limp: Rs. 20/–   Calico: Rs. 35/–



ಪ್ರಥಮ ಮುದ್ರಣ: ಮಾರ್ಚ್ 1989, 5000 ಪ್ರತಿಗಳು
ದ್ವಿತೀಯ ಮುದ್ರಣ: ಸೆಪ್ಟೆಂಬರ್ 1990, 5000 ಪ್ರತಿಗಳು

ಮುಖಪುಟ ವಿನ್ಯಾಸ : ಚಂದ್ರನಾಥ

ಬೆಲೆ: ಸಾಧಾರಣ ಪ್ರತಿ: ರೂ. 20/–
ಉತ್ತಮ ಪ್ರತಿ: ರೂ. 35/–

ಟೈಪ್‌ಸೆಟ್ಟಿಂಗ್: ಶ್ರೀ ನಿತ್ಯಾನಂದ ಪ್ರಿಂಟರ್ಸ್, ಬೆಂಗಳೂರು–50, ಫೋನ್: 626027
ಆಫ್‌ಸೆಟ್: ಗುರುದತ್ ಪ್ರಿಂಟರ್ಸ್ ಪ್ರೈ. ಲಿಮಿಟೆಡ್, ಬೆಂಗಳೂರು–26, ಫೋನ್: 622230

# ಪರಿವಿಡಿ


| | | | |
|---|---|---|---|
| | ಮುನ್ನುಡಿ | ... | v |
| | ಪ್ರಕಾಶಕರ ಬಿನ್ನಹ | ... | vi |
| | ಚಟರ್ಜಿ ವಂಶವೃಕ್ಷ | ... | vii |
| | ಚಿತ್ರಗಳ ವಿವರಣೆ | ... | viii |
| | ಒಂದು ಮಾತು | ... | ix |
| 1. | ದಿವಿಯಿಂದ ಭುವಿಗೆ | ... | 1 |
| 2. | ಸತ್ಯಶೀಲ 'ರಘುಕುಲ' | ... | 3 |
| 3. | ಕುಲದೇವರ ಒಲುಮೆ | ... | 7 |
| 4. | ದಿವ್ಯ ಸ್ವಪ್ನ | ... | 19 |
| 5. | ಸ್ವಪ್ನ ಸತ್ಯವಾಯಿತು ! | ... | 23 |
| 6. | ಮಹಾಪುರುಷನ ಶುಭೋದಯ | ... | 28 |
| 7. | 'ಮಗುಗಳ ಮಾಣಿಕ್ಯ' | ... | 32 |
| 8. | ಮಾತೆಯಿಂದ ಮೊದಲ ಪಾಠ | ... | 37 |
| 9. | ಪ್ರಥಮ ದಿವ್ಯಾನುಭವ | ... | 44 |
| 10. | ವಿಶಾಲಾಕ್ಷಿಯ ಆವೇಶ | ... | 50 |
| 11. | ಬಾಲಕ ಬೀರಿದ ಬೆಳಕು | ... | 59 |
| 12. | 'ಶಿವಾನಂದಲಹರಿ' | ... | 64 |
| 13. | ಸಂಕ್ರಮಣದಲ್ಲಿ ಸಂಸಾರ | ... | 68 |
| 14. | ವಿಧಿ ತೆರೆದ ದಾರಿ | ... | 72 |
| 15. | ಕಾಮಾರಪುಕುರದ ಕಣ್ಮಣಿ | ... | 75 |
| 16. | ಸೂತ್ರಧಾರ ಗದಾಧರ | ... | 86 |
| 17. | 'ತುತ್ತಿನ ವಿದ್ಯೆಯ ನಾನೊಲ್ಲೆ' | ... | 91 |
| 18. | ಲೀಲಾಕ್ಷೇತ್ರದ ಉದಯ | ... | 97 |
| 19. | ವಿಚಿತ್ರ ಸನ್ನಿವೇಶ | ... | 102 |
| 20. | ಗಂಗಾತೀರದಿ ಗದಾಧರ | ... | 108 |
| 21. | ಹೃದಯರಾಮನ ಆಗಮನ | ... | 112 |
| 22. | ಅರ್ಚಕಪದವಿಯ ಅಂಗೀಕಾರ | ... | 116 |

| | | | |
|---|---|---|---|
| 23. | ವೃಣ್ಮಯವಲ್ಲ, ಚಿನ್ಮಯ ! | ... | 121 |
| 24. | ಶಕ್ತಿಮಂತ್ರದೀಕ್ಷೆ | ... | 126 |
| 25. | ವ್ಯಾಕುಲತೆಗೊಲಿದ ಜಗನ್ಮಾತೆ | ... | 131 |
| 26. | ಅಸಾಧಾರಣ ಸಾಧನೆ, ಅಭೂತಪೂರ್ವ ಅನುಭವ | ... | 140 |
| 27. | 'ಹುಚ್ಚು ಪೂಜಾರಿ' | ... | 148 |
| 28. | ಸೀತಾದರ್ಶನಯೋಗ | ... | 159 |
| 29. | ಶಾಪ ವರವಾಯ್ತು | ... | 166 |
| 30. | ಭಾವಪ್ರೇರಕ–ರಾಮತಾರಕ | ... | 171 |
| 31. | ಕಂಡುಕೇಳದ ಸಂಗತಿಗಳು | ... | 178 |
| 32. | ಜನ್ಮಸ್ಥಳ ಸಂದರ್ಶನ | ... | 186 |
| 33. | ವಿಶಿಷ್ಟ ವಿವಾಹ | ... | 193 |
| 34. | ದಂಗುಬಡಿಸಿದ ದರ್ಶನ | ... | 200 |
| 35. | ಗುರುವಾಗಿ ಬಂದ ಭೈರವಿ | ... | 209 |
| 36. | ಈ ಭೈರವಿ ಸಾಮಾನ್ಯಳಲ್ಲ ! | ... | 214 |
| 37. | ಅವತಾರನೆ ಈ ಅರ್ಚಕ ! | ... | 218 |
| 38. | ಕತ್ತಿಯಲಗಿನ ದಾರಿಯಲ್ಲಿ | ... | 224 |
| 39. | ಅಚ್ಚರಿಯ ಅನುಭವಗಳು | ... | 233 |
| 40. | ರಾಮಪ್ರೇಮಿ ಜಟಾಧಾರಿ | ... | 237 |
| 41. | ಲೀಲಾಮಯ ರಾಮಲಾಲ | ... | 241 |
| 42. | ಮಧುರಭಾವದ ಮಾಧುರ್ಯ | ... | 247 |
| 43. | ಪುರುಷದೇಹ —ಸ್ತ್ರೀಭಾವ | ... | 252 |
| 44. | ಮಹಾಭಾವದ ಅನುಭಾವ | ... | 257 |
| 45. | ಧನ್ಯೆ ನೀ ಚಂದ್ರಮಣಿ ! | ... | 262 |
| 46. | ಸಂನ್ಯಾಸಕ್ಕೆ ಸನ್ನಾಹ | ... | 267 |
| 47. | ಅದ್ವಿತೀಯ ಅದ್ವೈತಸಿದ್ಧಿ | ... | 271 |
| 48. | ಯಾರೀ ತೋತಾಪುರಿ ? | ... | 278 |
| 49. | ಅದ್ವೈತಿಗೊಂದು ದ್ವೈತದ ಪಾಠ | ... | 282 |
| | ಅನುಬಂಧ | ... | 292 |
| | ಗ್ರಂಥಋಣ | ... | 294 |

# ಮುನ್ನುಡಿ

ಈ ಗ್ರಂಥದ ಕರ್ತರಾದ ಸ್ವಾಮಿ ಪುರುಷೋತ್ತಮಾನಂದರು ಈಗಾಗಲೇ 'ಶ್ರೀಶಾರದಾದೇವೀ ಜೀವನಗಂಗಾ' (ಶ್ರೀಮಾತೆಯವರ ಜೀವನಚರಿತ್ರೆ), 'ವೀರಸಂನ್ಯಾಸಿ ವಿವೇಕಾನಂದ', 'ವಿಶ್ವವಿಜೇತ ವಿವೇಕಾನಂದ', 'ವಿಶ್ವಮಾನವ ವಿವೇಕಾನಂದ' (ಸ್ವಾಮಿ ವಿವೇಕಾನಂದರ ಸಮಗ್ರ ಜೀವನಚರಿತ್ರೆ) ಮತ್ತು 'ಬ್ರಹ್ಮಾನುಭವಿ' (ಸ್ವಾಮಿ ಬ್ರಹ್ಮಾನಂದರ ಜೀವನಕಥೆ) ಎಂಬ ಗ್ರಂಥಗಳನ್ನು ರಚಿಸಿದ್ದಾರೆ; ತನ್ಮೂಲಕ ಕನ್ನಡನಾಡಿನಲ್ಲೆಲ್ಲ ಖ್ಯಾತಿಗೊಂಡಿದ್ದಾರೆ. ಅವರು ಈ ಪುಸ್ತಕಗಳನ್ನು ಬರೆದಿರುವುದು ಕನ್ನಡಿಗರ ಒಂದು ಸೌಭಾಗ್ಯ.

ಕೆಲ ತಿಂಗಳ ಹಿಂದೆ ಒಮ್ಮೆ ಪುರುಷೋತ್ತಮಾನಂದರ ಹತ್ತಿರ ಮಾತನಾಡುತ್ತಿದ್ದಾಗ ನಾನು ಅವರಿಗೆ, "ನೀವು ಮಾಡಬೇಕಾದ ಕೆಲಸ ಪೂರ್ಣವಾಗಬೇಕಾದರೆ ಶ್ರೀರಾಮಕೃಷ್ಣರ ಜೀವನವನ್ನು ಕನ್ನಡದ ಜನತೆಗೆ ಕೊಡಬೇಕು" ಎಂದಿದ್ದೆ. ಆಗಿನಿಂದಲೇ ಅವರು ಶ್ರೀರಾಮಕೃಷ್ಣರ ಜೀವನಚರಿತ್ರೆಯನ್ನು ಬರೆಯುವುದಕ್ಕೆ ತೊಡಗಿದರು. ಆದರೆ ಅದು ಇಷ್ಟು ಬೇಗ ಕೃತಿರೂಪಕ್ಕೆ ಬರಬಹುದೆಂದು ನಾನು ಭಾವಿಸಿರಲಿಲ್ಲ! ಅಚ್ಚಾದ ಕೆಲವು ಪುಟಗಳನ್ನು ನನಗೆ ಅವರು ಕಳುಹಿಸಿಕೊಟ್ಟಾಗಲೇ ಗೊತ್ತಾಗಿದ್ದು, ಎಂತಹ ವೇಗದಲ್ಲಿ — ಮನೋವೇಗದಲ್ಲಿ — ಬರೆದಿದ್ದಾರೆ ಎಂಬುದು. ಅವರ ಕೃತಿಗಳಲ್ಲಿ ಈ "ಯುಗಾವತಾರ ಶ್ರೀರಾಮಕೃಷ್ಣ" ಎಂಬುದು ಒಂದು ಮೇರುಕೃತಿ.

ನನ್ನನ್ನು ಮೊದಲು ಆಕರ್ಷಿಸಿದ್ದು ಅಧ್ಯಾಯಗಳ ಶಿರೋನಾಮೆಗಳು. ಅವು ಬಹಳ ಮುದ್ದಾಗಿವೆ. ಮತ್ತು ಇಡೀ ಅಧ್ಯಾಯದ ಸಾರವನ್ನು ಮನಮುಟ್ಟುವಂತೆ ತಿಳಿಸುತ್ತವೆ. ಇಂತಹ ಒಂದು ಬೃಹತ್ ಗ್ರಂಥವನ್ನು ಬರೆಯುವಾಗ, ಎಲ್ಲೂ ಬೇಸರವಾಗದಂತೆ, ಮುಂದೇನು ಎಂಬ ಸ್ವಾರಸ್ಯವನ್ನು ಕೆರಳಿಸುವಂತೆ ಮಾಡುವುದು ಬಹಳ ಮುಖ್ಯ. ಈ ರಹಸ್ಯವನ್ನು ಗ್ರಂಥಕರ್ತರು ಚೆನ್ನಾಗಿ ಅರಿತಿದ್ದಾರೆ.

"ಯುಗಾವತಾರ ಶ್ರೀರಾಮಕೃಷ್ಣ" ಎಂಬ ಈ ಗ್ರಂಥ ಕನ್ನಡನಾಡಿನಲ್ಲಿ ಹೆಚ್ಚೆಚ್ಚು ಪ್ರಚಾರವಾಗಲೆಂದು ಹಾರೈಸುತ್ತೇನೆ. ಶ್ರೀರಾಮಕೃಷ್ಣರಿಗೆ ಸಂಬಂಧಪಟ್ಟ ಗ್ರಂಥಗಳು ಕನ್ನಡದಲ್ಲಿ ಆದಾಗಲೇ ಹಲವಿವೆ. ಹಾಗಿದ್ದರೂ ಕೂಡ, ಅವರ ವಿಷಯವನ್ನು ಎಷ್ಟು ಬರೆದರೂ ಮುಂದೆ ಬರುವವರಿಗೂ ಸಹ ಬರೆಯಲು ಬೇಕಾದಷ್ಟು ಅವಕಾಶವಿದ್ದೇ ಇದೆ. ಏಕೆಂದರೆ ಶ್ರೀರಾಮಕೃಷ್ಣರು ಅನಂತ ಭಾವಮಯರು. ಅವರ ಕುರಿತಾದ ಯಾವುದಾದರೊಂದು ಅಂಶವನ್ನು ಮನನ ಮಾಡುತ್ತಿರುವಾಗ, ಇನ್ನೂ ಯಾವುದಾದರೂ ಹೊಸ ಬೆಳಕು ಕಾಣಬಹುದು. ಆದ್ದರಿಂದ ಇಂತಹ ಗ್ರಂಥಗಳು ಎಷ್ಟು ಜಾಸ್ತಿ ಇದ್ದರೆ ಅಷ್ಟು ಮೇಲು. ಒಂದನ್ನು ಓದಿದವರಿಗೆ, ಮತ್ತೊಬ್ಬ ಲೇಖಕರು ಇದೇ ಅಂಶವನ್ನು ಹೇಗೆ ಬರೆದಿರಬಹುದು ಎಂಬ ಕುತೂಹಲ ಕೆರಳುತ್ತದೆ. ಹಾಗೆ ಓದಿನೋಡಿದಾಗ, ಹಲವಾರು ದೃಷ್ಟಿಕೋನಗಳಿವೆ ಎಂಬುದು ಗೊತ್ತಾಗುತ್ತದೆ. "ಅಧಿಕಸ್ಯ ಅಧಿಕಂ ಫಲಂ" ಅಲ್ಲವೆ?

"ಯುಗಾವತಾರ ಶ್ರೀರಾಮಕೃಷ್ಣ" ಎಲ್ಲೆಡೆ ಜನಪ್ರಿಯವಾಗಲಿ. ಇದರಿಂದ ಬರೆದವರೂ ಪುಣ್ಯ ಪಡೆಯುತ್ತಾರೆ, ಓದಿದವರೂ ಪುಣ್ಯ ಪಡೆಯುತ್ತಾರೆ. ಸ್ವಾಮಿ ಪುರುಷೋತ್ತಮಾನಂದರು ಕನ್ನಡನಾಡಿಗೆ ಇಂತಹ ಗ್ರಂಥವನ್ನು ಕೊಟ್ಟಿದ್ದು ನಾವು ಬಹಳ ಕಾಲ ನೆನೆಯುವಂತಹ ಕೊಡುಗೆ. ಇಂತಹ ಹಲವು ಕೃತಿಗಳು ಅವರ ಕೈಯಿಂದ ಬರಲಿ ಎಂದು ಹಾರೈಸುತ್ತೇನೆ.

ಸ್ವಾಮಿ ಸೋಮನಾಥಾನಂದ

12–2–89 ಅಧ್ಯಕ್ಷರು, ಶ್ರೀರಾಮಕೃಷ್ಣಾಶ್ರಮ, ಮೈಸೂರು.

# ಪ್ರಕಾಶಕರ ಬಿನ್ನಹ

## (ದ್ವಿತೀಯ ಮುದ್ರಣ)

ಕೇವಲ ಹದಿನೆಂಟು ತಿಂಗಳಲ್ಲಿ ಇಷ್ಟು ಗಾತ್ರದ ಪುಸ್ತಕದ 5000 ಪ್ರತಿಗಳೂ ಖರ್ಚಾಗಿ ಹೋಗಿವೆಯೆಂದಮೇಲೆ ಈ ಗ್ರಂಥದ ಜನಪ್ರಿಯತೆಗೆ ಮತ್ತಾವ ಪುರಾವೆಯೂ ಬೇಕಿಲ್ಲ ! ಗ್ರಂಥದಲ್ಲಿ ಚಿತ್ರಿಸಿರುವ ವ್ಯಕ್ತಿ ಯುಗಾವತಾರರೆನಿಸಿಕೊಂಡ ಭಗವಾನ್ ಶ್ರೀರಾಮಕೃಷ್ಣರು; ಚಿತ್ರಣದ ಶೈಲಿ ನವ್ಯ, ಆಕರ್ಷಕ. ಎರಡೂ ಸೇರಿದರೆ ಚಿನ್ನಕ್ಕೆ ಪರಿಮಳ ಬಂದಂತೆಯೇ ಅಲ್ಲವೇ ?

ಈಗ ಪುನರ್ಮುದ್ರಣ ಮಾಡಿ ನಿಮ್ಮ ಮುಂದಿಡುತ್ತಿದ್ದೇವೆ, ಸ್ವೀಕರಿಸಿ. ಉಳಿದ ಭಾಗಗಳೂ ನಿಮ್ಮಲ್ಲಿದ್ದರೆ ಉತ್ತಮ, ಇಲ್ಲದಿದ್ದರೆ ಈಗಲೇ ಖರೀದಿಸಿ. ಅವೂ ತುಂಬ ಬೇಗ ಖರ್ಚಾಗುತ್ತಿರುವುದರಿಂದ ನಿಮ್ಮ ಪ್ರತಿಯನ್ನು ಈಗಲೇ ಕಾದಿರಿಸಿಕೊಳ್ಳುವುದು ದೂರದರ್ಶಿಗಳ ಲಕ್ಷಣ.

ಹಿಂದಿನಂತೆಯೇ ಬೆಲೆಯನ್ನು ಕಡಮೆ ಮಾಡಲು ಸಹಕರಿಸಿದ ಎಲ್ಲ ಭಕ್ತರಿಗೂ ನಮ್ಮ ಕೃತಜ್ಞತೆಗಳು. ಅಂದವಾಗಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಶ್ರೀ ನಿತ್ಯಾನಂದ ಪ್ರಿಂಟರ್ಸ್ ಅವರಿಗೆ ನಾವು ಆಭಾರಿ.

ಶ್ರೀಗಣೇಶಚತುರ್ಥಿ
24.8.1990

**ಸ್ವಾಮಿ ಹರ್ಷಾನಂದ**
ಅಧ್ಯಕ್ಷರು
ಶ್ರೀರಾಮಕೃಷ್ಣಾಶ್ರಮ
ಬೆಂಗಳೂರು

# ಚಟರ್ಜಿ ವಂಶವೃಕ್ಷ



ಮಾಣಿಕರಾಮ ಚಟ್ಟೋಪಾಧ್ಯಾಯ
ಕ್ಷುದಿರಾಮ
(ಚಂದ್ರಮಣಿ)
ರಾಮಶೀಲಾ
(ಭಾಗವತ ವಂದ್ಯೋಪಾಧ್ಯಾಯ)
ನಿಧಿರಾಮ
ಕನ್ಯೈರಾಮ
ರಾಮಚಾಂದ
ಹೇಮಾಂಗಿನಿ (–ಕೃಷ್ಣಚಂದ್ರ ಮುಖ್ಯೋಪಾಧ್ಯಾಯ)
ರಾಮತಾರಕ (ಹಲಧಾರಿ)
ಕಾಳೀದಾಸ
ರಾಘವ
ರಾಮರತನ
ಹೃದಯ
ರಾಜಾರಾಮ
ದೀನನಾಥ
ರಾಮದಾಸ
ಹರಮಣಿ
ರಾಮಕುಮಾರ
ಕಾತ್ಯಾಯನಿ
ರಾಮೇಶ್ವರ
ಶ್ರೀರಾಮಕೃಷ್ಣ
ಸರ್ವಮಂಗಳೆ
ಅಕ್ಷಯ
ಸಾರದಾಚರಣ
ಶೀತಲಮಣಿ
ರಾಮಲಾಲ
ಲಕ್ಷ್ಮೀ
ಶಿವರಾಮ

## ಚಿತ್ರಗಳ ವಿವರಣೆ

1. ಶ್ರೀರಾಮಕೃಷ್ಣರು.
2. ಶ್ರೀರಾಮಕೃಷ್ಣರ ಜನ್ಮಸ್ಥಳ. ಪಕ್ಕದಲ್ಲಿ ಕಾಣುವುದೇ ಶಿವದೇವಾಲಯು. ಗದಾಧರನ ಜನನಕ್ಕೆ ಮುಂಚೆ ಚಂದ್ರಮಣಿಗೆ ದಿವ್ಯಜ್ಯೋತಿಯೊಂದು ತನ್ನೊಳಹೊಕ್ಕ ಅನುಭವವಾದುದು ಇಲ್ಲಿಯೇ.
3. ಶ್ರೀರಾಮಕೃಷ್ಣರ ಮನೆಯಲ್ಲಿ ಪೂಜಿಸಲ್ಪಡುತ್ತಿದ್ದ ಮನೆದೇವರುಗಳು. ಎಡಬದಿಯಲ್ಲಿರುವ ಕಲಶ ಶೀತಲಾದೇವಿಯ ಸಂಕೇತ; ಮಧ್ಯದಲ್ಲಿರುವುದು ಕ್ಷುದಿರಾಮನು ರಾಮೇಶ್ವರದಿಂದ ತಂದ ಶಿವಲಿಂಗ; ಬಲಬದಿಯಲ್ಲಿರುವುದು ಕ್ಷುದಿರಾಮನಿಗೆ ಅದ್ಭುತ ರೀತಿಯಲ್ಲಿ ದೊರೆತ ರಘುವೀರ ಸಾಲಿಗ್ರಾಮ.
4. ಲಾಹಾ ಮನೆತನದವರ ಪಾಠಶಾಲೆ.
5. ಸೀತಾನಾಥ ಪೈನೆಯ ಮನೆ.
6. ದಕ್ಷಿಣೇಶ್ವರದ ದೇವಾಲಯಗಳ ಒಂದು ನೋಟ.
7. ರಾಣಿ ರಾಸಮಣಿ.
8. ಮಥುರಾನಾಥ ವಿಶ್ವಾಸ.
9. ಭವತಾರಿಣಿ ಕಾಳಿ.
   ವಿಗ್ರಹದ ಎಡಬದಿಯಲ್ಲಿ ತೂಗುಹಾಕಿರುವ ಖಡ್ಗವನ್ನು ಗಮನಿಸಿ.
10. ಕಾಳೀ ಮಾತೆ—ಹತ್ತಿರದ ನೋಟ.
11. ನಟಮಂದಿರದ ಮೇಲಿರುವ ಭೈರವಮೂರ್ತಿ (ನೋಡಿ: ಪುಟ 141).
12. ಶ್ರೀರಾಮಕೃಷ್ಣರು ಸರಿಪಡಿಸಿದ ಗೋವಿಂದನ ವಿಗ್ರಹ. ಕಾಲಾಂತರದಲ್ಲಿ ಇದನ್ನು ಬದಲಾಯಿಸಲಾಯಿತು.
13. ಬಿಲ್ವವೃಕ್ಷ—ಶ್ರೀರಾಮಕೃಷ್ಣರ ತಂತ್ರಸಾಧನೆಗಳಿಗೆ ಆಶ್ರಯಸ್ಥಾನ.
14. ಶ್ರೀರಾಮಕೃಷ್ಣರಿಗೆ ಮೈದೋರಿದ ಲೀಲಾಮಯ ರಾಮಲಾಲ.
15. ದಕ್ಷಿಣೇಶ್ವರ ದೇವಾಲಯಗಳ ನಕ್ಷೆ.


DAKSHINESWAR TEMPLE
Main gate
Calcutta, 4 miles
N
Back gate
Tank
Orchard
Orchard
Bel tree (vilwa)
Orchard
Tank
Kitchens, stores, dining rooms, offices, guestrooms
Radhakanta temple
Plate-washing ghat
Goose tank
Kuthi
Natmandir
Courtyard
Kali temple
Meditation room (hut)
Panchavati
Banyan
Bakultala ghat
Chandni
Shiva temples
Pine grove (Jhautala)
Nahabat of Holy Mother
Main ghat
Nahabat
Flower gardens
Gate to courtyard
Sri Ramakrishna's room
G A N G E S
S.E.
N.E. veranda
N.
Semicircular porch
0
100'
200'
300'
400'

# ಒಂದು ಮಾತು

ಶ್ರೀರಾಮಕೃಷ್ಣರ ಪರಮಭಕ್ತ ಗಿರೀಶಚಂದ್ರ ಘೋಷ್ ಒಮ್ಮೆ ಸ್ವಾಮಿ ವಿವೇಕಾನಂದರೊಡನೆ ಹೇಳುತ್ತಾನೆ, "ಸ್ವಾಮೀಜಿ, ನೀವು ಶ್ರೀರಾಮಕೃಷ್ಣರ ನಿಕಟ ಸಂಪರ್ಕದಲ್ಲಿದ್ದವರು; ಅವರನ್ನು ಸನಿಹದಿಂದ ಕಂಡವರು. ನೀವೇಕೆ ಅವರ ದಿವ್ಯ ಜೀವನಚರಿತ್ರೆಯನ್ನು ವಿಸ್ತಾರವಾಗಿ ಬರೆಯಬಾರದು?" ಆಗ ವಿವೇಕಾನಂದರು ಉದ್ವಿಗ್ನರಾಗಿ ಹೇಳುತ್ತಾರೆ, "ನೀವು ನನಗೆ ಅಗಾಧ ಸಾಗರವನ್ನು ಬತ್ತಿಸಿಬಿಡಲು ಹೇಳಿ, ನಾನದನ್ನು ಮಾಡುತ್ತೇನೆ; ಬೇಕೆಂದರೆ, ಪರ್ವತಗಳನ್ನು ಕುಟ್ಟಿ ಪುಡಿ ಮಾಡಲು ಹೇಳಿ, ಅದನ್ನೂ ಮಾಡಬಲ್ಲೆ. ಆದರೆ ಶ್ರೀರಾಮಕೃಷ್ಣರ ಜೀವನಚರಿತ್ರೆಯನ್ನು ಬರೆಯುವ ಕೆಲಸ! ಇದೊ ಕೈ ಮುಗಿಯುತ್ತೇನೆ, ಅದೊಂದನ್ನು ಮಾತ್ರ ಹೇಳಬೇಡಿ!"

ಇದೇನಿದು! ಅತ್ಯಂತ ಕಠಿಣವಾದ ವೇದಾಂತ-ಉಪನಿಷದ್ರಹಸ್ಯಗಳನ್ನು ಆ ಪರಕೀಯ ಭಾಷೆಯಲ್ಲಿ ಪುಂಖಾನುಪುಂಖವಾಗಿ ವಿವರಿಸಬಲ್ಲ ಅಸದಳ ಸಾಮರ್ಥ್ಯದ ಸ್ವಾಮಿ ವಿವೇಕಾನಂದರು, ಸಾಮಾನ್ಯ ಕಥೆಗಾರನೊಬ್ಬ ಮಾಡಬಹುದಾದ ಜೀವನಚರಿತ್ರೆ ಬರೆಯುವ ಕಾರ್ಯವನ್ನು ತಮ್ಮಿಂದ ಸಾಧ್ಯವಾಗದೆಂದುಬಿಟ್ಟರಲ್ಲ! ಅದರಲ್ಲೂ ಅವರು ಶ್ರೀರಾಮಕೃಷ್ಣರನ್ನು ಬಗೆಬಗೆಯಾಗಿ ಪ್ರಶ್ನಿಸಿ, ಪರಿಕಿಸಿ, ಪರಿಪಾಡು ಪಡಿಸಿ ಅವರ ಒಳಹೊರಗನ್ನು ಅರಿತವರು! ಅಷ್ಟೇ ಅಲ್ಲ, ಅವರ ಸಮಸ್ತ ಸಾಧನಸಂಪತ್ತನ್ನು—ಆಧ್ಯಾತ್ಮಿಕ ಶಕ್ತಿಯನ್ನು ಧಾರೆಯೆರೆಸಿಕೊಂಡವರು! ಶ್ರೀರಾಮಕೃಷ್ಣರ ಜೀವನಕಥೆಯನ್ನು ಬರೆಯುವ ಕಾರ್ಯ ತಮ್ಮಿಂದ ಸಾಧ್ಯವಿಲ್ಲ ಎಂದು ಅವರೇ ಹೇಳಿಬಿಟ್ಟರೆ, ಮತ್ತೆ ಇನ್ನಾರಿಂದಾದೀತು? ಸಾಮಾನ್ಯರಾದ ನಮ್ಮಂಥವರಿಂದಲೇ?

ಆದರೆ ಇಲ್ಲೊಂದು ಆಲೋಚನೀಯ ಅಂಶವಿದೆ. ವಿವೇಕಾನಂದರು ಹಾಗೆಂದುದಕ್ಕೆ ಒಂದು ಪ್ರಬಲ ಕಾರಣವಿತ್ತು. ಅವರು ತಮ್ಮ ಗುರುದೇವನ ಬಗ್ಗೆ ಮಾತನಾಡಲು ಬಾಯ್ದೆರೆದರೆ ಸಾಕು, ತಕ್ಷಣವೇ ಶ್ರೀರಾಮಕೃಷ್ಣರ ಅಲೌಕಿಕ ಪ್ರೇಮ, ಅವರಿಂದ ತಾವು ಪಡೆದ ಪ್ರೀತಿ, ಆದರ, ವಾತ್ಸಲ್ಯ, ಬಣ್ಣಿಸಿದಷ್ಟೂ ತೀರದ ಅವರ ಅನಂತ ಭಾವಗಳು, ಅವರ ಪರಿಪೂರ್ಣ ವ್ಯಕ್ತಿತ್ವದ ಕೋಟಿಕೋಟಿ ಮುಖಗಳು, ಅಳೆಯಲಾಗದ ಆಳ ಅಗಲಗಳ ಅವರ ಮಹಿಮೆ—ಇವೆಲ್ಲವೂ ಒಮ್ಮೆಗೇ ಸ್ಮೃತಿಪಟಲದಲ್ಲಿ ಒತ್ತರಿಸಿ ಬಂದು, ಮನಸ್ಸು ಉತ್ಕಟ ಆನಂದಾನುಭವದಿಂದ ಮೂಕವಾಗುತ್ತಿತ್ತು. ಇನ್ನು ಮಾತು ಮುಂದುವರಿಯುವುದೆಲ್ಲಿ ಬಂತು? ಅಮೆರಿಕದಲ್ಲೊಮ್ಮೆ ಅವರ ಶಿಷ್ಯರು, ಶ್ರೀರಾಮಕೃಷ್ಣರ ಕುರಿತಾಗಿ ಮಾತನಾಡಲೇಬೇಕು ಎಂದು ಕೇಳಿಕೊಂಡಾಗ, ಪ್ರೀತಿಯ ಒತ್ತಾಯಕ್ಕೆ ಮಣಿದು ಮಾತಿಗಾರಂಭಿಸಿದರು. ಸುದೀರ್ಘವಾಗಿಯೇ ಮಾತನಾಡಿದರು. ಆ ಭಾಷಣವೇ ಇಂದು 'My Master' ಎಂಬ ಪುಟ್ಟ ಪುಸ್ತಕರೂಪದಲ್ಲಿದೆ. ಆದರೆ ಆ ಇಡೀ ಭಾಷಣದಲ್ಲಿ ಒಮ್ಮೆಯಾದರೂ 'ರಾಮಕೃಷ್ಣ' ಎಂಬ ಶಬ್ದ ಬಂದಿರಬೇಕಲ್ಲ! ಇಲ್ಲವೇ ಇಲ್ಲ. ಏಕೆಂದರೆ ತಮ್ಮ ಪ್ರಾಣಪ್ರಿಯರಾದ ಶ್ರೀರಾಮಕೃಷ್ಣರ ಹೆಸರನ್ನು ಉಚ್ಚರಿಸುತ್ತ ಮಾತನಾಡಿದ್ದರೆ ಆ ಭಾಷಣ ಮುಂದುವರಿಯುತ್ತಲೇ ಇರಲಿಲ್ಲ. ಹೀಗೆ, ಶ್ರೀರಾಮಕೃಷ್ಣರ ಕುರಿತಾಗಿ ಮಾತನಾಡಲೇ ಕಷ್ಟವಾದಮೇಲೆ, ಇನ್ನು ಅವರ ವಿಷಯವಾಗಿ ಭಾವಿಸುತ್ತ ಆಲೋಚಿಸುತ್ತ ಜೀವನಚರಿತ್ರೆಯನ್ನು ಬರೆಯಲು ಕುಳಿತರೆ, ವಿವೇಕಾನಂದರ ಮನಸ್ಸು ಸಮಾಧಿಮಗ್ನವಾಗುವುದೇ ಖಂಡಿತ! ಹೀಗಾಗಿ ಅವರಿಂದ ಶ್ರೀರಾಮಕೃಷ್ಣರ ಜೀವನಚರಿತ್ರೆ ಬಾರದೆಹೋಯಿತು.

ಅಂತೂ ಶ್ರೀರಾಮಕೃಷ್ಣರ ಬಗೆಗಿನ ಭಾವಾತಿಶಯವು ವಿವೇಕಾನಂದರಿಂದ ಅವರ ಜೀವನೇತಿಹಾಸವನ್ನು ಬರೆಯಗೊಡಲಿಲ್ಲ. ಆದರೆ ನಮ್ಮಂಥವರಿಗೆ ಅಂತಹ ತೊಂದರೆಯೇನಿಲ್ಲ! ನಮ್ಮಲ್ಲಿಯೂ ಭಾವವಿರಬಹುದು; ಆದರೆ ಅಲ್ಲಿ ಅತಿಶಯತೆಯಿಲ್ಲ. ಅಲ್ಲದೆ, ಇನ್ನೊಂದು ಅಂಶವಿದೆ ಇಲ್ಲಿ. ಪರ್ವತಶ್ರೇಣಿಯ ಚಿತ್ರ ರಚಿಸಬೇಕೆಂಬವರು ಅದರ ಮೇಲೆ ವಾಸವಾಗಿದ್ದರೆ ಆ ಕಾರ್ಯ ಅವರಿಂದ ಸಾಧ್ಯವಾಗುವುದಲ್ಲ. ಪರ್ವತದಿಂದ ಸ್ವಲ್ಪ ದೂರದಲ್ಲಿ ನಿಂತವರಿಂದಲೇ ಅದು ಸಾಧ್ಯ.

ಶ್ರೀರಾಮಕೃಷ್ಣರ ಇನ್ನೊರ್ವ ನೇರ ಶಿಷ್ಯರಾದ ಸ್ವಾಮಿ ಶಾರದಾನಂದರು 'ಶ್ರೀರಾಮಕೃಷ್ಣ ಲೀಲಾ ಪ್ರಸಂಗ' ಎಂಬ ಗ್ರಂಥವನ್ನು ಬರೆದು ಅದಕ್ಕೊಂದು ಅವಕಾಶ ಕಲ್ಪಿಸಿದರು. ಶ್ರೀರಾಮಕೃಷ್ಣರ ಜೀವನದ ಕುರಿತಾದ ಮೊಟ್ಟಮೊದಲ ಅಧಿಕೃತ ದಾಖಲೆ ಈ ಕೃತಿ. ಆದರೆ ಸ್ವಾಮಿ ಶಾರದಾನಂದರ ಉದ್ದೇಶ ಶ್ರೀರಾಮಕೃಷ್ಣರ ಜೀವನದ ಘಟನೆಗಳನ್ನು ತಿಳಿಸುವುದಷ್ಟೇ ಆಗಿರದೆ, ಅದಕ್ಕೊಂದು ತಾತ್ತ್ವಿಕ ನೆಲೆಗಟ್ಟನ್ನು ಒದಗಿಸಿ ವಿವರಿಸುವುದೂ ಆಗಿತ್ತು. ಹೀಗಾಗಿ ಕೇವಲ ಘಟನಾವಳಿಗಳನ್ನು ತಿಳಿಯುವ ಉದ್ದೇಶದಿಂದ ಈ ಕೃತಿಯನ್ನು ಪ್ರವೇಶಿಸುವವರಿಗೆ ಅದು ಕೆಲಮಟ್ಟಿಗೆ ನಿಲುಕದೆ ಹೋಗುತ್ತದೆ.

ಈ ಗ್ರಂಥದ ಬಳಿಕ ಶ್ರೀರಾಮಕೃಷ್ಣರ ಜೀವನಚರಿತ್ರೆಗಳು ಹಲವಾರು ಬಂದುವು; ಕನ್ನಡದಲ್ಲೂ ಕೆಲವು ಪ್ರಕಟಗೊಂಡವು. ಆ ದಿವ್ಯ ಗುರುವಿನ ವ್ಯಕ್ತಿತ್ವದ ಬಹುಮುಖ ಆಯಾಮಗಳು ಈ ಎಲ್ಲ ಕೃತಿಗಳಲ್ಲೂ ಒಂದೊಂದು ಬಗೆಯಾಗಿ ಪ್ರಕಟಗೊಂಡಿರುವುದನ್ನು ಕಾಣಬಹುದು. ಅಲ್ಲದೆ ಇವನ್ನೆಲ್ಲ ಓದಿದಾಗ, ಶ್ರೀರಾಮಕೃಷ್ಣರ ಜೀವನಚರಿತ್ರೆಗಳು ಇನ್ನೂ ಹಲವು ಬಂದರೆ ನಷ್ಟವಿಲ್ಲವಷ್ಟೇ ಅಲ್ಲ, ಲಾಭವೂ ಉಂಟು ಎಂದೆನಿಸದೆ ಇರದು. ಪ್ರತಿಯೊಂದೂ ಇನ್ನೊಂದಕ್ಕೆ ಪೂರಕ, ಮುಂದಿನ ಬೆಳವಣಿಗೆಗೆ ಸಹಾಯಕ.

ಪ್ರಸ್ತುತ ಗ್ರಂಥ 'ಯುಗಾವತಾರ ಶ್ರೀರಾಮಕೃಷ್ಣ'ದ ಮುಖ್ಯ ಉದ್ದೇಶ ಇದು: ಶ್ರೀರಾಮಕೃಷ್ಣರ ಜೀವನವನ್ನು ಅತ್ಯಂತ ಸರಳವಾದ ರೀತಿಯಲ್ಲಿ, ಆದರೆ ವಿಷಯವನ್ನು ಎಲ್ಲಿಯೂ ಲಘುವಾಗಿಸದೆ, ಸಾದ್ಯಂತವಾಗಿ ಸವಿವರವಾಗಿ ಸಾಮಾನ್ಯ ಮನುಷ್ಯನ ಮುಂದಿಡುವುದು. ಶ್ರೀರಾಮಕೃಷ್ಣರ ಜೀವನವು ಸಾಧ್ಯವಾದಷ್ಟೂ ಅವನ ಕಣ್ಣಿಗೆ ಕಟ್ಟುವಂತೆ ಮಾಡುವುದು. ತನ್ಮೂಲಕ ಆ ಜೀವನದೀಪದ ಸಹಾಯದಿಂದ ತನ್ನ ಸೊಡರನ್ನು ಬೆಳಗಿಕೊಳ್ಳಲು ಅನುವು ಮಾಡಿಕೊಡುವುದು. ಶ್ರೀಗುರುಕೃಪೆಯಿಂದ ಈ ಉದ್ದೇಶ ಸಾರ್ಥಕವಾಗಲಿ!

**ಸ್ವಾಮಿ ಪುರುಷೋತ್ತಮಾನಂದ**

೧

# ದಿವಿಯಿಂದ ಭುವಿಗೆ

ನಮ್ಮದಿದು ಸ್ಥೂಲವಾದ ಭೂಲೋಕ. ಈ ಭೂಲೋಕವನ್ನು ಕ್ರಮಿಸಿ ಮೇಲೇರಿದರೆ ಸೂಕ್ಷ್ಮವಾದ ಭುವರ್ಲೋಕ. ಭುವರ್ಲೋಕವನ್ನೂ ಕ್ರಮಿಸಿ ಮೇಲೇರಿದರೆ ಇನ್ನೂ ಸೂಕ್ಷ್ಮವಾದ ಸುವರ್ಲೋಕ. ಈ ಸುವರ್ಲೋಕವನ್ನೂ ಕ್ರಮಿಸಿ ಮೇಲೇರಿದರೆ ಮತ್ತೂ ಸೂಕ್ಷ್ಮವಾದ ಮಹರ್ಲೋಕ. ಮಹರ್ಲೋಕವನ್ನೂ ಕ್ರಮಿಸಿ ಮೇಲೇರಿದರೆ ಜನೋಲೋಕ. ಈ ಜನೋಲೋಕವನ್ನೂ ಕ್ರಮಿಸಿ ಮೇಲೇರಿದರೆ ತಪೋಲೋಕ. ತಪೋಲೋಕವನ್ನೂ ಕ್ರಮಿಸಿ ಮೇಲೇರಿದರೆ ಸೂಕ್ಷ್ಮಾತಿಸೂಕ್ಷ್ಮವಾದ ಸತ್ಯಲೋಕ. ಈ ಸತ್ಯಲೋಕದ ಆಚೆಗಿರುವುದೇ ನಿರಾಕಾರ ಸಚ್ಚಿದಾನಂದ ಸಾಗರ! ಈ ಪ್ರದೇಶದಲ್ಲಿ ಯಾವ ಮರ್ತ್ಯನೂ ಕಾಣಸಿಗುವುದಿಲ್ಲ. ದೇವತೆಗಳೂ ಕೂಡ, ಅತ್ಯುನ್ನತ, ಉದಾತ್ತ ಹಾಗೂ ಸೂಕ್ಷ್ಮಾತಿಸೂಕ್ಷ್ಮವಾದ ಈ ಪ್ರದೇಶದೊಳಗೆ ಪ್ರವೇಶ ಮಾಡುವ ಮಾತಂತಿರಲಿ, ಇದರೊಳಗೆ ಇಣಕಿ ಕೂಡ ನೋಡುವ ಧೈರ್ಯವಿಲ್ಲ ಅವರಿಗೆ! ಅವರೆಲ್ಲ ಇಲ್ಲಿಗಿಂತ ಎಷ್ಟೋ ಕೆಳಗೆ ತಮ್ಮ ಸ್ಥಾನವನ್ನು ಕಂಡುಕೊಂಡು ತೃಪ್ತಿಪಟ್ಟುಕೊಳ್ಳಬೇಕು ಅಷ್ಟೆ. ಈ ಅಖಂಡ ಸಚ್ಚಿದಾನಂದ ಸಾಗರದಲ್ಲಿ ಸಪ್ತ ಋಷಿಗಳು ಸಮಾಧಿಮಗ್ನರಾಗಿ ಕುಳಿತಿದ್ದಾರೆ. ಆ ಋಷಿಗಳನ್ನು ಕಂಡಾಗ, ಅವರು ಜ್ಞಾನದಲ್ಲೇ ಆಗಲಿ, ಪವಿತ್ರತೆಯಲ್ಲೇ ಆಗಲಿ, ತ್ಯಾಗದಲ್ಲೇ ಆಗಲಿ, ಪ್ರೇಮದಲ್ಲೇ ಆಗಲಿ ಕೇವಲ ಮಾನವರನ್ನಷ್ಟೇ ಅಲ್ಲ, ದೇವತೆಗಳನ್ನೂ ಮೀರಿಸಿದ್ದಾರೆ ಎಂದೆನಿಸದಿರದು. ಆ ಸಪ್ತಋಷಿಗಳು ನೀರವ ಧ್ಯಾನದಲ್ಲಿ ನಿಮಗ್ನರಾಗಿ ಮಹದಾನಂದದಲ್ಲಿ ಮತ್ತರಾಗಿರುತ್ತಿದ್ದರೆ, ಇದ್ದಕ್ಕಿದ್ದಂತೆ ಆ ಅಖಂಡ ಸಚ್ಚಿದಾನಂದದ ಒಂದಂಶ ಹಾಗೇ ಘನೀಭೂತವಾಗಿ ಒಂದು ದಿವ್ಯ ಶಿಶುವಿನ ರೂಪ ತಾಳಿತು. ಆ ದಿವ್ಯ ಶಿಶು ಮೆಲ್ಲನೆ ತೇಲಿಕೊಂಡು ಒಬ್ಬ ಋಷಿಯ ಬಳಿಗೆ ಬಂದಿತು. ಭುವನಮೋಹಕವಾದ ತನ್ನ ಸುಕೋಮಲ ಕರಗಳಿಂದ ಆ ಋಷಿಯು ಕೊರಳನ್ನು ಬಳಸಿ ಹಿಡಿದುಕೊಂಡಿತು. ಬಳಿಕ ಮೃದು ಮಧುರವಾದ ತನ್ನ ಜೇನುಕಂಠದಿಂದ ಋಷಿಯನ್ನು ಕರೆಯುತ್ತ, ಸಮಾಧಿಸ್ಥವಾದ ಅವನ ಮನಸ್ಸನ್ನು ಕೆಳಗೆಳೆದು ತನ್ನೆಡೆಗೆ ಸೆಳೆಯುವ ಪ್ರಯತ್ನ ಮಾಡಿತು. ಶಿಶುವಿನ ಐಂದ್ರಜಾಲಿಕ ಸ್ಪರ್ಶವು ಋಷಿಯ ಮನಸ್ಸನ್ನು ತುರೀಯ ಸ್ಥಿತಿಯಿಂದ ಕೆಳಗಿಳಿಸಿತು. ಋಷಿಯ ಧ್ಯಾನ ನಿಮೀಲಿತ ನಯನಗಳು ಮೆಲ್ಲನೆ ಅರೆಬಿರಿದುವು. ಆತ ನೆಟ್ಟ ದೃಷ್ಟಿಯಿಂದ ಆ ಅದ್ಭುತ ಶಿಶುವನ್ನೇ ಈಕ್ಷಿಸಿದ. ನೋಡುತ್ತಿದ್ದಂತೆಯೇ ಅವನ

ಮುಖ ಪ್ರಫುಲ್ಲವಾಯಿತು. ಆ ದಿವ್ಯ ಶಿಶುವೇ ತನ್ನ ಹೃದಯದ ಅಮೂಲ್ಯ ನಿಧಿ ಎಂಬುದನ್ನು ಅವನ ಮುಖದ ಪ್ರಫುಲ್ಲತೆಯೇ ಸೂಚಿಸುತ್ತಿತ್ತು. ಆಗ ಆ ದಿವ್ಯ ಶಿಶು ಅತ್ಯಂತ ಆನಂದದಿಂದ ಮಂದಹಾಸ ಬೀರುತ್ತ ಋಷಿಗೆ ಹೇಳಿತು: "ನಾನು ಭುವಿಗೆ ಹೋಗುತ್ತಿದ್ದೇನೆ; ನೀನೂ ನನ್ನ ಜೊತೆಯಲ್ಲಿ ಬರಬೇಕು." ಆ ಶಿಶುವಿನ ಅಲೌಕಿಕ ಸೌಂದರ್ಯ, ವರ್ಣನಾತೀತ ಸ್ವರಮಾಧುರ್ಯ, ಮನಮೋಹಕ ಮೃದು ಸ್ಪರ್ಶ—ಇವುಗಳಿಂದೆಲ್ಲ ಮಂತ್ರಮುಗ್ಧನಂತಾಗಿದ್ದ ಋಷಿ ಮಾತನಾಡಲೂ ಮನ ವಿಲ್ಲದೆ ಮೌನವಾಗಿಯೇ ಇದ್ದ. ಆದರೆ ಅವನ ಮೃದುಮಧುರ ನೋಟವೇ ತನ್ನ ಸಮ್ಮತಿಯನ್ನು ಸೂಚಿಸುತ್ತಿತ್ತು. ಅವನು ಆ ಶಿಶುವನ್ನು ಹಾಗೆಯೇ ನೆಟ್ಟ ನೋಟ ದಿಂದ ದಿಟ್ಟಿಸುತ್ತ ಪುನಃ ಸಮಾಧಿಯಲ್ಲಿ ಮಗ್ನನಾಗಿಬಿಟ್ಟ.

ಯಾರು ಆ ದಿವ್ಯಾದ್ಭುತ ಶಿಶು?

ಯಾರು ಆ ಮಹಿಮಾನ್ವಿತ ಋಷಿ?

೨

# ಸತ್ಯಶೀಲ 'ರಘುಕುಲ'

ಹದಿನೆಂಟನೇ ಶತಮಾನದ ಆದಿಭಾಗ. ಬಂಗಾಳದ ಬಾಂಕುರಾ ಜಿಲ್ಲೆಯಲ್ಲಿ ದೇರೇ ಎಂಬೊಂದು ಕುಗ್ರಾಮ. ಅಲ್ಲೊಂದು ಮಧ್ಯಮವರ್ಗದ ಬ್ರಾಹ್ಮಣ ಕುಟುಂಬ. ಮಾಣಿಕರಾಮ ಚಟ್ಟೋಪಾಧ್ಯಾಯ ಮನೆಯ ಯಜಮಾನ. ಪವಿತ್ರ ಸಾತ್ವಿಕ ಹಿಂದೂಗಳಂತೆ ಅವನ ಜೀವನ. ಮನೆದೇವರು ಶ್ರೀರಾಮಚಂದ್ರ. ಮಾಣಿಕರಾಮ ಚಟ್ಟೋಪಾಧ್ಯಾಯನಿಗೆ ಮೂವರು ಗಂಡುಮಕ್ಕಳು, ಒಬ್ಬಳು ಮಗಳು. ಹಿರಿಯ ಮಗ ಕ್ಷುದಿರಾಮ. ಎರಡನೆಯವಳು ರಾಮಶೀಲಾ. ಮುಂದಿನ ಇಬ್ಬರು ನಿಧಿರಾಮ ಮತ್ತು ಕನ್ಯೆರಾಮ.

ಕ್ಷುದಿರಾಮ ಶಾಸ್ತ್ರಾಧ್ಯಯನದಲ್ಲಿ ಅಷ್ಟೇನೂ ಮುಂದುವರಿದವನಲ್ಲ. ಪೌರೋಹಿತ್ಯಾದಿಗಳನ್ನು ಮಾಡಿ ಸಂಪಾದಿಸುವಷ್ಟರ ಮಟ್ಟಿನ ವಿದ್ಯೆಯೂ ಅವನಿಗೆ ಹತ್ತಲಿಲ್ಲ ಎನ್ನಬಹುದು. ಆದರೆ ಭಗವಂತ ಅವನ ಮೇಲೆ ಒಂದು ವಿಶೇಷ ಅನುಗ್ರಹ ಮಾಡಿದ್ದ: ಸತ್ಯಶೀಲತೆ, ಸಂತೃಪ್ತಿ, ಸಹನೆ, ತ್ಯಾಗಬುದ್ಧಿ —ಈ ಎಲ್ಲ ಪಾವನಕರ ಗುಣಗಳನ್ನು ಧಾರಾಳವಾಗಿ ಅವನಿಗಿತ್ತಿದ್ದ. ಕ್ಷುದಿರಾಮನದು ಎತ್ತರದ ದಷ್ಟಪುಷ್ಟ ಮೈಕಟ್ಟು. ಅವನನ್ನು ನೋಡುತ್ತಿದ್ದರೆ ನೋಡುವವರ ಮನಕ್ಕೆ ಏನೋ ಒಂದು ತಂಪಿನ ಅನುಭವ. ಕ್ಷುದಿರಾಮ ಶ್ರೀರಾಮಚಂದ್ರನ ಪರಮಭಕ್ತ. ಶ್ರೀರಾಮಚಂದ್ರನೇ ಕುಲದೈವವೆಂದಮೇಲೆ ಕ್ಷುದಿರಾಮನಿಗೆ ಅವನ ಮೇಲೆ ಭಕ್ತಿಯಿರುವುದು ಸಹಜವೇ. ಆದರೆ ದೈವೀಗುಣಗಳಿಂದ ಭೂಷಿತನಾಗಿದ್ದ ಕ್ಷುದಿರಾಮನಿಗೆ ಶ್ರೀರಾಮನ ವಿಷಯದಲ್ಲಿದ್ದ ಭಕ್ತಿ ಅತ್ಯಂತ ವಿಶೇಷ ಮಟ್ಟದ್ದು. ಅವನು ಬ್ರಾಹ್ಮೀ ಮುಹೂರ್ತದಲ್ಲೆದ್ದು ಸ್ನಾನ–ಸಂಧ್ಯಾವಂದನಾದಿ ನಿತ್ಯವಿಧಿಗಳನ್ನು ಮುಗಿಸಿ, ಬಳಿಕ ಪೂಜೆಗಾಗಿ ಹೂ ಕೀಳಲು ಹೊರಡುತ್ತಿದ್ದ. ಶ್ರೀರಾಮಚಂದ್ರನ ಪೂಜೆಯನ್ನು ಕ್ರಮಪ್ರಕಾರ ಮಾಡಿ ಮುಗಿಸುವವರೆಗೆ ಒಂದು ತೊಟ್ಟು ನೀರನ್ನೂ ಕುಡಿಯುತ್ತಿರಲಿಲ್ಲ. ಅವನು ನಿಕೃಷ್ಟರಿಂದ ದಾನಾದಿಗಳನ್ನು ಸ್ವೀಕರಿಸುತ್ತಿರಲಿಲ್ಲ. ಅಷ್ಟೇ ಅಲ್ಲ, ಮನೆಮನೆಗಳಲ್ಲಿ ಶ್ರಾದ್ಧಕಾರ್ಯ ಮಾಡುವ ಬ್ರಾಹ್ಮಣರ ಮನೆಯ ಊಟಕ್ಕೂ ಹೋಗುತ್ತಿರಲಿಲ್ಲ. ಇನ್ನೂ ವಿಶೇಷವೇನೆಂದರೆ, ಅವನು ವಧುದಕ್ಷಿಣೆ ವಸೂಲಿ ಮಾಡುವ ಬ್ರಾಹ್ಮಣರ ಮನೆಗಳಲ್ಲಿ ನೀರನ್ನು ಕೂಡ ಕುಡಿಯುತ್ತಿರಲಿಲ್ಲ. ಈ ಬಗೆಯ ಸಾತ್ವಿಕವಾದ ಕಟ್ಟುಕಟ್ಟಳೆಗಳನ್ನು ಅವನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿದ್ದುದರಿಂದ ಹಳ್ಳಿಯ ಜನರೆಲ್ಲ ಅವನನ್ನು ಬಹಳ ಪೂಜ್ಯಬುದ್ಧಿಯಿಂದ

ಕಾಣುತ್ತಿದ್ದರು.

ಕಾಲಕ್ರಮದಲ್ಲಿ ಮಾಣಿಕರಾಮ ತೀರಿಕೊಂಡ. ಹಿರಿಯನಾದ ಕ್ಷುದಿರಾಮನೇ ಪಿತ್ರಾರ್ಜಿತ ಆಸ್ತಿಪಾಸ್ತಿಗಳ ವಹಿವಾಟುಗಳನ್ನು ನೋಡಿಕೊಳ್ಳಲು ಹೆಗಲೊಡ್ಡಿದ. ಅವನ ತಮ್ಮಂದಿರೂ ಅವನೊಂದಿಗೇ ವಾಸವಾಗಿದ್ದರು. ವ್ಯವಹಾರದಲ್ಲಿ ಭಾಗಿಯಾದರೂ ಕ್ಷುದಿರಾಮ ಧರ್ಮಮಾರ್ಗದಿಂದ ಸ್ವಲ್ಪವೂ ವಿಚಲಿತನಾಗದೆ ದೃಢವಾಗಿ ನಿಂತಿದ್ದ. ಬಂಗಾಳದ ಅಂದಿನ ಸಂಪ್ರದಾಯದಂತೆ ಅವನಿಗೆ ಸಣ್ಣ ವಯಸ್ಸಿನಲ್ಲೇ ವಿವಾಹವಾಗಿತ್ತು. ಆದರೆ ಪತ್ನಿ ಪ್ರಬುದ್ಧೆಯಾಗುವ ಮೊದಲೇ ತೀರಿಕೊಂಡಳು. ಆದ್ದರಿಂದ ಈಗ ತನಗೆ ಇಪ್ಪತ್ತೈದು ತುಂಬುವ ವೇಳೆಗೆ ಕ್ಷುದಿರಾಮ ಪುನರ್ವಿವಾಹ ಮಾಡಿಕೊಂಡ. ನವವಧುವಿನ ಹೆಸರು ಚಂದ್ರಮಣಿ. ಮನೆಯಲ್ಲಿ ಅವಳನ್ನು ಮುದ್ದಿಗೆ 'ಚಂದ್ರಾ' ಎಂದು ಕರೆದರು. ಚಂದ್ರಮಣಿ ಒಳ್ಳೇ ಲಕ್ಷಣವಂತೆ; ಜೊತೆಗೆ ತುಂಬ ಗುಣವಂತೆ. ಅವಳದು ಮುಗ್ಧಮನಸ್ಸು, ಸರಳ ಹೃದಯ. ದೇವದೇವಿಯರ ಮೇಲೆ, ಸಾಧುಸಜ್ಜನರ ಮೇಲೆ ಅವಳಿಗೆ ಅಪಾರ ಭಕ್ತಿ, ಗೌರವ, ಶ್ರದ್ಧೆ. ಸಾಧುಗಳ ಸೇವೆ ಮಾಡುವುದು, ದೇವದೇವಿಯರ ಪೂಜೆ ಮಾಡುವುದು ಎಂದರೆ ಅವಳಿಗೆ ಪಂಚಪ್ರಾಣ. ಆದರೆ ಅವಳ ಅತ್ಯಂತ ಪ್ರೇಮಪೂರ್ಣ ಸ್ವಭಾವ ಅವಳ ಇತರ ಎಲ್ಲ ಸದ್ಗುಣಗಳನ್ನೂ ಮೀರಿ ನಿಂತಿತ್ತು. ಇಂತಿಂತಹ ಪ್ರಿಯಕರ ಗುಣಗಳಿಂದ ಕೂಡಿದ ಅವಳು ಸಕಲರಿಗೂ ಪ್ರಿಯಳೆನಿಸಿದರೆ ಅದು ಸಹಜವೇ ಅಲ್ಲವೆ ?

ಚಂದ್ರಮಣಿಯ ಚೊಚ್ಚಲು ಮಗನೇ ರಾಮಕುಮಾರ. ಇವನ ಜನನವಾಗಿ ಐದು ವರ್ಷಗಳ ಬಳಿಕ ಇವನಿಗೊಬ್ಬಳು ತಂಗಿ ಜನಿಸಿದಳು—ಕಾತ್ಯಾಯನಿ.

ಕ್ಷುದಿರಾಮನ ಸಂಸಾರ ಚೆನ್ನಾಗಿಯೇ ನಡೆದುಕೊಂಡು ಬಂದಿತು. ಆದರೆ ಧರ್ಮಿಷ್ಠರಾದವರಿಗೆ ಈ ತಟವಟದ ಜಗತ್ತಿನಲ್ಲಿ ಕಷ್ಟ ಹೆಚ್ಚು ಎಂಬ ಮಾತಿದೆ. ಅದು ತೀರಾ ಸುಳ್ಳೇನಲ್ಲ. ಲೌಕಿಕ ವ್ಯವಹಾರದಿಂದ ಸಂಪೂರ್ಣ ದೂರವಾಗಿದ್ದುಕೊಂಡು ಧರ್ಮಾನುಷ್ಠಾನ ಮಾಡಬೇಕೆಂದರೆ ಬಹುಶಃ ಯಾರಿಗೂ ಕಷ್ಟವಾಗಲಿಕ್ಕಿಲ್ಲ. ಆದರೆ ಲೌಕಿಕದಲ್ಲೇ ಇದ್ದೂ ಧರ್ಮಮಾರ್ಗದಿಂದ ಜಾರಲಾರೆನೆಂದರೆ ಸುಲಭವಲ್ಲ. ಕಾತ್ಯಾಯನಿ ಜನಿಸಿದ ಸಮಯದಲ್ಲಿ ಕ್ಷುದಿರಾಮನ ಸತ್ತ್ವಪರೀಕ್ಷೆಯಾಗುವ ಕಾಲವೊಂದು ಸನ್ನಿಹಿತವಾಯಿತು.

ದೇರೇ ಗ್ರಾಮದ ಪಕ್ಕದಲ್ಲೇ ಸಾತ್‌ಬೆರೆ ಎಂಬ ಇನ್ನೊಂದು ಗ್ರಾಮ. ಅಲ್ಲಿ ರಾಮಾನಂದ ರಾಯ್ ಎಂಬೊಬ್ಬ ಜಮೀನುದಾರ ಇದ್ದ. ಅವನು .ಅಷ್ಟೇನೂ ಧನವಂತನಲ್ಲದಿದ್ದರೂ ದುಷ್ಟತನದಲ್ಲಿ ದೊಡ್ಡವನು. ಅವನಿಗೆ ಆ ಹಳ್ಳಿಯ ರೈತರಲ್ಲಿ ಯಾರ ಮೇಲಾದರೂ ಕೋಪ–ಗೀಪ ಬಂದಿತೆಂದರೆ ಆ ರೈತನಿಗಿನ್ನು ಅಲ್ಲಿ ಉಳಿಗಾಲವಿಲ್ಲ. ಅವನು ಆ ರೈತನ ಆಸ್ತಿಪಾಸ್ತಿಯನ್ನೆಲ್ಲ ಮುಟ್ಟುಗೋಲು ಹಾಕಿಕೊಂಡು ಬೀದಿಗಿಳಿಸಿಬಿಡುತ್ತಿದ್ದ. ರಾಮಾನಂದನಿಗೆ ಸಂತಾನವಿರಲಿಲ್ಲ. ಹುಟ್ಟಿದ ಮಕ್ಕಳೆಲ್ಲ ಎಳೆತನದಲ್ಲೇ ಅಸುನೀಗಿದ್ದುವು. ಊರ ರೈತರು ಮಾತನಾಡಿಕೊಳ್ಳುತ್ತಿದ್ದರು, ಅವನು ರೈತರಿಗೆ ಕೊಟ್ಟ ಕಷ್ಟಕ್ಕೆ ಅವನ ಸಂತಾನಭಾಗ್ಯ ಬತ್ತಿಯೇ

ಹೋಗಿದೆ ಎಂದು. ಮುಂದೆ ಅವನು ಸತ್ತ ಮೇಲೆ ಅವನ ಆಸ್ತಿಪಾಸ್ತಿಯನ್ನೆಲ್ಲ ಯಾರ್ಯಾರೋ ತಿಂದರು. ಅದೇನೇ ಇರಲಿ; ಅವನು ಬದುಕಿರುವವರೆಗಂತೂ ಅವನ ಗ್ರಹಬಲ ಗಟ್ಟಿಯಾಗಿಯೇ ಇತ್ತು.

ಒಮ್ಮೆ ಅವನಿಗೆ ದೇರೇ ಗ್ರಾಮದ ಒಬ್ಬ ಮನುಷ್ಯನ ಮೇಲೆ ಯಾವುದೋ ಕಾರಣಕ್ಕೆ ರೊಚ್ಚು ಹುಟ್ಟಿಕೊಂಡಿತು. ಸರಿ, ಆತನ ಮೇಲೆ ಒಂದು ಸುಳ್ಳು ಮೊಕದ್ದಮೆ ಹೂಡಿಯೇಬಿಟ್ಟ. ಆದರೆ ಮೊಕದ್ದಮೆಯಲ್ಲಿ ಗೆಲ್ಲಬೇಕಾದರೆ, ಅದರಲ್ಲೂ ಸುಳ್ಳುಮೊಕದ್ದಮೆಯಲ್ಲಿ ಗೆಲ್ಲಬೇಕಾದರೆ ಸರಿಯಾದ ಸಾಕ್ಷಿಯೊಂದು ಬೇಕೇಬೇಕು. ಸಾಕ್ಷಿ ಸರಿಯಾದದ್ದು ಎನ್ನಿಸಿಕೊಳ್ಳಬೇಕಾದರೆ ಸಾಕ್ಷಿ ಹೇಳುವವನು ಆ ಊರಿನ ಸಜ್ಜನ ಎಂದು ಮಾನ್ಯತೆ ಪಡೆದಿರಬೇಕು. ಯಾರಿದ್ದಾರೆ ಅಂಥಾ ಸಜ್ಜನರು? ರಾಮಾನಂದ ರಾಯನಿಗೆ ಕ್ಷುದಿರಾಮನ ನೆನಪಾಯಿತು. ಅವನ ಸಜ್ಜನಿಕೆಯನ್ನು ದುರುಪಯೋಗ ಪಡಿಸಿಕೊಳ್ಳಲು ಮುಂದಾದ; ಅವನನ್ನು ಸುಳ್ಳು ಸಾಕ್ಷಿ ಹೇಳುವಂತೆ ಕೇಳಿಕೊಂಡ. ಕ್ಷುದಿರಾಮನೋ, ನ್ಯಾಯವಾದ ಮೊಕದ್ದಮೆಯನ್ನೇ ಕೈಬಿಟ್ಟು ರಾಜಿ ಮಾಡಿಕೊಳ್ಳುವ ಸ್ವಭಾವದವನು. ಈ ಜಗಳ–ಮೊಕದ್ದಮೆ, ಕೋರ್ಟು–ಕಛೇರಿ ಇವೆಲ್ಲ ಅವನ ಪ್ರಕೃತಿಗೆ ಸ್ವಲ್ಪವೂ ಒಗ್ಗದವುಗಳು. ಈಗ ಈ ರಾಮಾನಂದ ರಾಯ — ದೊಡ್ಡಮನುಷ್ಯ — ಬಂದು ಸುಳ್ಳುಸಾಕ್ಷಿ ಹೇಳುವಂತೆ ಕೇಳಿಕೊಳ್ಳುತ್ತಿದ್ದಾನೆ. ಕ್ಷುದಿರಾಮನಿಗೆ ಇದೊಂದು ಸಿಡಿಲ ಬಡಿತವೇ ಆಯಿತು. ರಾಮಾನಂದನ ಇಚ್ಛೆಗೆ ವಿರುದ್ಧವಾಗಿ ನಡೆದುಕೊಂಡರೆ ತನಗೆ ಯಾವ ಗತಿ ಒದಗೀತು ಎಂಬ ಸ್ಪಷ್ಟ ಕಲ್ಪನೆ ಅವನಿಗಿತ್ತು. ಆದರೆ ಅವನು ಧರ್ಮಮಾರ್ಗದಲ್ಲಿ ದೃಢವಾಗಿ ನಿಂತುಬಿಟ್ಟ; ಸುಳ್ಳು ಸಾಕ್ಷಿ ಹೇಳಲು ನಿರಾಕರಿಸಿದ. ಪರಿಣಾಮವಾಗಿ, ಆಗಬಾರದ್ದು ಆಗಿಯೇ ಹೋಯಿತು ರಾಮಾನಂದ ಕ್ಷುದಿರಾಮನ ಮೇಲೆಯೇ ಒಂದು ಸುಳ್ಳು ಆರೋಪ ಹೊರಿಸಿ ಕೋರ್ಟಿನಲ್ಲಿ ಸುಳ್ಳು ಮೊಕದ್ದಮೆ ಹೂಡಿದ, ಮತ್ತು ಯಥಾಪ್ರಕಾರ ಗೆದ್ದೂಬಿಟ್ಟ. ನ್ಯಾಯಸ್ಥಾನದಲ್ಲಿ ನ್ಯಾಯಾನ್ಯಾಯಗಳನ್ನು ಬೇರ್ಪಡಿಸಿ ಅರಿಯಬಲ್ಲ ಪ್ರಾಜ್ಞರಿರಲಿಲ್ಲವೆ ಎಂದೆಲ್ಲ ಕೇಳಬಾರದು. ಅಂತೂ ರಾಮಾನಂದ ರಾಯ ಕ್ಷುದಿರಾಮನ ಪಿತ್ರಾರ್ಜಿತ ಆಸ್ತಿಪಾಸ್ತಿಯನ್ನೆಲ್ಲ ಹರಾಜು ಹಾಕಿಸಿ, ಆ ದೇರೇ ಗ್ರಾಮದಲ್ಲಿ ಅವನಿಗೆ ಒಂದು ಅಂಗುಲವೂ ಜಾಗವಿಲ್ಲದಂತೆ ಮಾಡಿದ. ಗ್ರಾಮದವರೆಲ್ಲ 'ಅನ್ಯಾಯ, ಅನ್ಯಾಯ' ಎಂದು ಗೋಳಾಡಿದರು, ಬಹು ಸಂಕಟಪಟ್ಟರು. ಕ್ಷುದಿರಾಮನಿಗಾಗಿ ಕಣ್ಣೀರ್ಗರೆದರು. ಆದರೆ ಆದ ಅನ್ಯಾಯವನ್ನು ಪ್ರತಿಭಟಿಸಲು ಮಾತ್ರ ಯಾರೂ ಮುಂದಾಗಲಿಲ್ಲ. ತಾವು ಬಾಯಿಬಿಚ್ಚಿದರೆ ತಮಗೂ ಅದೇ ಗತಿ ಎಂಬುದು ಅವರಿಗೆ ಚೆನ್ನಾಗಿ ಗೊತ್ತು. ದುಷ್ಟನನ್ನು ಎದುರುಹಾಕಿಕೊಳ್ಳಲು ಯಾವ ಮಾನವಂತ ತಾನೆ ಮುಂದಾಗುತ್ತಾನೆ?

ಈ ದುರ್ಘಟನೆ ನಡೆದಾಗ ಕ್ಷುದಿರಾಮನಿಗೆ ನಲವತ್ತು ವರ್ಷ. ಪಿತ್ರಾರ್ಜಿತವಾಗಿ ಬಂದ ಆಸ್ತಿಯೆಲ್ಲ ಕಣ್ಮುಚ್ಚಿ ತೆರೆಯುವುದರೊಳಗೆ ಕೈತಪ್ಪಿ ಹೋಯಿತು. ತನ್ನನ್ನು ನಂಬಿಕೊಂಡ ಸಂಸಾರವನ್ನೀಗ ಎಲ್ಲಿಟ್ಟು ಸಾಕುವುದು? ಆ ಊರಿನ ಇತರರಾದರೂ ಇವನಿಗೆ ಆಸರೆ ಕೊಡಬಲ್ಲಷ್ಟು ಅನುಕೂಲಸ್ಥರೇ? ಅದೂ ಇಲ್ಲ.

ಅನುಕೂಲವಿದ್ದರೂ ರಾಮಾನಂದನ ಕಾಟ ! ಕ್ಷುದಿರಾಮ ಇದ್ದಬದ್ದುದನ್ನು ಗಂಟು ಕಟ್ಟಿಕೊಂಡು ಸಂಸಾರದೊಂದಿಗೆ ಊರು ಬಿಟ್ಟು ಹೊರಟ. ನಿಧಿರಾಮನೂ ಕನ್ಯೆರಾಮನೂ ತಮ್ಮ ಮಾವಂದಿರನ್ನು ಆಶ್ರಯಿಸಿದರು. ದೇರೇ ಗ್ರಾಮದ ಜನ ಅಸಹಾಯಕರಾಗಿ ಕಣ್ಣೀರಿಟ್ಟರು.

ದೇರೇ ಗ್ರಾಮದ ಪೂರ್ವಕ್ಕೆ ಸುಮಾರು ಎರಡು ಮೈಲಿ ದೂರದಲ್ಲಿ ಕಾಮಾರಪುಕುರ ಎಂಬುದೊಂದು ಹಳ್ಳಿ. ಇದು ತಕ್ಕಮಟ್ಟಿಗೆ ಒಂದು ಸಮೃದ್ಧವಾದ ಹಳ್ಳಿಯೇ. ಅಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ನೆಯ್ಗೆಯವರು, ಗೊಲ್ಲರು, ಕಮ್ಮಾರರು, ಕುಂಬಾರರು, ಬೆಸ್ತರು, ಹರಿಜನರು — ಹೀಗೆ ಎಲ್ಲ ವರ್ಗದ ಜನರೂ ವಾಸವಾಗಿದ್ದರು. ಹಳ್ಳಿಯಲ್ಲಿ ಸಾಕಷ್ಟು ಜನಸಂಖ್ಯೆ ತುಂಬಿತ್ತು. ಜನರು ಕೃಷಿಯನ್ನು ಪ್ರಧಾನ ಉದ್ಯಮವಾಗಿ ಮಾಡಿಕೊಂಡಿದ್ದರೂ ಇತರ ಕೈಗಾರಿಕೆಗಳಲ್ಲೂ ನುರಿತವ ರಾಗಿದ್ದರು. ಹೀಗೆ ಅಲ್ಲಿನ ಜನಜೀವನ ಸುಗಮವಾಗಲು ಸಾಧ್ಯವಾಗಿತ್ತು. ಜನ ಉಂಡು ಉಟ್ಟು ಆನಂದದಿಂದಿದ್ದರು. ಈ ಕಾಮಾರಪುಕುರದಲ್ಲೇ ಸುಖಲಾಲ ಗೋಸ್ವಾಮಿ ಎಂಬವನೊಬ್ಬ ಇದ್ದ. ಇವನು ಸಾಕಷ್ಟು ಅನುಕೂಲಸ್ಥನೇ. ಇವನು ಕ್ಷುದಿರಾಮನಿಗೆ ಅತ್ಯಂತ ಆಪ್ತ, ಹಳೆಯ ಸ್ನೇಹಿತ. ಇಬ್ಬರ ಮನಃಪ್ರವೃತ್ತಿಯೂ ಒಂದೇ ಬಗೆಯದು. ಗೆಳೆಯನಿಗೆ ಒದಗಿದ ಆಪತ್ತನ್ನು ಕಂಡು ಅವನಿಗೆ ತುಂಬ ದುಃಖವಾಯಿತು. ಅವನು ಕ್ಷುದಿರಾಮನಿಗೆ ಕಾಮಾರಪುಕುರಕ್ಕೆ ಬಂದು ವಾಸ ಮಾಡಬೇಕೆಂದು ಹೇಳಿಕಳಿಸಿದ. ಅವನ ಆಹ್ವಾನವನ್ನು ಮನ್ನಿಸಿ ಕ್ಷುದಿರಾಮ ಕಾಮಾರಪುಕುರಕ್ಕೆ ಬಂದ. ಸುಖಲಾಲನು ಕ್ಷುದಿರಾಮನಿಗೆ ತನ್ನ ವಠಾರದಲ್ಲೇ ಇದ್ದ ಒಂದೆರಡು ಗುಡಿಸಲುಗಳನ್ನು ಬಿಟ್ಟುಕೊಟ್ಟು ಶಾಶ್ವತವಾಗಿ ಅಲ್ಲೇ ಸಂಸಾರ ಹೂಡಲು ಅವಕಾಶ ಕಲ್ಪಿಸಿದ. ಪ್ರವಾಹದಲ್ಲಿ ಕೊಚ್ಚಿಹೋಗುತ್ತಿದ್ದವನಿಗೆ ದೋಣಿಯೇ ಸಿಕ್ಕಂತಾಯಿತು. ತನ್ನ ಸ್ನೇಹಿತನ ಅಯಾಚಿತ ಉಪಕಾರಕ್ಕಾಗಿ ಅವನ ಹೃದಯ ಕೃತಜ್ಞತಾಭಾವದಿಂದ ತುಂಬಿಬಂದಿತು. ಭಗವಂತನ ಅಪಾರ ಕರುಣೆಗೆ ಮತ್ತೆಮತ್ತೆ ಮಣಿದ. ಸುಖಲಾಲನೂ ತನ್ನ ಆಪ್ತ ಮಿತ್ರ ಸದಾ ತನ್ನ ಸಮೀಪದಲ್ಲೇ ಇರುವಂತಾದುದರಿಂದ ಆನಂದಿತನಾದ. ಕ್ಷುದಿರಾಮ ಎಂಥ ಅಪರಂಜಿ, ಎಂಥ ಗುಣಮಣಿ ಎಂಬುದನ್ನು ಅವನು ಬಲ್ಲ. ಅವನು 'ಲಕ್ಷ್ಮೀಜಲ' ಎಂಬ ಹೆಸರಿನ ಸುಮಾರು ಅರ್ಧ ಎಕರೆಯಷ್ಟು ಫಲವತ್ತಾದ ಭೂಮಿಯನ್ನು ತನ್ನ ಸ್ನೇಹಿತನ ಉಪಯೋಗಕ್ಕಾಗಿ ಬಳುವಳಿ ಮಾಡಿದ. ಹೀಗೆ ಕಾಮಾರಪುಕುರದಲ್ಲಿ ಕ್ಷುದಿರಾಮನ ಸಂಸಾರ ನೆಲೆನಿಂತಿತು.

೩

# ಕುಲದೇವರ ಒಲುಮೆ

ಅಕಾಲದಲ್ಲಿ ಇದ್ದಕ್ಕಿದ್ದಂತೆ ಆಪತ್ತು ಅಡರಿಕೊಂಡು ಬಂದರೂ ಭಗವಂತನ ಕೃಪೆಯಿಂದ ಕ್ಷುದಿರಾಮನ ಸಂಕಷ್ಟ ಅಷ್ಟೇ ವೇಗವಾಗಿ ಪರಿಹಾರವಾದದ್ದೇನೋ ಸರಿಯೆ. ಆದರೆ ಅವನು ತನ್ನ ಪತ್ನಿಯೊಂದಿಗೆ ಹತ್ತು ವರ್ಷದ ರಾಮಕುಮಾರ ಹಾಗೂ ನಾಲ್ಕು ವರ್ಷದ ಕಾತ್ಯಾಯನಿಯನ್ನು ಕರೆದುಕೊಂಡು ಕಾಮಾರಪುಕುರದಲ್ಲಿ ತನ್ನ ಆಪ್ತಮಿತ್ರ ನೀಡಿದ ಆಸರೆಯಲ್ಲಿ ಕುಳಿತಿದ್ದಾಗ ಆ ದಂಪತಿಗಳ ಹೃದಯದಾಳದಲ್ಲಿ ಏನೇನು ಭಾವನೆಗಳ ಅಲೆಗಳೆದ್ದಿರಬಹುದೋ ಭಾವಿಸಬಲ್ಲವರಾರು ? ಮನುಷ್ಯನಿಗೆ ಪರವೂರಿನಲ್ಲಿ ಪರಮಾನ್ನವೇ ಸಿಕ್ಕಿದರೂ ಅದು ಹುಟ್ಟೂರಿನಲ್ಲಿ ಕುಳಿತು ಕುಡಿಯುವ ಗಂಜಿಯ ರುಚಿಗೆ ಸಮನಾದೀತೆ ? ಅಂತಹ ತನ್ನ ಪ್ರೀತಿಯ ಹುಟ್ಟೂರನ್ನು ಒಬ್ಬ ದುಷ್ಟನ ಕಾರಣದಿಂದಾಗಿ ಬಿಟ್ಟು ಬರಬೇಕಾಗಿ ಬಂದಾಗ ಕ್ಷುದಿರಾಮನಿಗೆ ಈ ಜಗತ್ತೆನ್ನುವುದು ದ್ವೇಷ, ಅಸೂಯೆ, ದೌರ್ಜನ್ಯಗಳಿಂದ ತುಂಬಿದ ಶ್ಮಶಾನದಂತೆ ಕಂಡಿತು; ಕಾರ್ಗತ್ತಲೆ ಕವಿದ ಸೆರೆಮನೆಯಂತೆ ತೋರಿತು. ಆಗಾಗ ಅಲ್ಲಲ್ಲಿ ಒಂದಿನಿತು ಪ್ರೀತಿ ವಿಶ್ವಾಸ ಕರುಣೆಗಳ ಕಿರಣಗಳು ಕಂಡುಬಂದರೂ ಮರುಕ್ಷಣದಲ್ಲೇ ಅವುಗಳನ್ನೆಲ್ಲ ಮುರಿದು ಮೂಲೆಗುಂಪಾಗಿಸುವ ಮುಹೂರ್ತಗಳು ಉದ್ಭವಿಸಿ ನಿಂತಾಗ ಮತ್ತೆ ಮನಸ್ಸು ಮಂಕಾಗುತ್ತದೆ, ಆಸೆ ಮುದುಡುತ್ತದೆ. ಕ್ಷುದಿರಾಮನೂ ಪತ್ನಿಯೂ ಕಾಮಾರಪುಕುರದ ಆ ಗುಡಿಸಲಲ್ಲಿ ತಮ್ಮ ಹುಟ್ಟೂರಾದ ದೇರೇ ಗ್ರಾಮದ ದಿನಗಳನ್ನು ನೆನಸಿಕೊಳ್ಳುತ್ತ ಅಂದಿನ ದಿನಕ್ಕೂ ಇಂದಿನ ಸ್ಥಿತಿಗೂ ಇರುವ ಅಂತರವನ್ನು ಚಿಂತಿಸುತ್ತ ಕುಳಿತಿದ್ದಾಗ ಅವರ ಮನಃಪಟಲದ ಮೇಲೆ ಎಷ್ಟೆಷ್ಟೋ ಭಾವನೆಗಳೆಲ್ಲ ಹಾಯ್ದು ಹೋದುವು. ಆದರೆ ಎಷ್ಟು ಆಲೋಚಿಸಿದರೇನು ? ಕಳೆದುಹೋದದ್ದು ತಿರುಗಿ ಕೈಸೇರುವುದುಂಟೆ ?

ಮನುಷ್ಯನಿಗೆ ಆಘಾತಗಳು, ಅಪಘಾತಗಳು, ಆಕಸ್ಮಿಕಗಳು ಸಂಭವಿಸಿದಾಗಲೇ ಅವನು ಈ ಪ್ರಪಂಚದ ನಶ್ವರತೆಯನ್ನು ಕಾಣಲು ಸಮರ್ಥನಾಗುವುದು. ಆದ್ದರಿಂದ ಮೊದಲಿಂದಲೂ ದೈವಭಕ್ತನೇ ಆಗಿದ್ದ ಕ್ಷುದಿರಾಮ ಈಗ ಒದಗಿದ ಆಘಾತಗಳಿಂದ ಲೌಕಿಕ ಜೀವನದ ನೀರಸತೆಯನ್ನು ಮನಗಂಡು ಮತ್ತಷ್ಟು ದೈವಪರಾಯಣನಾಗಿದ್ದರೆ ಅದರಲ್ಲಿ ಅಚ್ಚರಿಯೇನಿಲ್ಲ. ಅಲ್ಲದೆ ತಾನು ಅಂತಹ ಹತಾಶ ಸ್ಥಿತಿಗೆ ಗುರಿಯಾಗಿದ್ದಾಗಲೂ ಅನಿರೀಕ್ಷಿತವಾಗಿ, ಅನಾಯಾಸವಾಗಿ ತನ್ನ

ಜೀವನಕ್ಕೊಂದು ಆಸರೆಯೊದಗಿಬಂದದ್ದನ್ನು ಕಂಡು ಅವನ ದೈವಭಕ್ತಿ ಇನ್ನಷ್ಟು ದೃಢವಾಯಿತು. ಆದ್ದರಿಂದ ಆತ ಲೌಕಿಕ ಸಂಪಾದನೆಯ ವಿಷಯದಲ್ಲಿ ವಿರಕ್ತನಾಗಿ, ಕುಲದೈವ ರಘುವೀರನನ್ನು ವಿಶೇಷ ಭಕ್ತಿಯಿಂದ ಆರಾಧಿಸತೊಡಗಿದ; ರಘುವೀರನಿಗೆ ಸಂಪೂರ್ಣ ಶರಣಾದ. ಇನ್ನು ತಾನು ಈ ಪ್ರಪಂಚಕ್ಕೆ ಸಂಬಂಧಿಸಿದವನೇ ಅಲ್ಲ ಎಂಬಷ್ಟು ನಿರ್ಲಿಪ್ತನಾಗಿದ್ದುಕೊಂಡು ವಾನಪ್ರಸ್ಥಾಶ್ರಮಿಯಂತೆ ಜೀವನ ನಡೆಸತೊಡಗಿದ.

ಈ ನಡುವೆ ಇನ್ನೊಂದು ಘಟನೆ ನಡೆಯಿತು. ಅವನ ದೈವಶ್ರದ್ಧೆಯನ್ನು ಅದು ಇನ್ನಷ್ಟು ಬಲಪಡಿಸಿತು. ಒಂದು ದಿನ ಅವನು ಪಕ್ಕದ ಹಳ್ಳಿಯೊಂದಕ್ಕೆ ಕಾರ್ಯಾರ್ಥವಾಗಿ ಹೋಗಿದ್ದ. ಹಿಂದಿರುಗಿ ಬರುತ್ತಿದ್ದಾಗ ಸ್ವಲ್ಪ ಆಯಾಸವೆನಿಸಿದ್ದರಿಂದ ದಾರಿಯ ಪಕ್ಕದ ಒಂದು ಮರದ ಬುಡದಲ್ಲಿ ಒರಗಿಕೊಂಡ. ಪರಮ ಶಾಂತ ಸ್ಥಳ, ಮೆತ್ತನೆಯ ಹಸಿರುಹುಲ್ಲಿನಿಂದ ಕೂಡಿದ ನೆಲ, ಹದವಾಗಿ ಬೀಸುತ್ತಿದ್ದ ಮಂದಾನಿಲ—ಇವೆಲ್ಲ ಅವನ ನೊಂದ ಮನಕ್ಕೆ ಬೆಂದ ಶರೀರಕ್ಕೆ ಪೂರ್ಣ ವಿಶ್ರಾಂತಿ ಕೊಟ್ಟವು. ಮೊದಲು ಸುಮ್ಮನೆ ಸ್ವಲ್ಪ ಕುಳಿತಿದ್ದು ಹೊರಡೋಣವೆಂದುಕೊಂಡಿದ್ದ; ಆದರೆ, ಆ ಹಿತವಾದ ಪರಿಸರವನ್ನು ಕಂಡಾಗ ಅವನಿಗೆ ಮಲಗಿಕೊಳ್ಳೋಣ ಎಂದೆನಿಸಿತು. ನೆಲಕ್ಕೆ ಮೈಕೊಟ್ಟನೊ ಇಲ್ಲವೊ ಗಾಢ ನಿದ್ರೆ ಆವರಿಸಿತು. ಆಗ ಅವನಿಗೊಂದು ಸುಂದರವಾದ ಕನಸಾಯಿತು. ಆ ಕನಸಿನಲ್ಲಿ ಅವನು ತನ್ನ ಇಷ್ಟದೈವವಾದ ಶ್ರೀರಾಮಚಂದ್ರನು ಸುಂದರ ಬಾಲಕನ ರೂಪತಳೆದು ತನ್ನ ಸಮ್ಮುಖದಲ್ಲಿ ನಿಂತಿರುವುದನ್ನು ಕಂಡ. ನವದೂರ್ವಾದಲ ಶ್ಯಾಮಲ ವರ್ಣ ಆ ಬಾಲಕನ ಮೈಬಣ್ಣ! ಅಲ್ಲೇ ಸಮೀಪದ ಸ್ಥಳವೊಂದರ ಕಡೆಗೆ ಬೆರಳು ತೋರಿಸುತ್ತ ಬಾಲಕನೆಂದ:

"ನಾನಿಲ್ಲಿ ಬಹಳ ಕಾಲದಿಂದ ಅನ್ನ-ನೀರು ಇಲ್ಲದೆ ಬಿದ್ದಿದ್ದೇನೆ. ನನ್ನನ್ನು ನೋಡಿಕೊಳ್ಳುವವರು ಯಾರೂ ಇಲ್ಲ. ನೀನು ನನ್ನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗು. ನಿನ್ನ ಸೇವೆಯನ್ನು ಸ್ವೀಕರಿಸಬೇಕೆಂದು ನನಗೆ ತುಂಬ ಆಸೆ."

ಕ್ಷುದಿರಾಮ ಶ್ರೀರಾಮನಿಗೆ ಮತ್ತೆಮತ್ತೆ ನಮಿಸುತ್ತ ಭಾವಾವೇಶ ಭರಿತನಾಗಿ ಹೇಳಿದ:

"ಹೇ ಭಗವನ್! ನಾನೊಬ್ಬ ಬಡವ. ಸಾಕಷ್ಟು ಭಕ್ತಿಯೂ ಇಲ್ಲ. ನಿನಗೆ ತಕ್ಕುದಾದ ಸೇವೆ ಮಾಡಲು ನನ್ನ ಗುಡಿಸಲಿನಲ್ಲಿ ಯಾವ ಅನುಕೂಲವೂ ಇಲ್ಲ. ಸೇವೆಯಲ್ಲಿ ಲೋಪದೋಷಗಳುಂಟಾದರೆ ನಾನು ಪಾಪಭಾಜನನಾಗುವುದು ಖಂಡಿತ. ಆದ್ದರಿಂದ, ನನ್ನ ಕೈಲಾಗದ ಕೆಲಸವನ್ನು ನನಗೇಕೆ ಹೇಳುವೆ ಪ್ರಭು?"

ಆಗ ಬಾಲ ರಾಮಚಂದ್ರ ಅವನನ್ನು ಸಂತೈಸುತ್ತ ಕರುಣೆಯಿಂದ ಹೀಗೆಂದ:

"ಕ್ಷುದಿರಾಮ! ನೀನೇನೂ ಹೆದರಬೇಕಾಗಿಲ್ಲ. ನಿನ್ನಿಂದ ಎಷ್ಟೇ ಲೋಪದೋಷಗಳಾದರೂ ನಾನೇನೂ ಬೇಸರಿಸಿಕೊಳ್ಳುವುದಿಲ್ಲ. ನನ್ನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗು."

ತನ್ನ ಇಷ್ಟದೇವತೆ ಕರುಣಿಸಿದ ಈ ಅನಿರೀಕ್ಷಿತ ಕೃಪೆಯನ್ನು ಕಂಡು

ಕ್ಷುದಿರಾಮ ಭಾವೋದ್ವೇಗದಿಂದ ಗಳಗಳನೆ ಅತ್ತುಬಿಟ್ಟ. ಆಗಲೇ ಕನಸು ಮುಗಿಯಿತು. ನಿದ್ರೆಯಿಂದೆದ್ದಾಗ ಕ್ಷುದಿರಾಮ ಆ ಕನಸನ್ನು ನೆನಸಿಕೊಂಡು ಬಹುವಾಗಿ ಆಶ್ಚರ್ಯಗೊಂಡ. ಮತ್ತು ಭಾವಿಸಿದ, 'ಆಹ್, ಅಂತಹ ಭಾಗ್ಯ ನನ್ನದಾದಲ್ಲಿ ನಾನೆಷ್ಟು ಧನ್ಯ !' ಇದ್ದಕ್ಕಿದ್ದಂತೆ ಅವನ ಕಣ್ಣು ಅಲ್ಲೇ ಪಕ್ಕದಲ್ಲಿರುವ ಬತ್ತದ ಗದ್ದೆಯ ಕಡೆಗೆ ಹೊರಳಿತು. ಆಶ್ಚರ್ಯ ! ತಾನು ಕನಸಿನಲ್ಲಿ ಕಂಡ ಸ್ಥಳ ಅದೇ ! ಕುತೂಹಲ ತಾಳಲಾರದೆ ಆ ಸ್ಥಳದತ್ತ ಧಾವಿಸಿದ. ಅಲ್ಲಿ ಒಂದು ಸಾಲಿಗ್ರಾಮ ! ತೆರೆದ ಹೆಡೆಯಿಂದ ಅದನ್ನು ಕಾಯುತ್ತಿದ್ದ ನಾಗರಹಾವು ! ಸಾಲಿಗ್ರಾಮವನ್ನು ಪಡೆಯುವ ತವಕದಿಂದ ಅದರತ್ತ ಧಾವಿಸಿದ ಕ್ಷುದಿರಾಮ. ಅವನು ಅದರ ಬಳಿ ಸಾರುತ್ತಲೇ, ಸಾಲಿಗ್ರಾಮದ ವಾರಸುದಾರ ಇವನೇ ಎಂದು ತಿಳಿಯಿತೋ ಎಂಬಂತೆ ನಾಗರಹಾವು ಅದನ್ನು ಬಿಟ್ಟು ಹೊರಟು ಹೋಯಿತು. ಸಾಲಿಗ್ರಾಮ ಹಾವಿನ ಬಿಲದ ಬಾಯಲ್ಲೇ ಬಿದ್ದಿತ್ತು. ತನ್ನ ಕನಸು ನನಸಾದುದನ್ನು ಕಂಡ ಕ್ಷುದಿರಾಮನ ಹೃದಯ ಭಾವಾವೇಗದಿಂದ ಬಡಿದುಕೊಳ್ಳತೊಡಗಿತು. ನಾಗರಹಾವನ್ನು ಕಂಡು ಹೆದರಿಕೆಯಾಗಲಿಲ್ಲ ಅವನಿಗೆ. ಶ್ರೀರಾಮಚಂದ್ರನ ಆಜ್ಞೆಯಂತೆ ಇದೆಲ್ಲ ಆಗುತ್ತಿದೆಯೆಂಬುದೇ ಅವನ ಧೈರ್ಯಕ್ಕೆ ಕಾರಣ. ಗಟ್ಟಿಯಾಗಿ "ಜೈ ರಘುವೀರ್ ! ಜೈ ರಘುವೀರ್ !" ಎಂದು ಉದ್ಘೋಷಿಸುತ್ತ ಸಾಲಿಗ್ರಾಮ ಶಿಲೆಯನ್ನು ಕೈಗೆತ್ತಿಕೊಂಡ. ಅದನ್ನು ಸರಿಯಾಗಿ ಪರೀಕ್ಷಿಸಿ ನೋಡಿದ—ಶಾಸ್ತ್ರದಲ್ಲಿ ಹೇಳಿರುವುದಕ್ಕೂ ಅದರಲ್ಲಿ ಮೂಡಿರುವ ಲಕ್ಷಣಕ್ಕೂ ತುಂಬ ಸಾಮ್ಯವಿತ್ತು. ಅದು ರಘುವೀರ ಸಾಲಿಗ್ರಾಮವೇ ನಿಜ ಎಂಬುದು ಮನದಟ್ಟಾಯಿತು. ಆಶ್ಚರ್ಯಾನಂದಗಳಿಂದ ಮನೆಗೆ ಹಿಂದಿರುಗಿದ. ಹೊಲದಲ್ಲಿ ಬಿದ್ದಿದ್ದ ಆ ಸಾಲಿಗ್ರಾಮಶಿಲೆಗೆ ವಿಧಿವತ್ತಾಗಿ ಶುದ್ಧೀಕರಣಮಾಡಿ ಕುಲದೈವವನ್ನಾಗಿ ಪ್ರತಿಷ್ಠಾಪಿಸಿ ಪ್ರತಿದಿನ ಭಕ್ತಿಯಿಂದ ಪೂಜೆಗೈಯಲಾರಂಭಿಸಿದ.

ಕ್ಷುದಿರಾಮ ಕನಸಿನಲ್ಲಿ ಶ್ರೀರಾಮಚಂದ್ರನನ್ನು ಕಂಡರೂ, ಸಾಲಿಗ್ರಾಮವೇ ಕೈಸೇರಿದರೂ ಅವನ ಕಷ್ಟಗಳೆಲ್ಲ ಕೊನೆಗಂಡುವೆಂದೇನಲ್ಲ. ಆದರೆ ವ್ಯತ್ಯಾಸವಿಷ್ಟೆ: ಈಗ ಅವನು ಆ ಕಷ್ಟಗಳಾವುವನ್ನೂ ಗಣನೆಗೆ ತಂದುಕೊಳ್ಳದೆ ವಿಧಿವತ್ತಾದ ಪೂಜಾದಿಗಳನ್ನು ಶ್ರದ್ಧಾಭಕ್ತಿಗಳಿಂದ ಮಾಡುತ್ತ ಬಂದ. ಕೆಲವೊಮ್ಮೆ ಮನೆಯಲ್ಲಿ ಒಲೆ ಉರಿಸುವ ಕೆಲಸವೇ ಇಲ್ಲದಂತಾಗುತ್ತಿತ್ತು. ಸಾಧ್ವಿಯಾದ ಚಂದ್ರಮಣಿ ಕಾತರಳಾಗಿ ಮೆಲ್ಲಗೆ ಪತಿಯ ಬಳಿ ಹೇಳುತ್ತಿದ್ದಳು— "ಇಂದು ಒಳಗೇನೂ ಇಲ್ಲ. ದೇವರ ನೈವೇದ್ಯಕ್ಕೇನು ಮಾಡುವುದು ?" ಆದರೆ ಇದರಿಂದ ವಿಚಲಿತನಾಗದ ಕ್ಷುದಿರಾಮ ಪತ್ನಿಯನ್ನು ಸಂತೈಸುತ್ತ ಹೇಳುತ್ತಿದ್ದ, "ಪರವಾಗಿಲ್ಲ ಬಿಡು; ರಘುವೀರನೇ ಇಂದು ಉಪವಾಸವಿರಲು ನಿಶ್ಚೈಸಿರುವಾಗ ನಾವೂ ಏಕೆ ಉಪವಾಸಮಾಡಬಾರದು ?" ಪತಿಯಷ್ಟೇ ಸರಳಹೃದಯಳಾದ ಚಂದ್ರಮಣಿ ಆ ಮಾತನ್ನು ಕೇಳಿ ಮರುಮಾತಿಲ್ಲದೆ ರಘುವೀರನ ಇಚ್ಛೆಗೆ ಮಣಿದು ಮನೆವಾರ್ತೆಯ ಕೆಲಸದತ್ತ ಮನಕೊಡುತ್ತಿದ್ದಳು. ಆದರೆ, ಅದುಹೇಗೋ, ಅಂದಿಗೆ ಬೇಕಾದಷ್ಟು ಆಹಾರ ಬಂದುಬಿಡುತ್ತಿತ್ತು.

ಹೀಗೆ ಕ್ಷುದಿರಾಮ ಕೆಲದಿನಗಳ ಮಟ್ಟಿಗೆ ಕಷ್ಟ ಪಡಬೇಕಾಯಿತಾದರೂ

ಶ್ರೀರಾಮಚಂದ್ರ ಅವನನ್ನು ಬಹಳಕಾಲ ಪರೀಕ್ಷಿಸುತ್ತ ಕುಳಿತುಕೊಳ್ಳಲಿಲ್ಲ. ಆತನ ಅಪಾರ ಕೃಪೆಯಿಂದ, ಸ್ನೇಹಿತ ಸುಖಲಾಲ ಕೊಟ್ಟ ಆ ಅರ್ಧ ಎಕರೆ ಜಮೀನಿನಲ್ಲಿ ಬತ್ತ ಹುಲುಸಾಗಿ ಬೆಳೆಯಲಾರಂಭಿಸಿತ್ತು. ಅಷ್ಟು ಸಣ್ಣ ಜಾಗದಲ್ಲಿ ಅದೆಷ್ಟು ಬೆಳೆಯಿತೆಂದರೆ ಅದು ಕ್ಷುದಿರಾಮನ ಕುಟುಂಬಕ್ಕೆ ವರ್ಷದವರೆಗೂ ಸಾಲುತ್ತಿತ್ತಲ್ಲದೆ ಮನೆಗೆ ಬಂದ ಅತಿಥಿ-ಅಭ್ಯಾಗತರಿಗೂ ಉಣಲಿಕ್ಕಬಹುದಾಗಿತ್ತು. ಕ್ಷುದಿರಾಮ ತನ್ನ ಗದ್ದೆಯನ್ನು ಉಳಲು ಕೂಲಿಗಳನ್ನು ನೇಮಿಸಿಕೊಳ್ಳುತ್ತಿದ್ದ. ಬತ್ತದ ಸಸಿಗಳು ತಯಾರಾಗುತ್ತಲೇ, ರಘುವೀರನ ಸ್ಮರಣೆ ಮಾಡುತ್ತ ತಾನೇ ಕೆಲವು ಸಸಿಗಳನ್ನು ನೆಡುತ್ತಿದ್ದ. ಉಳಿದುವನ್ನು ಆಳುಗಳು ನೆಟ್ಟು ಮುಗಿಸುತ್ತಿದ್ದರು.

ಇದೇ ರೀತಿಯಲ್ಲಿ ಎರಡು ಮೂರು ವರ್ಷಗಳು ಸಂದವು. ಕ್ಷುದಿರಾಮ ದಿನೇ ದಿನೇ ತನ್ನ ಇಷ್ಟದೇವತೆಯಾದ ರಘುವೀರನಲ್ಲಿ ಶರಣಾಗುತ್ತ ಬಂದ. ಬಡತನ ಇದೆ ನಿಜ; ಬಡತನ ಬಹು ಕಷ್ಟ ಎಂಬುದೂ ನಿಜ. ಆದರೆ ಭಗವಂತನ ನೆರವು ಸಿಕ್ಕವನಿಗೆ ಆ ಬಡತನ ಏನು ಮಾಡಬಲ್ಲುದು? ತನ್ನ ಸಂಸಾರದ ಹೊಣೆಯನ್ನು ಶ್ರೀರಾಮಚಂದ್ರನೇ ನಿರ್ವಹಿಸುತ್ತಿರುವುದನ್ನು ಗಮನಿಸಿದ ಕ್ಷುದಿರಾಮ ಕ್ರಮೇಣ ಹೆಚ್ಚುಹೆಚ್ಚು ಅಂತರ್ಮುಖಿಯಾದ. ಇದರ ಪರಿಣಾಮವಾಗಿ ಅವನಿಗೆ ಅನೇಕ ಆಧ್ಯಾತ್ಮಿಕ ಅನುಭವಗಳಾದುವು. ಪ್ರತಿದಿನ ಪ್ರಾತಃಕಾಲ ಸಾಯಂಕಾಲ ಸಂಧ್ಯಾವಂದನೆಯ ಸಮಯದಲ್ಲಿ ಕಣ್ಣುಮುಚ್ಚಿ ಪರಮಭಕ್ತಿಯಿಂದ, ಏಕಾಗ್ರತೆಯಿಂದ ಗಾಯತ್ರೀ ಮಂತ್ರವನ್ನು ಜಪಿಸುತ್ತಿದ್ದರೆ ಭಾವಾವೇಗದಿಂದ ಅವನ ಎದೆ ಹೊಂಬಣ್ಣಕ್ಕೇರುತ್ತಿತ್ತು; ಕಣ್ಣಿನಿಂದ ಅಶ್ರುಜಲ ಧಾರೆಯಾಗಿ ಸುರಿಯುತ್ತಿತ್ತು. ಮುಂಜಾನೆ ಕೈಯಲ್ಲಿ ಬುಟ್ಟಿ ಹಿಡಿದು ಪೂಜೆಗಾಗಿ ಹೂಗಳನ್ನು ಕೀಳಲು ಹೊರಟನೆಂದರೆ, ಅವನಿಂದ ಪ್ರತಿದಿನ ಪೂಜೆಗೊಳ್ಳುತ್ತಿರುವ ಶೀತಲಾದೇವಿ ಎಂಟು ವರ್ಷದ ಬಾಲಿಕೆಯಾಗಿ ಅವನೊಂದಿಗೆ ಬರುತ್ತಿದ್ದಳು. ಕೆಂಪು ಸೀರೆಯುಟ್ಟು ಮೈತುಂಬ ಆಭರಣ ತೊಟ್ಟು ಮಂದಹಾಸ ಬೀರುತ್ತ ಅವನಿಗೆ ಹೂ ಕೀಳಲು ನೆರವಾಗುತ್ತಿದ್ದಳು. ಹೂವಿರುವ ಕೊಂಬೆಗಳನ್ನು ಅವಳು ತನ್ನ ಪುಟ್ಟ ಕೈಗಳಿಂದ ಬಾಗಿಸಿ ಕೊಡುವುದು, ಕ್ಷುದಿರಾಮ ಹೂಗಳನ್ನು ಬಿಡಿಸಿಕೊಳ್ಳುವುದು! ದಿನಂಪ್ರತಿಯೂ ಈ ದಿವ್ಯಾನುಭವ! ಕ್ಷುದಿರಾಮನ ಶ್ರದ್ಧಾ ಭಕ್ತಿಗಳ ಶಕ್ತಿ ಅಂಥದು. ಶ್ರೇಷ್ಠ ಭಕ್ತನ ಭಕ್ತಿಭಾವದ ವರ್ಚಸ್ಸು ಅವನ ಮುಖದಲ್ಲಿ ಸದಾ ಬೆಳಗುತ್ತಿತ್ತು. ಅವನ ಪರಮ ಶಾಂತ ಹಾಗೂ ಪ್ರಸನ್ನ ಮುಖಮಂಡಲವನ್ನು ಕಂಡು ಆ ಹಳ್ಳಿಗರೂ ಅವನೊಳಗಣ ಆಧ್ಯಾತ್ಮಿಕ ಮಹತ್ತನ್ನು ಮನಗಂಡರು; ಅವನನ್ನು ಒಬ್ಬ ಋಷಿಯನ್ನು ಕಂಡಂತೆ ಗೌರವಿಸತೊಡಗಿದರು. ಅವನು ಬರುತ್ತಿರುವುದನ್ನು ಕಂಡರೆ ದಾರಿಬದಿಯ ಕಟ್ಟೆಯಲ್ಲಿ ಕುಳಿತು ಹರಟುತ್ತಿದ್ದ ಜನ ತಕ್ಷಣ ಹರಟೆಯನ್ನು ನಿಲ್ಲಿಸಿ ಎದ್ದುನಿಂತು ಗೌರವ ಸಲ್ಲಿಸುತ್ತಿದ್ದರು. ಅವನ ಮನೆಯ ಸಮೀಪದಲ್ಲೇ ಇದ್ದ ಹಾಲ್ದಾರಪುಕುರವೆಂಬ ಕೆರೆಯಲ್ಲಿ ಅವನು ಸ್ನಾನಕ್ಕಿಳಿದುದನ್ನು ಕಂಡರೆ ಗ್ರಾಮಸ್ಥರು ಸ್ನಾನಕ್ಕೆ ನೀರಿಗಿಳಿಯಲು ಹಿಂಜರಿಯುತ್ತಿದ್ದರು; ಗೌರವದಿಂದ ದಡದ ಮೇಲೆಯೇ ನಿಂತು, ಅವನು ಸ್ನಾನ ಮುಗಿಸುವವರೆಗೆ ಕಾದಿರುತ್ತಿದ್ದರು. ಜನ ತಮಗೆ ಕಷ್ಟ ಕಾರ್ಪಣ್ಯ

ಗಳು ಬಂದಾಗ ಪರಿಹಾರಕ್ಕೆ ಅವನ ಬಳಿಗೋಡಿಬರುತ್ತಿದ್ದರು. ಅವರಿಗೆಲ್ಲ ಅವನ ಮೇಲೆ ಅಷ್ಟು ಶ್ರದ್ಧೆ.

ಕ್ಷುದಿರಾಮನ ಪತ್ನಿ ಚಂದ್ರಮಣಿಯಂತೂ ಪತಿಗೆ ತಕ್ಕ ಸಂಗಾತಿ. ಅವಳೂ ಕೂಡ ತನ್ನ ಮುಗ್ಧ, ಸರಳ ಹಾಗೂ ವಾತ್ಸಲ್ಯಪೂರ್ಣ ಸ್ವಭಾವದಿಂದ ಆ ಹಳ್ಳಿಗರೆಲ್ಲರ ಹೃದಯಗಳನ್ನು ಸೆರೆಹಿಡಿದಿಟ್ಟಿದ್ದಳು. ಹಳ್ಳಿಗರು ಅವಳನ್ನು ತಮ್ಮ ಸ್ವಂತ ತಾಯಿಯಂತೆ ಕಾಣುತ್ತಿದ್ದರು. ತಮ್ಮ ಸಂತಸಗಳ ಹಾಗೂ ಸಂಕಟಗಳ ಸಮಯದಲ್ಲಿ ಚಂದ್ರಮಣಿಯಂತೆ ಸಹಾನುಭೂತಿ ತೋರುವ ಇನ್ನಾರನ್ನೂ ಅವರು ಕಂಡಿರಲಿಲ್ಲ. ಬಡವರು ಯಾರೇ ಅವಳ ಬಳಿಗೆ ಹೋಗಲಿ, ಬರಿಗೈಯಲ್ಲಿ ಹಿಂದಿರುಗುತ್ತಿರಲಿಲ್ಲ. ಅಷ್ಟೇ ಅಲ್ಲ, ತಮ್ಮ ಹೃದಯದ ತುಂಬ ಅವಳ ಅಪೂರ್ವ ವಾತ್ಸಲ್ಯದ ಸವಿ ತುಂಬಿಕೊಂಡು ಬರುತ್ತಿದ್ದರು. ಇದು ಆ ಹಳ್ಳಿಯ ಪ್ರತಿಯೊಬ್ಬ ಬಡವನ ಅನುಭವ. ಇನ್ನು, ಭಿಕ್ಷೆಯಿಂದಲೇ ಬದುಕುವ ಸಾಧು ಸಂನ್ಯಾಸಿಗಂತೂ ಅವಳ ಮನೆಬಾಗಿಲು ಸದಾ ತೆರೆದೇ ಇರುತ್ತಿತ್ತು. ನೆರೆಕೆರೆಯ ಮಕ್ಕಳಂತೂ ಅವಳನ್ನು ಪುಸಲಾಯಿಸಿ ಬೇಕಾದ್ದನ್ನು ಪಡೆಯಬಹುದೆಂಬುದನ್ನು ಚೆನ್ನಾಗಿ ತಿಳಿದು ಕೊಂಡಿದ್ದುವು. ಹೀಗೆ, ಕ್ಷುದಿರಾಮನ ಮನೆಯಲ್ಲಿ ಬಡತನದ ಕಷ್ಟಗಳೆಷ್ಟೇ ಇದ್ದರೂ ಪ್ರತಿಯೊಬ್ಬರಿಗೂ ಅಲ್ಲಿ ಶಾಂತಿ, ಸೌಖ್ಯ, ಸಮಾಧಾನ ಸಿಗುತ್ತಿತ್ತು. ಅವನ ಮನೆಯೊಂದು ಶಾಂತಿಧಾಮವೇ ಆಗಿಬಿಟ್ಟಿತ್ತು.

ಕ್ಷುದಿರಾಮ ದೇರೇಗ್ರಾಮದಲ್ಲಿನ ತನ್ನ ಆಸ್ತಿಯನ್ನು ಕಳೆದುಕೊಂಡು ಕಾಮಾರಪುಕುರಕ್ಕೆ ಬರುವ ಸಮಯಕ್ಕೆ ಅವನ ತಂಗಿ ರಾಮಶೀಲೆಗೆ ಮೂವತ್ತೈದು ವರ್ಷ ವಯಸ್ಸು, ತಮ್ಮ ನಿಧಿರಾಮನಿಗೆ ಮೂವತ್ತು, ಇನ್ನೊಬ್ಬ ತಮ್ಮ ಕನ್ಹೈರಾಮ ನಿಗೆ ಇಪ್ಪತ್ತೈದು. ಅವರೆಲ್ಲ ಆದಾಗಲೇ ತಮ್ಮ ತಮ್ಮ ಸಂಸಾರದಲ್ಲಿ ನೆಲೆನಿಂತಿದ್ದರು. ರಾಮಶೀಲೆಯ ಗಂಡ ಭಾಗವತ ವಂದ್ಯೋಪಾಧ್ಯಾಯ. ಇವರ ಮನೆ ಇರುವುದು ಕಾಮಾರಪುಕುರದಿಂದ ಪಶ್ಚಿಮಕ್ಕೆ ಹನ್ನೆರಡು ಮೈಲಿ ದೂರದ ಸಿಲಿಮ್ ಪೂರ್ ಎಂಬಲ್ಲಿ. ಇವರ ಮಗ ರಾಮಚಾಂದ್ ಆದಾಗಲೇ ವಕೀಲಿವೃತ್ತಿ ಪ್ರಾರಂಭಿಸಿದ್ದ. ಮಗಳು ಹೇಮಾಂಗಿನಿ. ಇವಳು ಹುಟ್ಟಿ ಬೆಳೆದದ್ದು ಕ್ಷುದಿರಾಮನ ಮನೆಯಲ್ಲೇ; ಆದ್ದರಿಂದ ಅವಳಿಗೆ ತಂದೆ–ತಾಯಿಗಿಂತ ಕ್ಷುದಿರಾಮ–ಚಂದ್ರಮಣಿಯರ ಮೇಲೆಯೇ ಹೆಚ್ಚು ಮಮತೆ. ಅವಳನ್ನು ಮುದ್ದಿನಿಂದ ಸಾಕಿದ್ದಲ್ಲದೆ ಮದುವೆ ಮಾಡಿಕೊಟ್ಟವನೂ ಕ್ಷುದಿರಾಮನೇ. ಅವಳ ಗಂಡನ ಹೆಸರು ಕೃಷ್ಣಚಂದ್ರ ಮುಖ್ಯೋಪಾಧ್ಯಾಯ. ಅವನು ಕಾಮಾರಪುಕುರಕ್ಕೆ ಐದು ಮೈಲಿ ವಾಯುವ್ಯ ದಲ್ಲಿರುವ ಸಿಹೋರ್ ಗ್ರಾಮದವನು. ಕಾಲಕ್ರಮದಲ್ಲಿ ಹೇಮಾಂಗಿನಿಯೂ ನಾಲ್ಕು ಮಕ್ಕಳ ತಾಯಿಯಾದಳು: ರಾಘವ, ರಾಮರತನ್, ಹೃದಯರಾಮ, ರಾಜಾರಾಮ.

ಕನ್ಹೈರಾಮನಿಗೆ ಇಬ್ಬರು ಮಕ್ಕಳು: ರಾಮತಾರಕ ಮತ್ತು ಕಾಳಿದಾಸ. ಹಲಧಾರಿ ಎಂಬುದು ರಾಮತಾರಕನ ಇನ್ನೊಂದು ಹೆಸರು. ಕನ್ಹೈರಾಮ ಧ್ಯಾನಶೀಲ ಹಾಗೂ ಮಹಾಭಕ್ತ. ಶ್ರೀರಾಮನ ಮೇಲಣ ಅವನ ಭಕ್ತಿಯನ್ನು ತಿಳಿಯಬೇಕಾದರೆ ಒಂದು ಘಟನೆಯನ್ನು ನೋಡಬೇಕು. ಒಮ್ಮೆ ಅವನ ಹಳ್ಳಿಯಲ್ಲಿ ಒಂದು ನಾಟಕ

ನಡೆಯುತ್ತಿತ್ತು. ಕನ್ನೈರಾಮನೂ ನಾಟಕ ನೋಡುತ್ತ ಕುಳಿತಿದ್ದ. ರಾಮಾಯಣದ ಒಂದು ಕಥಾಭಾಗ. ರಾಮನನ್ನು ಕೈಕೇಯಿ ಕಾಡಿಗಟ್ಟುವ ಪ್ರಸಂಗ ನಡೆಯುತ್ತಿದೆ. ಅದರಲ್ಲಿ ಕೈಕೇಯಿಯ ಪಾತ್ರಧಾರಿ ರಾಮನನ್ನು ಕಾಡಿಗೆ ಕಳುಹಿಸಲು ಮಾಡುವ ಮಸಲತ್ತನ್ನು ಎಷ್ಟು ಚೆನ್ನಾಗಿ ಸಹಜವಾಗಿ ಅಭಿನಯಿಸಿದನೆಂದರೆ ಕನ್ನೈರಾಮ ಅದು ನಾಟಕ ಎಂಬುದನ್ನು ಮರೆತು ಕೈಕೇಯಿಯನ್ನು ಹೊಡೆಯುವುದಕ್ಕೇ ಹೋಗಿದ್ದ ನಂತೆ !

ರಾಮಶೀಲೆಯ ಮಗನಾದ ರಾಮಚಾಂದ್ ವಂದ್ಯೋಪಾಧ್ಯಾಯನ ವಕೀಲಿ ವೃತ್ತಿ ಮೇದಿನೀಪುರದಲ್ಲಿ ಚೆನ್ನಾಗಿ ಕುದುರಿತ್ತು, ಒಳ್ಳೆಯ ಸಂಪಾದನೆ ಕೈಗೆ ಹತ್ತಿತ್ತು. ಇಂತಹ ಸಮೃದ್ಧಿಯ ಸಮಯದಲ್ಲಿ ಅವನು ತನ್ನ ಸೋದರಮಾವನಾದ ಕ್ಷುದಿ ರಾಮನ ಕಷ್ಟದ ದಿನಗಳನ್ನು ಕಂಡು ಅವನಿಗೆ ನೆರವು ನೀಡಲು ಮುಂದಾದ; ಪ್ರತಿ ತಿಂಗಳೂ ಹದಿನೈದು ರೂಪಾಯಿಗಳನ್ನು ಕಳುಹಿಸತೊಡಗಿದ. ಕ್ಷುದಿರಾಮನಿಗೂ ತನ್ನ ಈ ಸೋದರಳಿಯನ ಮೇಲಿದ್ದ ಪ್ರೀತಿ ಅತಿಶಯವಾದದ್ದು. ಒಂದು ನಾಲ್ಕು ದಿನ ಅವನ ಯೋಗಕ್ಷೇಮದ ವಿಚಾರ ತಿಳಿಯದೆ ಹೋಯಿತೆಂದರೆ ಕೂಡಲೇ ಮೇದಿನೀಪುರಕ್ಕೆ ಹೊರಟುಬಿಡುತ್ತಿದ್ದ. ಇದೇ ರೀತಿ ಅವನು ಮೇದಿನೀಪುರಕ್ಕೆ ಹೊರಟ ಸಂದರ್ಭದಲ್ಲಿ ನಡೆದ ಒಂದು ಘಟನೆಯನ್ನು ನೋಡಬಹುದು. ಇದರಿಂದ ಅವನ ದೈವಭಕ್ತಿಯ ಪರಿಚಯ ಇನ್ನಷ್ಟು ಸ್ಪಷ್ಟವಾಗುತ್ತದೆ.

ಮೇದಿನೀಪುರ ಇರುವುದು ಕಾಮಾರಪುಕುರದ ನೈಋತ್ಯಕ್ಕೆ ಸುಮಾರು ಐವತ್ತು ಮೈಲಿ ದೂರದಲ್ಲಿ. ಕೆಲದಿನಗಳಿಂದ ರಾಮಚಾಂದನ ಹಾಗೂ ಅವನ ಕುಟುಂಬದ ಸಮಾಚಾರ ತಿಳಿದುಬರದಿದ್ದುದರಿಂದ ಕ್ಷುದಿರಾಮ ಅವರನ್ನು ನೋಡಿ ಕೊಂಡುಬರಲು ಹೊರಟೇಬಿಟ್ಟ. ಮುಂಜಾನೆಯೇ ಪಯಣ ಬೆಳೆಸಿ ಕಾಲ್ನಡಿಗೆ ಯಲ್ಲೇ ಹೊರಟು ಬೆಳಗ್ಗೆ ಸುಮಾರು ಹತ್ತು ಗಂಟೆಯ ಹೊತ್ತಿಗೆ ಒಂದು ಹಳ್ಳಿಗೆ ಬಂದು ತಲುಪಿದ. ಅಲ್ಲಿ ಅವನು ಕೆಲವು ಬಿಲ್ವವೃಕ್ಷಗಳು ಚಿಗುರೊಡೆದು ಎಳೆಯ ಹಸಿರೆಲೆಗಳಿಂದ ನಳನಳಿಸುತ್ತಿರುವುದನ್ನು ಕಂಡ. ಅಷ್ಟಕ್ಕೇ ಅವನ ಹೃದಯದಲ್ಲಿ ಆನಂದದ ಅಲೆ ಎದ್ದಿತು. ಅದಕ್ಕೊಂದು ಕಾರಣವಿತ್ತು. ಅದು ಬಹುಶಃ ಫೆಬ್ರವರಿ–ಮಾರ್ಚ್ ತಿಂಗಳ ಸಮಯ. ಬಿಲ್ವವೃಕ್ಷಗಳು ಎಲೆಗಳನ್ನೆಲ್ಲ ಉದುರಿಸಿಕೊಂಡು ಬೋಳಾಗಿರುವ ಕಾಲ. ಕ್ಷುದಿರಾಮ ಒಳ್ಳೆಯ ಬಿಲ್ವಪತ್ರೆಯಿಂದ ಪೂಜೆ ಮಾಡಿ ಬಹಳ ದಿನಗಳೇ ಆಗಿದ್ದುವು. ತುಳಸಿ –ಬಿಲ್ವಪತ್ರೆ ಇಲ್ಲದ ಪೂಜೆ ಅದೆಂಥ ಪೂಜೆ ! ಭಕ್ತಿವಂತನಾದ ಕ್ಷುದಿರಾಮನಿಗೆ ಪೂಜೆಯೆಲ್ಲ ಅಚ್ಚುಕಟ್ಟಾಗಿ ನಡೆಯಬೇಕು. ಈಗ ಈ ಹೊಸತಾಗಿ ಚಿಗುರಿದ ಬಿಲ್ವಪತ್ರೆಗಳು ಅವನ ಕಣ್ಣಿಗೆ ಬಿದ್ದುವೋ ಇಲ್ಲವೋ, ಕೂಡಲೇ ಅವನು ಮೇದಿನೀಪುರದ ಕಡೆಗೆ ಹೋಗಬೇಕೆಂದಿರುವುದನ್ನೇ ಮರೆತು, ಅಲ್ಲೇ ಹಳ್ಳಿಯಲ್ಲಿ ಒಂದು ಹೊಸ ಬುಟ್ಟಿಯನ್ನೂ ಒಂದು ತುಂಡು ಹೊಸ ಬಟ್ಟೆಯನ್ನೂ ಕೊಂಡುಕೊಂಡ. ಕೆರೆಗೆ ಹೋಗಿ ಅವುಗಳನ್ನು ಶುದ್ಧವಾಗಿ ತೊಳೆದು ತಂದ. ಬೇಕೆಂಬಷ್ಟು ಬಿಲ್ವಪತ್ರೆಯನ್ನು ಕಿತ್ತುಕೊಂಡ. ಒದ್ದೆ ಬಟ್ಟೆಯಿಂದ ಪತ್ರೆ ಗಳನ್ನು ಮುಚ್ಚಿಕೊಂಡು ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಮನೆಗೆ

ಹಿಂದಿರುಗಿ ಬಂದ. ಮನೆಗೆ ತಲುಪಿದವನೇ ಸ್ನಾನ ಮಾಡಿ ಸಂಭ್ರಮದಿಂದ ಶಿವನಿಗೂ ಶೀತಲಾದೇವಿಗೂ ಆ ಎಳೆಯ ಬಿಲ್ವದಳಗಳಿಂದ ಪೂಜೆ ಮಾಡಲು ಕುಳಿತುಬಿಟ್ಟ. ಪೂಜೆ ಮುಗಿಯುವವರೆಗೂ ಊಟದ ಮಾತೇ ಇಲ್ಲ. ಪೂಜೆ ಮುಗಿಸಿ ಊಟಕ್ಕೆ ಕುಳಿತಾಗ ಸಾಧ್ವಿಯಾದ ಪತ್ನಿ ಚಂದ್ರಮಣಿ ಮೆಲುದನಿಯಲ್ಲಿ ಕೇಳಿದಳು: "ಏನು, ಮೇದಿನೀಪುರಕ್ಕೆ ಹೊರಟವರು ವಾಪಸ್ಸು ಬಂದುಬಿಟ್ಟರಲ್ಲ! ಏನಾಯಿತು?" ಕ್ಷುದಿರಾಮ ಸಂತೃಪ್ತಿಯ ದನಿಯಲ್ಲಿ ಹೇಳಿದ, "ಬಿಲ್ವಪತ್ರೆಯಿಂದ ಶಿವನ ಪೂಜೆ ಮಾಡಿ ಬಹಳ ದಿನಗಳಾಗಿದ್ದುವಲ್ಲವೆ? ಮನಸ್ಸಿಗೆ ಸಮಾಧಾನವೇ ಇರಲಿಲ್ಲ. ಆ ಹಳ್ಳಿಯಲ್ಲಿ ಸೊಗಸಾದ ಚಿಗುರು ಬಿಲ್ವದಳಗಳನ್ನು ನೋಡಿದೆ. ಮನಸ್ಸು ತಡೆಯಲಿಲ್ಲ. ಈಗ ನನಗೆ ತೃಪ್ತಿ." ಸ್ವತಃ ಭಕ್ತಿಮತಿಯಾದ ಚಂದ್ರಮಣಿಗೆ ತನ್ನ ಪತಿಯ ಭಕ್ತಿಯ ಆಳದ ಅರಿವಾಗಿ ಪುಳಕಿತಳಾದಳು. ಕ್ಷುದಿರಾಮ ಮರುದಿನ ಮುಂಜಾನೆ ಮತ್ತೆ ಮೇದಿನೀಪುರದತ್ತ ನಡೆದ.

ಕ್ಷುದಿರಾಮ ಕಾಮಾರಪುಕುರದಲ್ಲಿ ಕಾಲಿಟ್ಟು ಆರು ವರ್ಷಗಳು ಸಂದುವು. ಮಗ ರಾಮಕುಮಾರನಿಗೀಗ ಹದಿನಾರು ತುಂಬಿದೆ. ಮಗಳು ಕಾತ್ಯಾಯನಿಗೆ ಹನ್ನೊಂದು ವರ್ಷ. ಇಬ್ಬರಿಗೂ ಮದುವೆಯ ವಯಸ್ಸು. ಬಾಲ್ಯವಿವಾಹ ಪದ್ಧತಿ ಆಳವಾಗಿ ಬೇರುಬಿಟ್ಟಿದ್ದ ಸಮಯ ಅದು. ಕಾತ್ಯಾಯನಿಯನ್ನು ಕಾಮಾರಪುಕುರಕ್ಕೆ ಎರಡು ಮೈಲಿ ದೂರದಲ್ಲಿರುವ ಆನೂರಿನ ಕೇನಾರಾಮ ವಂದ್ಯೋಪಾಧ್ಯಾಯ ಎಂಬವನಿಗೆ ಕೊಟ್ಟು ವಿವಾಹ ಮಾಡಿದರು; ಕೇನಾರಾಮನ ತಂಗಿಯನ್ನೇ ರಾಮ ಕುಮಾರನಿಗೆ ತಂದುಕೊಂಡರು. ರಾಮಕುಮಾರ ಕಾಮಾರಪುಕುರದ ಬಳಿಯ ಒಂದು ಸಂಸ್ಕೃತ ಪಾಠಶಾಲೆಯಲ್ಲಿ ವ್ಯಾಕರಣ, ಸಾಹಿತ್ಯ ಮುಗಿಸಿ ಸ್ಮೃತಿಶಾಸ್ತ್ರವನ್ನು ಅಧ್ಯಯನ ಮಾಡುತ್ತಿದ್ದ. ಮತ್ತೆ ನಾಲ್ಕು ವರ್ಷ ಕಳೆಯುವ ವೇಳೆಗೆ ಅವನ ಸಂಸ್ಕೃತ–ಶಾಸ್ತ್ರಾಧ್ಯಯನಗಳೆಲ್ಲ ಸಾಂಗವಾಗಿ ಮುಗಿದುವು. ಈಗ ಅವನು ಪೌರೋ ಹಿತ್ಯಾದಿಗಳನ್ನು ಮಾಡುತ್ತ ಮನೆಗೆ ಕಿಂಚಿತ್ ಸಂಪಾದನೆಯನ್ನು ತರಲು ಸಾಧ್ಯ ವಾಯಿತು. ಇದರಿಂದಾಗಿ ಸಂಸಾರ ನಿರ್ವಹಣೆ ಸುಲಭವಾಯಿತು. ಅದಕ್ಕಿಂತ ಹೆಚ್ಚಾಗಿ ಪ್ರಪಂಚದ ವಿಷಯದಲ್ಲಿ ಅನಾಸಕ್ತನೂ ಪರಮಾರ್ಥ ವಿಷಯದಲ್ಲಿ ಅನುರಕ್ತನೂ ಆಗಿದ್ದ ಕ್ಷುದಿರಾಮನಿಗೆ ತನ್ನ ಆಧ್ಯಾತ್ಮಿಕ ಸಾಧನೆಯಲ್ಲಿ ಆಳವಾಗಿ ಮುಳುಗಲು ಅನುಕೂಲವಾಯಿತು. ಆದರೆ ಇದೇ ವೇಳೆಗೆ ಅವನ ಪ್ರಾಣಸಖನಾದ ಸುಖಲಾಲ ಗೋಸ್ವಾಮಿ ತೀರಿಕೊಂಡ. ಕ್ಷುದಿರಾಮನ ಪಾಲಿಗೆ ಇದೊಂದು ದೊಡ್ಡ ಆಘಾತವೇ ಆಯಿತು. ಅದರಿಂದ ಚೇತರಿಸಿಕೊಳ್ಳಲು ಅವನಿಗೆ ಎಷ್ಟೋ ದಿನ ಬೇಕಾಯಿತು.

ಈಗ ಗೃಹಕೃತ್ಯದ ಭಾರದಿಂದ ಪಾರಾಗಿರುವುದರಿಂದ ಕ್ಷುದಿರಾಮನಿಗೆ ತುಂಬ ವಿರಾಮ. ಈ ಸಮಯದಲ್ಲೇ ಅವನಿಗೆ ತೀರ್ಥಯಾತ್ರೆಯನ್ನು ಕೈಗೊಳ್ಳಬೇಕೆಂದು ತೀವ್ರ ಹಂಬಲವುಂಟಾಯಿತು. ಕೂಡಲೇ ಅದಕ್ಕೆ ಸಿದ್ಧನಾಗಿಬಿಟ್ಟ. ಸುಮಾರು ೧೮೨೪ ರಲ್ಲಿ ಅವನು ಕಾಲ್ನಡಿಗೆಯಲ್ಲೇ ರಾಮೇಶ್ವರದತ್ತ ಹೊರಟ. ದಕ್ಷಿಣ ಭಾರತದ ತೀರ್ಥಕ್ಷೇತ್ರಗಳನ್ನೆಲ್ಲ ಸಂದರ್ಶಿಸಿ ಊರಿಗೆ ಹಿಂದಿರುಗಲು ಕ್ಷುದಿರಾಮನಿಗೆ

ಒಂದು ವರ್ಷವೇ ಹಿಡಿಯಿತು. ಸುಮಾರು ಸಾವಿರದ ಐನೂರು ಮೈಲಿಗಳ ಪ್ರಯಾಣ. ರಾಮೇಶ್ವರದಿಂದ ಬರುವಾಗ ಕ್ಷುದಿರಾಮ ಒಂದು ಬಾಣಲಿಂಗವನ್ನು ತಂದ. ಈಗ ಅದಕ್ಕೆ ಪ್ರತಿದಿನ ಭಕ್ತಿಶ್ರದ್ಧೆಯಿಂದ ಪೂಜೆಗೈಯಲಾರಂಭಿಸಿದ. 'ರಾಮೇಶ್ವರ' ಎಂಬ ಹೆಸರಿನ ಆ ಬಾಣಲಿಂಗವನ್ನು ಕಾಮಾರಪುಕುರದಲ್ಲಿ ನಾವು ಇಂದಿಗೂ ಕಾಣಬಹುದು. ಕ್ಷುದಿರಾಮ ರಾಮೇಶ್ವರಕ್ಕೆ ಹೋಗಿಬಂದ ಒಂದು ವರ್ಷದ ಬಳಿಕ ಚಂದ್ರಮಣಿ ಒಂದು ಗಂಡುಮಗುವಿಗೆ ಜನ್ಮವಿತ್ತಳು. ಮಗುವಿಗೆ ಯಾತ್ರೆಯ ಸ್ಮರಣಾರ್ಥವಾಗಿ ರಾಮೇಶ್ವರ ಎಂದೇ ನಾಮಕರಣ ಮಾಡಿದರು.

ಇನ್ನೂ ಎಂಟು ವರ್ಷಗಳು ಉರುಳಿದವು. ಈ ವೇಳೆಗೆ ರಾಮಕುಮಾರ ತನ್ನ ವೃತ್ತಿಯಲ್ಲಿ ಸಾಕಷ್ಟು ಪ್ರವೀಣನಾದ; ಊರವರ ಧಾರ್ಮಿಕ ಸಮಸ್ಯೆಗಳಿಗೆ ಸ್ಮೃತಿಶಾಸ್ತ್ರಗಳ ಆಧಾರದ ಮೇಲೆ ಉತ್ತರವಿತ್ತು ಸಮಾಧಾನ ಹೇಳಬಲ್ಲವನಾದ; ಹೋಮ ಹವನಗಳಾದಿಯಾಗಿ ಬಗೆಬಗೆಯ ವೈದಿಕ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸಲು ಸಮರ್ಥನಾದ. ಈ ಎಲ್ಲ ಕಾರಣಗಳಿಂದ ಅವನ ಆರ್ಥಿಕ ಪರಿಸ್ಥಿತಿ ಸಾಕಷ್ಟು ಸುಧಾರಿಸಿತು.

ಶಾಸ್ತ್ರಗಳನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡಿ ಅವುಗಳ ಮರ್ಮವನ್ನರಿತ ರಾಮಕುಮಾರನಿಗೆ ಶಕ್ತಿಪೂಜೆಯಲ್ಲಿ (ದೇವಿಯ ಉಪಾಸನೆ) ವಿಶೇಷ ಶ್ರದ್ಧೆ ಉಂಟಾಯಿತು. ಅವನು ಒಬ್ಬ ಸಮರ್ಥ ಗುರುವಿನಿಂದ ಶಕ್ತಿಮಂತ್ರೋಪದೇಶವನ್ನೂ ಪಡೆದಿದ್ದ. ಹೀಗೆ ಅವನು ಆ ಶಕ್ತಿಮಂತ್ರದ ಸಹಾಯದಿಂದ ಹೋಮ ಹವನಾದಿಗಳನ್ನು ಪರಿಣಾಮಕಾರಿಯಾಗಿ ಮಾಡಬಲ್ಲವನಾದ. ಅತ್ಯಂತ ಶ್ರದ್ಧಾಭಕ್ತಿಯಿಂದ ಶಕ್ತಿಯ ಉಪಾಸನೆ ಮಾಡಿದ್ದರಿಂದ ಅವನಿಗೆ ಕೆಲವಾರು ಅಲೌಕಿಕ ಅನುಭವಗಳೂ ಆದುವು. ಒಮ್ಮೆ ಅವನಿಗೆ ಜಗನ್ಮಾತೆ ತನ್ನ ನಾಲಿಗೆಯ ಮೇಲೆ ಬೀಜಾಕ್ಷರವನ್ನು ಬರೆದಂತೆ ಅನುಭವವಾಯಿತು. ಇದರ ಪರಿಣಾಮವಾಗಿ ಅವನು ಜ್ಯೋತಿಷದಲ್ಲಿ ಪರಿಪೂರ್ಣ ಸಿದ್ಧಿ ಪಡೆದ. ಅವನು ನುಡಿದ ಭವಿಷ್ಯವೆಲ್ಲವೂ ಸತ್ಯವಾಗುತ್ತಿತ್ತು. ರೋಗಿಯೊಬ್ಬನನ್ನು ನೋಡುವಷ್ಟರಿಂದಲೇ ಅವನು ಗುಣ ಹೊಂದುವನೆ ಇಲ್ಲವೆ ಎಂಬುದನ್ನು ಹೇಳಬಲ್ಲವನಾದ. ನಿಖರವಾಗಿ ಭವಿಷ್ಯ ಹೇಳಬಲ್ಲ ಸಾಮರ್ಥ್ಯವಿದ್ದ ಅವನು ಆ ಪ್ರದೇಶದಲ್ಲೆಲ್ಲ ಕ್ಷಿಪ್ರದಲ್ಲೇ ಪ್ರಸಿದ್ಧಿ ಪಡೆದನೆಂದರೆ ಅಚ್ಚರಿಯೇನಿದೆ ? ಎಂಥಾ ಭಯಂಕರ ಕಾಯಿಲೆಯಿಂದ ನರಳುವ ರೋಗಿಯಾದರೂ ಸರಿಯೆ, ರಾಮಕುಮಾರ ಶಾಂತಿಕಾರ್ಯ ಮಾಡಿದರೆ ಸಾಕು, ರೋಗಿ ನಗುನಗುತ್ತ ಮೇಲೇಳುತ್ತಿದ್ದ. ಶಾಂತಿಕಾರ್ಯವನ್ನು ಮಾಡುತ್ತಿರುವಾಗಲೇ ರಾಮಕುಮಾರ "ಈ ಪೂಜಾಸ್ಥಳದಲ್ಲಿ ನಾನು ಬಿತ್ತಿದ ಬೀಜ ಮೊಳೆಯುವ ವೇಳೆಗೆ ರೋಗಿ ಗುಣಹೊಂದುತ್ತಾನೆ, ನೋಡುತ್ತಿರಿ" ಎಂದು ಖಡಾಖಂಡಿತವಾಗಿ ಹೇಳುತ್ತಿದ್ದ ಮತ್ತು ಅದಕ್ಕನುಗುಣವಾಗಿ ಆ ರೋಗಿ ಗುಣಹೊಂದಿ ಮೇಲೇಳುತ್ತಿದ್ದ.

ಒಮ್ಮೆ ರಾಮಕುಮಾರ ಕಾರ್ಯಾರ್ಥವಾಗಿ ಕಲ್ಕತ್ತಕ್ಕೆ ಬಂದಿದ್ದವನು, ಒಂದು ಮುಂಜಾನೆ ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದ. ಅದೇ ಸಮಯಕ್ಕೆ ಒಬ್ಬ ಶ್ರೀಮಂತನೂ ತನ್ನ ಸಂಸಾರಸಮೇತನಾಗಿ ಅಲ್ಲಿಗೆ ಸ್ನಾನಕ್ಕೆ ಬಂದ. ಆತನ ಹೆಂಡತಿ

ಪಲ್ಲಕ್ಕಿಯಲ್ಲಿ ಕುಳಿತಿದ್ದಳು. ಅವಳು ಸ್ನಾನ ಮಾಡುವುದು ಇತರರ ಕಣ್ಣಿಗೆ ಬೀಳದಂತೆ ಆ ಪಲ್ಲಕ್ಕಿಯನ್ನೇ ನೀರಿಗಿಳಿಸಲಾಯಿತು, ಪಲ್ಲಕ್ಕಿಯೊಳಗಿಂದಲೇ ಸ್ನಾನ ಮುಗಿಸಲಿ ಎಂದು. ಹಳ್ಳಿಯಲ್ಲಿ ಹುಟ್ಟಿ ಬೆಳೆದ ರಾಮಕುಮಾರನಿಗೆ ಇದು ವಿಚಿತ್ರವಾಗಿ ಕಂಡಿತು. ಸ್ತ್ರೀಯರು ಹೀಗೆ ಮರೆಮಾಡಿಕೊಂಡು ಯಾರ ಕಣ್ಣಿಗೂ ಬೀಳದಂತೆ ಸ್ನಾನ ಮಾಡುವುದನ್ನು ಅವನು ಕಂಡವನೇ ಅಲ್ಲ. ಬೆರಗುಗಣ್ಣಿನಿಂದ ಆ ಪಲ್ಲಕ್ಕಿಯ ಕಡೆಗೇ ನೋಡುತ್ತಿದ್ದ ರಾಮಕುಮಾರನಿಗೆ ಆ ಮಹಿಳೆಯ ಸುಂದರ ಮುಖ ಮಾತ್ರ ಸ್ವಲ್ಪ ಕಾಣಿಸಿತು. ತಕ್ಷಣ ಒಂದು ದೀರ್ಘ ನಿಟ್ಟುಸಿರಿನೊಂದಿಗೆ ಅವನಿಂದೊಂದು ಉದ್ಗಾರ ಹೊರಟಿತು: "ಆಹಾ, ಯಾವ ಶರೀರವನ್ನು ಇಂದು ಯಾರ ಕಣ್ಣಿಗೂ ಬೀಳದಂತೆ ಎಚ್ಚರಿಕೆಯಿಂದ ನೋಡಿಕೊಳ್ಳಲಾಗುತ್ತಿದೆಯೋ ಅದೇ ಶರೀರಕ್ಕೆ ನಾಳೆಯ ದಿನ ಬೆಳಗ್ಗೆ ಈ ಗಂಗೆಯಲ್ಲೇ ಎಲ್ಲರ ಕಣ್ಮುಂದೆ ಶವಸ್ನಾನ ವಾಗುವುದಲ್ಲ!" ಈ ಉದ್ಗಾರ ಪಕ್ಕದಲ್ಲಿದ್ದ ಶ್ರೀಮಂತನಿಗೆ ಕೇಳಿಸಿತು. ಅವನಿಗೆ ಅಚ್ಚರಿ –ಕೋಪ ಎರಡೂ ಉಕ್ಕಿ ಬಂದುವು. ಜಕ್ಕಜವ್ವನೆಯಾದ ತನ್ನ ಹೆಂಡತಿ, ಕಾಯಿಲೆಯ ಸೂಚನೆಯೇ ಇಲ್ಲದವಳು, ರಾತ್ರಿ ಬೆಳಗಾಗುವುದರೊಳಗೆ ಸಾಯುವ ಳೆಂದರೇನರ್ಥ! ಶ್ರೀಮಂತ ಮನದಲ್ಲೇ ನಿರ್ಧಾರ ಮಾಡಿದ, ಈ ಬಗೆಯ ಅಪ್ರಿಯ ಮಾತನ್ನಾಡಿದ ಅಧಿಕಪ್ರಸಂಗಿಗೆ ಸರಿಯಾದ ಪಾಠ ಕಲಿಸಬೇಕು ಎಂದು. ರಾಮ ಕುಮಾರನನ್ನು ಒತ್ತಾಯದಿಂದ ತನ್ನ ಮನೆಗೆ ಕರೆದೊಯ್ದು, ಆ ರಾತ್ರಿ ತನ್ನಲ್ಲೇ ಉಳಿಸಿಕೊಂಡ. ಆದರೆ ಮರುದಿನ ಬೆಳಗ್ಗೆ ಆತ ರಾಮಕುಮಾರನನ್ನು ಸುಮ್ಮನೆ ಬಿಟ್ಟುಬಿಡಬೇಕಾಯಿತು; ಆಗಬಾರದ್ದು ಆಗಿಹೋಗಿತ್ತು!

ರಾಮಕುಮಾರ ಸ್ವತಃ ತನ್ನ ಹೆಂಡತಿಯ ಕುರಿತಾಗಿ ಹೇಳಿದ್ದ ಒಂದು ಮಾತು ಕೂಡ ಸತ್ಯವಾಯಿತು. ಅವನ ಹೆಂಡತಿಯಲ್ಲಿ ಅನೇಕ ಮಂಗಳಕರ ಲಕ್ಷಣಗಳಿ ದ್ದುವು. ಮದುವೆಯಾಗಿ ಬಂದಾಗ ಅವಳಿಗಿನ್ನೂ ಏಳು ವರ್ಷ ವಯಸ್ಸು. ಅವಳು ಹೊಸಲೊಳಗೆ ಕಾಲಿಟ್ಟಂದಿನಿಂದ ಮನೆಯ ಭಾಗ್ಯ ಕುದುರತೊಡಗಿತು. ಕ್ಷುದಿ ರಾಮನ ಸೋದರಳಿಯನಾದ ಮೇದಿನೀಪುರದ ರಾಮಚಾಂದ ತಿಂಗಳುತಿಂಗಳೂ ಸಹಾಯಧನ ಕಳಿಸಲು ಪ್ರಾರಂಭಿಸಿದ್ದು ಆಗಿನಿಂದಲೇ. ಮನೆಗೆ ಭಾಗ್ಯಲಕ್ಷ್ಮಿಯಾಗಿ ಬಂದ ಸೊಸೆ ಮನೆಮಂದಿಯ ಪ್ರೀತಿಗೆ ಪಾತ್ರಳಾಗುವುದು ತೀರ ಸಹಜವೇ. ಅಲ್ಲದೆ, ರಾಮಕುಮಾರನ ಈ ಪುಟ್ಟ ಮಡದಿ ಆ ಮನೆಗೆಲ್ಲ ಒಬ್ಬಳೇ ಒಬ್ಬಳು ಸೊಸೆ. ಆದ್ದರಿಂದ ಎಲ್ಲರೂ ಅವಳನ್ನು ಬಹಳವಾಗಿ ಮುದ್ದು ಮಾಡಿದರು. ಅತಿಯಾದ ಮನ್ನಣೆ ಮನುಷ್ಯನ ತಲೆತಿರುಗಿಸುತ್ತದೆಯಂತೆ. ಹಾಗೆಯೇ ಅತಿ ಯಾದ ಮುದ್ದು, ಮಕ್ಕಳ ತಲೆಯನ್ನೂ ತಿರುಗಿಸುತ್ತದೆ. ಈಗ ರಾಮಕುಮಾರನ ಮಡದಿಯ ವಿಷಯದಲ್ಲೂ ಹಾಗೆಯೇ ಆಯಿತು. ಅವಳಲ್ಲಿ ಎಷ್ಟೇ ಶುಭ ಲಕ್ಷಣಗಳಿದ್ದರೂ ಅತಿ ಮುದ್ದಿನ ದುಷ್ಪರಿಣಾಮವಾಗಿ ಅವಳು ಹಟಮಾರಿ ಯಾದಳು; 'ಮುಟ್ಟಿದರೆ ಮುನಿ'ಯಂತಾದಳು. ಇದು ಎಲ್ಲರ ಗಮನಕ್ಕೆ ಬಾರದಿರ ಲಿಲ್ಲ. ಆದರೆ, ಬಹುಶಃ ಅತಿ ಮುದ್ದು ಮಾಡುವವರು ಬುದ್ಧಿ ಹೇಳುವ ಶಕ್ತಿಯನ್ನು ಕಳೆದುಕೊಳ್ಳುತ್ತಾರೆಂದು ಕಾಣುತ್ತದೆ. ಈ ಪುಟ್ಟ ಹುಡುಗಿಯ ಹಟಮಾರಿತನವನ್ನು

ಕಂಡೂ ಕೂಡ ಅವಳಿಗೆ ಸಕಾಲದಲ್ಲಿ ಬುದ್ಧಿ ಹೇಳಿ ತಿದ್ದಲು ಒಬ್ಬರಾದರೂ ಮುಂದಾಗಬೇಕಲ್ಲ! 'ಇರಲಿ, ಎಷ್ಟಾದರೂ ಇವಳು ಮನೆಗೆ ಸೌಭಾಗ್ಯ ತಂದು ಕೊಟ್ಟವಳಲ್ಲವೆ?' ಎಂದು ಎಲ್ಲರೂ ಸಹಿಸಿಕೊಂಡು ಸುಮ್ಮನಿರುವವರೇ. ಹುಡುಗಿ ಹಾಗೆಯೇ ಬೆಳೆದು ದೊಡ್ಡವಳಾದಳೆನ್ನಿ. ಆದರೆ ಅವಳು ಬದುಕಿದ್ದುದು ತನ್ನ ಮೂವತ್ತೈದನೆಯ ವಯಸ್ಸಿನ ವರೆಗೆ ಮಾತ್ರ. ರಾಮಕುಮಾರ ಬಹಳ ವರ್ಷಗಳ ಹಿಂದೆಯೇ ಒಂದು ದಿನ ಹೆಂಡತಿಯ ಜಾತಕ ನೋಡಿ ಭವಿಷ್ಯ ನುಡಿದಿದ್ದ—ಇವಳೇನಾದರೂ ಗರ್ಭಿಣಿಯಾದರೆ ಅದೇ ಅವಳ ಮೃತ್ಯು ಎಂದು. ಆದರೆ ಅವಳು ಬಹಳ ವರ್ಷಗಳ ವರೆಗೆ ಗರ್ಭಧರಿಸಲೇ ಇಲ್ಲ. ಇದನ್ನು ನೋಡಿ ಎಲ್ಲರೂ ಅವಳನ್ನು ಬಂಜೆ ಎಂದುಕೊಂಡರು. ಆದರೆ ಮೂವತ್ತೈದನೆಯ ವಯಸ್ಸಿಗೆ ಅವಳು ಗರ್ಭಧರಿಸಿಯೂ ಆಯಿತು, ಸಕಾಲದಲ್ಲಿ ಒಂದು ಸುಂದರವಾದ ಗಂಡು ಮಗುವಿಗೆ ಜನ್ಮಕೊಟ್ಟೂ ಆಯಿತು, ಪ್ರಾಣಬಿಟ್ಟೂ ಆಯಿತು! ಹೀಗೆ ರಾಮಕುಮಾರನ ಭವಿಷ್ಯವಾಣಿ ಇಲ್ಲಿಯೂ ದಿಟವಾಯಿತು. ಆ ತಬ್ಬಲಿ ಮಗುವಿಗೆ ಅಕ್ಷಯಕುಮಾರ ಎಂದು ಹೆಸರಿಟ್ಟರು.

ಕ್ಷುದಿರಾಮನದು ದೈವಿಕ ವ್ಯಕ್ತಿತ್ವ ಎನ್ನುವುದನ್ನು ನಾವು ಹಿಂದಿನಿಂದಲೂ ನೋಡುತ್ತಲೇ ಬಂದಿದ್ದೇವೆ. ಅವನ ಪತ್ನಿಯೂ ಕೂಡ ಈ ವಿಷಯದಲ್ಲಿ ಕಡಮೆಯವಳೇನಲ್ಲ. ಅವಳದ್ದೂ ಬಗೆಬಗೆಯ ದೇವದೇವಿಯರ ದರ್ಶನವಾಗುವಷ್ಟು ದೈವೀಗುಣಸಂಪನ್ನವಾದ ವ್ಯಕ್ತಿತ್ವ. ದೇವದೇವಿಯರ ದರ್ಶನ ಮಾಡಲು ಸಾಕಷ್ಟು ಆಧ್ಯಾತ್ಮಿಕ ಸಾಧನೆ ಮಾಡಿರಬೇಕಾಗುತ್ತದೆ. ಆದರೆ ಚಂದ್ರಮಣಿ ಪತಿಯೊಂದಿಗೆ ನಿಷ್ಠೆಯಿಂದಿದ್ದು, ಸರಳ ಹೃದಯದಿಂದ ಗೃಹಕೃತ್ಯಗಳನ್ನು ಮಾಡಿಕೊಂಡುಬರುತ್ತಿದ್ದುದನ್ನು ಬಿಟ್ಟರೆ ಅವಳು ಇನ್ನಾವುದೇ ಸಾಧನೆ ಮಾಡಿದ ಸಂಗತಿ ತಿಳಿದು ಬರುವುದಿಲ್ಲ. ಹೀಗಿರುವಾಗ ಅವಳಿಗೆ ದೇವದೇವಿಯರು ದರ್ಶನಕೊಡುತ್ತಿರಬೇಕಾದರೆ ಅವಳಲ್ಲಿ ಅಂಥದೇನಿರಬಹುದು? ಅವಳು ಜನ್ಮಾಂತರದಲ್ಲಿ ಮಾಡಿದ ಸಾಧನಾವಿಶೇಷ ಎಂದುಕೊಳ್ಳಬೇಕಾಗುತ್ತದೆ. ಅವಳಿಗೊಮ್ಮೆ ಮಹಾಲಕ್ಷ್ಮಿಯ ದರ್ಶನವಾದ ಬಗೆ ತುಂಬ ಸ್ವಾರಸ್ಯವಾಗಿದೆ.

ಅದು ಆಶ್ವೀಜ ಮಾಸ. ರಾಮಕುಮಾರ ಸಮೀಪದ ಭುರ್ಸುಬೊ ಎಂಬ ಹಳ್ಳಿಗೆ ಒಬ್ಬರ ಮನೆಯಲ್ಲಿ ಸಂಜೆ ಲಕ್ಷ್ಮೀಪೂಜೆ ಮಾಡಲು ಹೋಗಿದ್ದ. ಮಧ್ಯರಾತ್ರಿ ಕಳೆದರೂ ಮಗ ಮನೆಗೆ ಹಿಂದಿರುಗದಿದ್ದುದರಿಂದ ತಾಯಿ ಚಂದ್ರಮಣಿ ಕಾತರಳಾದಳು. ಮನೆಯ ಹೊರಗೆ ನಿಂತು ಮಗನ ಬರವಿಗಾಗಿ ಕಾಯತೊಡಗಿದಳು. ಆ ಹೊತ್ತಿಗೆ ದೂರದಲ್ಲಿ, ಭುರ್ಸುಬೊದಿಂದ ಕಾಮಾರಪುಕುರಕ್ಕೆ ಬರುವ ಗದ್ದೆಯ ದಾರಿಯಲ್ಲಿ ಓರ್ವ ನೀಳವಾದ ವ್ಯಕ್ತಿ ಬರುತ್ತಿರುವುದು ಕಾಣಿಸಿತು. ಮಗನ ದಾರಿಯನ್ನೇ ಕಾಯುತ್ತ ಕುಳಿತಿದ್ದ ಅವಳಿಗೆ ಅದು ತನ್ನ ಮಗನೇ ಇರಬೇಕೆನಿಸಿತು. ಆನಂದಭರಿತಳಾಗಿ ನಾಲ್ಕು ಹೆಜ್ಜೆ ಮುನ್ನಡೆದಳು. ಆದರೆ ಆ ವ್ಯಕ್ತಿ ಸನಿಹಕ್ಕೆ ಬರುತ್ತಲೇ ತಿಳಿಯಿತು, ಅದು ರಾಮಕುಮಾರನಲ್ಲ, ಸಕಲಾಭರಣಗಳಿಂದ ಸಿಂಗರಿಸಿಕೊಂಡ ಸುರಸುಂದರಿಯಾದ ಒಬ್ಬಳು ಹುಡುಗಿ ಎಂದು! ಇಂಥಾ ಅಪರಾತ್ರಿಯ

ವೇಳೆ ಸುಂದರಸ್ತ್ರೀಯೊಬ್ಬಳು ಹೀಗೆ ಸಕಲ ಚಿನ್ನಾಭರಣಗಳಿಂದ ಅಲಂಕರಿಸಿಕೊಂಡು ಏಕಾಕಿಯಾಗಿ ಬರುವುದೆಂದರೇನು ? ಆದರೆ ಚಂದ್ರಮಣಿಗೆ ಅದೆಲ್ಲ ಹೊಳೆಯಲೇ ಇಲ್ಲ. ಅವಳ ಮನಸ್ಸಿನಲ್ಲಿದ್ದ ಯೋಚನೆ ಒಂದೇ ಒಂದು – 'ನನ್ನ ಮಗ ಇನ್ನೂ ಯಾಕೆ ಬರಲಿಲ್ಲ?' ಅವಳು ಆ ಹುಡುಗಿಯನ್ನು ಕೇಳಿದಳು, "ಎಲ್ಲಿಂದ ಬರುತ್ತಿದ್ದೀಯಮ್ಮ?"

ಹುಡುಗಿ ಹೇಳಿದಳು: "ಭುರ್ಸುರ್ಜಬೊದಿಂದ."

ಆಗ ಚಂದ್ರಮಣಿ ಕಾತರತೆಯಿಂದ ಕೇಳಿದಳು, "ಓ! ನನ್ನ ಮಗ ರಾಮ ಕುಮಾರ ಕೂಡ ಭುರ್ಸುರ್ಜಬೊಕ್ಕೇ ಹೋಗಿದ್ದ. ಅವನು ಅಲ್ಲಿಂದ ಹೊರಟಿದ್ದು ದನ್ನೇನಾದರೂ ಕಂಡೆಯೇನಮ್ಮ? ಅವನು ಈ ವೇಳೆಗಾಗಲೇ ಬಂದುಬಿಡ ಬೇಕಾಗಿತ್ತು..."

ಚಂದ್ರಮಣಿಗೆ ಆ ಹುಡುಗಿ ಯಾರು ಎನ್ನುವುದೊಂದೂ ತಿಳಿಯದು. ಆ ಹುಡುಗಿಗೂ ಈ ಚಂದ್ರಮಣಿ ಯಾರು ಎನ್ನುವುದು ತಿಳಿಯದು. ಹಾಗಿರುವಾಗ, ರಾಮಕುಮಾರ ಎಂಬಾತ ಈ ಚಂದ್ರಮಣಿಯ ಮಗ ಎನ್ನುವುದೇ ಆಗಲಿ, ಅವನು ಭುರ್ಸುರ್ಜಬೊ ಗ್ರಾಮಕ್ಕೆ ಹೋಗಿದ್ದ ಎನ್ನುವುದೇ ಆಗಲಿ ಆ ಹುಡುಗಿಗೆ ಹೇಗೆ ತಿಳಿಯಬೇಕು ? ಆದರೆ ತನ್ನ ಮಗ ಇನ್ನೂ ಬರಲಿಲ್ಲವಲ್ಲ ಎಂಬ ಒಂದೇ ಚಿಂತೆ ತಲೆಯಲ್ಲಿ ತುಂಬಿದ್ದ ಚಂದ್ರಮಣಿಗೆ ಅದೆಲ್ಲ ಹೊಳೆಯಲು ಸಾಧ್ಯವಿರಲಿಲ್ಲ. ಆದರೆ ಆ ಹುಡುಗಿ ಚಂದ್ರಮಣಿಯನ್ನು ಸಮಾಧಾನ ಪಡಿಸುತ್ತ ಹೇಳಿದ ಮಾತು ಅಚ್ಚರಿಯನ್ನುಂಟು ಮಾಡುವಂಥದು: "ನಿನ್ನ ಮಗ ಯಾವ ಮನೆಯಲ್ಲಿ ಲಕ್ಷ್ಮೀಪೂಜೆ ಮಾಡಿದನೋ ಅದೇ ಮನೆಯಿಂದ ನಾನು ಬರುತ್ತಿದ್ದೇನೆ. ಹೆದರ ಬೇಡ, ನಿನ್ನ ಮಗ ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಬಂದುಬಿಡುತ್ತಾನೆ."

ಚಂದ್ರಮಣಿಗೆ ಸಮಾಧಾನವಾಯಿತು; ಕಳವಳಗೊಂಡ ಮನಸ್ಸು ಸ್ವಲ್ಪ ತಿಳಿಯಾಯಿತು. ಆದ್ದರಿಂದ ಕೊನೆಗೀಗ ಅವಳಿಗೆ ಆ ಹುಡುಗಿಯ ಕಡೆಗೆ ಸ್ವಲ್ಪ ಗಮನ ಹರಿಯಿತು, ನೋಡಿದಳು! ಕಣ್ಣುಗಳನ್ನು ಸರಿಯಾಗಿ ಅಗಲಿಸಿ ನೋಡಿ ದಳು ! ಹುಡುಗಿಯ ಸೌಂದರ್ಯ ಹೇಳತೀರದು ! ಅವಳ ಕಂಠವೋ ಜೇನುಕಂಠ ! ಅವಳ ಉಡಿಗೆತೊಡಿಗೆಯೋ ಬಹು ಆಕರ್ಷಕ ! ಇನ್ನು ಅವಳ ಆಭರಣಗಳೋ ದೇವಲೋಕದ್ದು ! ಅವಳೆಂದಳು, "ಮಗು ನೀನಿನ್ನೂ ಚಿಕ್ಕ ಹುಡುಗಿ. ನೀನು ಇಂಥಾ ಸುಂದರವಾದ ಆಭರಣ, ಉಡಿಗೆತೊಡಿಗೆ ಧರಿಸಿಕೊಂಡು ಈ ಅಪರಾತ್ರಿಯಲ್ಲಿ ಹೋಗುತ್ತಿರುವುದಾದರೂ ಎಲ್ಲಿಗೆ... ? ಅದಿರಲಿ, ನೀನು ಕಿವಿಯಲ್ಲಿ ಧರಿಸಿರುವ ಈ ವಿಚಿತ್ರ ಆಭರಣದ ಹೆಸರೇನು ?"

ಮುಗುಳ್ನಗುತ್ತ ಹುಡುಗಿಯೆಂದಳು: "ಇದು ಕರ್ಣಕುಂಡಲ."

ಬಳಿಕ ಮುಂದುವರಿಸುತ್ತ ಹೇಳಿದಳು: "ನಾನಿನ್ನೂ ಬಹಳ ದೂರ ಹೋಗ ಬೇಕಾಗಿದೆ. ಇನ್ನು ನಾನು ಬರಲೆ ?" ಚಂದ್ರಮಣಿ ಭಾವಿಸಿದಳು, 'ಪಾಪ, ಈ ಹುಡುಗಿ ಬಹಳ ಕಷ್ಟದಲ್ಲಿರಬೇಕು; ಸ್ವಲ್ಪ ಸಹಾಯಮಾಡೋಣ' ಎಂದು. ವಾತ್ಸಲ್ಯದಿಂದ ನುಡಿದಳು: "ಮಗು, ಬಾಮ್ಮ ಈ ರಾತ್ರಿ ನಮ್ಮ ಮನೆಯಲ್ಲೇ

ವಿಶ್ರಮಿಸಿಕೊ. ಬೆಳಗ್ಗೆ ಸಾವಕಾಶವಾಗಿ ಹೊರಟರಾಯಿತು.'' ಹುಡುಗಿಯೆಂದಳು, "ಇಲ್ಲ ತಾಯಿ, ನಾನು ಈಗಲೇ ಹೋಗಬೇಕು. ಮುಂದೆ ಎಂದಾದರೂ ಒಂದು ದಿನ ನಿಮ್ಮ ಮನೆಗೆ ಖಂಡಿತ ಬರುತ್ತೇನೆ.'' ಹೀಗೆಂದವಳೇ ಅಲ್ಲಿಂದ ಹೊರಟು ಬಿಟ್ಟಳು.

ಅವಳೀಗ ಲಾಹಾ ಮನೆಯವರ ವಿಶಾಲವಾದ ಗದ್ದೆಯ ದಾರಿಯಾಗಿ ಹೊರಟಳು. ಆದರೆ ಆಕೆ ಮೊದಲಿನ ದಾರಿಯನ್ನು ಬಿಟ್ಟು ಈ ದಾರಿಯಾಗಿ ತಿರುಗಿಕೊಂಡದ್ದನ್ನು ಕಂಡ ಚಂದ್ರಮಣಿಗೆ ಆಶ್ಚರ್ಯವಾಯಿತು. ಪಾಪ, ದಾರಿ ತಪ್ಪಿಹೋಗಿರಬೇಕು ಎಂದು ಭಾವಿಸಿ ಅವಳಿಗೆ ದಾರಿ ತೋರಿಸಲು ಅವಳ ಕಡೆಗೆ ಹೊರಟಳು. ಆದರೆ ಆಶ್ಚರ್ಯ ! ಆ ಹುಡುಗಿಯ ಪತ್ತೆಯೇ ಇಲ್ಲ ! ಚಂದ್ರಮಣಿ ನಾನಾ ದಿಕ್ಕುಗಳಲ್ಲಿ ಹುಡುಕಿ ನೋಡಿದಳು, ಹುಡುಗಿ ಕಾಣೆ ! ಆಗ ಅವಳಿಗೆ ಆ ಹುಡುಗಿಯ ಮಾತು ನೆನಪಿಗೆ ಬಂದಿತು – 'ನಿನ್ನ ಮಗ ಯಾವ ಮನೆಯಲ್ಲಿ ಲಕ್ಷ್ಮೀಪೂಜೆ ಮಾಡಿದನೋ ಆ ಮನೆಯಿಂದಲೇ ಬರುತ್ತಿದ್ದೇನೆ....!' ನಿಜ; ಇವಳೇ ಆ ಲಕ್ಷ್ಮಿ! ಆ ಅಲೌಕಿಕ ದಿವ್ಯಾಭರಣ, ಆ ಸ್ವರ್ಗೀಯ ಸೌಂದರ್ಯ ಇನ್ನಾರಿಗೆ ಬರಬೇಕು ! ಸತ್ಯವಾಗಿಯೂ ಇವಳು ಲಕ್ಷ್ಮಿ! ಚಂದ್ರಮಣಿಗೆ ದೃಢವಾಯಿತು. ಆನಂದೋದ್ವೇಗದಿಂದ ಅವಳ ಎದೆ ಡವಡವಿಸಿತು. ಪತಿಯ ಬಳಿಗೋಡಿದಳು; ಮೊದಲಿನಿಂದ ಕಡೆಯವರೆಗೂ ವಿವರವಾಗಿ ಬಣ್ಣಿಸಿದಳು. ಪರಮ ಸಾತ್ತ್ವಿಕನಾದ ಕ್ಷುದಿರಾಮ ಎಲ್ಲವನ್ನೂ ಶಾಂತವಾಗಿ ಕೇಳಿ ಪತ್ನಿಗೆ ಭರವಸೆ ನೀಡುತ್ತ ನುಡಿದ, "ಚಂದ್ರಾ, ನೀನು ನಿಜಕ್ಕೂ ಪುಣ್ಯವಂತೆ ! ಕರುಣಾಮಯಿಯಾದ ಲಕ್ಷ್ಮೀದೇವಿ ಅಪಾರ ಕೃಪೆಯಿಂದ ನಿನಗೆ ದರ್ಶನ ನೀಡಿದ್ದಾಳೆ. ಇದು ನಮ್ಮ ಅಪೂರ್ವ ಭಾಗ್ಯ !''

೪

# ದಿವ್ಯ ಸ್ವಪ್ನ

ಪರಮ ಭಕ್ತನಾದ ಕ್ಷುದಿರಾಮನ ದಿನಗಳೆಲ್ಲ ಪೂಜೆ ಧ್ಯಾನ ಜಪತಪಗಳಲ್ಲೇ ಕಳೆದುವು. ಈ ವೇಳೆಗೆ ಅವನಿಗೆ ಮತ್ತೊಮ್ಮೆ ತೀರ್ಥಯಾತ್ರೆ ಕೈಗೊಳ್ಳಬೇಕೆಂಬ ಮನಸ್ಸಾಯಿತು. ಈ ಸಲ ಅವನು ಹೋಗಬೇಕೆಂದುಕೊಂಡದ್ದು ಗಯಾಕ್ಷೇತ್ರಕ್ಕೆ. ಕ್ಷುದಿರಾಮ ಗಯೆಗೆ ಹೊರಡಲು ಮನಸ್ಸು ಮಾಡಿದ್ದಕ್ಕೆ ಒಂದು ವಿಶೇಷ ಕಾರಣವಿತ್ತು ಎನ್ನುತ್ತಾನೆ ಅವನ ತಂಗಿಯ ಮೊಮ್ಮಗ ಹೃದಯರಾಮ:

ಒಮ್ಮೆ ಕ್ಷುದಿರಾಮನಿಗೆ ತನ್ನ ಮಗಳು ಕಾತ್ಯಾಯನಿ ಈಗ ಕೆಲದಿನಗಳಿಂದ ತೀವ್ರ ಕಾಯಿಲೆಗೆ ಗುರಿಯಾಗಿದ್ದಾಳೆ ಎಂಬ ಸುದ್ದಿ ಮುಟ್ಟಿತು. ಕೂಡಲೇ ಅವನು ಮಗಳನ್ನು ನೋಡಿಕೊಂಡು ಬರಲು ಆನೂರಿಗೆ ಹೊರಟ. ಕಾತ್ಯಾಯನಿಗೆ ಆಗಿನ್ನೂ ಇಪ್ಪತ್ತೈದು ವರ್ಷ ವಯಸ್ಸು. ಮಗಳ ಹಾವಭಾವಗಳನ್ನು ಚೆನ್ನಾಗಿ ಗಮನಿಸಿ ನೋಡಿದಾಗ, ಅವಳನ್ನು ಯಾವುದೋ ಒಂದು ಪ್ರೇತ ಮೆಟ್ಟಿಕೊಂಡಿದೆ ಎಂದು ಕ್ಷುದಿರಾಮನಿಗೆ ಸ್ಪಷ್ಟವಾಯಿತು. ಆಗ ಅವನು ತನ್ನ ಇಷ್ಟದೇವತೆಯಲ್ಲೇ ಮನ ವನ್ನು ಏಕಾಗ್ರಗೊಳಿಸಿಕೊಂಡು ಆ ಪ್ರೇತಕ್ಕೆ ಹೇಳಿದ:

"ನೋಡು, ನೀನು ಪ್ರೇತವೇ ಆಗಿರು ಅಥವಾ ದೇವತೆಯೇ ಆಗಿರು, ನನ್ನ ಮಗಳಿಗೇಕೆ ಈ ರೀತಿ ತೊಂದರೆ ಕೊಡುತ್ತಿರುವೆ ? ಈ ಕೂಡಲೇ ಅವಳನ್ನು ಬಿಟ್ಟು ನಿನ್ನ ಪಾಡಿಗೆ ನೀನು ಹೊರಟುಹೋಗು."

ಕ್ಷುದಿರಾಮನಂತಹ ಸಾತ್ತ್ವಿಕನ ಮುಂದೆ ಪ್ರೇತ ತಲ್ಲಣಿಸಿತು. ಮೆದುದನಿ ಯಲ್ಲಿ ಅವನನ್ನು ಅಂಗಲಾಚಿ ಬೇಡಿಕೊಂಡಿತು:

"ಅಯ್ಯಾ, ನೀನು ವಿಷ್ಣುಕ್ಷೇತ್ರವಾದ ಗಯೆಗೆ ಹೋಗಿ ನನಗಾಗಿ ಶ್ರಾದ್ಧ ಮಾಡಿ ನನ್ನನ್ನು ಈ ದುರ್ಗತಿಯಿಂದ ಬಿಡಿಸುವುದಾಗಿ ಮಾತುಕೊಡುವೆಯಾದರೆ ನಾನು ಕೂಡಲೇ ನಿನ್ನ ಮಗಳನ್ನು ಬಿಟ್ಟು ಹೊರಟುಹೋಗುವೆ. ನಿನಗೆ ಭಾಷೆ ಕೊಡುತ್ತೇನೆ—ನಾನು ಹೇಳಿದ ಕೆಲಸವನ್ನು ಮಾಡಲು ನೀನು ಮನೆಯನ್ನು ಬಿಟ್ಟು ಹೊರಟ ಮರುಕ್ಷಣದಲ್ಲೇ ನಿನ್ನ ಮಗಳು ಎಲ್ಲ ತೊಂದರೆಗಳಿಂದಲೂ ಪಾರಾ ಗುವುದು ಖಂಡಿತ."

ಪ್ರೇತದ ದುಃಸ್ಥಿತಿಯನ್ನು ಕಂಡ ಕ್ಷುದಿರಾಮ ತಕ್ಷಣವೇ ನುಡಿದ:

"ಆಗಲಿ; ನಾನು ಗಯೆಗೆ ಸಾಧ್ಯವಾದಷ್ಟು ಬೇಗ ಹೋಗಿ ನಿನ್ನ ಇಚ್ಛೆಯನ್ನು ಪೂರೈಸುತ್ತೇನೆ. ಆದರೆ ನಾನು ಪೂಜೆ ಮಾಡಿಸಿದ್ದರಿಂದ ನಿನಗೆ ಮುಕ್ತಿಪ್ರಾಪ್ತಿ

ಯಾಯಿತು ಎಂಬುದಕ್ಕೆ ಪುರಾವೆಯಾಗಿ ನೀನೇನಾದರೂ ನಿದರ್ಶನ ಕೊಡುವಂತಿದ್ದರೆ ನನಗೆ ಬಹಳ ಸಂತೋಷವಾಗುತ್ತದೆ."

ಪ್ರೇತ ಹೇಳಿತು: "ಸರಿ; ನನಗೆ ಬಿಡುಗಡೆಯಾಯಿತು ಎಂಬುದಕ್ಕೆ ಪುರಾವೆಯಾಗಿ ನಾನು ಹೋಗುವಾಗ, ಅದೋ, ಆ ಬೇವಿನ ಮರದ ದೊಡ್ಡ ಕೊಂಬೆಯೊಂದನ್ನು ಮುರಿದು ಹೋಗುತ್ತೇನೆ."

ಕ್ಷುದಿರಾಮ ಗಯೆಗೆ ಹೋಗಿ ಶ್ರಾದ್ಧಕಾರ್ಯ ಮಾಡಿಸುತ್ತಲೇ ಇತ್ತ ಕಾತ್ಯಾಯನಿಯ ಮನೆಯ ಮುಂದಿನ ಬೇವಿನ ಮರದ ಭಾರೀ ಕೊಂಬೆಯೊಂದು ಮುರಿದು ಬಿತ್ತು. ಕಾತ್ಯಾಯನಿಯೂ ಎಂದಿನಂತಾದಳು.

ಕ್ಷುದಿರಾಮ ಗಯೆಗೆ ಹೋದದ್ದು ೧೮೩೫ರಲ್ಲಿ. ಆಗ ಅವನಿಗೆ ಅರವತ್ತು ತುಂಬಿತ್ತು. ಚೈತ್ರಮಾಸದಲ್ಲಿ ಹೊರಟ ಕ್ಷುದಿರಾಮ ವಾರಾಣಸಿಗೆ ಕಾಲ್ನಡಿಗೆಯಲ್ಲೇ ಪಯಣಿಸಿ, ವಿಶ್ವನಾಥನನ್ನು ಅರ್ಚಿಸಿದ; ಬಳಿಕ ಅಲ್ಲಿಂದ ಹೊರಟು ಗಯೆಗೆ ತಲುಪಿದ. ಚೈತ್ರ ಮಾಸದಲ್ಲಿ ಗಯಾಕ್ಷೇತ್ರದಲ್ಲಿ ಪಿಂಡಪ್ರದಾನ ಮಾಡಿದರೆ ಪಿತೃಗಳಿಗೆ ಅತೀವ ಸಂತೃಪ್ತಿಯಾಗುತ್ತದೆ ಎಂದು ಅವನಿಗೆ ತಿಳಿದಿತ್ತು. ಆದ್ದರಿಂದಲೇ ಅವನು ಆ ಸಮಯವನ್ನು ಆರಿಸಿಕೊಂಡದ್ದು.

ಕ್ಷುದಿರಾಮ ಗಯಾಕ್ಷೇತ್ರದಲ್ಲಿ ಸುಮಾರು ಒಂದು ತಿಂಗಳ ಕಾಲ ವಾಸವಾಗಿದ್ದು, ಶಾಸ್ತ್ರೋಕ್ತವಾಗಿ ಚಾಚೂ ತಪ್ಪದಂತೆ ಎಲ್ಲ ಕಾರ್ಯಗಳನ್ನೂ ಮಾಡಿ ಮುಗಿಸಿ, ಕೊನೆಯಲ್ಲಿ ಗಯಾ ಗದಾಧರನಿಗೆ ವಿಶೇಷ ಅರ್ಚನೆಯನ್ನು ಸಲ್ಲಿಸಿದ. ಕ್ಷುದಿರಾಮನ ಶ್ರದ್ಧೆ ಬಹಳ ದೊಡ್ಡದು. ಆದ್ದರಿಂದ ತನ್ನ ಪಿತೃಗಳೆಲ್ಲರಿಗೂ ಶ್ರಾದ್ಧ ಮಾಡಿ ಪಿಂಡಗಳನ್ನು ಸಲ್ಲಿಸಿದಾಗ ಅವನಿಗುಂಟಾದ ಶಾಂತಿ ಸಮಾಧಾನವೂ ದೊಡ್ಡದು. ಈಗ ಅವನಿಗೆ ತನ್ನ ತಲೆಯ ಮೇಲಿನ ದೊಡ್ಡ ಭಾರವೊಂದು ಇಳಿದಷ್ಟು ಹಗುರವೆನಿಸಿತು. ಅವನು ಭಾವಿಸಿದ, 'ಆಹಾ, ಗಯಾ ಗದಾಧರನ ಕೃಪೆ ಅದೆಷ್ಟು ಅದ್ಭುತ! ಕಾಮಾರಪುಕುರ ಎಲ್ಲಿ, ಈ ಗಯಾಕ್ಷೇತ್ರ ಇರುವುದೆಲ್ಲಿ! ನನ್ನ ಸ್ಥಿತಿಗತಿಯಾದರೂ ಏನು? ಅಂತಹ ನಾನು ಇಷ್ಟು ದೂರದ ಈ ಕ್ಷೇತ್ರಕ್ಕೆ ಬರುವುದೆಂದರೇನು?' ಹೀಗೆ ಆಲೋಚಿಸುತ್ತ ಕುಳಿತಿದ್ದ ಕ್ಷುದಿರಾಮನ ಹೃದಯವನ್ನು ಭಕ್ತಿ–ನಮ್ರತೆಗಳು ಆವರಿಸಿದುವು. ಇಂತಹ ಭಕ್ತಿಸುಧೆಯನ್ನು ಅವನು ಹಿಂದೆಂದೂ ಅನುಭವಿಸಿರಲಿಲ್ಲ. ಒಂದು ಬಗೆಯ ಅಲೌಕಿಕ ಶಾಂತಿ–ಸಂತೋಷಗಳಿಂದ ಅವನ ಹೃನ್ಮನಗಳು ಆ ದಿನವಿಡೀ ಉಲ್ಲಸಿತವಾಗಿದ್ದುವು.

ಆ ರಾತ್ರಿ ಕ್ಷುದಿರಾಮ ಮಲಗಿದ್ದಾನೆ; ಇನ್ನೇನು ಜೊಂಪು ಹತ್ತಿತೆನ್ನುವಾಗ ಅವನಿಗೊಂದು ಸ್ವಪ್ನವಾಯಿತು: ಗಯಾ ಗದಾಧರನ ದೇವಾಲಯ. ಕ್ಷುದಿರಾಮ ಗದಾಧರನ ಪಾದಪದ್ಮಗಳ ಬಳಿ ಕುಳಿತು ತನ್ನ ಪಿತೃಗಳಿಗೆ ಶ್ರದ್ಧಾಭಕ್ತಿಯಿಂದ ತರ್ಪಣ ಕೊಡುತ್ತಿದ್ದಾನೆ. ಪಿತೃಗಳೆಲ್ಲ ಜ್ಯೋತಿರ್ಮಯ ಶರೀರದಿಂದ ಅಲ್ಲಿಗೆ ಆಗಮಿಸಿ, ಅವನು ನೀಡಿದ ಪಿಂಡಗಳನ್ನು ಸಂತೋಷದಿಂದ ಸ್ವೀಕರಿಸಿ ಅವನನ್ನು ಹೃತ್ಪೂರ್ವಕವಾಗಿ ಆಶೀರ್ವದಿಸುತ್ತಿದ್ದಾರೆ. ತನ್ನ ಪ್ರೀತಿಯ ಪಿತೃಗಳ ದರ್ಶನಭಾಗ್ಯವನ್ನು ಪಡೆದ ಕ್ಷುದಿರಾಮನಿಗೆ ಉಕ್ಕಿ ಬರುತ್ತಿರುವ ಆನಂದಾಶ್ರುವನ್ನು ತಡೆಯಲೇ

ಆಗುತ್ತಿಲ್ಲ. ಹೃದಯುದಲ್ಲಿ ತುಂಬಿದ ಅತಿಶಯು ಭಕ್ತಿಯು ಭಾರದಿಂದ ಪಿತೃಗಳ ಪಾದಗಳಿಗೆ ಬಾಗಿ ನಮಿಸುತ್ತಾನೆ. ಮರುಕ್ಷಣವೇ ತಲೆಯೆತ್ತಿ ನೋಡುತ್ತಾನೆ, ದೇವಾಲಯುವೆಲ್ಲ ಒಂದು ದಿವ್ಯಜ್ಯೋತಿಯಿಂದ ಆವೃತವಾಗಿದೆ! ಆ ಬಗೆಯು ಬೆಳಕನ್ನು ಅವನು ಹಿಂದೆಂದೂ ಕಂಡವನಲ್ಲ....

ಈಗ ಅಲ್ಲಿ ಗಯಾ ಗದಾಧರ ತನ್ನ ಅಲೌಕಿಕ ದಿವ್ಯ ಸಿಂಹಾಸನದ ಮೇಲೆ ಪ್ರಸನ್ನವದನನಾಗಿ ವಿರಾಜಿಸುತ್ತಿದ್ದಾನೆ. ಪಿತೃಗಳೆಲ್ಲರೂ ಪರಮ ಭಕ್ತಿಭಾವದಿಂದ ಕರಜೋಡಿಸಿಕೊಂಡು ಸಾಲಾಗಿ ನಿಂತು ಗದಾಧರನ ಗುಣಗಾನ ಮಾಡುತ್ತಿದ್ದಾರೆ. ಗದಾಧರನ ಸಮಸ್ತ ವ್ಯಕ್ತಿತ್ವವೂ ಜ್ಯೋತಿರ್ಮಯುವಾಗಿ ಪ್ರಕಾಶಿಸುತ್ತಿದೆ. ಆ ಜ್ಯೋತಿಯು ವರ್ಣವೂ ಕೂಡ ಎಳೆಯು ಗರಿಕೆ ಹುಲ್ಲಿನ ಬಣ್ಣ. ಗದಾಧರನು ಅತ್ಯಂತ ಕೃಪಾಮಯುನಾಗಿ ವಾತ್ಸಲ್ಯಪೂರ್ಣ ನಯುನಗಳಿಂದ ಕ್ಷುದಿರಾಮನತ್ತಲೇ ನೋಡುತ್ತ ಅವನನ್ನು ತನ್ನ ಸನಿಹಕ್ಕೆ ಬರುವಂತೆ ಸನ್ನೆ ಮಾಡಿದ. ಈಗ ಅವನಿಗೆ ಆನಂದಾತಿ ಶಯುದಿಂದ ಪ್ರಜ್ಞೆಯೇ ತಪ್ಪಿಹೋದಂತಾಗಿದೆ. ತಾನೇನು ಮಾಡುತ್ತಿರುವೆನೆಂಬುದರ ಪರಿವೆಯೇ ಇಲ್ಲದೆ ಶ್ರೀಗದಾಧರನ ಬಳಿಗೆ ಸರಿದ; ಭಾವಾವೇಗಭರಿತನಾಗಿ ಅವನ ಪಾದಪದ್ಮಗಳಿಗೆ ಶಿರಬಾಗಿ ನಮಿಸಿದ; ತುಂಬು ಹೃದಯುದಿಂದ ಸ್ತೋತ್ರ ಗೈದ. ಸ್ತೋತ್ರದಿಂದ ಸುಪ್ರೀತನಾದ ಶ್ರೀಗದಾಧರ ತನ್ನ ಸ್ವರ್ಗೀಯು ದಿವ್ಯ ಮಧುರ ಕಂಠದಿಂದ ನುಡಿದ: "ಕ್ಷುದಿರಾಮ, ನಿನ್ನ ಅಸಾಧಾರಣ ಭಕ್ತಿಯುನ್ನು ಕಂಡು ನನಗೆ ಮಹದಾನಂದವಾಗಿದೆ. ನಾನು ಮುಂದೆ ನಿನ್ನ ಪುತ್ರನಾಗಿ ಜನಿಸಿ ನಿನ್ನ ಪ್ರೀತ್ಯಾದರ ಗಳನ್ನು ಸ್ವೀಕರಿಸುವೆ." ಇದನ್ನು ಕೇಳಿ ಕ್ಷುದಿರಾಮನ ಹೃದಯು ಆನಂದದಿಂದ ಅರಳಿತು. ಆದರೆ ಮರುಕ್ಷಣವೇ ಅವನಿಗನ್ನಿಸಿತು, 'ನಾನೋ ಬಡವ, ಭಿಕಾರಿ. ಇವನೋ ಅಖಿಲಾಂಡಕೋಟಿ ಬ್ರಹ್ಮಾಂಡ ನಾಯುಕ. ಇವನು ನನ್ನ ಗುಡಿಸಲಿಗೆ ಬಂದರೆ ಇವನಿಗೆ ಉಣ್ಣಲೇನು ಕೊಡಲಿ, ಉಡಲೇನು ಕೊಡಲಿ, ಹೊದೆಯುಲೇನು ಕೊಡಲಿ ?' ಈ ಭಾವನೆಯಿಂದ ಅವನಿಗೆ ದುಃಖ ಒತ್ತರಿಸಿಬಂತು, ಗದ್ಗದ ಸ್ವರದಿಂದ ಹೇಳಿದ: "ಇಲ್ಲ, ಇಲ್ಲ. ಹೇ ಪ್ರಭು, ನಾನು ಅಷ್ಟು ದೊಡ್ಡ ಕೃಪೆಗೆ ಪಾತ್ರನಲ್ಲ. ನೀನು ನಿನ್ನ ಅಹೈತುಕ ಕೃಪೆಯಿಂದ ನನಗೆ ದರ್ಶನಭಾಗ್ಯವನ್ನು ಕರುಣಿಸಿದ್ದಲ್ಲದೆ, ನನ್ನ ಪುತ್ರನಾಗಿ ಜನಿಸುವೆನೆಂದು ನುಡಿದದ್ದೇ ನನ್ನ ಪಾಲಿಗೆ ಬೇಕಾದಷ್ಟಾಯಿತು. ಆದರೆ ನೀನು ನಿಜವಾಗಿಯೂ ನನ್ನ ಪುತ್ರನಾಗಿ ಜನಿಸಿದಲ್ಲಿ ದೀನ-ದರಿದ್ರನಾದ ನಾನು ನಿನ್ನನ್ನು ಹೇಗೆತಾನೆ ಉಪಚರಿಸಬಲ್ಲೆ, ಪ್ರಭು ?" ಕ್ಷುದಿರಾಮನ ದೈನ್ಯವನ್ನು ಕಂಡ ಶ್ರೀಗದಾಧರ ಇನ್ನಷ್ಟು ಕರುಣಾಮಯುನಾಗಿ ನುಡಿದ: "ನೀನೇನೂ ಹೆದರ ಬೇಡ, ಕ್ಷುದಿರಾಮ. ನೀನೇನನ್ನು ಕೊಡುವೆಯೊ ಅದನ್ನು ನಾನು ಅತ್ಯಂತ ಸಂತೋಷದಿಂದ ಸ್ವೀಕರಿಸುತ್ತೇನೆ. ನಿನ್ನ ಪುತ್ರನಾಗಿ ಜನಿಸಬೇಕೆಂಬ ನನ್ನಾಸೆಯುನ್ನು ಮಾತ್ರ ನೀನು ನಡೆಸಿಕೊಡಲೇಬೇಕು." ಈಗ ಕ್ಷುದಿರಾಮನಿಂದ 'ಇಲ್ಲ' ಎನ್ನ ಲಾಗಲೇ ಇಲ್ಲ. ಒಂದೆಡೆ ಆನಂದ, ಇನ್ನೊಂದೆಡೆ ದುಃಖ—ಈ ದ್ವಂದ್ವಗಳು ಅವನನ್ನು ಅದೆಷ್ಟು ಜರ್ಝರಿತಗೊಳಿಸಿದುವೆಂದರೆ ಅದರ ಆವೇಗವನ್ನು ತಾಳ ಲಾರದೆ ಅವನಿಗೆ ಎಚ್ಚರ ತಪ್ಪಿತು. ಮತ್ತೆ ಅವನು ಮೈತಿಳಿದು ಎಚ್ಚರಗೊಂಡಾಗ

ಕನಸು ಮುಗಿದಿತ್ತು.

ಎದ್ದ ಮೇಲೆ ಬಹಳ ಹೊತ್ತಿನವರೆಗೆ ಕ್ಷುದಿರಾಮನಿಗೆ ತಾನೆಲ್ಲಿರುವೆನೆಂಬುದೇ ತಿಳಿಯಲಿಲ್ಲ. ಅವನಿಗೆ ಆ ಕನಸು ಕೇವಲ ಕನಸಾಗಿರಲಿಲ್ಲ, ಒಂದು ಸತ್ಯಘಟನೆಯಾಗಿತ್ತು. ಆದ್ದರಿಂದಲೇ ಅವನು ಎಚ್ಚತ್ತ ಮೇಲೂ ಅದರ ಪ್ರಭಾವ ಮುಂದುವರಿಯಿತು. ಈಗ ಅವನು ಆ ಕನಸಿನ ಮಹತ್ತ್ವವನ್ನು, ಆ ಕನಸು ನನಸಾಗುವುದರ ಸಾಧ್ಯಾಸಾಧ್ಯತೆಗಳನ್ನು ನಾನಾ ದೃಷ್ಟಿಕೋನಗಳಿಂದ ಭಾವಿಸಿ ನೋಡಿದ. ಬಳಿಕ ಅವನ ಶ್ರದ್ಧಾವಂತ ಹೃದಯಕ್ಕೆ ಸ್ಪಷ್ಟವಾಗಿ ಅನ್ನಿಸಿತು—ಇದೊಂದು ದಿವ್ಯವಾದ, ದೈವಿಕವಾದ ಕನಸಾದುದರಿಂದ ಇದು ಸತ್ಯವಾಗಿಯೂ ಸಂಭವಿಸಲೇ ಬೇಕು; ತನ್ನ ಮನೆಯಲ್ಲಿ ಶೀಘ್ರದಲ್ಲೇ ಒಬ್ಬ ಮಹಾಪುರುಷ ಉದಿಸುವುದು ಖಂಡಿತ ಎಂದು. ನಾವು ಆದಾಗಲೇ ನೋಡಿದಂತೆ ಅವನಿಗೀಗ ಅರವತ್ತು ತುಂಬಿದೆ. ಹೀಗಿದ್ದೂ ಅವನು ಸದ್ಯದಲ್ಲೇ ಒಬ್ಬ ನೂತನ ಶಿಶುವಿನ ಮುಖವನ್ನು ನೋಡುವ ಭಾಗ್ಯವಂತನಾಗಿದ್ದ. (ಆದರೆ ಆ ಶಿಶು ಸಾಮಾನ್ಯ ನಿಯಮದಂತೆ ಶರೀರಸಂಪರ್ಕದಿಂದ ಜನಿಸಿದ್ದಲ್ಲ ಎಂಬುದನ್ನು ನಾವು ಮುಂದೆ ನೋಡಲಿದ್ದೇವೆ.) ಅಂತೂ ಈ ದಿವ್ಯ ಕನಸು ನನಸಾಗುವವರೆಗೂ ಇದನ್ನು ಯಾರಿಗೂ ತಿಳಿಸತಕ್ಕದ್ದಲ್ಲ ಎಂದು ಕ್ಷುದಿರಾಮ ತೀರ್ಮಾನಿಸಿದ. ಕೆಲದಿನಗಳ ಬಳಿಕ ಪುಣ್ಯತೀರ್ಥ ಗಯಾಕ್ಷೇತ್ರಕ್ಕೆ ವಂದಿಸಿ ಕಾಮಾರಪುಕುರಕ್ಕೆ ಹಿಂದಿರುಗಿದ.

೫

# ಸ್ವಪ್ನ ಸತ್ಯವಾಯಿತು !

ಕ್ಷುದಿರಾಮ ಕಾಮಾರಪುಕುರಕ್ಕೆ ತಲುಪಿದಾಗ ಅವನು ಮೊಟ್ಟಮೊದಲನೆಯದಾಗಿ ಗಮನಿಸಿದ್ದು ತನ್ನ ಪತ್ನಿಯಲ್ಲಿ ಕಂಡುಬಂದ ಅಪೂರ್ವ ಪರಿವರ್ತನೆಯನ್ನು. ಅವನ ದೃಷ್ಟಿಗೆ ಈಗ ಅವಳು ಓರ್ವ ಸಾಮಾನ್ಯ ಮಾನವಿಯಂತೆ ತೋರುತ್ತಿಲ್ಲ; ಸಾಕ್ಷಾತ್ ದೇವಿಯೇ ಆಗಿ ಕಂಡುಬರುತ್ತಿದ್ದಾಳೆ. ಅವಳ ವ್ಯಕ್ತಿತ್ವದ ಅಂತರಾಳದಿಂದ ಅಲೌಕಿಕ ವಾತ್ಸಲ್ಯ ಭಾವವು ಅಲೆಯಲೆಯಾಗಿ ಹರಿದುಬಂದು ಸಕಲರನ್ನೂ ಸಾಂತ್ವನಗೊಳಿಸುತ್ತಿದೆ. ಈ ದಿವ್ಯ ವಾತ್ಸಲ್ಯಭಾವವೇ ಅವಳ ಮನಸ್ಸನ್ನು ಲೌಕಿಕ ವಿಷಯ ಭೋಗಗಳಿಂದ ಬಿಡಿಸಿ ಮೇಲಕ್ಕೆತ್ತಿರುವಂತೆ ಕಂಡುಬರುತ್ತಿದೆ. ಈಗೀಗ ಅವಳಿಗೆ ತನ್ನ ಸ್ವಂತ ಸಂಸಾರದ ಯೋಚನೆಗಿಂತ ನೆರೆಕೆರೆಯವರ ಯೋಗಕ್ಷೇಮದ ವಿಷಯದಲ್ಲೇ ಹೆಚ್ಚು ಕಳಕಳಿ. ತನ್ನ ಮನೆಯ ಕೆಲಸಕಾರ್ಯಗಳ ನಡುವೆ ಆಗಾಗ ನೆರೆಹೊರೆಯವರ ಕೆಲಸಕಾರ್ಯಗಳಲ್ಲಿ ನೆರವಾಗಲು ಹೋಗಿ ಬರುತ್ತಾಳೆ. ಯಾರ ಕಣ್ಣಿಗೂ ಬೀಳದಂತೆ ಮನೆಯಿಂದ ದವಸ ಧಾನ್ಯಾದಿಗಳನ್ನು ತೆಗೆದುಕೊಂಡು ಹೋಗಿ ಬಡವರಿಗೆ ಕೊಟ್ಟು ಬರುತ್ತಾಳೆ. ಯಾರಾದರೂ ಸರಿಯಾಗಿ ಊಟವಿಲ್ಲದೆ ಕಂಗಾಲಾದವರು ಸಿಕ್ಕಿದರೆ ಅವರನ್ನು ಮನೆಗೆ ಕರೆತಂದು ತನ್ನ ಪಾಲಿನ ಊಟವನ್ನೇ ಅವರಿಗೆ ಬಡಿಸುತ್ತಾಳೆ. ಆಮೇಲೇನಾದರೂ ಉಳಿದಿದ್ದರೆ ಅಂದಿಗೆ ಅವಳ ಪಾಲಿನ ಊಟ.

ಕ್ಷುದಿರಾಮ ಇವುಗಳನ್ನೆಲ್ಲ ಗಮನಿಸಿದ. ಇವುಗಳೊಂದಿಗೆ ಇನ್ನೂ ಒಂದು ಅದ್ಭುತವನ್ನು ಗಮನಿಸಿದ — ಇಲ್ಲಿಯವರೆಗೆ ಚಂದ್ರಮಣಿ ನೆರೆಕೆರೆಯ ಮಕ್ಕಳನ್ನೂ ತನ್ನ ಸ್ವಂತ ಮಕ್ಕಳಂತೆ ಪ್ರೀತಿಸುತ್ತಿದ್ದರೆ, ಈಗೀಗ ದೇವದೇವಿಯರನ್ನೂ ತನ್ನ ಮಕ್ಕಳಂತೆ ಕಾಣುತ್ತಿದ್ದಾಳೆ! ಮನೆದೇವರಾದ ರಘುವೀರನ ಮೇಲೆ ತನ್ನ ಹೆತ್ತ ಮಗನ ಮೇಲಿರುವಷ್ಟು ಪ್ರೀತಿ! ಹಾಗೆಯೇ ಶೀತಲಾದೇವಿ, ರಘುವೀರ ಸಾಲಿಗ್ರಾಮ — ಇವರೂ ಕೂಡ ಸ್ವಂತ ಮಕ್ಕಳು! ಹಿಂದೆ ಇವರಿಗೆ ಪೂಜೆ, ನೈವೇದ್ಯ, ಆರತಿ ಆಗುತ್ತಿದ್ದಾಗ ಚಂದ್ರಮಣಿ ಭಕ್ತಿಯಿಂದ ಕೈಮುಗಿದು ನಿಂತಿರುತ್ತಿದ್ದರೆ, ಈಗ ಆ ಭಕ್ತಿಯ ಸ್ಥಾನವನ್ನು ಅಪಾರ ವಾತ್ಸಲ್ಯಭಾವ ತುಂಬಿದೆ. ದೇವದೇವಿಯರ ಸಂಬಂಧವಾಗಿ ಈಗ ಅವಳಲ್ಲಿರುವುದು ಭಯಮಿಶ್ರಿತ ಭಕ್ತಿಯಲ್ಲ; ವಾತ್ಸಲ್ಯಪೂರ್ಣ ಪ್ರೇಮ. ಅವಳೀಗ ದೇವದೇವಿಯರಲ್ಲಿ ವರ ಬೇಡುವ ಸ್ಥಿತಿಯಲ್ಲಿಲ್ಲ; ಬದಲಾಗಿ ಅವರಿಗೇ ತನ್ನ ವಾತ್ಸಲ್ಯಸುಧೆಯನ್ನು ಹರಿಯಿಸುವ ಸ್ಥಿತಿ ಅವಳದು!

ತನ್ನೊಳಗೆ ಉಂಟಾಗುತ್ತಿದ್ದ ಈ ಭಾವನೆಗಳನ್ನೆಲ್ಲ ಚಂದ್ರಮಣಿ ತನ್ನ ಪತಿಯೊಡನೆಯೂ ಸ್ನೇಹಿತೆಯರೊಡನೆಯೂ ನಿಸ್ಸಂಕೋಚದಿಂದ ಹಂಚಿಕೊಳ್ಳುತ್ತಿದ್ದಳು.

ಈಗ ಕ್ಷುದಿರಾಮ ಭಾವಿಸತೊಡಗಿದ: 'ನನ್ನ ಪತ್ನಿ ತೀರಾ ಸರಳ ಸ್ವಭಾವದವಳು. ಅವಳೀಗ ಅತ್ಯುನ್ನತವಾದ ಭಗವದ್ಭಾವದಲ್ಲಿದ್ದಾಳೆ. ಅವಳಿಗೆ ಬಗೆಬಗೆಯ ದಿವ್ಯಾನುಭವಗಳಾಗುತ್ತಿರುವುದು ನಿಜವೇ. ಮತ್ತು ಅವಳು ಆ ಅನುಭವಗಳನ್ನೆಲ್ಲ ತನ್ನ ಮುಗ್ಧ ಸ್ವಭಾವಕ್ಕನುಗುಣವಾಗಿ ನೆರೆಕೆರೆಯವರೊಂದಿಗೆ ಹಂಚಿಕೊಳ್ಳುತ್ತಿದ್ದಾಳೆ. ಆದರೆ ಜನ ಇದನ್ನೆಲ್ಲ ಯಾವ ದೃಷ್ಟಿಯಿಂದ ತೆಗೆದುಕೊಳ್ಳುತ್ತಾರೋ ? ಜನ ಎಂದ ಮೇಲೆ ಉದಾರಬುದ್ಧಿಯವರೂ ಇರುತ್ತಾರೆ, ಸಣ್ಣಬುದ್ಧಿಯವರೂ ಇರುತ್ತಾರೆ. ಈ ಸಣ್ಣಬುದ್ಧಿಯ ಜನ ಅವಳಿಗಾಗುವ ದರ್ಶನಗಳನ್ನೆಲ್ಲ ಮೆಚ್ಚಿಕೊಳ್ಳಬಲ್ಲರೆ ? ಅದರ ಬದಲಾಗಿ ಅವಳನ್ನು ಹುಚ್ಚಿ ಎಂದಾರು, ಗೇಲಿಮಾಡಿಕೊಂಡು ನಕ್ಕಾರು.' ಹೀಗೆ ಆಲೋಚಿಸುತ್ತಿದ್ದ ಕ್ಷುದಿರಾಮ ಸೂಕ್ತಸಮಯ ನೋಡಿ ಮಡದಿಗೆ ಎಚ್ಚರಿಕೆ ಕೊಡಬೇಕೆಂದುಕೊಂಡ.

ಸದ್ಯದಲ್ಲೇ ಅದಕ್ಕೆ ಸಮಯವೊದಗಿಬಂತು. ಚಂದ್ರಮಣಿ ತಾನು ಏನು ಮಾಡುತ್ತೇನೆ ಎನ್ನುವುದನ್ನಿರಲಿ, ತನ್ನ ಮನದೊಳಗಿನ ಭಾವನೆಗಳನ್ನೂ ಕೂಡ ಪತಿಯಿಂದ ಮುಚ್ಚಿಡುತ್ತಿರಲಿಲ್ಲ. ಕ್ಷುದಿರಾಮ ಗಯೆಯಿಂದ ಮರಳಿದ ಮೇಲೆ ಆಕೆ ತನ್ನ ದಿವ್ಯಾನುಭವಗಳನ್ನೆಲ್ಲ ಒಂದೊಂದಾಗಿ ಹೇಳುತ್ತ ಬಂದಳು. ಒಂದು ದಿನ ಹೇಳಿದಳು:

"ನೀವು ಗಯೆಗೆ ಹೋಗಿದ್ದಾಗ ಒಮ್ಮೆ ನನಗೊಂದು ವಿಚಿತ್ರ ಕನಸಾಯಿತು. ಅದರಲ್ಲಿ, ಒಬ್ಬ ವ್ಯಕ್ತಿ ನನ್ನೊಂದಿಗೆ ನನ್ನ ಹಾಸಿಗೆಯ ಮೇಲೆ ಮಲಗಿಕೊಂಡಿದ್ದ! ಅವನ ಮೈಯೆಲ್ಲ ಜ್ಯೋತಿರ್ಮಯವಾಗಿತ್ತು. ಮೊದಮೊದಲು ಭಾವಿಸಿದೆ: 'ಇದೇನಪ್ಪ! ಇದು ನೀವೇ ಇರಬಹುದೆ ?' ಎಂದು. ಆದರೆ ಮರುಕ್ಷಣವೇ ನನಗನಿಸಿತು, ಮನುಷ್ಯಮಾತ್ರದವರು ಹೀಗಿರಲು ಸಾಧ್ಯವಿಲ್ಲ ಎಂದು. ತಕ್ಷಣ ನಾನು ಎದ್ದು ಕುಳಿತೆ. ಆದರೆ ಕತ್ತಲಲ್ಲಿ ಆ ವ್ಯಕ್ತಿ ಅಲ್ಲಿಯೇ ಇದ್ದಾನೆಂಬಂತೆ ಭಾಸವಾಗುತ್ತಿತ್ತು. ಆಗ ನನ್ನ ಮನಸ್ಸಿಗೆ ಇನ್ನೊಂದು ಆಲೋಚನೆ ಬಂತು, 'ಯಾವುದಾದರೂ ದೇವತೆ ಈ ರೀತಿ ಮನುಷ್ಯರೂಪದಿಂದ ಬಂದಿರಬಹುದೆ ?' ಎಂದು. ಬಳಿಕ ಅನಿಸಿತು, 'ಅಥವಾ ಯಾವನಾದರೂ ದುಷ್ಟ ದುರುದ್ದೇಶದಿಂದ ಕೋಣೆಯೊಳಗೆ ಪ್ರವೇಶಿಸಿರಬಹುದೆ ? ಮತ್ತು ನಿದ್ದೆಗಣ್ಣಲ್ಲಿ ಅವನ ಹೆಜ್ಜೆಯ ಸಪ್ಪಳ ಕೇಳಿದ್ದರಿಂದ ಈ ಬಗೆಯ ಕನಸು ಕಟ್ಟಿರಬಹುದೆ ?' ಎಂದು. ಆ ಆಲೋಚನೆ ಬರುತ್ತಲೇ ನನಗೆ ಬಹಳ ಹೆದರಿಕೆಯಾಯಿತು. ಬೇಗನೆದ್ದು ದೀಪ ಹಚ್ಚಿ ಸುತ್ತ ನೋಡಿದೆ, ಯಾರ ಸುಳಿವೂ ಇರಲಿಲ್ಲ; ಬಾಗಿಲ ಅಗುಳಿ ಹಾಕಿದ್ದು ಹಾಕಿದಂತೆಯೇ ಇತ್ತು. ಆದರೂ ಭಯದಿಂದ ರಾತ್ರಿಯಿಡೀ ನಿದ್ರೆಯೇ ಇರಲಿಲ್ಲ. ನನಗೆ ಇನ್ನೊಂದು ಆಲೋಚನೆ ಬಂತು: 'ಅಥವಾ, ಯಾರಾದರೂ ಉಪಾಯವಾಗಿ ಅಗುಳಿ ತೆಗೆದು ಒಳಗೆ ಬಂದು, ನಾನಿನ್ನೂ ಎಚ್ಚತ್ತಿರುವುದನ್ನು ಕಂಡು ಅಗುಳಿಯನ್ನು ಹಾಗೆಯೇ ಹಾಕಿ ಹೋಗಿರಬಹುದೆ ?...' ಬೆಳಗಾಗುತ್ತಲೇ ಧನಿಯನ್ನೂ ಪ್ರಸನ್ನಮಯಿಯನ್ನೂ

ಬಳಿಗೆ ಕರೆದು ವಿಷಯುವನ್ನೆಲ್ಲ ತಿಳಿಸಿ, 'ನನ್ನ ಕೋಣೆಯೊಳಗೆ ನಿಜಕ್ಕೂ ಯಾರಾದರೂ ಬಂದಿರಬಹುದೆ? ನನಗೆ ಈ ಹಳ್ಳಿಯಲ್ಲಿ ಯಾರ ಜೊತೆಯಲ್ಲೂ ಜಗಳವಿಲ್ಲ. ಅಂದು ಆ ಕಡೆಮನೆಯ ಮಧುಜುಗಿಯ ಹತ್ತಿರ ಯಾವುದೋ ಸಣ್ಣ ವಿಷಯಕ್ಕಾಗಿ ನಾಲ್ಕು ಮಾತಾಯಿತು ಅಷ್ಟೆ. ಅವನೇನಾದರೂ ಜಿದ್ದಿನ ಮೇಲೆ ನನ್ನ ಕೋಣೆಯೊಳಗೆ ನುಗ್ಗಿರಬಹುದೆ?' ಎಂದು ಕೇಳಿದೆ. ಅದಕ್ಕೆ ಇಬ್ಬರೂ ಗಟ್ಟಿಯಾಗಿ ನಕ್ಕು, 'ಎಲ್ಲೋ ನೀನೊಬ್ಬಳು ಹುಚ್ಚಿ! ವಯಸ್ಸಾಯಿತಲ್ಲ, ಅದಕ್ಕೇ ಈ ಅರಳು ಮರಳು! ಈ ನಿನ್ನ ಮಾತನ್ನು ಇತರರು ಯಾರಾದರೂ ಕೇಳಿದರೆ ಏನೆಂದುಕೊಂಡಾರು, ಗೊತ್ತೆ? ನೀನಿದನ್ನು ಹೀಗೆಯೇ ಹೇಳುತ್ತಹೋದರೆ ಖಂಡಿತ ಜನ ನಿನ್ನ ಮೇಲೆ ಅಪವಾದ ಹುಟ್ಟಿಸದೆ ಇರುವುದಿಲ್ಲ' ಎಂದು ಗೇಲಿ ಮಾಡಿದರು. ಆಗ ನಾನಂದುಕೊಂಡೆ, 'ಓ, ಸರಿಸರಿ; ನಿಜಕ್ಕೂ ಅದೊಂದು ಕನಸೇ ಇರಬೇಕು. ಛೆ! ಇನ್ನು ಮೇಲೆ ಇಂಥದನ್ನು ಯಾರ ಹತ್ತಿರವೂ ಹೇಳಬಾರದು. ನೀವು ಹಿಂದಿರುಗಿ ಬಂದಮೇಲೆ ನಿಮ್ಮ ಹತ್ತಿರ ಮಾತ್ರ ಹೇಳಬೇಕು' ಅಂತ.

"ಇನ್ನೊಮ್ಮೆ ಏನಾಯಿತು ಗೊತ್ತೆ? ನಾನು ಆ ಶಿವದೇವಾಲಯದ ಮುಂದೆ ಧನಿಯೊಡನೆ ಮಾತಾನಾಡುತ್ತ ನಿಂತಿದ್ದೆ. ಆಗ ಇದ್ದಕ್ಕಿದ್ದಂತೆ ಶಿವಲಿಂಗದಿಂದ ಮಹಾಜ್ಯೋತಿಯೊಂದು ಉದಯಿಸಿದ್ದನ್ನು ಕಂಡೆ! ಆ ಜ್ಯೋತಿ ದೇವಾಲಯವನ್ನೆಲ್ಲ ತುಂಬಿ ಅಲೆಯಲೆಯಾಗಿ ಹರಿಯುತ್ತ ನನ್ನ ಕಡೆಗೇ ಬಂದಿತು. ಇದೇನಪ್ಪ ಇದು ಎಂದು ನನಗೆ ಆಶ್ಚರ್ಯವಾಯಿತು. ಈ ವಿಷಯವನ್ನು ಧನಿಗೆ ಹೇಳೋಣವೆಂದುಕೊಳ್ಳುವಷ್ಟರಲ್ಲಿ, ಆ ಜ್ಯೋತಿ ನನ್ನನ್ನೇ ಆವರಿಸಿ ನನ್ನೊಳಗೆ ಹೊಕ್ಕಿಬಿಟ್ಟಿತು! ಭಯಾಶ್ಚರ್ಯಗಳಿಂದ ವಿಹ್ವಲಳಾಗಿ ನಾನು ಮೂರ್ಛೆತಪ್ಪಿ ಬಿದ್ದುಬಿಟ್ಟೆ. ಧನಿ ಬಂದು ನೋಡಿ ಶೈತ್ಯೋಪಚಾರ ಮಾಡಿದ ಮೇಲಷ್ಟೇ ಚೇತರಿಸಿಕೊಂಡೆದ್ದೆ. ಬಳಿಕ ಅವಳಿಗೆ ನಡೆದುದನ್ನೆಲ್ಲ ಹೇಳಿದೆ. ಅವಳು ಅದನ್ನು ಕೇಳಿ ಮೊದಲಿಗೆ ಆಶ್ಚರ್ಯಗೊಂಡರೂ ಆಮೇಲೆ ಹೇಳಿದಳು, 'ಬಹುಶಃ ನಿನಗೆಲ್ಲೋ ಮೂರ್ಛೆ ಬಂದುಬಿಟ್ಟಿತ್ತು' ಎಂದು. ಆದರೆ ನನಗೆ ಮಾತ್ರ ಅಂದಿನಿಂದ ಇಂದಿನವರೆಗೂ, ಆ ಜ್ಯೋತಿ ನನ್ನ ಗರ್ಭದಲ್ಲಿ ಸೇರಿಕೊಂಡಿದೆ, ನಾನು ಗರ್ಭಿಣಿಯಾಗಿದ್ದೇನೆ ಎಂಬ ಭಾವನೆ ದೃಢವಾಗಿ ಉಂಟಾಗಿಬಿಟ್ಟಿದೆ. ಈ ವಿಷಯವನ್ನು ನಾನು ಧನಿಗೂ ಪ್ರಸನ್ನಳಿಗೂ ಹೇಳಿದಾಗ ಅವರು ನನಗೆ ಬೈದರು, ಹುಚ್ಚು ಅಂದರು, ಭ್ರಾಂತು ಅಂದರು, ಇನ್ನೂ ಏನೇನೋ ಅಂದರು. ನನಗೇನೋ ಸ್ವಲ್ಪ ಬುದ್ಧಿಭ್ರಮಣೆಯಾಗಿರಬೇಕು ಅಥವಾ ಶರೀರದ ಆರೋಗ್ಯವೇನೋ ಪಲ್ಲಟವಾಗಿರಬೇಕು ಎಂಬುದು ಅವರ ನಂಬಿಕೆ. ಅವರು ನನಗೆ, 'ಸದ್ಯ! ಈ ವಿಷಯವನ್ನೆಲ್ಲ ಯಾರೆಂದರೆ ಅವರ ಹತ್ತಿರ ಹೇಳುತ್ತ ಹೋಗಬೇಡ' ಎಂದು ಎಚ್ಚರಿಕೆ ಹೇಳಿದರು. ಅದರಂತೆಯೇ ನಾನು ಈ ವಿಷಯವನ್ನು ನಿಮ್ಮನ್ನು ಬಿಟ್ಟು ಇನ್ನಾರಿಗೂ ಹೇಳಬಾರದು ಎಂದು ನಿರ್ಧರಿಸಿಬಿಟ್ಟೆ. ಇದಕ್ಕೆಲ್ಲ ನೀವೇನು ಹೇಳುತ್ತೀರಿ? ಇದು ನಿಜವಾಗಿಯೂ ಭಗವಂತನ ಕೃಪೆಯೇ? ಅಥವಾ ನನ್ನ ದೇಹಾರೋಗ್ಯ ಕೆಟ್ಟಿದ್ದರಿಂದ ಹೀಗಾಗಿರಬಹುದೆ? ನನಗೆ ಮಾತ್ರ ಈಗಲೂ ನಾನು ಗರ್ಭಿಣಿ ಎನ್ನುವಂತಿದೆ."

ಕ್ಷುದಿರಾಮ ಶಾಂತವಾಗಿ ಕುಳಿತು ಎಲ್ಲವನ್ನೂ ಕೇಳಿದ. ಅವನು ಮಾತ್ರ ಇವೆಲ್ಲ ತನ್ನ ಪತ್ನಿಯ ಭ್ರಮೆ ಎನ್ನುವ ಸ್ಥಿತಿಯಲ್ಲಿರಲಿಲ್ಲ. ಅವನಿಗೀಗ ಗದಾಧರನ ಸನ್ನಿಧಿಯಲ್ಲಿ ತನಗಾದ ದಿವ್ಯಸ್ವಪ್ನದ ನೆನಪಾಯಿತು. ಅವನು ಅತ್ಯಂತ ಆತ್ಮೀಯತೆ ಯಿಂದ ಪತ್ನಿಗೆ ಹೇಳತೊಡಗಿದ:

"ಚಂದ್ರಾ, ನಿನಗಾದ ಪ್ರತಿಯೊಂದು ಅನುಭವವೂ ಸತ್ಯ. ಆದರೆ ಇನ್ನು ಮೇಲೆ ಇಂತಹ ವಿಷಯಗಳನ್ನು, ನನ್ನನ್ನು ಬಿಟ್ಟು ಬೇರೆ ಯಾರ ಹತ್ತಿರವೂ ಹೇಳಬೇಡ. ನಿನ್ನೆಲ್ಲ ಕಳವಳವನ್ನು ಬಿಟ್ಟುಬಿಡು. ಶ್ರೀರಘುವೀರ ಸ್ವಯಂಪ್ರೀತಿ ಯಿಂದ ನಮಗೆ ಏನೇನು ತೋರಿಸುತ್ತಿರುವನೋ ಅದೆಲ್ಲವೂ ನಮ್ಮ ಒಳಿತಿ ಗಾಗಿಯೇ. ನಾನು ಗಯೆಯಲ್ಲಿದ್ದಾಗ ಸಾಕ್ಷಾತ್ ಗದಾಧರನೇ ಸ್ವಪ್ನದರ್ಶನವಿತ್ತು ತಾನು ನಮ್ಮ ಪುತ್ರನಾಗಿ ಜನಿಸಲಿರುವೆನೆಂದು ಹೇಳಿದ!"

ಹೀಗೆಂದ ಕ್ಷುದಿರಾಮನೀಗ ತನ್ನ ಸ್ವಪ್ನದರ್ಶನವನ್ನು ವಿವರವಾಗಿ ಬಣ್ಣಿಸಿದ. ತನ್ನ ದೇವಸದೃಶ ಪತಿಯ ಮಾತುಗಳನ್ನು ಕೇಳಿ ಚಂದ್ರಮಣಿಗೆ ಅತೀವ ಸಮಾಧಾನ, ಸಂತೋಷ. ಅಂದಿನಿಂದ ಅವಳು ಪತಿಯ ಮಾತಿನಂತೆ ಶ್ರೀರಘು ವೀರನಲ್ಲಿ ಸಂಪೂರ್ಣ ಶರಣಾಗತಳಾಗಿ ದಿನ ಕಳೆಯ ತೊಡಗಿದಳು.

ಪತಿಪತ್ನಿಯರ ಈ ಸಂಭಾಷಣೆ ನಡೆದು ಮೂರುನಾಲ್ಕು ತಿಂಗಳು ಕಳೆದಿರ ಬಹುದು. ಈಗೀಗ, ಚಂದ್ರಮಣಿದೇವಿ ಗರ್ಭವತಿಯಾಗಿರುವುದು ನೆರೆಕೆರೆಯ ಸ್ತ್ರೀಯರಿಗೆ ಗೋಚರವಾಗುತ್ತಿದೆ. ಅವಳಿಗಾದ ದರ್ಶನಗಳನ್ನೇನೋ ಗುಟ್ಟಾಗಿಡ ಬಹುದು, ಗರ್ಭಿಣಿಯಾಗಿರುವುದನ್ನು ಗುಟ್ಟಾಗಿಡಲುಂಟೆ? ಗರ್ಭಿಣಿಯರಾದಾಗ ಸ್ತ್ರೀಯರು ಮೈತುಂಬಿಕೊಂಡು ಹೆಚ್ಚು ಸುಂದರವಾಗಿ ಕಾಣುತ್ತಾರೆ ಎಂಬ ಮಾತಿದೆ. ಚಂದ್ರಮಣಿಯ ವಿಷಯದಲ್ಲಂತೂ ಈ ಮಾತು ತುಂಬ ನಿಜವಾಯಿತು. ವಯಸ್ಸು ನಲವತ್ತೈದಾದರೂ ಅವಳ ಮೈಯಲ್ಲೊಂದು ವಿಶೇಷ ಕಾಂತಿ! ಆಕೆಯ ಗೆಳತಿಯ ರೆಲ್ಲ ಇದನ್ನು ಗಮನಿಸದಿರಲಿಲ್ಲ. ಅವರ ದೃಷ್ಟಿಗೆ ಚಂದ್ರಮಣಿ ತನ್ನ ಹಿಂದಿನ ಬಸಿರಿಗಿಂತ ಈ ಬಸಿರಲ್ಲಿ ಇನ್ನೂ ಹೆಚ್ಚು ಸುಂದರಳಾಗಿ ಕಾಣುತ್ತಿದ್ದಾಳೆ! ಚಂದ್ರಮಣಿ ಗರ್ಭವತಿಯಾದ ಸುದ್ದಿ ಹರಡಿತು. ಹಳ್ಳಿಯ ಮಹಿಳೆಯರೆಲ್ಲ ಗುಂಪುಗುಂಪಾಗಿ ಬಂದು ನೋಡಿಕೊಂಡು ಹೋದರು. ಕೆಲವರು ತಮ್ಮತಮ್ಮಲ್ಲೇ ಮಾತನಾಡಿ ಕೊಂಡರಂತೆ: 'ನೋಡಿದಿರಾ! ಈ ವಯಸ್ಸಿನಲ್ಲಿ ಗರ್ಭಿಣಿಯಾದರೂ ಚಂದ್ರಮಣಿ ಅದೆಷ್ಟು ಚೆನ್ನಾಗಿ ಕಾಣುತ್ತಿದ್ದಾಳೆ!' ಆದರೆ ಪ್ರಸವದ ವೇಳೆ ಪ್ರಾಣಾಪಾಯ ಸಂಭವಿಸಿದರೂ ಆಶ್ಚರ್ಯವಿಲ್ಲ ಎಂದು ಇನ್ನು ಕೆಲವರಿಗನ್ನಿಸಿತು.

ಗರ್ಭಿಣಿಯಾದಂದಿನಿಂದಲೂ ದಿನಬೆಳಗಾದರೆ ಚಂದ್ರಮಣಿಗಾಗುತ್ತಿದ್ದ ದರ್ಶನಗಳು, ಅನುಭವಗಳು ಅಸಂಖ್ಯ. ಪ್ರತಿದಿನವೂ ದೇವದೇವಿಯರ ದರ್ಶನ! ಕೆಲವೊಮ್ಮೆ ಆ ದೇವದೇವಿಯರ ದಿವ್ಯಶರೀರದಿಂದ ಹೊರಹೊಮ್ಮುವ ಸ್ವರ್ಗೀಯ ಸುಗಂಧವು ಮನೆಯಲೆಲ್ಲ ಹರಡಿ ಘಮಘಮಿಸುತ್ತಿತ್ತು! ಇನ್ನು ಕೆಲವೊಮ್ಮೆ ಅವಳಿಗೆ ದೇವದೇವಿಯರ ಮಧುರ ಕಂಠಧ್ವನಿ ಕೇಳಿಬರುತ್ತಿತ್ತು! ಪತಿಪತ್ನಿಯರಿಬ್ಬ ರಿಗೂ ಇದನ್ನೆಲ್ಲ ಕಂಡು ವಿಸ್ಮಯ, ಆನಂದ.

ಚಂದ್ರಮಣಿ ಪ್ರತಿದಿನವೆಂಬಂತೆ ತನ್ನ ಪತಿಯೊಡನೆ ತನ್ನೆಲ್ಲ ಅನುಭವಗಳನ್ನು ಬಣ್ಣಿಸಿ, ಬಳಿಕ ಮುಗ್ಧಳಾಗಿ ಕೇಳುತ್ತಿದ್ದಳು: "ಈ ದೇವದೇವಿಯರೆಲ್ಲ ಏಕೆ ಬರುತ್ತಿದ್ದಾರೆ?" ಕ್ಷುದಿರಾಮ ಬಗೆಬಗೆಯಾಗಿ ಅವಳಿಗೆ ಸಮಾಧಾನ ನೀಡಲು ಯತ್ನಿಸಿದ; ಆ ದರ್ಶನಗಳಿಂದಾಗಿ ಸ್ವಲ್ಪವೂ ದಿಗಿಲುಗೊಳ್ಳಬೇಕಾಗಿಲ್ಲ ಎಂದು ಧೈರ್ಯ ನೀಡಿದ. ಒಂದು ದಿನವಂತೂ ಚಂದ್ರಮಣಿ ತನಗಾದ ದಿವ್ಯ ದರ್ಶನವೊಂದನ್ನು ಆಶ್ಚರ್ಯಭರಿತಳಾಗಿ ಪತಿಗೆ ಹೀಗೆ ಬಣ್ಣಿಸಿದಳು:

"ಇಂದು ನಾನು ಹಂಸದ ಮೇಲೆ ಕುಳಿತು ಬರುತ್ತಿದ್ದ ಒಬ್ಬ ದೇವತೆಯನ್ನು ನೋಡಿದೆ! ಮೊದಲಿಗೆ ನಾನು ಭಯಚಕಿತಳಾದೆ. ಆದರೆ ಮರುಕ್ಷಣಕ್ಕೆ, ಬಿಸಿಲಿನ ಬೇಗೆಗೆ ಬಾಡಿ ಕೆಂಪಾಗಿದ್ದ ಅವನ ಮುಖವನ್ನು ನೋಡಿ ಅವನನ್ನು ಕರೆದು ಹೇಳಿದೆ, 'ಮಗು ಬ್ರಹ್ಮಾ ಬಿಸಿಲಿನ ಝಳಕ್ಕೆ ನಿನ್ನ ಮುಖ ಬೆಂದೇಹೋಗಿದೆ! ಮನೆಯಲ್ಲಿ ತಂಪಾದ ತಂಗಳನ್ನ ಇದೆ. ಬಾರಪ್ಪಾ, ಊಟಮಾಡಿ ಸ್ವಲ್ಪ ವಿಶ್ರಮಿಸಿಕೊಂಡು ಹೋಗುವಿಯಂತೆ.' ನನ್ನ ಮಾತನ್ನು ಕೇಳಿ ಅವನು ಮುಗುಳ್ನಕ್ಕು ಮುಂದೆ ಸಾಗಿದ. ಆಮೇಲೆ ಅವನ ಸುಳಿವೇ ಸಿಗಲಿಲ್ಲ. ನಾನು ಕಾಣುವ ಇಂತಹ ದರ್ಶನಗಳು ಅದೆಷ್ಟೊ. ನಾನು ಈ ದೇವತೆಗಳಾರನ್ನೂ ಪೂಜಿಸುತ್ತಿಲ್ಲ, ಧ್ಯಾನಿಸುತ್ತಿಲ್ಲ, ಆದರೂ ನನಗೆ ಹಗಲೂ ರಾತ್ರಿ ಯಾವಾಗೆಂದರೆ ಆವಾಗ ದರ್ಶನ ಕೊಡುತ್ತಿರುತ್ತಾರಲ್ಲ, ಅದು ಹೇಗೆ? ಕೆಲವು ಬಾರಿ ಅವರು ಮನುಷ್ಯರೂಪದಿಂದ ದರ್ಶನಕೊಟ್ಟು ಹಾಗೇ ಗಾಳಿಯಲ್ಲಿ ಕರಗಿಹೋಗಿಬಿಡುತ್ತಾರೆ. ಯಾಕೆ ನನಗೆ ಇಂತಹ ದರ್ಶನಗಳೆಲ್ಲ ಏಕೆ ಆಗುತ್ತಿರಬಹುದು? ಕೆಲವೊಮ್ಮೆ ನನಗನ್ನಿಸುತ್ತದೆ, ಆ ಗೋಸಾಯಿಯ ಪ್ರೇತ*ವೇನಾದರೂ ನನಗೆ ಹಿಡಿದಿರಬಹುದೇ ಅಂತ."

ಆಗ ಕ್ಷುದಿರಾಮ ಸಾಂತ್ವನ ನೀಡುತ್ತ ಹೇಳಿದ:

"ಪ್ರಿಯೆ, ಸ್ವಲ್ಪವೂ ಹೆದರಬೇಡ. ಶ್ರೀಗದಾಧರವಿಷ್ಣು ನನಗೆ ಸ್ವಪ್ನದರ್ಶನವಿತ್ತು ಸ್ಪಷ್ಟವಾಗಿ ಹೇಳಿದ್ದಾನೆ, 'ನಾನು ನಿನ್ನ ಪುತ್ರನಾಗಿ ಬರುವೆ' ಎಂದು. ಅವನೇ ಇಂದು ತಾನಾಗಿಯೇ ನಿನ್ನ ಉದರದಲ್ಲಿ ಆವಿರ್ಭವಿಸಿದ್ದಾನೆ. ಆದ್ದರಿಂದಲೇ ನಿನಗೆ ಇಂತಿಂತಹ ಅದ್ಭುತ ದರ್ಶನಗಳೆಲ್ಲ ಆಗುತ್ತಿವೆ. ಗಯಾವಿಷ್ಣುವಿನ ಈ ಪವಿತ್ರ ಸನ್ನಿಧಿಗೆ ಬರಲು ಆ ದೇವದೇವಿಯರಿಗೆಲ್ಲ ಬಲು ಇಷ್ಟ."

ಚಂದ್ರಮಣಿಯ ಸರಳ ಹೃದಯಕ್ಕೆ ಪತಿದೇವನ ಪ್ರಿಯವಾಕ್ಯಗಳು ಸಂಪೂರ್ಣ ಒಪ್ಪಿಗೆಯಾದುವು. ಅವಳ ಭಕ್ತಿ ದ್ವಿಗುಣಿತವಾಯಿತು. ನವಶಕ್ತಿ ಸಂಚರಿಸಿತು. ಕಾತರ ಕಳವಳವೆಲ್ಲ ದೂರ ಸರಿಯಿತು.

---

* ಸುಖಲಾಲನ ವಂಶಜನಾದ ಸುಕುಲ್ ಗೋಸ್ವಾಮಿ ಎಂಬಾತ ತೀರಿಕೊಂಡ ಮೇಲೆ ಆ ಪ್ರಾಂತದಲ್ಲಿ ಕೆಲವು ಅತೀಂದ್ರಿಯ ಘಟನೆಗಳು ಸಂಭವಿಸಿದುವು. ಇದನ್ನು ಕಂಡ ಜನ ಭಾವಿಸಿದರು — ಸುಕುಲ್ ಗೋಸ್ವಾಮಿಯೋ ಅಥವಾ ಅವನ ಮನೆಯ ಇನ್ನಾವನೋ ಪ್ರೇತವಾಗಿ ಅವನ ಮನೆಯ ಮುಂದಿರುವ ಬಕುಲ ವೃಕ್ಷದಲ್ಲಿ ವಾಸವಾಗಿರಬೇಕು ಎಂದು. ಆದ್ದರಿಂದಲೇ ಆ ಊರಿನ ಜನ, ಯಾರಿಗಾದರೂ ಅತೀಂದ್ರಿಯ ಅನುಭವಗಳಾಗುವುದು ಕಂಡುಬಂದಾಗ ಆ ಗೋಸಾಯಿಯ ಪ್ರೇತ ಹಿಡಿದಿರಬೇಕು ಎಂದುಕೊಳ್ಳುವುದು ರೂಢಿಯಾಗಿತ್ತು. ಈಗ ಚಂದ್ರಮಣಿಗೂ ಕೆಲವೊಮ್ಮೆ ಹಾಗನ್ನಿಸುತ್ತಿತ್ತು.

೬

## ಮಹಾಪುರುಷನ ಶುಭೋದಯ

ಎಲ್ಲವೂ ಸಕಾಲದಲ್ಲಿ ಸಂಭವಿಸುತ್ತವೆ. ಹಾಗೆಯೇ ಶುಭೋದಯಕ್ಕೊಂದು ಸಕಾಲ ಬರಬೇಕು. ಸುಮುಹೂರ್ತದಲ್ಲಿ ಶುಭೋದಯ. ಬಂಗಾಳದಲ್ಲಿ ಶರದೃತು ವೆಂದರೆ ಪ್ರಕೃತಿಯ ತಾಂಡವನೃತ್ಯದ ಕಾಲ. ಅದು ಮುಗಿಯುತ್ತಲೇ ಮೈಮುದುಡಿ ಸುವ ಶಿಶಿರ ಋತು. ಇದರ ಸರದಿ ಸಂದಾಗ ಪ್ರಾರಂಭವಾಗುವುದೇ ಋತುಗಳ ರಾಜ ವಸಂತಋತು. ವಸಂತಋತು ಬಂಗಾಳದಲ್ಲೂ ಚಂದ, ವಿಶ್ವದ ಎಲ್ಲೆಡೆ ಗಳಲ್ಲೂ ಚಂದ. ಆದರೆ ಕಾಮಾರಪುಕುರದಲ್ಲಿ ಇಂದು ಅದು ಮತ್ತೂ ಚಂದ! ವಸಂತಕಾಲದಲ್ಲಿ ಸೂರ್ಯದೇವನೂ ಪ್ರಶಾಂತನಾಗಿರುತ್ತಾನೆ, ಹಿಮವಂತನೂ ಪ್ರಸನ್ನನಾಗಿರುತ್ತಾನೆ. ಎಂದರೆ, ಬಿಸಿಲಿನ ಬೇಗೆಯೂ ಇಲ್ಲ, ಚಳಿಯ ಕೊರೆತವೂ ಇಲ್ಲ. ಈ ಸುಂದರ ಫಾಲ್ಗುಣ ಮಾಸದಲ್ಲಿ ಪ್ರಕೃತಿಯ ಪ್ರತಿಯೊಂದು ಜೀವಿಯೂ ಪರಬ್ರಹ್ಮದ ಪರಮಾನಂದದ ಒಂದಂಶವನ್ನು ಅನುಭವಿಸುತ್ತ ಮತ್ತವಾಗಿರುತ್ತದೆ. ಈ ಬಾರಿಯ ವಸಂತಋತುವು ನಭೋಮಂಡಲದಲ್ಲೆಲ್ಲ ನವೀನ ಆನಂದವನ್ನು ಸಮೃದ್ಧಿಯಾಗಿ ವರ್ಷಿಸುವ ಹಂಚಿಕೆಯಲ್ಲಿದೆ. ಪಾವನಚರಿತಳಾದ ಚಂದ್ರಮಣಿಯ ಶುಭಗರ್ಭದಿಂದ ಶುಭೋದಯವಾಗಲಿದೆ!

ಚಂದ್ರಮಣಿಗೆ ನವಮಾಸ ತುಂಬಿತು. ಆನಂದಮೂರ್ತಿಯನ್ನು ಉದರದಲ್ಲಿ ಧರಿಸಿದ್ದ ಅವಳ ಆನಂದಕ್ಕೆ ಅಳವೇ ಇಲ್ಲವಾಗಿತ್ತು. ಶ್ರೀರಘುವೀರನಿಗೆ ದೈನಂದಿನ ನೈವೇದ್ಯವನ್ನು ತಯಾರಿಸುವ ವೇಳೆಯಲ್ಲಂತೂ ಅವಳ ಹೃದಯ ಆತ್ಮಾನಂದದಿಂದ ತುಡಿಯುತ್ತಿತ್ತು. ಆದರೂ ಈ ನಡುವೆ ಆವಳ ಶರೀರದಲ್ಲೊಂದು ಬಗೆಯ ನೋವು ಕಾಣಿಸಿತು. ಈ ನೋವು ಅವಳಿಗೆ ಅಪರಿಚಿತವಾದದ್ದೇನೂ ಅಲ್ಲ. ಒಂದು ದಿನ ಬೆಳಗ್ಗೆ ಅವಳಿಗೆ ಅನ್ನಿಸಿತು—'ಇದ್ದಕ್ಕಿದ್ದಂತೆ ಏನಾದರೂ ಸಂಭವಿಸಿದರೆ ಶ್ರೀರಘು ವೀರನ ನೈವೇದ್ಯಕ್ಕೆ ಅಣಿಗೊಳಿಸುವವರು ಯಾರು? ಯಾವ ಗಳಿಗೆಯಲ್ಲಿ ಪ್ರಸವವೇದನೆ ಪ್ರಾರಂಭವಾಗುವುದೊ ತಿಳಿಯದಲ್ಲ...!' ಕಾತರಳಾದ ಚಂದ್ರಮಣಿ ಪತಿಗೆ ತನ್ನ ಸ್ಥಿತಿಯನ್ನು ತಿಳಿಸಿದಳು. ಕ್ಷುದಿರಾಮ ಧೈರ್ಯನೀಡಿದ:

"ಹೆದರಬೇಡ, ನಿನ್ನ ಉದರದಲ್ಲಿ ಮಲಗಿರುವ ಮಹಾಪುರುಷನೇ ತಾನು ಜನಿಸುವಕಾಲದಲ್ಲಿ ಶ್ರೀರಘುವೀರನ ಪೂಜೆಗೆ ಅಡಚಣೆಯಾಗದಂತೆ ನೋಡಿಕೊಳ್ಳು ತ್ತಾನೆ. ಸ್ವಲ್ಪವೂ ಕಳವಳ ಬೇಡ. ಖಂಡಿತವಾಗಿಯೂ ಇಂದು ರಘುವೀರನ ನೈವೇದ್ಯವನ್ನು ನೀನೇ ಅಣಿಗೊಳಿಸಬಹುದು. ನಾಳೆಯಿಂದ ಪೂಜೆಗೆ ಬೇರೆ ವ್ಯವಸ್ಥೆ

ಮಾಡಿದ್ದೇನೆ. ಇಂದು ರಾತ್ರಿಯಿಂದ ಧನಿ ನಿನ್ನೊಂದಿಗೇ ಇರುತ್ತಾಳೆ.''

ಚಂದ್ರಮಣಿಯ ಹೃದಯ ಹಗುರವಾಯಿತು. ಸಮಾಧಾನಚಿತ್ತಳಾಗಿ ಮನೆಗೆಲಸದತ್ತ ಮನವಿತ್ತಳು.

ಕ್ಷುದಿರಾಮ ಹೇಳಿದ್ದು ಅಕ್ಷರಶಃ ನಿಜವಾಯಿತು. ಅಂದು ಮಧ್ಯಾಹ್ನವೂ ರಾತ್ರಿಯೂ ನೈವೇದ್ಯ ತಯಾರಿಸಲು ಚಂದ್ರಮಣಿಗೆ ಸ್ವಲ್ಪವೂ ತೊಂದರೆಯಾಗಲಿಲ್ಲ. ರಾತ್ರಿ ಊಟವಾದ ಬಳಿಕ, ಎಂದಿನಂತೆ ಎಲ್ಲರೂ ಮಲಗಿ ನಿದ್ರೆಹೋದರು. ಆ ರಾತ್ರಿಯಿಂದ ಚಂದ್ರಮಣಿಯೊಂದಿಗಿರಲು ಧನಿ ಬಂದಿದ್ದಳು. ಹುಲ್ಲುಮಾಡಿನ ಆ ಗುಡಿಸಲಿನಂತಹ ಮನೆಯಲ್ಲಿ ಇರುವುದೆಲ್ಲ ಎರಡು ಕೋಣೆಗಳು, ಒಂದು ಅಡಿಗೆ ಮನೆ. ಚಂದ್ರಮಣಿ ಪ್ರಸವಿಸಲು ಅನುಕೂಲಕರವಾದ ಸ್ಥಳವೆಂದರೆ ಮನೆಗೆಹೊಂದಿಕೊಂಡಿರುವ ಬತ್ತಕುಟ್ಟುವ ಕೊಟ್ಟಿಗೆ, ಅಲ್ಲಿ ಬತ್ತ ಬೇಯಿಸಲು ದೊಡ್ಡದೊಂದು ಒಲೆ ಹಾಗೂ ಒರಳುಗಲ್ಲು. ಆ ಕೊಟ್ಟಿಗೆಯನ್ನೇ ಪ್ರಸವಕಾರ್ಯಕ್ಕಾಗಿ ಸಜ್ಜುಗೊಳಿಸಿಡಲಾಗಿತ್ತು.

ಮರುದಿನ ಬೆಳಗ್ಗೆ ಅರುಣೋದಯಕ್ಕೆ ಸುಮಾರು ಹತ್ತುನಿಮಿಷ ಮೊದಲು ಚಂದ್ರಮಣಿಗೆ ಮೊದಲ ಶೂಲೆ ಕಾಣಿಸಿಕೊಂಡಿತು. ಧನಿ ಮೆಲ್ಲಗೆ ಅವಳನ್ನು ಕೊಟ್ಟಿಗೆಗೆ ಕರೆದುಕೊಂಡು ಬಂದಳು. ಅಲ್ಲಿಗೆ ಬಂದ ತಕ್ಷಣವೇ ಪ್ರಸವವಾಗಿಯೇ ಬಿಟ್ಟಿತು. ಗಂಡು ಮಗು! ಜಗದ ನೊಂದ ಜೀವರಿಗೆ ಆನಂದವೀಯಲು ಬರುತ್ತಿರುವ ಆ ಮಹಾಪುರುಷ ತನ್ನನ್ನು ನವಮಾಸ ಧರಿಸಿದ ತಾಯಿಗೆ ನೋವು ಕೊಟ್ಟಾನೇ? ಆ ಮಹತ್ತರವಾದ ಪ್ರಸವಕಾರ್ಯವನ್ನು ನೋಡಿಕೊಳ್ಳಬೇಕಾದವಳು ಧನಿಯೊಬ್ಬಳೇ. ಅವಳೀಗ ತಾಯಿಯ ಕಡೆಗೆ ಗಮನಕೊಡುವುದೇ ಅಥವಾ ಮಗುವಿನ ಕಡೆಗೇ? ಅವಳು ಮಗುವನ್ನು ಒಂದು ಕಡೆ ಇರಿಸಿ ಮೊದಲು ತಾಯಿಗೆ ಬೇಕಾದ ಸಕಾಲಿಕ ಶುಶ್ರೂಷೆಗಳನ್ನು ಮಾಡಿ ಮುಗಿಸಿದಳು. ಈಗ ಅವಳು ಮಗುವಿನ ಶುಶ್ರೂಷೆಯ ಕಡೆಗೆ ಗಮನ ಕೊಡಬೇಕು. ಆದರೆ ಮಗುವೆಲ್ಲಿ? ತಾನಿಟ್ಟಲ್ಲಿ ಅದು ಕಾಣುತ್ತಿಲ್ಲ! ಇದೀಗ ಜನಿಸಿದ ಮಗು ಎಲ್ಲಿಗೆತಾನೆ ಹೋಗಲು ಸಾಧ್ಯ! ಧನಿ ಸುತ್ತಲೂ ಕಣ್ಣುಹಾಯಿಸಿ ನೋಡುತ್ತಾಳೆ—ಮಗು ಒಲೆಯೊಳಗೆ ಹೊರಳಿ ಬೂದಿ ಮೆತ್ತಿಕೊಂಡು ಶಾಂತವಾಗಿ ಮಲಗಿಕೊಂಡಿದೆ! ಕಣ್ಣಾರೆ ಕಂಡರೂ ನಂಬಲಾಗದ ಸ್ಥಿತಿ ಇದು! ಈ ಅಪೂರ್ವ ಘಟನೆಗೆ ಏನಾದರೂ ಸಾಂಕೇತಿಕ ಅರ್ಥವಿರಬಹುದೆ? ಮುಂದೆ ಮಹಾಪುರುಷನಾಗಲಿರುವ ಈ ಮಗು ಜಗದ ನಶ್ವರತೆಯನ್ನು ಬೋಧಿಸಿದ ಪ್ರಥಮ ಪ್ರಸಂಗವೇ ಇದು? ಅಥವಾ, ಈ ಜಗತ್ತಿನಲ್ಲಿ ಯಾರೇ ಜನ್ಮತಾಳಿದರೂ, ಎಷ್ಟೇ ವೈಭವದಿಂದ ಮೆರೆದರೂ ಕೊನೆಗೆ ಅವರಾಗುವುದು ಒಂದು ಹಿಡಿ ಬೂದಿ ಮಾತ್ರ ಎಂಬುದನ್ನು ತೋರಿಸಲೋಸುಗ ಹೀಗೆ ಮಾಡಿರಬಹುದೆ!

ಅಂತೂ, ಕಳವಳಗೊಂಡ ಧನಿ, ಒಲೆಯತ್ತ ಧಾವಿಸಿ ಮೃದುವಾಗಿ ಮಗುವನ್ನೆತ್ತಿ ತಂದು ಮೈತೊಳೆದು ಶುಚಿಗೊಳಿಸಿದಳು. ಬಹಳ ಸುಂದರವಾದ ಮಗು! ಶರೀರ ತುಂಬ ಬೆಳೆದಿದೆ. ಆರು ತಿಂಗಳ ಮಗುವೋ ಎಂಬಂತಿದೆ. ಕೂಡಲೇ

ಪ್ರಸನ್ನಮಯಿ ಹಾಗೂ ಲಾಹಾ ಮನೆಯ ಮಹಿಳೆಯರಿಗೆ ಹೇಳಿಕಳುಹಿಸಲಾಯಿತು. ಅವರೆಲ್ಲ ಓಡೋಡಿ ಬಂದರು. ಧನಿ ಅವರಿಗೆಲ್ಲ ನಡೆದ ಘಟನೆಯನ್ನು ಬಣ್ಣಿಸಿ ಹೇಳಿದಳು. ಅದನ್ನು ಕೇಳಿದ ಮಹಿಳೆಯರು ಬೆರಗುಗೊಂಡರು; ಮಗುವಿನ ಚಂದವನ್ನು ನೋಡಿ ಹರುಷಗೊಂಡರು.

ಮಹಾಪುರುಷನೋರ್ವನ ಶುಭೋದಯವಾಗಿದೆ ಎಂಬುದನ್ನು ಜಗತ್ತಿಗೆ ಸಾರುವುದಕ್ಕಾಗಿಯೋ ಎಂಬಂತೆ ಶಂಖಧ್ವನಿ ಮಾಡಲಾಯಿತು. ಆ ದಿವ್ಯನಾದ ಕ್ಷುದಿರಾಮನ ಬಡ ಜೋಪಡಿಯನ್ನು ತುಂಬಿ ಹರಿಯಿತು.

ಕ್ಷುದಿರಾಮ ಸ್ವತಃ ಜ್ಯೋತಿಷ ಬಲ್ಲವನಾದ್ದರಿಂದ ಮಗು ಜನಿಸಿದ ಮುಹೂರ್ತ ಮಹತ್ತರವಾದುದು, ಮಂಗಳಕರವಾದುದು ಎಂಬುದನ್ನು ಮನಗಂಡ. ಆಂಗ್ಲ ಪಂಚಾಂಗದ ಪ್ರಕಾರ ಅದು ಕ್ರಿ.ಶ. ೧೮೩೬ ನೇ ಫೆಬ್ರವರಿ ೧೮, ಬುಧವಾರ. ಹಿಂದೂ ಪಂಚಾಂಗದ ಪ್ರಕಾರ ೧೭೫೭ ನೇ ಶಕವರ್ಷ, ಫಾಲ್ಗುಣ ಮಾಸದ ಆರನೇ ದಿನ. ಸೂರ್ಯೋದಯಕ್ಕೆ ಹನ್ನೆರಡು ನಿಮಿಷಕ್ಕೆ ಮೊದಲು ಜನನ. ಅಂದು ಶುಕ್ಲಪಕ್ಷದ ಬಿದಿಗೆ, ಪೂರ್ವಾಭಾದ್ರ ನಕ್ಷತ್ರ. ಅದು ಸಿದ್ಧಿಯೋಗ; ಕುಂಭರಾಶಿ. ಜನ್ಮಲಗ್ನದಲ್ಲಿ ರವಿ, ಚಂದ್ರ, ಬುಧ ಗ್ರಹಗಳು ಸೇರಿದ್ದುವು. ಶನಿಗ್ರಹ ಅತ್ಯುಚ್ಚ ಸ್ಥಾನದಲ್ಲಿದ್ದು ಜಾತಕನು ಅತ್ಯುನ್ನತ ಮಟ್ಟದ ಜೀವನ ನಡೆಸುವುದನ್ನು ಸೂಚಿಸುತ್ತಿತ್ತು. ಪರಾಶರ ಸಿದ್ಧಾಂತದ ಪ್ರಕಾರ ನೋಡಿದಾಗ ಜಾತಕನ ಜನ್ಮಲಗ್ನದಲ್ಲಿ ರಾಹು–ಕೇತುಗಳು ಅತ್ಯುಚ್ಚ ಸ್ಥಾನದಲ್ಲಿದ್ದುವಲ್ಲದೆ ಊರ್ಧ್ವಮುಖಿಗಳಾಗಿದ್ದುವು. ಗುರುವು ಉದಯೋನ್ಮುಖನಾಗಿದ್ದು ಜಾತಕನ ಭವಿಷ್ಯಜೀವನದ ಮೇಲೆ ಪರಮಶ್ರೇಷ್ಠ ಪ್ರಭಾವವನ್ನು ಬೀರಲಿರುವುದು ಕಂಡುಬರುತ್ತಿತ್ತು. ಮಗುವಿನ ಜಾತಕವನ್ನು ನೋಡಿದ ಪ್ರಸಿದ್ಧ ಜ್ಯೋತಿಷಿಗಳು ನುಡಿದರು: "ಈ ಜಾತಕನು ಅತ್ಯಂತ ಗುಣಾಢ್ಯನಾಗುತ್ತಾನೆ; ಸಕಲರಿಂದಲೂ ಗೌರವಿಸಲ್ಪಡುತ್ತಾನೆ; ಸದಾ ಸತ್ಕಾರ್ಯನಿರತನಾಗಿರುತ್ತಾನೆ; ಜಗತ್ತಿಗೆ ಧರ್ಮಭೋದನೆ ಮಾಡುವ ಸಲುವಾಗಿ ನೂತನ ಸಂಸ್ಥೆಯನ್ನು ಸ್ಥಾಪಿಸುತ್ತಾನೆ; ಆ ಸಂಸ್ಥೆಯು ತಲೆತಲಾಂತರಗಳವರೆಗೆ ಮುಂದುವರಿಯುತ್ತದೆ. ಮತ್ತು ಈತನು ನಾರಾಯಣನ ಅವತಾರವೆಂದು ಪೂಜಿತನಾಗುತ್ತಾನೆ." ಈ ಮಾತನ್ನು ಕೇಳಿದ ಕ್ಷುದಿರಾಮ ಗಯೆಯಲ್ಲಿ ತನಗಾದ ದಿವ್ಯ ಸ್ವಪ್ನವನ್ನು ಸ್ಮರಿಸಿಕೊಂಡು ಭಗವದ್ವಾಣಿಯು ನಿಜವಾದುದನ್ನು ಮನಗಂಡು ಆನಂದ ಪುಲಕಿತನಾದ. ಸಕಾಲದಲ್ಲಿ ಮಗುವಿಗೆ ನಾಮಕರಣಸಂಸ್ಕಾರ ಮಾಡಿ 'ಶಂಭುಚಂದ್ರ' ಎಂದು ಹೆಸರಿಟ್ಟ. ಇದು ಜಾತಕದ ಪ್ರಕಾರ ಶಿಶುವಿನ ರಾಶಿನಾಮ. ಆದರೆ ಗಯೆಯಲ್ಲಿ ತನಗಾದ ಅದ್ಭುತ ಸ್ವಪ್ನದಲ್ಲಿ ಸಾಕ್ಷಾತ್ ಗದಾಧರನ ದಿವ್ಯತೆಯನ್ನು ದರ್ಶಿಸಿದ್ದ ಕ್ಷುದಿರಾಮ ಅದರ ಸ್ಮರಣಾರ್ಥವಾಗಿ ಮಗುವನ್ನು 'ಗದಾಧರ' ಎಂದು ಕರೆದ. ಇದಲ್ಲದೆ, ಶ್ರೀರಾಮಚಂದ್ರನೇ ಮನೆದೇವರಾದ್ದರಿಂದ, ಮತ್ತು ಗಂಡುಮಕ್ಕಳೆಲ್ಲರ ಹೆಸರಿನಲ್ಲೂ ರಾಮನ ಹೆಸರನ್ನು ಸೇರಿಸುವ ತನ್ನ ಕುಲದ ಪದ್ಧತಿಗನುಸಾರವಾಗಿ, ಮಗುವನ್ನು 'ರಾಮಕೃಷ್ಣ' ಎಂದೂ ಕರೆದು ಆನಂದಿಸಿದ ಕ್ಷುದಿರಾಮ. ತಾರುಣ್ಯದವರೆಗೂ ಗದಾಧರ ಎಂಬ ನಾಮ ರೂಢಿ

ಯಲ್ಲಿತ್ತಾದರೂ ಮುಂದೆ ರಾಮಕೃಷ್ಣ ಎಂಬ ಹೆಸರೇ ರೂಢಿಗೆ ಬಂತು.

ದೈವೀ ಸೌಂದರ್ಯದಿಂದ ಶೋಭಿಸುತ್ತಿದ್ದ ಶಿಶುವಿನ ಮುಖವನ್ನು ತಂದೆ ಕ್ಷುದಿರಾಮ ತಾಯಿ ಚಂದ್ರಮಣಿಯರು ಮತ್ತೆಮತ್ತೆ ನೋಡಿದರು, ನೋಡುತ್ತಲೇ ಇದ್ದರು, ಆನಂದತುಂದಿಲರಾದರು. 'ಈ ದಿವ್ಯ ಶಿಶುವನ್ನು ಕಣ್ಣಮೇಲೆ ಕಣ್ಣಿಟ್ಟು ಸುಕೋಮಲವಾಗಿ ಸಲಹಬೇಕು, ಇದೇ ನಮ್ಮ ಪೂಜೆಯಾಗಬೇಕು' ಎಂದು ನಾಮಕರಣದ ಸುಮುಹೂರ್ತದಲ್ಲಿ ಮಾತಾಪಿತೃಗಳಿಬ್ಬರೂ ಸಂಕಲ್ಪಮಾಡಿದರು. ನಿಜಕ್ಕೂ, ಪ್ರತಿಯೊಂದು ಮಗುವನ್ನೂ ಭಗವತ್ಸ್ವರೂಪಿಯೆಂಬಂತೆಯೇ ಕಾಣಬೇಕು. ಹೀಗಿರುವಲ್ಲಿ ಭಗವಂತನೇ ಮಗುವಾಗಿ ಬಂದಾಗ?

೭

# 'ಮಂಗುಗಳ ಮಾಣಿಕ್ಯ'

ಜಗದೋದ್ಧಾರನನ್ನೇ ತನ್ನ ಮಗನೆಂದು ಭಾವಿಸಿ ಆಡಿಸಿದಳೆಶೋದೆ ಎಂದರು ದಾಸವರೇಣ್ಯರು. ಅಯೋಧ್ಯೆಯಲ್ಲಿ ಕೌಸಲ್ಯಾದಶರಥರು, ಗೋಕುಲದಲ್ಲಿ ಯಶೋದಾ ನಂದರು ಬಾಲ ರಾಮನನ್ನು, ಬಾಲ ಕೃಷ್ಣನನ್ನು ಪಾಲಿಸಿ ಪೋಷಿಸಿದರು; ಮೋಹಪರವಶತೆಯಿಂದಾಗಿ, ಅವರು ಸಾಕ್ಷಾತ್ ಪರಮಾತ್ಮನೇ ಎಂಬುದನ್ನು ಮರೆತು ತಾವೇ ಅವರ ಸಂರಕ್ಷಕರೆಂಬ ಭಾವದಿಂದ ನೋಡಿಕೊಂಡರು. ಆದರೆ ಬಾಲಕೃಷ್ಣನಿಗೆ ದುಷ್ಟ ರಾಕ್ಷಸರಿಂದ ಕಷ್ಟಗಳೊದಗಿದಾಗ ತನ್ನನ್ನು ರಕ್ಷಣೆ ಮಾಡಿಕೊಂಡವನು ಅವನೇ. ಕೃಷ್ಣನಿಗೆ ನಡುನಡುವೆ ಹಸಿವಾದಾಗ ಅವನು ಹಸುವಿನ ಬಳಿ ಸಾರಿದರೆ ಸಾಕು, ಹಸು ತನ್ನ ಮುದ್ದು ಕರು ಬಂದಿತೆಂದು ಭಾವಿಸಿ ಜರ್‍ರನೆ ಹಾಲಿಳಿಸುತ್ತಿತ್ತು. ಆದರೂ ಯಶೋದಾ ನಂದರು ಭಾವಿಸಿದ್ದರು, 'ಕೃಷ್ಣನಿಗೆ ತಾವಿಲ್ಲದಿರೆ ಇನ್ನಾರು ಗತಿ?' ಎಂದು. ಇಲ್ಲಿ ಗದಾಧರನ ತಾಯ್ತಂದೆಯರಾದ ಚಂದ್ರಮಣಿ–ಕ್ಷುದಿರಾಮರೂ ಭಾವಿಸಿದರು, 'ನಾವಿಲ್ಲದಿರೆ ಇವಗಾರು ಗತಿ' ಎಂದು. ಆದರೆ ಗದಾಧರನಿಗೆ ಒಳ್ಳೆಯ ಹಾಲು ಕುಡಿಸೋಣವೆಂದರೆ ಮನೆಯಲ್ಲಿ ಹಸುವಿದ್ದರೆತಾನೆ? ಹೋಗಲಿ, ಕೂಡಲೇ ಒಂದನ್ನು ಕೊಂಡು ತರೋಣವೆಂದರೆ ಅವರೇನು ಅಷ್ಟು ಅನುಕೂಲಸ್ಥರೆ? ಆದರೆ ಲೋಕವನ್ನೇ ಕಾಪಾಡುವ ಭಗವಂತನಿಗೆ ಕೊರತೆಯೆಂಬುದಲ್ಲಿ! ಶಿಶುವಿನ ಜನನವಾಗಿದೆಯೆಂಬ ವರ್ತಮಾನ ಮೇದಿನೀಪುರಕ್ಕೆ ತಲುಪಿದೊಡನೆ ಕ್ಷುದಿರಾಮನ ಸೋದರಳಿಯ ರಾಮಚಾಂದನ ಮನಸ್ಸಿನಲ್ಲಿ ಒಂದು ಸ್ಫುರಣೆಯುಂಟಾಯಿತು: 'ನನ್ನ ಮಾವನದು ಬಡ ಕುಟುಂಬ. ಈಗ ಮಗು–ಬಾಣಂತಿಯರನ್ನು ಪೋಷಿಸುವ ಹೊಣೆ ಬೇರೆ. ಹೀಗಿರುವಾಗ ಅಲ್ಲಿ ಹಸುವಿನ ಹಾಲಿಗೆ ಅಭಾವ ಇರಲೇಬಾರದು.'

ಹೀಗೆ ಯೋಚಿಸಿದ ಆತ ಸ್ವಲ್ಪವೂ ಕಾಲವಿಳಂಬ ಮಾಡದೆ ಒಳ್ಳೆಯ ಕರೆಯುವ ಹಸುವೊಂದನ್ನು ಉಡುಗೊರೆಯಾಗಿ ಕಾಮಾರಪುಕುರಕ್ಕೆ ಕಳಿಸಿಕೊಟ್ಟ. ಹೀಗೆ ಗದಾಧರನ ಶುಶ್ರೂಷೆಗೆ ನಾನಾ ಕಡೆಗಳಿಂದ ಬೇಕುಬೇಕಾದ ಅನುಕೂಲತೆಗಳು ತಾವೇತಾವಾಗಿ ಒದಗಿ ಬರುತ್ತಿದ್ದುವು. ಆದರೂ ಮುದ್ದು ಮಗನ ಆರೈಕೆಯ ವಿಷಯದಲ್ಲಿ ಚಂದ್ರಮಣಿ–ಕ್ಷುದಿರಾಮರ ಕಳವಳ ಕಾತರಗಳಿಗೆ ಆದಿಅಂತ್ಯವೇ ಇರಲಿಲ್ಲ. ಇದನ್ನು ವಾತ್ಸಲ್ಯವೆನ್ನೋಣವೆ, ಮೋಹವೆನ್ನೋಣವೆ?

ತಾಯ್ತಂದೆಯರ ಪ್ರೀತಿಯ ಮಡಿಲಲ್ಲಿ ಮಗು ಗದಾಧರ ಬೆಳೆಯುತ್ತ ಬಂದ.

ಬೆಳೆದುಬಂದಂತೆಲ್ಲ ಅವನ ಶರೀರದ ಅಂಗಪ್ರತ್ಯಂಗಗಳೂ ಮನಮೋಹಕವಾಗಿ ಅರಳಿ ವಿಕಸಿತಗೊಂಡವು. ಚಂದ್ರಮಣಿ ಮಗುವನ್ನು ಮಡಿಲಲ್ಲೆತ್ತಿಕೊಂಡು ನೋಡುತ್ತ ಕುಳಿತರೆ, ಕುಳಿತೇ ಇರುತ್ತಿದ್ದಳು! ಕ್ಷುದಿರಾಮನ ಜಪಧ್ಯಾನವೆಲ್ಲ ಈಗ ಬಹುಪಾಲು ಕಡಮೆಯಾಗಿಬಿಟ್ಟಿತು. ಕಾರಣ—ಮಗು ಗದಾಧರನ ರೂಪ ಲಾವಣ್ಯ! ಅವನ ಕಣ್ಣುಗಳು ಒಮ್ಮೆ ಗದಾಧರನ ಕಡೆಗೆ ಹೊರಳಿದರೆ ಸಾಕು, ಮತ್ತೆ ಅವು ಅಲ್ಲಿಂದ ಕದಲಲೊಲ್ಲದೆ ನಿಲ್ಲುತ್ತಿದ್ದುವು. ಅದೇ ಅವನ ಏಕಾಗ್ರಪೂರ್ಣ ಧ್ಯಾನವಾಗಿಬಿಡುತ್ತಿತ್ತು. ಹಿಂದೆ ಅವನು ತನ್ನ ಧ್ಯಾನಗಮ್ಯ ವಸ್ತುವನ್ನು ಕಣ್ಮುಚ್ಚಿ ಅಂತರಂಗದೊಳಗೆ ನೋಡುತ್ತಿದ್ದ; ಈಗ ಅದನ್ನೇ ಕಣ್ತೆರದು ಬಹಿರಂಗದಲ್ಲಿ ನೋಡುವುದಾಗಿದೆ. ತಾಯ್ತಂದೆಯರ ಮಾತಂತಿರಲಿ, ಮನೆಮಂದಿಯ ಮಾತೂ ಅಂತಿರಲಿ, ಊರ ಮಹಿಳೆಯರ ಅವಸ್ಥೆ ನೋಡಬೇಕು! ಚಂದ್ರಮಣಿಯ ಮಡಿಲಲ್ಲಿ ಹೊಳೆಯುವ ಆ ರತ್ನವನ್ನು ಪ್ರತಿಯೊರ್ವ ಮಹಿಳೆಯೂ ತನ್ನ ಮಡಿಲಿಗೆ ಕರೆದುಕೊಳ್ಳುವವಳೇ. ಸುಮ್ಮನೆ ದೂರದಿಂದ ನೋಡಿದರೆ ಅವರಿಗೆ ತೃಪ್ತಿಯಿಲ್ಲ.

**ರೂಪರಾಶಿ ಕಂಡು ನಿನ್ನ ಸೆಳೆಯಲಾರೆ ನೆಟ್ಟ ಕಣ್ಣ**
**ತಾಪತಿಮಿರನಾಶಿ ನಿನ್ನ ತೋಳಲೆತ್ತಿಕೊಂಬೆ ಚಿನ್ನ!**

ಇದು ಆ ಹೆಂಗಳೆಯರ ಸ್ಥಿತಿ. ಊರ ಮಹಿಳೆಯರು ಮನೆಗೆ ಬರುತ್ತಿದ್ದರೆ, ಚಂದ್ರಮಣಿ–ಕ್ಷುಧಿರಾಮರಿಗೆ ಅವರನ್ನು 'ಏನು ಬಂದಿರಿ? ಏನಾದರೂ ಬೇಕಿತ್ತೇ?' ಎಂದು ಕೇಳುವ ಪ್ರಮೇಯವೇ ಇಲ್ಲ. ಮಗುವನ್ನು ಅವರ ತೋಳಲ್ಲಿಟ್ಟರಾಯಿತು. ಕೆಲವು ಮಹಿಳೆಯರು ಅಸಹಾಯಕರಾಗಿ ಚಂದ್ರಮಣಿಗೆ ಹೇಳುತ್ತಾರೆ, "ಏನು ಮಾಡುವುದಮ್ಮ ಎಂಥಾ ಮಗುವನ್ನು ಪಡೆದಿದ್ದೀಯೆ ನೀನು! ಅದನ್ನು ದಿನ ಕ್ಕೊಮ್ಮೆಯಾದರೂ ನೋಡದಿದ್ದರೆ ಮನಸ್ಸು ಕೇಳುವುದಿಲ್ಲ; ಆದ್ದರಿಂದ ಸ್ವಲ್ಪ ಸಮಯ ಸಿಕ್ಕರೆ ಸಾಕು, ಹೀಗೆ ಓಡಿಬರುತ್ತೇವೆ."

ಮಗು ಗದಾಧರನ ರೂಪವರ್ಣನೆ ಕಾಮಾರಪುಕುರದ ಗ್ರಾಮವನ್ನು ತುಂಬಿದ್ದಲ್ಲದೆ ಆಸುಪಾಸಿನ ಹಳ್ಳಿಗಳಿಗೂ ಹರಡಿತು. ಇಂತಹ ಸಮಾಚಾರವನ್ನು ಕೇಳಿದ ಮಹಿಳೆಯರು ಕೇಳಿಕೊಂಡು ಸುಮ್ಮನೆ ಕುಳಿತಿರುವುದುಂಟೆ? ಧಾವಿಸಿ ಬಂದರು. ಕ್ಷುದಿರಾಮನ ಬಡ ಗುಡಿಸಲಿನಲ್ಲಿ ನಿತ್ಯೋತ್ಸವ! ಮನೆಗೆ ಬಂದ ಪ್ರತಿಯೊಬ್ಬ ಮಹಿಳೆಯ ಹೃದಯದಿಂದಲೂ ವಾತ್ಸಲ್ಯದ ಹಾಲು ಹರಿಯಿತು. ಹೀಗೆ ಗದಾಧರ ಪ್ರೀತಿಯ ಪಾಲ್ಗಡಲಿನಲ್ಲಿ ಓಲಾಡಿದ, ನಲಿಸಿ ನಲಿದಾಡಿದ.

ಬಾಲ ಗದಾಧರನಿಗೆ ಈಗ ಐದು ತಿಂಗಳು ತುಂಬಿದೆ. ಅನ್ನಪ್ರಾಶನ ಸಂಸ್ಕಾರಕ್ಕೆ ಇದು ಸೂಕ್ತ ಕಾಲ. ಈ ಸಮಾರಂಭವನ್ನು ತನ್ನ ಇತಿಮಿತಿಯೊಳಗೇ ಸರಳವಾಗಿ ಮಾಡಿಮುಗಿಸೋಣವೆಂದು ಕ್ಷುದಿರಾಮ ನಿರ್ಧರಿಸಿದ. ಶಾಸ್ತ್ರವಿಧಿಗೆ ಅನುಗುಣವಾಗಿಯೇ ಕಾರ್ಯ ನಡೆಯಬೇಕು, ಆದರೆ ಸಾಮಾನುಗಳ ಪಟ್ಟಿಯನ್ನು ಬೆಳೆಯಗೊಡಬಾರದು, ಕೆಲವೇ ಕೆಲವು ಆತ್ಮೀಯ ಬಂಧುಗಳನ್ನು ಆಹ್ವಾನಿಸಿದರೆ ಸಾಕು—ಇದು ಅವನು ಹಾಕಿಕೊಂಡಿದ್ದ ಯೋಜನೆ. ಆದರೆ ಕೊನೆಗೆ ನಡೆದದ್ದೇ ಬೇರೆ. ಕ್ಷುದಿರಾಮನ ಆಪ್ತ ಸ್ನೇಹಿತನಾದ ಧರ್ಮದಾಸ ಲಾಹಾ ಇಲ್ಲೊಂದು

ಮುಖ್ಯ ಪಾತ್ರ ವಹಿಸಿದ. ಆತ ಆ ಗ್ರಾಮದ ಬ್ರಾಹ್ಮಣರನ್ನೂ ಇತರ ಪ್ರಮುಖ ವ್ಯಕ್ತಿಗಳನ್ನೂ ಪ್ರೇರೇಪಿಸಿ ಕ್ಷುದಿರಾಮನ ಮನೆಗೆ ಕಳುಹಿಸಿದ. ಅವರೆಲ್ಲ ಬಂದು ಕ್ಷುದಿರಾಮನ ಮುಂದೆ ಕುಳಿತುಕೊಂಡು ತಮ್ಮ ಮಾತನ್ನು ಪ್ರಾರಂಭಿಸಿದರು:

"ಅಯ್ಯಾ ಕ್ಷುದಿರಾಮ, ದೇವರಂಥಾ ಮಗುವಿಗೆ ಅನ್ನಪ್ರಾಶನ ಮಾಡಿಸುತ್ತಿದ್ದೀಯೆ. ನಮಗೆಲ್ಲ ಬಹಳ ಆನಂದವಾಗಿದೆ. ನೀನು ಅಂದು ನಮಗೆಲ್ಲರಿಗೂ ಊತಣ ಕೊಡಿಸಬೇಕು. ಏನು ಹೇಳುತ್ತೀ ?"

ಕ್ಷುದಿರಾಮ ಏನು ಹೇಳಿಯಾನು ? ಅವನೀಗ ದೊಡ್ಡ ಉಭಯ ಸಂಕಟದಲ್ಲಿ ಸಿಕ್ಕಿಬಿದ್ದ. ಗ್ರಾಮದ ಪ್ರತಿಯೊಬ್ಬರೂ ತನಗೆ ಬೇಕಾದವರೇ, ತನ್ನ ಮೇಲೆ ಪ್ರೀತಿ ವಿಶ್ವಾಸ ಇಟ್ಟವರೇ. ಇವರಲ್ಲಿ ಯಾರನ್ನು ಕರೆಯುವುದು, ಯಾರನ್ನು ಬಿಡುವುದು ? ಹೋಗಲಿ, ಎಲ್ಲರನ್ನೂ ಆಮಂತ್ರಿಸೋಣವೆಂದರೆ, ಆ ಪ್ರಶ್ನೆಯೇ ಏಳುವಂತಿಲ್ಲ—ಬಡತನ ! ಕ್ಷುದಿರಾಮ ಶ್ರೀರಘುವೀರನ ಮೇಲೆ ಭಾರ ಹಾಕಿ ನೆಟ್ಟಗೆ ತನ್ನ ಆಪ್ತ ಸ್ನೇಹಿತನಾದ ಧರ್ಮದಾಸ ಲಾಹಾನ ಬಳಿಗೆ ಬಂದು ತನ್ನ ಸಂಕಟದ ಸ್ಥಿತಿಯನ್ನು ಹೇಳಿಕೊಂಡ. ಧರ್ಮದಾಸನಿಗೆ ತಿಳಿಯದ ವಿಷಯವೆ ಇದು ? ಇದಕ್ಕೆ ಕಾರಣ ಅವನೇ ಅಲ್ಲವೆ ? ಮನದಲ್ಲೇ ನಗುತ್ತ ಹೇಳಿದ:

"ಕ್ಷುದಿರಾಮ, ನೀನೇನೂ ಯೋಚಿಸಬೇಡ. ಆ ದಿನದ ಖರ್ಚಿನ ಬಾಬತ್ತನ್ನೆಲ್ಲ ನನಗೆ ಬಿಟ್ಟು, ಧೈರ್ಯವಾಗಿ ಕಾರ್ಯ ಪ್ರಾರಂಭಿಸು."

ಕ್ಷುದಿರಾಮನ ತಲೆಯ ಮೇಲಿನ ಬೆಟ್ಟದ ಭಾರ ಕಳಚಿ ಬಿತ್ತು. ಆಪ್ತ ಸಖ ಧರ್ಮದಾಸನಿಗೆ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿ ನಿಶ್ಚಿಂತ ಮನಸ್ಸಿನಿಂದ ಮನೆಗೆ ಮರಳಿದ.

ಅನ್ನಪ್ರಾಶನದ ದಿನ ಬಂದಿತು. ಅಂದಿನ ಕಾರ್ಯಕ್ರಮ ಆ ಹಳ್ಳಿಯ ಜನ ಎಂದೆಂದಿಗೂ ನೆನಪಿಟ್ಟುಕೊಳ್ಳುವಂತೆ ನಡೆಯಿತು. ಆ ದಿನದ ಸಮಸ್ತ ಖರ್ಚನ್ನು ವಹಿಸಿಕೊಂಡ ಧರ್ಮದಾಸ, ಆನಂದದಿಂದ ಓಡಾಡಿ ಕಾರ್ಯಕ್ರಮದ ಪ್ರತಿಯೊಂದು ಅಂಗವನ್ನೂ ಅಚ್ಚುಕಟ್ಟಾಗಿ ನಡೆಸಿಕೊಟ್ಟ. ಶ್ರೀಮಂತ ಸಜ್ಜನನಾಗಿರಬೇಕು; ಮತ್ತು ಅವನ ಸಹಕಾರವಿರಬೇಕು. ಆಗ ಕಾರ್ಯ ಏಕೆ ಯಶಸ್ವಿಯಾಗಲೊಲ್ಲದು ? ಅಂದಿನ ಇನ್ನೊಂದು ವೈಶಿಷ್ಟ್ಯವೆಂದರೆ, ಯಾವುದೇ ಜಾತಿಭೇದ, ವರ್ಗಭೇದ, ಸ್ಥಾನಭೇದವಿಲ್ಲದೆ ಹಳ್ಳಿಯ ಸಮಸ್ತರೂ ಕ್ಷುದಿರಾಮನ ಮನೆಗೆ ಬಂದರು, ಮಗುವಿನ ದರ್ಶನ ಪಡೆದರು, ಪುಷ್ಕಳವಾಗಿ ಭೋಜನಗೈದು ಮಗುವಿಗೆ ಶುಭಕೋರುತ್ತ ಆನಂದದಿಂದ ಹಿಂತೆರಳಿದರು. ಅಂದು ಹಲವಾರು ಭಿಕ್ಷುಕರೂ ತೃಪ್ತಿಯಾಗಿ ಉಂಡರು—ಎಂಜಲನ್ನಲ್ಲ, ಶ್ರೀರಘುವೀರನ ಪ್ರಸಾದವನ್ನು.

ಬಾಲ ಗದಾಧರನ ಮುಖದಲ್ಲಿ ಮಿನುಗುವ ನಗೆ, ಕೈಕಾಲುಗಳು ಆಡುವ ಬಗೆ ಎಲ್ಲವೂ ಅಷ್ಟು ಮಧುರ ! ಅವನ ಒಂದೊಂದು ಹಾವಭಾವವೂ ಚಂದ್ರಮಣಿಯ ಹೃದಯವನ್ನು ಅರಳಿಸುತ್ತಿತ್ತು. ಆದರೆ ಆವಳ ಹೃದಯದಲ್ಲಿ ಆಗಾಗ ಒಂದು ಭಯವೂ ಹೆಡೆಯಾಡುತ್ತಿತ್ತು—ಅದು ತನ್ನ ಮುದ್ದು ಮಗುವಿನ ಯೋಗಕ್ಷೇಮದ ಬಗ್ಗೆ. ಎಲ್ಲಿ ಅವನಿಗೆ ದೃಷ್ಟಿ ತಗಲೀತೋ, ಯಾವ ದುಷ್ಟಗಾಳಿ

ಬೀಸೀತೋ ಎಂಬ ಭಯ. ಹಿಂದೆ ಅವಳಿಗೆ ನಾನಾ ದೇವದೇವಿಯರು ದರ್ಶನ ಕೊಟ್ಟು ವರ ನೀಡುತ್ತೇವೆಂದು ಬಂದರೂ ಅವಳು ಯಾವ ವರವನ್ನೂ ಯಾಚಿಸಿದವಳಲ್ಲ. ಈಗ ದಿನಬೆಳಗಾದರೆ ಅವಳ ಮಿಡಿಯುತ್ತಿದ್ದ ಮಾತೃಹೃದಯದಿಂದ ಮಗುವಿನ ಕ್ಷೇಮಕ್ಕಾಗಿ ನಿರಂತರ ಪ್ರಾರ್ಥನಾ ಲಹರಿ ಹರಿಯತೊಡಗಿತ್ತು. ಎಷ್ಟೋ ವೇಳೆ ಈ ಪ್ರಾರ್ಥನೆ ಅವಳಿಗೇ ಅರಿವಿಲ್ಲದಂತೆ ನಡೆದಿತ್ತು. ಇಷ್ಟು ಪ್ರಾರ್ಥಿಸಿದರೂ ಅವಳ ಭಯ ದೂರವಾಯಿತೆಂದೇನಲ್ಲ. ಮಗುವಿನ ಯೋಗಕ್ಷೇಮದ ಕಾಳಜಿ ಅವಳ ಮನಸ್ಸನ್ನು ಎಷ್ಟು ಆಕ್ರಮಿಸಿಬಿಟ್ಟಿತ್ತೆಂದರೆ ದೇವದೇವಿಯರ ದರ್ಶನಕ್ಕೇ ಅದೊಂದು ತಡೆಯಾಗಿ ನಿಂತಿತು. ಹೀಗಿದ್ದರೂ ಅವಳಿಗೆ ಆಗಾಗ ಕೆಲವು ದರ್ಶನಗಳಾದವು. ಆದರೆ ಅವು ಅವಳಿಗೆ ಸಂತಸವನ್ನೀಯುವ ಬದಲು ಮತ್ತಷ್ಟು ಕಳವಳವನ್ನುಂಟುಮಾಡುತ್ತಿದ್ದುವು.

ಒಂದು ದಿನ ಬೆಳಗ್ಗೆ ಗದಾಧರ ಮಾತೆಯ ಮಡಿಲಲ್ಲಿ ಕುಳಿತು ಮೊಲೆಹಾಲು ಕುಡಿಯುತ್ತ ಹಾಗೇ ಮಲಗಿ ನಿದ್ರೆಮಾಡಿಬಿಟ್ಟ. ಚಂದ್ರಮಣಿ ಮಗುವನ್ನು ಹಾಸಿಗೆಯ ಮೇಲೆ ಮಲಗಿಸಿ ಸೊಳ್ಳೆಪರದೆ ಇಳಿಬಿಟ್ಟು ಮನೆಕೆಲಸದತ್ತ ಹೊರಟಳು. ಸ್ವಲ್ಪ ಹೊತ್ತಿನ ಬಳಿಕ, ಯಾವುದೋ ವಸ್ತುವಿಗಾಗಿ ಕೋಣೆಗೆ ಹಿಂದಿರುಗಿದಳು. ಆಗ ಅವಳಿಗೊಂದು ಆಶ್ಚರ್ಯ ಕಾದಿತ್ತು. ಹಾಸಿಗೆಯ ಮೇಲೆ ಇದ್ದುದು ಮಗುವಲ್ಲ, ಒಬ್ಬ ಮನುಷ್ಯ!! ಯಾರೋ ಉದ್ದನೆಯ ಅಪರಿಚಿತ ವ್ಯಕ್ತಿ ಹಾಸಿಗೆಯುದ್ದಕ್ಕೂ ಮಲಗಿಕೊಂಡಿದ್ದಾನೆ! ಚಂದ್ರಮಣಿ ಭಯಾಶ್ಚರ್ಯಭರಿತಳಾಗಿ ಕೋಣೆಯಿಂದ ಹೊರಗೋಡಿದಳು, ಪತಿಯನ್ನು ಕೂಗಿ ಕರೆದಳು. ಕ್ಷುದಿರಾಮ ಬಂದ, ವಿವರವನ್ನು ಕೇಳಿದ, ಆದರೆ ಪತ್ನಿಯ ಮಾತು ಕೇಳಿಕೊಂಡು ಕೋಣೆಯೊಳಗೆ ಹೋಗಿ ನೋಡಿದರೆ ಅಲ್ಲಿ ಮನುಷ್ಯನೂ ಇಲ್ಲ, ಯಾರೂ ಇಲ್ಲ; ಮಗು ಗದಾಧರ ಸುಖವಾಗಿ ಮಲಗಿದ್ದಾನೆ. ಕ್ಷುಧಿರಾಮ ಮುಗುಳ್ನಗುತ್ತ ಮಡದಿಯ ಮುಖ ನೋಡಿದ. ಚಂದ್ರಮಣಿ ಈಗೇನೆನ್ನಬೇಕು ? ಆದರೂ ಅವಳು ಕಂಡದ್ದಂತೂ ಖಂಡಿತ ಸತ್ಯ! ಅವಳು ಪತಿಗೆ ಹೇಳಿದಳು:

"ನೀವೇನೇ ಹೇಳಿ, ಇದು ನಿಜಕ್ಕೂ ಯಾವುದೋ ತುಂಟ ಪ್ರೇತದ ಕಾಟ. ಮಗು ಮಲಗಿದ ಜಾಗದಲ್ಲಿ ಯಾವನೋ ಉದ್ದನೆಯ ಮನುಷ್ಯ ಮಲಗಿದ್ದನ್ನು ನಾನೇ ಸ್ಪಷ್ಟವಾಗಿ ಕಂಡೆ! ಇದು ಖಂಡಿತ ಭ್ರಮೆಯಲ್ಲ. ಕಣ್ಣಾರೆ ಕಂಡದ್ದು ಭ್ರಮೆಯಾಗುವುದಕ್ಕೆ ಹೇಗೆ ಸಾಧ್ಯ? ಯಾರಾದರೊಬ್ಬ ಮಂತ್ರವಾದಿಯನ್ನು ಬೇಗನೆ ಕರೆತನ್ನಿ. ಇಲ್ಲದಿದ್ದರೆ ಮಗುವಿಗೆ ಏನಾದರೂ ಹಾನಿಯಾದೀತು!"

ಆದರೆ ಕ್ಷುದಿರಾಮ ಮಡದಿಯ ಮೈದಡವಿ ಸಮಾಧಾನ ಪಡಿಸುತ್ತ ಹೇಳಿದ:

"ಚಂದ್ರಾ, ಮಗುವಿನ ಸಂಬಂಧವಾಗಿ ನಿನಗೆ ಇಂತಹ ದರ್ಶನಗಳಾದರೆ ಆದರಲ್ಲೇನೂ ಆಶ್ಚರ್ಯವಿಲ್ಲ ಬಿಡು. ಈ ಬಗೆಯ ಅಪೂರ್ವ ದರ್ಶನಗಳು ನಮಗೆ ಮಗುವಿನ ಜನನಕ್ಕೆ ಮೊದಲೂ ಆಗಿತ್ತಲ್ಲವೆ? ಆದ್ದರಿಂದ ಸಮಾಧಾನ ತಂದುಕೊ. ಈ ವಿಷಯವನ್ನು ಅವರಿವರ ಹತ್ತಿರ ಹೇಳಬೇಡ. ಶ್ರೀರಘುವೀರ ನಮ್ಮ ಮಗುವನ್ನು ಸದಾ ಕಾಪಾಡುತ್ತಾನೆ. ಇದು ಸತ್ಯ."

ಪತಿಯ ಮಾತು ಕೇಳಿ ತತ್ಕಾಲಕ್ಕೆ ಸಮಾಧಾನಗೊಂಡರೂ ಅವಳ ತಾಯಿ ಕರುಳಿನಲ್ಲಿ ಭೀತಿ ಹಾಗೇ ಉಳಿದಿತ್ತು. ಆ ದಿನ ಬಹಳ ಹೊತ್ತಿನವರೆಗೆ ಶ್ರೀರಘುವೀರನ ಮುಂದೆ ಕೈಜೋಡಿಸಿಕೊಂಡು ಮಗುವಿನ ಕ್ಷೇಮಕ್ಕಾಗಿ ಮನಸ್ತೃಪ್ತಿಯಾಗುವಷ್ಟು ಪ್ರಾರ್ಥಿಸಿಕೊಂಡಳು.

೮

# ಮಾತೆಯಿಂದ ಮೊದಲ ಪಾಠ

ಹೀಗೆಯೇ ಆನಂದಕರವಾಗಿ ಸುಮಾರು ನಾಲ್ಕೈದು ವರ್ಷಗಳು ಕಳೆದುವು. ಈ ನಡುವೆ ಗದಾಧರನಿಗೆ ಒಬ್ಬಳು ತಂಗಿ ಹುಟ್ಟಿದಳು. ಹೆಸರು ಸರ್ವಮಂಗಳಾ. ಗದಾಧರ ಮನೆತುಂಬ ಓಡಾಡುತ್ತಿದ್ದಾನೆ. ತಂದೆ ಕ್ಷುದಿರಾಮ ಮಗನ ಚಲನವಲನಗಳ ಕಡೆಗೆ ಗಮನವಿಟ್ಟು ನೋಡಿದಾಗ ಅವನಿಗೊಂದು ಆಶ್ಚರ್ಯಕರ ವಿಷಯ ಗೋಚರಿಸಿತು. ಅದು ಮಗನ ಅದ್ಭುತ ಸ್ಮರಣಶಕ್ತಿ! ಕ್ಷುದಿರಾಮ ಆಗಾಗ ಗದಾಧರನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಒಂದೊಂದಾಗಿ ತನ್ನ ಪಿತೃಗಳ ಹೆಸರನ್ನು ಹೇಳುತ್ತಿದ್ದ, ದೇವದೇವಿಯರ ಸ್ತೋತ್ರಗಳನ್ನು ಹೇಳಿಕೊಡುತ್ತಿದ್ದ, ರಾಮಾಯಣ ಮಹಾಭಾರತದ ಕೆಲವು ಅದ್ಭುತ ಕಥೆಗಳನ್ನು ಹೇಳುತ್ತಿದ್ದ. ಮತ್ತು, ಕೇಳಿದ್ದನ್ನು ಎಷ್ಟರಮಟ್ಟಿಗೆ ನೆನಪಿನಲ್ಲಿಟ್ಟುಕೊಳ್ಳಬಲ್ಲ ಎಂಬುದನ್ನು ನೋಡಲು ಅವನಿಗೆ ಕೆಲವು ಪ್ರಶ್ನೆ ಹಾಕುತ್ತಿದ್ದ. ಆಗೆಲ್ಲ ಅವನು ತಾನು ಕೇಳಿದ್ದನ್ನು ತಪ್ಪಿಲ್ಲದೆ, ತೊಡರದೆ ಹೇಳುವುದನ್ನು ಕಂಡು ಕ್ಷುದಿರಾಮ ಬೆರಗಾಗುತ್ತಿದ್ದ. ಇಂಥದೊಂದನ್ನು ಅವನು ಈ ಹಿಂದೆ ಕಂಡೇ ಇರಲಿಲ್ಲ! ಅವನಲ್ಲಿ ಕ್ಷುದಿರಾಮ ಇನ್ನೊಂದು ಅಂಶವನ್ನು ಗಮನಿಸಿದ: ಯಾವ ವಿಷಯ ಅವನ ಮನಸ್ಸಿಗೆ ಹಿಡಿಸುವುದಿಲ್ಲವೋ ಆ ವಿಷಯದ ಮೇಲೆ ಅವನಿಗೆ ಸಂಪೂರ್ಣ ನಿರಾಸಕ್ತಿ. ಕ್ಷುದಿರಾಮ ಅವನಿಗೆ ಮಗ್ಗಿ ಹೇಳಿಕೊಡಲು ಹೊರಟಾಗ ಈ ಸತ್ಯ ಹೊರಬಿತ್ತು. ಗದಾಧರನಿಗೆ ಲೆಕ್ಕವೆಂದರೆ ಜುಗುಪ್ಸೆ, ಅದರಲ್ಲೂ ಮಗ್ಗಿ! ಹುಡುಗನಿಗೆ ಒಲ್ಲದ ವಿಷಯವನ್ನು ಒತ್ತಾಯದಿಂದ ತುರುಕಬಾರದೆಂದು ಕ್ಷುದಿರಾಮ ಮಗ್ಗಿ ಹೇಳಿಕೊಡುವುದನ್ನು ನಿಲ್ಲಿಸಿದ. ಆದರೆ ಹುಡುಗ ಸಾಕಷ್ಟು ಚುರುಕಾಗಿರುವುದನ್ನು ಕಂಡು ಒಂದು ಒಳ್ಳೆಯ ದಿನದಂದು ಸರಸ್ವತಿ ಪೂಜೆ ಮಾಡಿ ಶಾಲೆಗೆ ಸೇರಿಸಿದ. ಗದಾಧರನಿಗೀಗ ಐದು ವರ್ಷ. ಶಾಲೆಯಲ್ಲಿ ತನ್ನ ಸಮವಯಸ್ಕರು ಸ್ನೇಹಿತರಾಗಿ ಸಿಕ್ಕಿರುವುದು ಅವನಿಗೆ ಎಲ್ಲಿಲ್ಲದ ಆನಂದವನ್ನುಂಟುಮಾಡಿದೆ. ಗದಾಧರ ಬಹುಬೇಗ ಸ್ನೇಹಿತರಿಗೂ ಪ್ರಿಯನಾದ, ಶಿಕ್ಷಕರಿಗೂ ಪ್ರಿಯನಾದ.

ಆಗಿನ ಕಾಲದಲ್ಲಿ ಹಳ್ಳಿಗಳಲ್ಲೆಲ್ಲ ಸರ್ಕಾರಿ ಶಾಲೆಯೂ ಇರುತ್ತಿರಲಿಲ್ಲ, ಖಾಸಗಿ ಶಾಲೆಯೂ ಇರುತ್ತಿರಲಿಲ್ಲ. ಶ್ರೀಮಂತರ ಮನೆಯ ಅಂಗಣವೇ ಮಕ್ಕಳ ಶಾಲೆ. ಆ ಊರಿನ ಜಮೀನ್ದಾರ ಧರ್ಮದಾಸ ಲಾಹಾನ ಮನೆಯ ಮುಂದೆ ದೊಡ್ಡದೊಂದು ರಂಗಮಂಟಪ ಇತ್ತು. ದುರ್ಗಾಪೂಜೆಯೇ ಮೊದಲಾದ ಉತ್ಸವ

ಗಳಿಗಾಗಿ ಆ ಮಂಟಪ. ಧರ್ಮದಾಸ ತನ್ನ ಮನೆಯ ಮಕ್ಕಳಿಗಾಗಿ ಅದನ್ನೇ ಶಾಲೆಯಾಗಿ ಉಪಯೋಗಿಸಿಕೊಂಡ. ಅಲ್ಲಿಗೆ ಹಳ್ಳಿಯ ಇತರ ಮಕ್ಕಳೂ ಬರಬಹುದಾಗಿತ್ತು. ಇದು ಕ್ಷುದಿರಾಮನ ಮನೆಗೆ ಅನತಿ ದೂರದಲ್ಲೇ ಇತ್ತು. ಇದರಲ್ಲಿ ಬೆಳಗ್ಗೆ–ಸಂಜೆ ಎರಡೂ ಹೊತ್ತು ತರಗತಿ ನಡೆಯುತ್ತಿತ್ತು. ಹುಡುಗರು ಬೆಳಗ್ಗೆ ಎರಡು ಮೂರು ಗಂಟೆಗಳವರೆಗೆ ತರಗತಿಗಳಲ್ಲಿ ಭಾಗವಹಿಸಿ ಮನೆಗೆ ತೆರಳಿದರೆ ಸ್ನಾನ ಊಟ ಮುಗಿಸಿಕೊಂಡು ಮತ್ತೆ ಬರುವುದು ಸಂಜೆ ಮೂರ್‍ನಾಲ್ಕು ಗಂಟೆಯ ಹೊತ್ತಿಗೆ. ಬಳಿಕ ಸೂರ್ಯಾಸ್ತಮಾನದವರೆಗೆ ತರಗತಿಗಳು. ಆದರೆ ಗದಾಧರ ನಂತಹ ಪುಟ್ಟ ಮಕ್ಕಳಿಗೆ ಬಹಳ ತರಗತಿಗಳೇನೂ ಇರುತ್ತಿರಲಿಲ್ಲ. ಆದರೂ ಅವರು ಶಾಲೆಯಲ್ಲೇ ಇರಬೇಕಾಗಿತ್ತು. ಪಾಠವಿಲ್ಲದ ಸಮಯದಲ್ಲಿ ಒಂದೋ ತಮ್ಮತಮ್ಮ ಸ್ಥಳಗಳಲ್ಲಿ ಕುಳಿತಿರಬೇಕಾಗಿತ್ತು, ಅಥವಾ ಆಟವಾಡಲು ಹೋಗಬಹುದಾಗಿತ್ತು. ದೊಡ್ಡ ಹುಡುಗರು ಚಿಕ್ಕವರಿಗೆ ಪಾಠ ಹೇಳಿ ಕೊಡುತ್ತಿದ್ದರು. ಹಾಗೂ ಹಿಂದಿನ ಪಾಠಗಳನ್ನು ಕಲಿತಿರುವರೇ ಇಲ್ಲವೆ ಎಂಬುದನ್ನು ನೋಡಿಕೊಳ್ಳುತ್ತಿದ್ದರು. ಹೀಗೆ, ಆ ಶಾಲೆಯಲ್ಲಿ ಒಬ್ಬನೇ ಅಧ್ಯಾಪಕನಿದ್ದರೂ ಪಾಠ–ಪ್ರವಚನ ಸಾಂಗವಾಗಿ ನಡೆಯುತ್ತಿತ್ತು.

ಶಾಲೆಗೆ ಹೋಗುವ ಮಕ್ಕಳು ಪಾಠವನ್ನೂ ಕಲಿಯುತ್ತಾರೆ; ಜೊತೆಗೆ ಸ್ವಲ್ಪ ತುಂಟತನವನ್ನೂ ಕಲಿತುಕೊಂಡು ಬರುತ್ತಾರೆ. ಅದರಲ್ಲೂ ಚುರುಕಿನ ಹುಡುಗರು ಸ್ವಲ್ಪ ಹೆಚ್ಚು ತುಂಟರಾಗುವುದುಂಟು. ಈ ನಿಯಮಕ್ಕೆ ಗದಾಧರನೇನೂ ಹೊರತಾಗಿರಲಿಲ್ಲ. ಅವನ ಹೊಸಹೊಸ ಚೇಷ್ಟೆಗಳನ್ನು ಕಂಡು ಕ್ಷುದಿರಾಮನಿಗೆ ಒಮ್ಮೊಮ್ಮೆ ತಬ್ಬಿಬ್ಬಾಗುತ್ತಿತ್ತಾದರೂ ಅವನ ವಿಷಯದಲ್ಲಿ ಕಠಿಣನಾಗುತ್ತಿರಲಿಲ್ಲ. ಏಕೆಂದರೆ ಅವನು ದೈವಾಂಶಸಂಭೂತನಲ್ಲವೆ! ಆಗೆಲ್ಲ ಕ್ಷುದಿರಾಮನಿಗೆ ತನ್ನ ದಿವ್ಯ ಸ್ವಪ್ನ ಹಾಗೂ ದರ್ಶನಗಳು ನೆನಪಿಗೆ ಬರುತ್ತಿದ್ದುವು. ಆದ್ದರಿಂದ ತುಂಟತನಕ್ಕಾಗಿ ಹೊಡೆದು ಬಡಿಯುವುದರ ಬದಲು ಒಳ್ಳೆಯ ಮಾತಿನಲ್ಲೇ ತಿದ್ದಲೆತ್ನಿಸಿದ. ಗದಾಧರನಲ್ಲಿ ಆಗಾಗ ಹೆಚ್ಚಿನ ಹಟಮಾರಿತನ ಕಂಡುಬರುತ್ತಿತ್ತು. ಆದರದು ಅವನಿಗೆ ದೊರೆತ ಅತಿ ಮುದ್ದಿನ ದುಷ್ಪರಿಣಾಮವೋ ಅಥವಾ ಹುಡುಗುತನದ ಸಹಜ ಸ್ವಭಾವವೋ ಎಂಬುದನ್ನು ಪ್ರತ್ಯೇಕಿಸಿ ತಿಳಿಯಲು ತಂದೆಗೆ ಸಾಧ್ಯವಾಗುತ್ತಿರಲಿಲ್ಲ.

ಬರಬರುತ್ತ ಗದಾಧರನಿಗೆ ಶಾಲೆಗೆ ಹೋಗುವ ವಿಷಯದಲ್ಲಿ ಅಷ್ಟೇನೂ ಉತ್ಸಾಹವಿರಲಿಲ್ಲವೆಂದು ಕಾಣುತ್ತದೆ. ಆದ್ದರಿಂದ ಅವನು ತನ್ನ ಕೆಲವು ಪುಟ್ಟ ಗೆಳೆಯರನ್ನು ಕಟ್ಟಿಕೊಂಡು ಆಟವಾಡಲು ಎದ್ದುಬಿಡುತ್ತಿದ್ದ. ಅಥವಾ, ಎಲ್ಲಿಯಾದರೂ ಹರಿಕಥೆ–ನಾಟಕ ನಡೆಯುತ್ತಿರುವುದು ತಿಳಿದುಬಂದರೆ ಅಲ್ಲಿಗೆ ಹೋಗಿ ಕುಳಿತುಬಿಡುತ್ತಿದ್ದ. ಇದು ಸ್ವಲ್ಪ ಹೆಚ್ಚಾಯಿತು, ಅಲ್ಲವೆ? ಇದಕ್ಕೆ, ಇತರ ತಂದೆತಾಯಂದಿರಾಗಿದ್ದರೆ ತಕ್ಕ ಶಾಸ್ತಿ ಮಾಡುತ್ತಿದ್ದರು. ಆದರೆ ಕ್ಷುದಿರಾಮ ಹಾಗೆ ಮಾಡಲಿಲ್ಲ. ಬಹುಶಃ ಇವುಗಳೇ ಮಗನ ಜೀವನವನ್ನು ರೂಪಿಸಲು ಬೇಕಾದವುಗಳೋ ಏನೋ ಎಂದು ಆಲೋಚಿಸಿದ. ಅವನು ಹೀಗೆ ಭಾವಿಸಲು ಕಾರಣವಿಲ್ಲ

ದಿರಲಿಲ್ಲ. ತನಗೆ ಸರಿಯೆಂದು ಕಂಡುದನ್ನು ಮಾಡಿಮುಗಿಸದಿದ್ದರೆ ಗದಾಧರನಿಗೆ ನಿದ್ರೆಯೇ ಬರುತ್ತಿರಲಿಲ್ಲ. ಅಲ್ಲದೆ ಅವನು ಯಾವುದನ್ನೂ ಮುಚ್ಚುಮರೆಮಾಡುವವನಲ್ಲ; ತಾಯ್ತಂದೆಯರ ಇಚ್ಛೆಗೆ ವಿರುದ್ಧವಾದುದನ್ನು ಮಾಡಿ, ಅವರ ಶಿಕ್ಷೆಯಿಂದ ತಪ್ಪಿಸಿಕೊಳ್ಳುವ ಸಲುವಾಗಿ ಸುಳ್ಳು ಹೇಳುವ ಅಭ್ಯಾಸವಂತೂ ಅವನ ಸ್ವಭಾವದಲ್ಲೇ ಇರಲಿಲ್ಲ. ಆದರೆ ಅವನು ಎಷ್ಟೋ ವೇಳೆ ತಾಯ್ತಂದೆಯರು ಮಾಡಬಾರದೆಂದು ಹೇಳಿದ್ದನ್ನೇ ಹಟಹಿಡಿದು ಮಾಡಿಬಿಡುತ್ತಿದ್ದ. ಇದರಿಂದ ಆಗಾಗ ಕ್ಷುದಿರಾಮನಿಗೆ ಚಿಂತೆಯಾಗುತ್ತಿತ್ತು. ಆದರೂ ಅವನು ಹುಡುಗನಿಗೆ ಬೆತ್ತ ಹಿಡಿದು ಬಾರಿಸಲು ಮುಂದಾಗುತ್ತಿರಲಿಲ್ಲ. ಏಕೆಂದರೆ ಗದಾಧರನು, ಮಾಡಬಾರದ್ದೆಂಬುದನ್ನು ಮಾಡಿದಾಗ ಕ್ಷುದಿರಾಮ ಅದನ್ನು ಹೀಗೆ ಅರ್ಥಮಾಡಿಕೊಂಡ: ಬಹುಶಃ, ಮಾಡಬಾರದ್ದಾಗಿದ್ದರೆ ಏಕೆ ಮಾಡಬಾರದು, ಮಾಡಬಹುದಾಗಿದ್ದರೆ ಏಕೆ ಮಾಡಬೇಕು ಎಂಬುದರ ವಿವರ ಬೇಕಾಗಿತ್ತು ಮಗನಿಗೆ; ಮತ್ತು ಪ್ರತಿಯೊಂದು ವಿಷಯದ 'ಏಕೆ' 'ಏನು' 'ಹೇಗೆ'ಗಳನ್ನು ತಿಳಿಯುವ ಸಹಜ ಕುತೂಹಲ ಎಂದು. ಗದಾಧರನ ಈ ಬಗೆಯ ವರ್ತನೆಯನ್ನು ಇತರ ತಾಯ್ತಂದೆಯರಾದರೆ ಸಹಿಸಲಾರರು, ಅಥವಾ ಅವನು ಕೇಳುವ ಪ್ರಶ್ನೆಗಳಿಗೆಲ್ಲ ಉತ್ತರಕೊಡುತ್ತ ಕುಳಿತುಕೊಳ್ಳುವ ತಾಳ್ಮೆ ವಹಿಸಲಾರರು ಎಂಬುದು ಕ್ಷುದಿರಾಮನಿಗೆ ಗೊತ್ತಿತ್ತು. ಮತ್ತು, ತಾನು ಗದಾಧರನಿಗೆ ಇದೇ ರೀತಿ ರಿಯಾಯಿತಿ ತೋರಿಸುತ್ತ ಹೋದರೆ ಅವನು ಒಳ್ಳೆಯ ನಡವಳಿಕೆಗಳನ್ನು ಬಿಟ್ಟು ಹಾದಿತಪ್ಪುವ ಸಂಭವವೂ ಇರಬಹುದು ಎಂಬುದೂ ತಿಳಿದಿತ್ತು. ಅಂತೂ ಗದಾಧರನನ್ನು ಬಹು ಎಚ್ಚರದಿಂದ, ಅವನ ಮನಸ್ಸು ಮುರಿಯದಂತೆ ತಿದ್ದುವುದು ಕ್ಷುದಿರಾಮನ ಮಹತ್ತರ ಹೊಣೆಗಾರಿಕೆಯಾಗಿತ್ತು.

ಒಮ್ಮೆ ಒಂದು ಘಟನೆ ನಡೆಯಿತು. ಘಟನೆ ಸಣ್ಣದಾದರೂ ಅರ್ಥ ದೊಡ್ಡದೇ. ಕ್ಷುದಿರಾಮನ ಮನೆಯ ಸಮೀಪದಲ್ಲೇ ಒಂದು ದೊಡ್ಡ ಕೆರೆ. ಅದರ ಹೆಸರು ಹಾಲ್ದಾರಪುಕುರ. ಆ ಹಳ್ಳಿಗರ ಸ್ನಾನಕ್ಕೆ ಪಾನಕ್ಕೆ ಅಡಿಗೆಗೆ ಎಲ್ಲಕ್ಕೂ ಆ ಕೆರೆಯ ನೀರೇ. ಆ ಕೆರೆಗೆ ಎರಡು ಸ್ನಾನಘಟ್ಟಗಳು; ಒಂದು ಪುರುಷರಿಗೆ, ಇನ್ನೊಂದು ಮಹಿಳೆಯರಿಗೆ. ಆದರೆ ಮಕ್ಕಳಿಗೆ ಈ ಭೇದವೆಲ್ಲ ಅಷ್ಟಾಗಿ ತಿಳಿಯುವುದಿಲ್ಲ. ಗದಾಧರನಂತಹ ಪುಟ್ಟ ಹುಡುಗರು ಕೆಲವೊಮ್ಮೆ ಸ್ತ್ರೀಯರ ಸ್ನಾನಘಟ್ಟಕ್ಕೂ ಬರುವುದಿತ್ತು. ಒಂದು ದಿನ ಗದಾಧರ ತನ್ನ ಸ್ನೇಹಿತರನ್ನೆಲ್ಲ ಕೂಡಿಕೊಂಡು ಸ್ತ್ರೀಯರ ಸ್ನಾನಘಟ್ಟಕ್ಕೆ ಬಂದ, ನೀರಿಗೆ ಹಾರಿದ, ಈಜಾಡಿದ. ಅಲ್ಲದೆ, ಹುಡುಗರೆಲ್ಲ ಅವರ ಮುಖಕ್ಕೆ ಇವರು ಇವರ ಮುಖಕ್ಕೆ ಅವರು ನೀರನ್ನು ಎರಚಾಡಿಕೊಂಡು ದಾಂಧಲೆ ಎಬ್ಬಿಸಿದರು. ಕಡೆಗೆ ಅವರ ಕಾಟ ಎಷ್ಟು ಹೆಚ್ಚಾಯಿತೆಂದರೆ ಅಲ್ಲಿ ನೀರಿಗಿಳಿದಿದ್ದ ಮಹಿಳೆಯರಿಗೆ ಸ್ನಾನ ಮಾಡುವುದೇ ಕಷ್ಟವಾಯಿತು. ವಯಸ್ಸಾದ ಹೆಂಗಸರು ಸ್ನಾನ ಮುಗಿಸಿ ದಡದಲ್ಲಿ ಕುಳಿತು ಅವರವರ ಪೂಜೆ, ವ್ರತಾದಿಗಳಲ್ಲಿ ನಿರತರಾಗಿದ್ದರೆ, ಈ ಹುಡುಗರ ಜಲಕ್ರೀಡೆಯ ಸಂದರ್ಭದಲ್ಲಿ ನೀರು ಅವರ ಮೇಲೂ ಹಾರಿತು. ಕೋಪಗೊಂಡ ಮುದುಕಿಯೊಬ್ಬಳು ಆರ್ಭಟಿಸಿದಳು:

"ಏನ್ರೋ ಇದು, ಈ ಘಟ್ಟಕ್ಕೆ ಯಾಕೆ ಬಂದಿರಿ ನೀವು ? ಹೋಗಿ ಆ ಕಡೆ.

ಗಂಡಸರ ಸ್ನಾನಘಟ್ಟಕ್ಕೆ ಹೋಗಿ. ಇದು ಹೆಂಗಸರ ಸ್ನಾನಘಟ್ಟ. ಹೆಂಗಸರು ಸ್ನಾನ ಮಾಡುವಾಗ ನೋಡಬಾರದು ಅಂತ ಗೊತ್ತಿಲ್ಲವೆ ನಿಮಗೆ?"

ಗದಾಧರ ಕೇಳಿದ: "ಯಾಕೆ ನೋಡಬಾರದಜ್ಜಿ?"

ಇದಕ್ಕೆ ಆ ಹೆಂಗಸು ಉತ್ತರ ಕೊಡುವುದು ಬಿಟ್ಟು ಹುಡುಗರನ್ನು ಇನ್ನೂ ಚೆನ್ನಾಗಿ ಬಯ್ಯಲು ಪ್ರಾರಂಭಿಸಿದಳು. ಈಗ ಹುಡುಗರೆಲ್ಲ ಭಾವಿಸಿದರು, 'ಓ! ಹೆಂಗಸರಿಗೆ ಕೋಪ ಬಂದಿದೆ! ಇವರೆಲ್ಲ ಸೇರಿ ನಮ್ಮ ತಾಯ್ತಂದೆಯರಿಗೆ ದೂರು ಹೇಳಿದರೆ ತಾಪತ್ರಯ' ಎಂದು. ಈ ಭಾವನೆ ಬರುತ್ತಲೇ ಅವರೆಲ್ಲ ಪರಾರಿ. ಹುಡುಗ ಗದಾಧರ ಮಾತ್ರ ಯೋಚಿಸಲಾರಂಭಿಸಿದ — ಹೆಂಗಸರು ಸ್ನಾನ ಮಾಡುವುದನ್ನು ನೋಡಿದರೆ ಏನಾಗುತ್ತದೆ? ಪರೀಕ್ಷಿಸಿ ನೋಡಿಯೇಬಿಡಬೇಕು ಎನಿಸಿತು ಅವನಿಗೆ.

ಅವನೊಂದು ಉಪಾಯ ಮಾಡಿದ. ಪ್ರತಿದಿನ ಕೆರೆಯ ಸಮೀಪದ ಮರದ ಹಿಂದೆ ಅವಿತುಕೊಂಡು ಸ್ತ್ರೀಯರು ಸ್ನಾನ ಮಾಡುವುದನ್ನೇ ಇಣಕಿ ನೋಡುತ್ತ ಕುಳಿತ. ಎರಡು ಮೂರು ದಿನಗಳ ಬಳಿಕ ತನಗೆ ಬೈದ ಮುದಿ ಹೆಂಗಸು ದಾರಿಯಲ್ಲಿ ಸಿಕ್ಕಾಗ ಅವಳಿಗೆ ಹೇಳಿದ:

"ಏನಜ್ಜೀ, ಮೊನ್ನೆ ನಾನು ನಾಲ್ಕು ಜನ ಹೆಂಗಸರು ಸ್ನಾನ ಮಾಡುತ್ತಿದ್ದುದನ್ನು ಕಂಡೆ, ನಿನ್ನೆ ಆರು ಜನ ಸ್ನಾನ ಮಾಡುತ್ತಿರುವುದನ್ನು ಕಂಡೆ, ಇಂದು ಎಂಟು ಜನ ಸ್ನಾನ ಮಾಡುವುದನ್ನು ಕಂಡೆ. ಆದರೆ ಅದರಿಂದ ನನಗೇನೂ ಆಗಲೇ ಇಲ್ಲವಲ್ಲ!"

ಆಗ ಆಕೆ ಚಂದ್ರಮಣಿಯ ಬಳಿಗೆ ಬಂದು ನಗುತ್ತ ಹೇಳಿದಳು:

"ನೋಡೇ ಚಂದ್ರಾ, ನಿನ್ನ ಮಗ ಏನು ಹೇಳುತ್ತಾನೆ ಕೇಳಿದೆಯಾ? ಹೆಂಗಸರು ಸ್ನಾನ ಮಾಡುವುದನ್ನು ನೋಡಿದನಂತೆ; ಆದರೂ ಅವನಿಗೇನೂ ಆಗಲೇ ಇಲ್ಲವಂತೆ!"

ಚಂದ್ರಮಣಿಗೆ ಬಹಳ ಕಸಿವಿಸಿಯಾಯಿತು. ಅವಳು ಆ ಕೂಡಲೇ ಮಗನನ್ನು ಕರೆದು ತರಾಟೆಗೆ ತೆಗೆದುಕೊಳ್ಳದಿದ್ದರೂ ಅನುಕೂಲಕರ ಸಮಯ ನೋಡಿಕೊಂಡು ಹೇಳಿದಳು:

"ಗದಾಯ್, ನಿಜ, ಹೆಂಗಸರು ಸ್ನಾನ ಮಾಡುತ್ತಿರುವಾಗ ನೀನು ನೋಡುತ್ತಿದ್ದರೆ ಅದರಿಂದ ನಿನಗೇನೂ ಆಗದಿರಬಹುದು. ಆದರೆ ಅವರಿಗೆ ನಾಚಿಕೆಯಾಗುತ್ತದೆ, ಅವಮಾನವಾದಂತಾಗುತ್ತದೆ. ಅವರೆಲ್ಲ ನನ್ನ ಹಾಗೇ ಅಲ್ಲವೇನಪ್ಪ? ಆದ್ದರಿಂದ, ನೀನು ಅವರಿಗೆ ಅವಮಾನ ಮಾಡಿದರೆ ನನಗೇ ಅವಮಾನ ಮಾಡಿದಂತೆ. ಇನ್ನು ಮುಂದಾದರೂ ಅವರ ಮಾನ ಹೋಗುವ ಕೆಲಸವನ್ನು ಎಂದಿಗೂ ಮಾಡಬೇಡ, ಗೊತ್ತಾಯಿತೆ? ನೀನು ನನ್ನ ಮನಸ್ಸಿಗೆ ನೋವು ಮಾಡುತ್ತೀಯೇನಪ್ಪಾ? ಇಲ್ಲ ತಾನೆ? ಹಾಗಾದರೆ ಅವರ ಮನಸ್ಸಿಗೂ ನೋವು ಮಾಡಬೇಡ."

ತಾಯಿ ಇಷ್ಟು ವಿವರವಾಗಿ ತಿಳಿಯಹೇಳಿದ್ದು ಗದಾಧರನ ಮನಸ್ಸಿಗೆ ಒಪ್ಪಿಗೆಯಾಯಿತು. ಅಂದಿನಿಂದ ಅವನು ಹಾಗೆಂದಿಗೂ ಮಾಡಹೋಗಲಿಲ್ಲ.

ಗದಾಧರ ಆಗಾಗ ಶಾಲೆಗೆ ತಪ್ಪಿಸಿಕೊಂಡು ಸ್ನೇಹಿತರನ್ನು ಕಟ್ಟಿಕೊಂಡು ಆಟವಾಡಲು, ಹರಿಕಥೆ ಕೇಳಲು ಹೊರಟರೂ ಅವನು ಪಾಠಗಳಲ್ಲೇನೂ ಹಿಂದೆ ಬಿದ್ದವನಲ್ಲ. ಒಮ್ಮೆ ಕೇಳಿದರೆ ನೆನಪಿಟ್ಟುಕೊಳ್ಳಬಲ್ಲ ಅವನಿಗೆ ಶಾಲೆಯ ಪಾಠಗಳೆಲ್ಲ ಯಾವ ಲೆಕ್ಕ? ಆದರೆ ಲೆಕ್ಕದ ಪಾಠವೊಂದು ಅವನಿಗೆ ಸುತರಾಂ ಆಗುತ್ತಿರಲಿಲ್ಲ. ಗದಾಧರ ಅನುಕರಣೆ ಮಾಡುವುದರಲ್ಲಿ ಬಹಳ ಗಟ್ಟಿಗ. ಜನರ ವಿಚಿತ್ರ ಹಾವ ಭಾವಗಳನ್ನೂ ಮಾತಿನ ರೀತಿಯನ್ನೂ ಯಥಾವತ್ತಾಗಿ ಅನುಕರಿಸಿ ತೋರಿಸುತ್ತಿದ್ದ. ಹಾಗೆಯೇ ತನ್ನ ಸ್ವಂತ ಪ್ರತಿಭೆಯನ್ನು ಪ್ರಕಟಿಸುತ್ತಿದ್ದ. ಆವೆ ಮಣ್ಣಿನಿಂದ ದೇವದೇವಿಯರ ವಿಗ್ರಹಗಳನ್ನು ತಯಾರಿಸುವವರ ಬಳಿಗೆ ಆಗಾಗ ಹೋಗುತ್ತ ಅವರು ಮಾಡುವುದನ್ನೆಲ್ಲ ನೋಡಿನೋಡಿಯೇ ಕಲಿತುಕೊಂಡ. ಮತ್ತು ಮನೆಗೆ ಹಿಂದಿರುಗಿ ಆವೆ ಮಣ್ಣನ್ನು ತಂದು ತಾನೂ ಅಂಥವುಗಳನ್ನು ತಯಾರಿಸಲು ಪ್ರಾರಂಭಿಸಿದ. ಇದು ಅವನ ಹವ್ಯಾಸವೇ ಆಗಿಹೋಯಿತು. ಹೀಗೆಯೇ ಚಿತ್ರ ಬರೆಯುವವರ ಬಳಿಯಲ್ಲಿ ಓಡಾಡಿಕೊಂಡಿದ್ದು ತಾನೂ ಬಣ್ಣಬಣ್ಣದ ಚಿತ್ರ ಬರೆಯಲು ಕಲಿತ.

ಊರಿನಲ್ಲಿ ಎಲ್ಲಿಯಾದರೂ ಪುರಾಣವಾಚನದ ಕಾರ್ಯಕ್ರಮವಿದೆ ಎಂದು ತಿಳಿದುಬಂದರೆ ಸಾಕು, ಗದಾಧರ ಅಲ್ಲಿಗೆ ಹೋಗಿ, ಶಾಂತವಾಗಿ ಕುಳಿತು, ಏಕಾಗ್ರತೆಯಿಂದ ಆಲಿಸಿ ಹೆಚ್ಚಿನ ಕಥೆಗಳನ್ನು ಕಲಿತುಕೊಳ್ಳುತ್ತಿದ್ದ. ಹಾಗೆಯೇ ಅವನು ಆ ಪುರಾಣ ಹೇಳುವ ಭಟ್ಟರು ತಮ್ಮ ಮನರಂಜಕ ಮಾತಿನ ಶೈಲಿಯಿಂದ ಹಾಗೂ ಸಂದರ್ಭೋಚಿತ ಹಾವಭಾವಗಳಿಂದ ಸಭಿಕರ ಮೇಲೆ ಪ್ರಭಾವ ಬೀರುವ ವಿಧಾನವನ್ನು ಗಮನವಿಟ್ಟು ನೋಡಿ ತಾನೂ ಕಲಿತುಕೊಂಡ. ಇಂತಹ ವಿವರಗಳ ನ್ನೆಲ್ಲ ಒಮ್ಮೆ ನೋಡಿ ಕೇಳಿದ ಮಾತ್ರಕ್ಕೆ ನೆನಪಿಟ್ಟುಕೊಳ್ಳಬೇಕಾದರೆ ಎಂಥ ಗ್ರಹಣ ಶಕ್ತಿಯಿರಬೇಕಾಗುತ್ತದೆ! ಅದು ಗದಾಧರನಲ್ಲಿ ದೈವದತ್ತವಾಗಿ ಬಂದಿತ್ತು. ಹೀಗೆ ತನ್ನ ಅಸಾಧಾರಣ ಅನುಕರಣ ಶಕ್ತಿ ಹಾಗೂ ತನ್ನಲ್ಲಿ ಅಂತರ್ಗತವಾಗಿದ್ದ ಹಾಸ್ಯಪ್ರವೃತ್ತಿ ಇವುಗಳಿಂದ ಅವನು ತಾನೂ ನಕ್ಕು ಇತರರನ್ನೂ ನಗಿಸಿ ಉಲ್ಲಾಸ ಗೊಳಿಸುತ್ತಿದ್ದ. ಜೊತೆಗೆ ತನ್ನ ತಂದೆತಾಯಂದಿರ ಪ್ರಾಮಾಣಿಕ ದೈವಭಕ್ತಿಯಿಂದೊಡ ಗೂಡಿದ ದೇವತಾರ್ಚನೆ, ಪೂಜೆ ವ್ರತನಿಯಮಾದಿಗಳನ್ನು ನೋಡುತ್ತ ಗದಾಧರನ ದೈವಭಕ್ತಿ ಬೆಳೆಯತೊಡಗಿತು. ಮತ್ತು ತಾಯ್ತಂದೆಯರ ಸರಳತೆ ಸತ್ಯಸಂಧತೆಗಳೂ ಅವನಲ್ಲಿ ಮೂಡಿಬರತೊಡಗಿದುವು.

ಗದಾಧರನಿನ್ನೂ ಚಿಕ್ಕವನಾದರೂ ಎಳೆಯರಿಗೆ ಸಹಜವಾದ ಭಯ ಮಾತ್ರ ಅವನಲ್ಲಿ ಕಿಂಚಿತ್ತೂ ಇರಲಿಲ್ಲ. ಸ್ಮಶಾನವೆಂದರೆ ಯಾರಿಗೆ ಭಯವಿಲ್ಲ? ದೊಡ್ಡ ವರೂ ಹೆದರಿಕೊಳ್ಳುವ ಜಾಗ ಅದು. ಸ್ಮಶಾನವೆಂಬುದು ಭೂತ ಪ್ರೇತ ಪಿಶಾಚಿಗಳ ತಾಣ ಎಂಬುದು ಜನಜನಿತ ನಂಬಿಕೆ. ಇಂತಹ ಸ್ಥಳಗಳಲ್ಲೂ ಏಕಾಕಿಯಾಗಿ ಹೋಗಿ ಬರಬಲ್ಲಷ್ಟು ಧೈರ್ಯಶಾಲಿ ಗದಾಧರ.

ಕ್ಷುದಿರಾಮನ ತಂಗಿ ರಾಮಶೀಲಾಳ ಮೇಲೆ ಆಗಾಗ ಶೀತಲಾದೇವಿ ಬರುತ್ತಿದ್ದಳು. ಆಗ ರಾಮಶೀಲಾ ಸಂಪೂರ್ಣ ಬೇರೆಯೇ ವ್ಯಕ್ತಿಯಾಗಿಬಿಡುತ್ತಿದ್ದಳು.

ಒಮ್ಮೆ ಅವಳು ಕಾಮಾರಪುಕುರಕ್ಕೆ ಬಂದಿದ್ದಾಗ ಅವಳ ಮೇಲೆ ಶೀತಲಾದೇವಿಯ ಆವೇಶವಾಯಿತು. ತಕ್ಷಣ ಅವಳಲ್ಲಿ ಅದ್ಭುತ ಪರಿವರ್ತನೆ! ಅವಳೀಗ ರಾಮಶೀಲಾ ಅಲ್ಲವೇ ಅಲ್ಲ! ಆಗ ಮನೆಮಂದಿಯೆಲ್ಲ ಭಯಭಕ್ತಿಯಿಂದ ದೂರದಲ್ಲಿ ದೇವಿ ಯೆದುರು ಕೈಮುಗಿದು ಕುಳಿತಿದ್ದರೆ, ಗದಾಧರ ಮಾತ್ರ ನಿರ್ಭೀತನಾಗಿ ಅವಳ ಸಮೀಪದಲ್ಲೇ ಕುಳಿತು ಅಲ್ಲಾಗುತ್ತಿದ್ದ ಎಲ್ಲ ಬದಲಾವಣೆಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸತೊಡಗಿದ. ಬಳಿಕ ಅವನು ಉದ್ಗರಿಸಿದ: "ಶೀತಲಾದೇವಿ ನಮ್ಮ ಸೋದರತ್ತೆಯ ಮೇಲೆ ಬರುವುದರ ಬದಲು ನನ್ನ ಮೇಲೇ ಬಂದಿದ್ದರೆ ಎಷ್ಟು ಚೆನ್ನಾಗಿತ್ತು!"

ಕಾಮಾರಪುಕುರದ ಪಕ್ಕದಲ್ಲಿರುವ ಭುರ್ಸುಬೋ ಗ್ರಾಮದ ಜಮೀನುದಾರ ಮಾಣಿಕರಾಜ ಬಹಳ ದೊಡ್ಡ ಭಕ್ತ, ಅತ್ಯಂತ ಉದಾರಿ. ಪಾವನಚರಿತನಾದ ಕ್ಷುದಿರಾಮನ ಸಜ್ಜನಿಕೆ ಮಾಣಿಕರಾಜನ ಮನ ಸೂರೆಗೊಂಡಿತ್ತು; ಆದ್ದರಿಂದ ಅವನು ಕ್ಷುದಿರಾಮನ ಪರಮ ಆಪ್ತ ಸ್ನೇಹಿತನಾದ. ಕ್ಷುದಿರಾಮ ಆಗಾಗ ಮಾಣಿಕರಾಜನ ಮನೆಗೆ ಹೋಗಿ ಬರುವುದಿತ್ತು. ಹೀಗೇ ಒಮ್ಮೆ ಅವನು ಅಲ್ಲಿಗೆ ಹೋದಾಗ ಗದಾಧರನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗಿದ್ದ. ಗದಾಧರ ಅಲ್ಲಿಗೆ ಹೋಗಿದ್ದುದು ಅದೇ ಮೊದಲ ಸಲ. ಆದರೂ ಅವನು ಮನೆಮಂದಿ ಯೊಂದಿಗೆ ಬೆರೆತ ಬಗೆಯನ್ನು ನೋಡಿದರೆ ಅವರೆಲ್ಲ ಅವನಿಗೆ ಹಲವು ವರ್ಷಗಳ ಪರಿಚಿತರೋ ಎಂಬಂತೆ ಕಾಣುತ್ತಿತ್ತು. ಅವರಿಗೆಲ್ಲ ಬಾಲಕ ಗದಾಧರನ ಒಡನಾಟ ಅದೆಷ್ಟು ಸಹಜ ಹಾಗೂ ಮಧುರವಾಗಿ ಕಂಡಿತೆಂದರೆ ಅಂದಿನಿಂದಲೇ ಅವನು ಅವರೆಲ್ಲರ ಅಚ್ಚುಮೆಚ್ಚಿನವನಾಗಿಬಿಟ್ಟ. ಮಾಣಿಕರಾಜನ ಸೋದರ ರಾಮಜಯ ನಂತೂ ಗದಾಧರನನ್ನು ಕಂಡು ಅದೆಷ್ಟು ಮಾರುಹೋದನೆಂದರೆ, ಅವನು ಕ್ಷುದಿರಾಮನಿಗೆ ಹೇಳಿದ:

"ಗೆಳೆಯ, ನಿನ್ನ ಈ ಮಗ ಮಾತ್ರ ಖಂಡಿತ ಸಾಮಾನ್ಯನಲ್ಲ. ಅತ್ಯಂತ ಉನ್ನತ ಮಟ್ಟದ ದೈವೀಗುಣಗಳೆಲ್ಲ ಇವನಲ್ಲಿ ಇವೆ ಎಂದು ನನಗಾಗಿ ಸ್ಪಷ್ಟವಾಗಿ ಅನ್ನಿಸುತ್ತದೆ. ನೀನು ಇತ್ತಕಡೆ ಬರುವಾಗಲೆಲ್ಲ ಇವನನ್ನು ಕರೆತರಲೇಬೇಕು. ಇವನನ್ನು ನೋಡುವುದಕ್ಕೇ ನನಗೆ ಅಷ್ಟು ಆನಂದವಾಗುತ್ತದೆ!"

ರಾಮಜಯ ಹೀಗೆ ಹೇಳಿ ಬಹಳ ದಿನಗಳೇ ಆದುವು. ಕ್ಷುದಿರಾಮನಿಗೆ ಅತ್ತಕಡೆ ಹೋಗುವ ಅವಕಾಶವೇ ಆಗಿರಲಿಲ್ಲ. ಮಾಣಿಕರಾಜ ಹಾಗೂ ಅವನ ಮನೆಮಂದಿಯ ಹೃನ್ಮನಗಳಿಗೆ ಗದಾಧರನನ್ನು ಕಾಣುವ ಹಸಿವು. ಆದ್ದರಿಂದ ಅವನೊಮ್ಮೆ ತನ್ನ ಮನೆಯ ಮಹಿಳೆಯರಲ್ಲಿ ಒಬ್ಬಳನ್ನು ಕಾಮಾರಪುಕುರಕ್ಕೆ ಕಳುಹಿಸಿ ಒಂದು ದಿನದ ಮಟ್ಟಿಗಾದರೂ ಗದಾಧರನನ್ನು ಕಳಿಸಿಕೊಡುವಂತೆ ಕೇಳಿಕೊಂಡ. ಕ್ಷುದಿರಾಮ ಮಗನನ್ನು ಕರೆದು ಕೇಳಿದ:

"ಏನಪ್ಪಾ, ಮಾಣಿಕರಾಜ ನಿನ್ನನ್ನು ಮನೆಗೆ ಕರೆದಿದ್ದಾನೆ. ಹೋಗುತ್ತೀಯೇ ನಪ್ಪಾ?"

ಗದಾಧರ ಸಂತೋಷದಿಂದ ಒಪ್ಪಿಕೊಂಡ; ಆ ಮಹಿಳೆಯೊಂದಿಗೆ ಹೊರಟೇ

ಬಿಟ್ಟ. ಸಜ್ಜನರ ಮನಕ್ಕೆ ಸಂತೋಷವನ್ನು ನೀಡಲೆಂದೇ ಧರೆಗಿಳಿದ ಸದಾನಂದ ಮೂರ್ತಿಯಲ್ಲವೆ ಅವನು? ಅಲ್ಲಿ ಅವನು ತನ್ನ ಸುಮಧುರ, ನಿಷ್ಕಳಂಕ ನಡೆನುಡಿಗಳಿಂದ ಮನೆಮಂದಿಯ ಹೃದಯವನ್ನು ಸೂರೆಗೊಂಡ. ಮಾಣಿಕರಾಜನ ಮನೆಯಲ್ಲಿ ಅಂದೆಲ್ಲ ದಿವ್ಯೋತ್ಸವ! ಸಂಜೆಯ ವೇಳೆಗೆ ಗದಾಧರ ಕಾಮಾರಪುಕುರಕ್ಕೆ ಮರಳಿದ. ಬರುವಾಗ ಬಗೆಬಗೆಯ ಸಿಹಿತಿಂಡಿಗಳು, ಬಗೆಬಗೆಯ ಆಭರಣಗಳು! ಸಂತಸಗೊಂಡ ಮಾಣಿಕರಾಜ 'ಮಗುಗಳ ಮಾಣಿಕ್ಯ'ವನ್ನು ಸತ್ಕರಿಸಿದ ಬಗೆ ಅದು! ಹೀಗೆ ಅವನು ಮಾಣಿಕರಾಜನ ಮನೆಯವರ ಮೆಚ್ಚಿನವನಾಗಿಬಿಟ್ಟ. ಕ್ಷುದಿರಾಮ ಬಹಳ ದಿನಗಳವರೆಗೆ ಬಾರದಿದ್ದರೆ ಮಾಣಿಕರಾಜ ಯಾರನ್ನಾದರೂ ಕಳುಹಿಸಿ ಗದಾಧರನನ್ನು ಬರಮಾಡಿಕೊಳ್ಳುತ್ತಿದ್ದ.

## ಪ್ರಥಮ ದಿವ್ಯಾನುಭವ

ಗದಾಧರನಿಗೀಗ ಏಳು ವರ್ಷ. ಅವನು ಬೆಳೆದಂತೆಲ್ಲ ಅವನ ಸದ್ಗುಣಗಳು, ಅನುಕರಣಶಕ್ತಿ, ಹಾಸ್ಯಪ್ರವೃತ್ತಿ—ಇವೂ ಬೆಳೆದುವು. ಇವುಗಳಿಂದಾಗಿ ಅವನು ಎಲ್ಲರಿಗೂ ಹೆಚ್ಚುಹೆಚ್ಚಾಗಿ ಪ್ರಿಯನಾದ. ಹಳ್ಳಿಯ ಹೆಂಗಸರು ಮನೆಗಳಲ್ಲಿ ಸಿಹಿತಿಂಡಿಗಳನ್ನೇನಾದರೂ ತಯಾರಿಸಿದರೆ ಅವರಿಗೆ ಮೊಟ್ಟಮೊದಲು ನೆನಪಿಗೆ ಬರುವುದು ಗದಾಧರ ! ತಿಂಡಿಯ ಅಗ್ರಭಾಗವನ್ನು ಅವನಿಗೆ ಮುಟ್ಟಿಸದಿದ್ದರೆ ಅವರ ಮನಸ್ಸಿಗೆ ಸಮಾಧಾನವಿಲ್ಲ. ಅವನ ಸಂಗಾತಿಗಳಿಗಂತೂ ಅವನು ಪಂಚಪ್ರಾಣ. ಆ ಬಾಲಕರಿಗೆ, ತಾವು ತಂದ ತಿಂಡಿಯನ್ನು ಅವನೊಡನೆ ಹಂಚಿಕೊಳ್ಳದಿದ್ದರೆ ಆ ತಿಂಡಿಗೆ ಸವಿಯೇ ಇರುತ್ತಿರಲಿಲ್ಲ. ಅವನ ಮನಮೋಹಕ ಚಲನವಲನದಿಂದ, ಅವನ ಚೇತೋಹಾರಿಯಾದ ಮಾತುಗಳಿಂದ, ಅವನ ಮಧುರ ಗಾಯನದಿಂದ ಜನ ಎಷ್ಟು ಮುಗ್ಧರಾಗಿದ್ದರೆಂದರೆ ಅವನು ಎಷ್ಟೇ ತುಂಟಾಟವಾಡಿದರೂ ಬೇಸರಿಸುತ್ತಿರಲಿಲ್ಲ.

ಗದಾಧರನ ಈ ಏಳನೇ ವಯಸ್ಸಿನಲ್ಲಿ ಒಂದು ಅದ್ಭುತ ಘಟನೆ ನಡೆಯಿತು. ಇದು ಅವನ ತಾಯ್ತಂದೆಯರ ಹಾಗೂ ಸ್ನೇಹಿತರ ಕಳವಳ ಕಾತರಗಳಿಗೆ ಕಾರಣ ವಾದ ಘಟನೆ.

ಭಗವಂತನ ಕೃಪೆಯಿಂದ ಗದಾಧರನ ದೇಹ ಜನ್ಮದಾರಭ್ಯ ದೃಢಿಷ್ಠವೂ ಬಲಿಷ್ಠವೂ ಆಗಿತ್ತು. ಇದು ಅವನನ್ನು ಕಂಡವರೆಲ್ಲರಿಗೂ ಸುಸ್ಪಷ್ಟ. ಅವನು ಇಂದಿನವರೆಗೂ ಯಾವ ಕಾಯಿಲೆಗೂ ಗುರಿಯಾದವನಲ್ಲ. ಪರಿಣಾಮವಾಗಿ, ಉಲ್ಲಾಸದಿಂದ ಹಕ್ಕಿಯಂತೆ ಹಾರಾಡಿಕೊಂಡಿದ್ದ. ಯಾರಿಗೆ ತಮ್ಮ ಶರೀರದ ನೆನಪೇ ಆಗುವುದಿಲ್ಲವೋ ಅವರ ಶರೀರವೇ ನಿಜವಾಗಿ ಆರೋಗ್ಯಶಾಲಿಯಾದುದು. ಇದು ಸಕಲ ವೈದ್ಯರ ಏಕಾಭಿಪ್ರಾಯ. ಗದಾಧರನ ಶರೀರವೂ ಈ ಬಗೆಯದಾಗಿತ್ತು.

ಗದಾಧರನ ಸ್ವಭಾವದ ಇನ್ನೊಂದು ಅಂಶವೆಂದರೆ ಅವನ ಏಕಾಗ್ರಬುದ್ಧಿ. ಪರಮ ಪರಿಶುದ್ಧವಾದ ಅವನ ಮನಸ್ಸಿಗೆ ಏಕಾಗ್ರತೆ ಸಹಜವಾಗಿಯೇ ಸಿದ್ಧಿಸಿತ್ತು. ತನಗೆ ಮೆಚ್ಚುಗೆಯಾದ ಯಾವುದೇ ವಸ್ತುವಿನ ಮೇಲೆ ಅವನು ಮನಸ್ಸನ್ನಿಡಲಿ, ಅದು ಅಲ್ಲೇ ಏಕಾಗ್ರಗೊಳ್ಳುತ್ತಿತ್ತು. ಆ ಕಾಮಾರಪುಕುರದ ವಿಶಾಲ ಹೊಲಗಳಲ್ಲಿ ಶೋಭಿಸುವ ಹಚ್ಚಹಸಿರು ಪೈರು, ಅದರ ಮೇಲೆ ಮಂದಮಂದವಾಗಿ ಬೀಸುವ ತಣ್ಣನೆಯ ಗಾಳಿ, ಸುತ್ತಮುತ್ತ ಮರಗಳಲ್ಲಿ ನಾನಾ ಸ್ವರವಿನ್ಯಾಸಗಳಿಂದ ಚಿಲಿಪಿಲಿಗೈಯುವ ಬಗೆಬಗೆಯ ಪಕ್ಷಿಗಳ ಮಧುರ ಇಂಚರ, ಇವೆಲ್ಲಕ್ಕೂ ಕಳೆಗಟ್ಟುವಂತೆ

ಗಹನ ನೀಲಾಕಾಶದ ಇದಿರಿಗೆ ಕ್ಷಣಕ್ಕೊಂದು ರೂಪುದಾಳುವ ಮೇಘಗಳ ಸಂಚಾರ — ಇವುಗಳೆಲ್ಲ ಭಾವುಕನಾದ ಗದಾಧರನ ಅಂತರ್ದೃಷ್ಟಿಗೆ ಏನೋ ಒಂದು ದೈವಿಕ ರಹಸ್ಯವನ್ನು, ಭಗವದ್ವೈಭವವನ್ನು ಸ್ಫುರಿಸುತ್ತಿತ್ತು. ಪ್ರತ್ಯಕ್ಷವಾದ ನಿಸರ್ಗ ಸೌಂದರ್ಯದಲ್ಲಿ, ನಿಸರ್ಗಕ್ಕೆ ಅತೀತವಾದ ಯಾವುದೋ ಭವ್ಯತೆಯನ್ನು ಕಂಡು ಭಾವಿಸುವ ಹೃದಯ ಗದಾಧರನದು. ಅಂಥದನ್ನು ಕಂಡಾಗ ಅವನು ಮೈಮರೆಯುತ್ತಿದ್ದ. ಆಗ ಅವನ ಮನಸ್ಸು ಯಾರೂ ಕಂಡು ಕೇಳರಿಯದ, ಇಂದ್ರಿಯ ರಾಜ್ಯಕ್ಕೆ ಅತೀತವಾದ ದಿವ್ಯ ಏಕಾಂತದಲ್ಲಿ ಆನಂದದಿಂದ ವಿಹರಿಸುತ್ತಿತ್ತು.

ಗದಾಧರನ ಈ ಅಪೂರ್ವ ಸ್ವಭಾವ ಬಹುದಿನಗಳವರೆಗೆ ಯಾರ ಲಕ್ಷ್ಯಕ್ಕೂ ಬಂದಿರಲಿಲ್ಲ. ಆದರೆ ಒಮ್ಮೆ ನಡೆದ ಘಟನೆಯೊಂದು ಎಲ್ಲರ ಗಮನವನ್ನು ಅದರತ್ತ ಸೆಳೆಯಿತಷ್ಟೇ ಅಲ್ಲದೆ, ಅವನ ಮನೆಮಂದಿಯ ಚಿಂತೆ–ಕಳವಳಗಳಿಗೆ ಕಾರಣವಾಯಿತು.

ಆಗ ಮಳೆಗಾಲ. ಬಂಗಾಳದ ಹಳ್ಳಿಗಾಡು ಪ್ರದೇಶವೊಂದರ ಮಳೆಗಾಲದ ಸೌಂದರ್ಯವನ್ನು ಕಂಡೇ ಅನುಭವಿಸಬೇಕು. ಒಂದು ಮಧ್ಯಾಹ್ನ, ಆರೇಳು ವರ್ಷದ ಬಾಲಕ ಗದಾಧರ ಹಳ್ಳಿಯಾಚೆಯ ಹಸಿರುಹೊಲಗಳ ನಡುವೆ ಅಡ್ಡಾಡುತ್ತಿದ್ದಾನೆ. ಕೈಯಲ್ಲಿ ಪುರಿ ತುಂಬಿದ ಪುಟ್ಟ ಬುಟ್ಟಿ. (ಈ ಪುರಿ ಅಥವಾ ಚುರುಮರಿಯೆಂಬುದು ಬಂಗಾಳದ ಒಂದು ಪ್ರಮುಖ ಆಹಾರ. ಮಕ್ಕಳಿಗೆ ತಿನ್ನಲು ಇದನ್ನು ಒಂದು ಬುಟ್ಟಿಗೋ ಇಲ್ಲವೆ ಬಟ್ಟೆಯ ಅಂಚಿಗೋ ಹಾಕಿ ಕೊಡುವುದು ಸಾಮಾನ್ಯ ಪರಿಪಾಠ.) ಗದಾಧರ ಪುರಿಯನ್ನು ಮೆಲ್ಲನೆ ಮೆಲ್ಲುತ್ತ ಕಾಲೆಳೆದುಕೊಂಡು ಬರುತ್ತಿದ್ದಾನೆ. ಪುರಿಗಿಂತ ಹೆಚ್ಚಾಗಿ, ಸುತ್ತಲಿನ ಪ್ರಕೃತಿಯ ರಮಣೀಯತೆಯನ್ನು ಆಸ್ವಾದಿಸುತ್ತಿದ್ದಾನೆ. ಆ ನಿಸರ್ಗದಂತೆಯೇ ಆತನ ಮನಸ್ಸೂ ಪ್ರಶಾಂತವಾಗಿದೆ.

ಗದಾಧರ ನೋಡನೋಡುತ್ತಿದ್ದಂತೆಯೇ ದಿಗಂತದಾಚೆಯಿಂದ ಶ್ಯಾಮಲ ವರ್ಣದ ಮೇಘವೊಂದು ತೇಲಿಬಂದು ಹೆಪ್ಪುಗಟ್ಟಿತು. ತನ್ನೊಳಗೇ ಆನಂದಿಸುತ್ತ ಬಾಲಕ ಅದನ್ನೇ ತದೇಕಚಿತ್ತನಾಗಿ ದೃಷ್ಟಿಸುತ್ತಿದ್ದಾನೆ. ಅದೇ ವೇಳೆಗೆ ಶುಭ್ರಶ್ವೇತ ವರ್ಣದ ಬೆಳ್ಳಕ್ಕಿಗಳ ಒಂದು ಗುಂಪು ಆ ಕಾರ್ಮೋಡಕ್ಕೆ ಇದಿರಾಗಿ ಹಾರುತ್ತ ಹಾದುಹೋಯಿತು. ಆಹ್ ! ಅದೆಂಥ ದೃಶ್ಯ ! ಅದನ್ನು ಕಂಡೊಡನೆ ಆತನೊಳಗೊಂದು ಆನಂದದ ಅಲೆ ಎದ್ದಿತು. ಆ ಭೋರ್ಗರೆವ ಅಲೆಯ ತಾಡನಕ್ಕೆ ಸಿಲುಕಿ, ಆತನ ದೇಹಪ್ರಜ್ಞೆ ಎಲ್ಲಿಯೋ ಕೊಚ್ಚಿಹೋಯಿತು. ಆಸರೆಯಿಲ್ಲದ ಶರೀರ ದೊಪ್ಪನೆ ಕೆಳಬಿತ್ತು. ಬುಟ್ಟಿಯೂ ಅದರಲ್ಲಿದ್ದ ಪುರಿಯೂ ಚೆಲ್ಲಾಪಿಲ್ಲಿಯಾಗಿ ಚದುರಿಬಿದ್ದಿತು. ಆದರೆ ಗದಾಧರನಿಗೆ ಮಾತ್ರ ತನ್ನೊಳಗೂ ಹೊರಗೂ ಎಲ್ಲೆಲ್ಲೂ ಆನಂದವೇ ತುಂಬಿದಂತಿತ್ತು.

ಆತ ಹೀಗೇ ಅದೆಷ್ಟು ಹೊತ್ತು ಬಿದ್ದಿದ್ದನೋ ಯಾರಿಗೂ ಗೊತ್ತಿಲ್ಲ. ಆಮೇಲೆ ಆ ದಾರಿಯಾಗಿ ಬಂದ ಯಾರೋ ಹಳ್ಳಿಗರು, ಅವನನ್ನೆತ್ತಿಕೊಂಡು ಮನೆಗೆ ತಂದು ಬಿಟ್ಟರು. 'ಹುಡುಗನನ್ನು ಸರಿಯಾಗಿ ನೋಡಿಕೊಳ್ಳಿ' ಎಂದು ತಾಯ್ತಂದೆಯರಿಗೆ ಬುದ್ಧಿಹೇಳಿ ಹೊರಟರು. ಗದಾಧರ ಮಾತ್ರ ಏನೂ ಆಗದವನಂತೆ ಎದ್ದು ಕುಳಿತ.

ಆದರೆ ಹುಡುಗ ಈ ರೀತಿ ಇದ್ದಕ್ಕಿದ್ದ ಹಾಗೆ ಪ್ರಜ್ಞೆ ತಪ್ಪಿ ಬಿದ್ದುಹೋಗುವಂತಾದರೆ ಏನೆಂದು ತಿಳಿಯುವುದು? ಭಾವಾವಸ್ಥೆ ಎಂದು ತಿಳಿಯಬೇಕೆ? ಅಂತಹ ಅವಸ್ಥೆಯ ಪರಿಚಯವಾದರೂ ಯಾರಿಗಿದೆ? ಅದೂ ಆ ಹಳ್ಳಿಯಲ್ಲಿ! ಹಾಗಾದರೆ ಇನ್ನೇನೆಂದು ತಿಳಿಯಬೇಕು? ಹುಡುಗನಿಗೆ ರಕ್ತಹೀನತೆ ಎಂದೆ? ಹುಡುಗ ಆರೋಗ್ಯದಿಂದಿರುವುದು ಕಂಡರೇ ತಿಳಿಯುತ್ತಿದೆ. ಮತ್ತಿನ್ನೇನಿರಬೇಕು? ಅಪಸ್ಮಾರ....! ಇರಬಹುದು. ಯಾಕಿರಬಾರದು? ಮಗನ ಮೇಲಿನ ಪ್ರೀತಿಯ ಅತಿಶಯದಿಂದಾಗಿ ಕ್ಷುದಿರಾಮ ಚಂದ್ರಮಣಿಯರು ಹೀಗೇ ಬಗೆಬಗೆಯಾಗಿ ಭಾವಿಸಿ ನೋಡಿದರು. ಕೊನೆಗೆ ಚಂದ್ರಮಣಿ ಪತಿಯಲ್ಲಿ ಬಿನ್ನವಿಸಿಕೊಂಡಳು:

"ನೋಡಿ, ಇದು ಖಂಡಿತ ಮೂರ್ಛೆರೋಗವೇ. ಕೆಲವು ಮಕ್ಕಳಿಗೆ ಹೀಗಾಗುವುದುಂಟು. ನೀವಿದಕ್ಕೆ ಬೇಗನೇ ಏನಾದರೊಂದು ಪರಿಹಾರ ಮಾಡಲೇ ಬೇಕು."

ಕ್ಷುದಿರಾಮ ಪತ್ನಿಗೆ ಭರವಸೆ ನೀಡುತ್ತ ಹೇಳಿದ:

"ಚಂದ್ರಾ, ಅದೆಲ್ಲ ಬೇಕಿಲ್ಲ. ಬದಲಾಗಿ ಒಂದು ಶಾಂತಿಕಾರ್ಯ ಮಾಡಿಸೋಣ. ತಾಯಿತ ಕೂಡ ಕಟ್ಟಿಸೋಣ. ನೀನೇನೂ ಭಯಪಡಬೇಡ."

ಶಾಂತಿಕಾರ್ಯಕ್ಕೆ ಅಣಿಗೊಳಿಸಲಾಯಿತು. ಗದಾಧರ ಮಾತ್ರ ಧೈರ್ಯವಾಗೇ ಇದ್ದ. ಮತ್ತು ತಾನೇ ತಾಯಿಯನ್ನು ಸಮಾಧಾನ ಪಡಿಸುತ್ತ ಮತ್ತೆಮತ್ತೆ ಹೇಳಿದ:

"ಅಮ್ಮಾ, ನೀನೇನೂ ಹೆದರಬೇಡ, ನನಗೆ ಅಂಥದೇನೂ ಆಗಿಲ್ಲ. ಅವತ್ತು ನನ್ನ ಮನಸ್ಸು ಏನೋ ಒಂದು ಆನಂದದಲ್ಲಿ ಮುಳುಗಿಹೋಗಿತ್ತು. ಆ ಬಗೆಯ ಅನುಭವ ನನಗೆ ಹಿಂದೆಂದೂ ಆಗಿರಲಿಲ್ಲ. ನಾನು ಹೊರಗಡೆ ಪ್ರಜ್ಞೆಯಿಲ್ಲದವನಂತೆ ಕಂಡುಬಂದರೂ ಒಳಗಡೆ ಬಹಳ ಆನಂದದಿಂದಲೇ ಇದ್ದೆ."

ಗದಾಧರನ ಈ ಮಾತಿನಲ್ಲಿ ನಿಜವಿತ್ತು. ಏಕೆಂದರೆ ಮತ್ತೆ ಅವನು ಆ ರೀತಿ ಪ್ರಜ್ಞೆ ತಪ್ಪಿ ಬೀಳಲಿಲ್ಲ. ಅವನ ದೇಹಾರೋಗ್ಯವೂ ಚೆನ್ನಾಗಿಯೇ ಇತ್ತು. ಆದರೆ, ಹೀಗಿದ್ದರೂ ಕೂಡ, ಕ್ಷುದಿರಾಮ ಭಾವಿಸಿದ, ಇನ್ನುಮುಂದೆ ಹುಡುಗ ಆಗಾಗ ಹೀಗೆಯೇ ಮೂರ್ಛೆ ಹೋಗುವ ಸಂಭವ ಇರಬಹುದು ಎಂದು. 'ಇಲ್ಲ, ನನ್ನ ಮಗನಿಗೆ ಖಂಡಿತವಾಗಿ ಯಾರದೋ ದೃಷ್ಟಿ ತಾಗಿದೆ' ಎಂಬುದು ಚಂದ್ರಮಣಿಯ ನಂಬಿಕೆ. ಅಂತೂ ಗದಾಧರನನ್ನು ಕೆಲದಿನಗಳ ಮಟ್ಟಿಗೆ ಶಾಲೆಗೆ ಕಳುಹಿಸುವುದನ್ನು ನಿಲ್ಲಿಸಲಾಯಿತು. ಒಟ್ಟಿನಲ್ಲಿ ಗದಾಧರನಿಗೀಗ ರಜಾ ಸಿಕ್ಕಿದೆ. ಆ ಪುಟ್ಟ ಹಳ್ಳಿಯಲ್ಲಿ ಎಲ್ಲೆಂದರಲ್ಲಿ ಓಡಾಡಿಕೊಂಡಿರುವ ಸ್ವಾತಂತ್ರ್ಯ ಅವನಿಗಿದ್ದದ್ದರಿಂದ ಅವನು ಈ ರಜಾದಿನಗಳಲ್ಲಿ ಹಿಂದಿಗಿಂತ ಹೆಚ್ಚು ಆಟವಾಡಿಕೊಂಡು ಹೆಚ್ಚು ತಮಾಷೆ ಮಾಡಿಕೊಂಡು ಆನಂದದಿಂದ ಸಮಯ ಕಳೆದ.

೧೮೪೩ರ ಶರದೃತು. ಅಕ್ಟೋಬರ್ ತಿಂಗಳು. ಬಂಗಾಳದಲ್ಲಿ ಎಲ್ಲೆಲ್ಲೂ ಉತ್ಸಾಹದ ದಿನಗಳು. ಬಂಗಾಳದ ಅತಿ ಪ್ರಸಿದ್ಧ ಪರ್ವವಾದ ಶ್ರೀದುರ್ಗಾಪೂಜೆ ಬರುವುದು ಈ ತಿಂಗಳಲ್ಲೇ. ಕ್ಷುದಿರಾಮನ ಸೋದರಳಿಯನಾದ ರಾಮಚಾಂದ ವಂದ್ಯೋಪಾಧ್ಯಾಯ ತನ್ನ ವಕೀಲಿ ವೃತ್ತಿಯಿಂದ ಸಾಕಷ್ಟು ಸಂಪಾದಿಸುತ್ತಿದ್ದುದರಿಂದ ಅವನು ತನ್ನ ಮನೆಯಲ್ಲೂ ಶ್ರೀದುರ್ಗಾಪೂಜೆಯನ್ನು ತುಂಬ ಅದ್ದೂರಿ

ಯಥಾಗಿಯೇ ನಡೆಸಿಕೊಂಡು ಬರುತ್ತಿದ್ದ. ಆ ದಿನಗಳಲ್ಲಿ ಅವನ ಮನೆಯಲ್ಲಿ ಶ್ರೀದುರ್ಗೆಯ ಮುಂದೆ ಸಂಗೀತ, ಸಂಕೀರ್ತನೆ, ಭಜನೆಗಳ ಮಧುರ ನಿನಾದ ಮೊಳಗುತ್ತಿತ್ತು. ಇಷ್ಟೇ ಅಲ್ಲ, ಬ್ರಾಹ್ಮಣರಿಗೆ ಭೂರಿ ಭೋಜನ, ವಿದ್ವಾಂಸರಿಗೆ ಆತಿಥ್ಯ–ಸಂಭಾವನೆ, ಹಳ್ಳಿಯ ಬಡವರಿಗೆ ಹೊಟ್ಟೆತುಂಬ ಊಟ ಹಾಗೂ ಮೈ ತುಂಬ ಬಟ್ಟೆಗಳ ವಿತರಣೆ — ಇವುಗಳಿಂದ ಅವನ ಮನೆಯಲ್ಲಿ ಒಂದು ಆನಂದದ ಲಹರಿಯೇ ಏಳುತ್ತಿತ್ತು. ಬಡವರ ಉದರಕ್ಕೆ ಆನಂದವಾದರೆ ರಾಮಚಾಂದನ ಹೃದಯಕ್ಕೆ ಆನಂದ. ಪ್ರತಿವರ್ಷವೂ ಅವನು ಈ ಆನಂದದಲ್ಲಿ ಪಾಲ್ಗೊಳ್ಳಲು ತನ್ನ ಪ್ರಿಯ ಸೋದರಮಾವನಾದ ಕ್ಷುದಿರಾಮನನ್ನೂ ಆಹ್ವಾನಿಸಿ ಕೆಲದಿನ ತನ್ನ ಮನೆಯಲ್ಲೇ ಇರಿಸಿಕೊಳ್ಳುತ್ತಿದ್ದ. ಈ ವರ್ಷವೂ ಕೂಡ ಶ್ರೀದುರ್ಗಾ ಪೂಜೆಯ ವೇಳೆಗೆ ಅವನನ್ನೂ ಅವನ ಮನೆಯವರೆಲ್ಲರನ್ನೂ ಆಹ್ವಾನಿಸಿದ.

ಕ್ಷುದಿರಾಮನಿಗೆ ಈಗ ಸುಮಾರು ಅರವತ್ತೆಂಟು ವರ್ಷ ವಯಸ್ಸು. ಮನುಷ್ಯನಿಗೆ ವಯಸ್ಸಾಗುತ್ತ ಆಗುತ್ತ ಯೌವನ ಬರುವುದುಂಟೆ? ಅಲ್ಲದೆ ಕ್ಷುದಿರಾಮನಂತೂ ಈಗ ಕೆಲವು ವರ್ಷಗಳಿಂದ ಆಮಶಂಕೆ ರೋಗದಿಂದಾಗಿ ಬಹಳ ಯಾತನೆ ಅನುಭವಿಸುತ್ತಿದ್ದ. ಈ ಕಾಯಿಲೆ ಬಂಗಾಳದ ಮಹಾಮಾರಿ. ಇದರ ರೋಗಾಣುಗಳು ಒಮ್ಮೆ ಹೊಟ್ಟೆಯೊಳಗೆ ಸೇರಿಕೊಂಡರೆ ಮತ್ತೆ ಅವು ನಾಶವಾಗು ವುದು ಮನುಷ್ಯನೊಂದಿಗೇ. ಕ್ಷುದಿರಾಮನ ವೃದ್ಧಶರೀರವನ್ನು ಈ ಕಾಯಿಲೆ ಮತ್ತಷ್ಟು ಹಣ್ಣು ಮಾಡಿಬಿಟ್ಟಿತ್ತು. ಈ ಸಂದರ್ಭದಲ್ಲಿ ಪ್ರಿಯ ಸೋದರಳಿಯ ಶ್ರೀದುರ್ಗಾಪೂಜೆಗೆ ಆಹ್ವಾನಿಸುತ್ತಿದ್ದಾನೆ. ಕ್ಷುದಿರಾಮನಿಗೆ ಸೋದರಳಿಯನ ಮನೆಗೆ ಹೋಗುವುದೂ ಇಷ್ಟ, ಶ್ರೀದುರ್ಗಾಪೂಜೆಯೂ ಪ್ರಿಯ. ಆದರೆ ಶರೀರದ ಸ್ಥಿತಿ ಮಾತ್ರ ಹೀಗೆ. ಈ ನಡುವೆ ಅವನಿಗೆ ಮನೆಯನ್ನು ಬಿಟ್ಟು — ಅದರಲ್ಲೂ ಗದಾಧರನನ್ನು ಬಿಟ್ಟು — ದೂರ ಹೋಗುವುದೆಂದರೆ ಸ್ವಲ್ಪವೂ ಇಷ್ಟವಿಲ್ಲ. ತನಗೇಕೆ ಹೀಗಾಗುತ್ತದೆ ಎಂಬುದು ಅವನಿಗೇ ಅರಿವಾಗುತ್ತಿಲ್ಲ. ಕೊನೆಗೆ ಆತ ಹೀಗೆ ಆಲೋಚಿಸಿದ:

'ಆಗಲಿ, ಈ ಸಲಕ್ಕೆ ಹೋಗಿಬಿಡುತ್ತೇನೆ. ಈ ಸಲ ಹೋಗದಿದ್ದರೆ ಮುಂದೆ ನಾನಲ್ಲಿಗೆ ಹೋಗುವೆನೋ ಇಲ್ಲವೋ ಹೇಳಬಲ್ಲವರಾರು? ನನ್ನ ಕಾಯಿಲೆ ಬೇರೆ ದಿನೇ ದಿನೇ ಉಲ್ಬಣಸುತ್ತಿದೆಯಲ್ಲ!'

ಮೊದಲಿಗೆ ಕ್ಷುದಿರಾಮ ತನ್ನೊಂದಿಗೆ ಗದಾಧರನನ್ನೂ ಕರೆದೊಯ್ಯುವೆ ನೆಂದುಕೊಂಡ. ಆದರೆ ಹೋದಮೇಲೆ ನಾಲ್ಕಾರು ದಿನ ಅಲ್ಲಿ ಇರಬೇಕಾಗುತ್ತದೆ. ಚಂದ್ರಮಣಿ ಮಗನ ಅಗಲಿಕೆಯನ್ನು ಅಷ್ಟು ದಿನಗಳ ವರೆಗೆ ಸಹಿಸಿಕೊಂಡಾಳೆ? ಹೀಗೆ ಯೋಚಿಸಿ, ಹಿರಿಯ ಮಗ ರಾಮಕುಮಾರನನ್ನು ಕರೆದೊಯ್ಯುವುದೆಂದು ನಿಶ್ಚಯಿಸಿದ. ಶ್ರೀದುರ್ಗಾಪೂಜೆಗೆ ಒಂದೆರಡು ದಿನಗಳ ಮೊದಲೇ ಅವನು ಶ್ರೀರಘುವೀರನಿಗೆ ಪ್ರಣಾಮ ಸಲ್ಲಿಸಿ, ಗದಾಧರನನ್ನು ವಾತ್ಸಲ್ಯದಿಂದ ತಬ್ಬಿಕೊಂಡು ಮುತ್ತನ್ನಿತ್ತು ಮನೆಯವರಿಂದ ಬೀಳ್ಗೊಂಡ, ಸೇಲಂಪುರಕ್ಕೆ ಬಂದ. ತನ್ನ ಸೋದರ ಮಾವನೂ ಪ್ರೀತಿಯ ಭಾವನಂಟ ರಾಮಕುಮಾರನೂ ಆಗಮಿಸಿದ್ದನ್ನು ಕಂಡ

ರಾಮಚಾಂದ ಆನಂದದಿಂದ ಹಿಗ್ಗಿದ. ಮನೆಮಂದಿಯ ಸಂತಸಕ್ಕೂ ಪಾರವಿಲ್ಲ.

ಆದರೆ, ಆ ವರ್ಷದ ದುರ್ಗಾಪೂಜೆಯ ದಿನಗಳಲ್ಲಿ ಪೂರ್ಣಾನಂದ ಪಡೆಯುವ ಭಾಗ್ಯ ಅವರಾರ ಪಾಲಿಗೂ ಇರಲಿಲ್ಲ. ರಾಮಚಾಂದನ ಮನೆಗೆ ತಲುಪುತ್ತಲೇ ಕ್ಷುದಿರಾಮನ ಆಮಶಂಕೆ ಕೆರಳಿತು. ಕೂಡಲೇ ರಾಮಚಾಂದ ಚಿಕಿತ್ಸೆಗೆ ಏರ್ಪಾಡು ಮಾಡಿದ. ಆದರೆ ಎಷ್ಟೇ ಚಿಕಿತ್ಸೆ ಮಾಡಿದರೂ ಪರಿಸ್ಥಿತಿ ಸುಧಾರಿಸಲಿಲ್ಲ. ಉತ್ಸವದ ಷಷ್ಠಿ, ಸಪ್ತಮಿ, ಅಷ್ಟಮಿ ದಿನಗಳು ಅತ್ಯಂತ ಆನಂದದಾಯಕ ದಿನಗಳು. ಆದರೆ ಅಂದು ಯಾರಿಗೂ ಹಾಗೆನ್ನಿಸಲಿಲ್ಲ. ನವಮಿಯ ದಿನ ಬಂದಿತು. ಅಂದು ಕ್ಷುದಿರಾಮನ ಕಾಯಿಲೆ ಇನ್ನಷ್ಟು ಉಲ್ಬಣಿಸಿತು. ರಾಮಚಾಂದ ಅತ್ಯಂತ ವಿಚಕ್ಷಣ ರಾದ ವೈದ್ಯರನ್ನು ಕರೆಯಿಸಿದ; ಹೇಮಾಂಗಿನಿ ಹಾಗೂ ರಾಮಕುಮಾರರ ನೆರವಿ ನೊಂದಿಗೆ ಪ್ರಿಯ ಸೋದರಮಾವನ ಸೇವಾಶುಶ್ರೂಷೆ ಮಾಡಿದ. ಆದರೂ ಕ್ಷುದಿರಾಮನ ಕಾಯಿಲೆಯಲ್ಲಿ ಗುಣ ಕಂಡುಬರಲಿಲ್ಲ. ನವಮಿಯ ದಿನ ಹೇಗೋ ಕಳೆಯಿತು.

ಇಂದು ವಿಜಯದಶಮಿ. ಹಿಂದೂಗಳ, ಅದರಲ್ಲೂ ಬಂಗಾಳಿಗಳ ಅತ್ಯಂತ ಸಂಭ್ರಮದ ದಿನ. ತಾಯಿ ದುರ್ಗೆಯ ವಿಗ್ರಹವನ್ನು ಗಂಗೆಯಲ್ಲಿ ವಿಸರ್ಜನೆ ಮಾಡಿ ಅವಳನ್ನು ತಮ್ಮತಮ್ಮ ಹೃದಯದಲ್ಲಿ ಪ್ರತಿಷ್ಠಾಪಿಸಿಕೊಳ್ಳುವ ಸುದಿನ; ಮಾತೆ ಯೊಂದಿಗೆ ಮಕ್ಕಳು ಒಂದಾಗುವ ಆನಂದದ ದಿನ. ಆದರೆ ಕ್ಷುದಿರಾಮ ಎಷ್ಟು ಬಳಲಿದ್ದನೆಂದರೆ ಮಾತನಾಡಲೂ ಶಕ್ತಿ ಉಳಿದಿರಲಿಲ್ಲ. ಶ್ರೀದುರ್ಗೆಯ ವಿಗ್ರಹವನ್ನು ಮಂಗಳ ವಾದ್ಯಗಳೊಂದಿಗೆ ನದಿಗೆ ಕೊಂಡೊಯ್ದು ಭಕ್ತಿಯಿಂದ ಹಾಗೂ ವ್ಯಥೆ ಯಿಂದ ಜಲವಿಸರ್ಜನೆ ಮಾಡಿದ ಕೂಡಲೇ ರಾಮಚಾಂದ ಕ್ಷುದಿರಾಮನ ಬಳಿಗೆ ಓಡಿಬಂದು ನೋಡಿದ—ಪ್ರಾಣೋತ್ಕ್ರಮಣ ಕಾಲ ಸನ್ನಿಹಿತವಾಗಿದೆ. ಬಹಳ ಹೊತ್ತಿನಿಂದಲೂ ಕ್ಷುದಿರಾಮ ಅದೇ ಸ್ಥಿತಿಯಲ್ಲೇ ಇದ್ದ. ಬಹುಶಃ ಯಾವುದೋ ಒಂದು ಮುಹೂರ್ತಕ್ಕಾಗಿ ಕಾಯುತ್ತಿದ್ದಿರಬೇಕು. ರಾಮಚಾಂದ ಕಣ್ಣೀರಿಳಿಸುತ್ತ ಹೇಳಿದ:

“ಮಾವ, ನೀನು ಯಾವಾಗಲೂ ರಘುವೀರನ ನಾಮೋಚ್ಚಾರ ಮಾಡುತ್ತಿದ್ದ ವನು ಇಂದೇಕೆ ಸುಮ್ಮನಿರುವೆ?”

ಪ್ರೀತಿಯ ಅಳಿಯನ ಸ್ವರ ಕಿವಿಗೆ ಬಿದ್ದ ಕೂಡಲೇ ಕ್ಷುದಿರಾಮ ಎಚ್ಚತ್ತು, ಮೆಲ್ಲನೆ ನುಡಿದ:

“ಬಂದೆಯಾ ರಾಮಚಾಂದ್, ಶ್ರೀದುರ್ಗೆಯ ವಿಗ್ರಹವನ್ನು ಜಲ ವಿಸರ್ಜನೆ ಮಾಡಿಯಾಯಿತು ತಾನೆ? ಹಾಗಾದರೆ ಎಲ್ಲಿ, ನನ್ನನ್ನು ಎತ್ತಿ ಕುಳ್ಳಿರಿಸು.”

ರಾಮಚಾಂದ, ಹೇಮಾಂಗಿನಿ, ರಾಮಕುಮಾರ ಸೇರಿ ಕ್ಷುದಿರಾಮನಿಗೆ ಕುಳಿತುಕೊಳ್ಳಲು ನೆರವಾದರು. ಕ್ಷುದಿರಾಮ ಗಂಭೀರವಾಗಿ ಮೂರು ಸಲ ಶ್ರೀರಘುವೀರನ ನಾಮವನ್ನು ಉಚ್ಚರಿಸಿದ; ಮರುಕ್ಷಣವೇ ಪ್ರಾಣಪಕ್ಷಿ ಹಾರಿ ಹೋಯಿತು. ಬಿಂದು ಸಿಂಧುವಿನಲ್ಲಿ ಸೇರಿ ಒಂದಾಯಿತು. ಶ್ರೀರಘುವೀರ ತನ್ನ ಪ್ರಿಯ ಭಕ್ತನ ಪ್ರಾಣವನ್ನು ತನ್ನ ಮಹಾಪ್ರಾಣದಲ್ಲಿ ಲಯಗೊಳಿಸಿಕೊಂಡು

ಅವನನ್ನು ಅಮರನನ್ನಾಗಿಸಿದ.

ನಟ್ಟ ನಡುರಾತ್ರಿಯಲ್ಲಿ ಆ ಗ್ರಾಮ ಭಗವನ್ನಾಮ ಸಂಕೀರ್ತನೆಯ ನಿನಾದದಿಂದ ತುಂಬಿಹೋಯಿತು. ಕ್ಷುದಿರಾಮನ ಕಳೇವರವನ್ನು ಹೊತ್ತು ಮೆರವಣಿಗೆಯಲ್ಲಿ ಸಾಗಿದರು. ನದಿಯ ದಡದಲ್ಲಿ ಚಿತೆ ನಿರ್ಮಿಸಿದರು. ಹಿರಿಯ ಮಗ ರಾಮಕುಮಾರ ಅಗ್ನಿಸ್ಪರ್ಶ ಮಾಡಿದ. ಶ್ರೀರಾಮನ ಹಾಗೂ ಶ್ರೀದುರ್ಗೆಯ ನಾಮಗಳನ್ನು ಘೋಷಿಸುತ್ತಿದ್ದಂತೆ ಕ್ಷುದಿರಾಮನ ಶರೀರ ಅಗ್ನಿಗಾಹುತಿಯಾಯಿತು.

ಮರುದಿನ ಈ ದಾರುಣ ವಾರ್ತೆ ಕಾಮಾರಪುಕುರವನ್ನು ಮುಟ್ಟಿತು. ಕ್ಷುದಿರಾಮನ ಜೋಪಡಿ ದುಃಖದಿಂದ ತುಂಬಿಹೋಯಿತು. ರಾಮಕುಮಾರ ಮನೆಗೆ ಹಿಂದಿರುಗಿ ಶಾಸ್ತ್ರೋಕ್ತ ಕರ್ಮಗಳನ್ನೆಲ್ಲ ಮಾಡಿ ಮುಗಿಸಿದ. ಸೂತಕ ಕಳೆದ ಮೇಲೆ ಒಂದು ಹೋರಿಕರುವನ್ನು ಬಸವನಾಗಿ ಬಿಡಲಾಯಿತು. ಬ್ರಾಹ್ಮಣರಿಗೆ ಭೋಜನವಿಕ್ಕಿ ತೃಪ್ತಿಪಡಿಸಲಾಯಿತು. ಈ ಖರ್ಚುವೆಚ್ಚದಲ್ಲಿ ದೊಡ್ಡ ಪಾಲನ್ನು ರಾಮಚಾಂದ ವಹಿಸಿಕೊಂಡ!

೧೦

## ವಿಶಾಲಾಕ್ಷಿಯ ಆವೇಶ

ಕ್ಷುದಿರಾಮ ಹಣಸಂಪಾದನೆ ಮಾಡಿದವನಲ್ಲ. ಆದರೆ ಅವನು ಸಂಪಾದಿಸಿದ ಗುಣ ಮಾತ್ರ ಅತ್ಯಪೂರ್ವವಾದದ್ದು. ಸರ್ವರ ಹೃದಯಕ್ಕೂ ಸಾಂತ್ವನದ ತಂಪ ನ್ನೆರೆಯುತ್ತಿದ್ದ ಅಂಥಾ ಗುಣವಂತ ಈಗ ಇನ್ನಿಲ್ಲ. ಈ ನಷ್ಟದ ಅನುಭವ ಎಲ್ಲರಿ ಗಿಂತ ಹೆಚ್ಚು ಚಂದ್ರಮಣಿಗೆ. ನಲವತ್ತು ವರ್ಷಗಳ ದೀರ್ಘ ಕಾಲ ದೇವರಂತಹ ಪತಿಯೊಡನೆ ಅನ್ಯೋನ್ಯವಾಗಿ ಸಮರಸವಾಗಿ ಬಾಳ್ವೆ ನಡೆಸಿದ ಚಂದ್ರಮಣಿಯ ಪಾಲಿಗೆ ಈಗ ಜಗತ್ತೇ ಇಲ್ಲದಂತೆನಿಸಿಬಿಟ್ಟಿದೆ. ದಿವ್ಯ ಕುಮಾರ ಗದಾಧರ ಬಳಿಯಲ್ಲೇ ಇದ್ದರೂ ಅವಳ ಹೃದಯದಲ್ಲಿ ಮಾತ್ರ ಏನೋ ಶೂನ್ಯದ ಅನುಭವ. ಪ್ರತಿಕ್ಷಣ ದಲ್ಲೂ ಪತಿಯ ನೆನಪು. ಒಂದೊಂದು ವಸ್ತುವೂ, ಒಂದೊಂದು ಮಾತೂ ಅವಳ ಮನಃಪಟಲದ ಮೇಲೆ ಪ್ರಿಯ ಪತಿಯ ಪ್ರತಿಬಿಂಬವನ್ನು ಮೂಡಿಸುತ್ತಿತ್ತು. ಪುಣ್ಯಕ್ಕೆ, ತನ್ನ ಪತಿಯ ಜೀವನಕ್ರಮವನ್ನೇ ಅನುಸರಿಸುತ್ತ ಶ್ರೀರಘುವೀರನಲ್ಲಿ ಸಂಪೂರ್ಣ ಶರಣಾಗತಳಾಗಿದ್ದುಕೊಂಡು ಬಾಳುವ ಅಭ್ಯಾಸವಾಗಿತ್ತು ಅವಳಿಗೆ. ಈಗ, ಪ್ರಪಂಚದ ವ್ಯಾಮೋಹ ಕತ್ತರಿಸಿದಂತಾದ ಈ ಸಂದರ್ಭದಲ್ಲಿ ಅವಳ ಹೃದಯದ ಭಾವಾವೇಗಗಳೆಲ್ಲ ಇನ್ನಷ್ಟು ವೇಗವಾಗಿ ಶ್ರೀರಘುವೀರನ ಕಡೆಗೆ ಹರಿದವು. ಆದರೆ ಕಾಲ ಕೂಡಿಬರದೆ ಅವಳು ಶರೀರತ್ಯಾಗ ಮಾಡುವ ಮಾತಂತೂ ಇಲ್ಲವಲ್ಲ. ಅಲ್ಲದೆ ಅವಳೀಗ ಗಮನ ಕೊಡಲೇಬೇಕಾದ ಎರಡು ವಸ್ತುಗಳಿವೆ— ಒಬ್ಬ ಏಳು ವರ್ಷದ ಮಗ ಗದಾಧರ, ಇನ್ನೊಬ್ಬಳು ನಾಲ್ಕು ವರ್ಷದ ಮಗಳು ಸರ್ವಮಂಗಳಾ.

ಕ್ಷುದಿರಾಮನ ಆಕಸ್ಮಿಕ ಮರಣದಿಂದಾಗಿ ಇಡೀ ಸಂಸಾರದ ಹೊಣೆ ರಾಮ ಕುಮಾರನ ಹೆಗಲ ಮೇಲೆ ಬಿತ್ತು. ಪ್ರಿಯ ತಂದೆಯ ಮರಣದಿಂದಾಗಿ ಅವನಿಗಾದ ದುಃಖವೂ ಕಡಮೆಯದೇನಲ್ಲ. ಆದರೆ ಅವನಿಗೆ ಈಗ ದುಃಖಿಸುತ್ತ ಕುಳಿತಿರಲು ವ್ಯವಧಾನವೆಲ್ಲಿ? ಶೋಕಗ್ರಸ್ತಳಾದ ತಾಯಿ, ತಮ್ಮಂದಿರು ಹಾಗೂ ಒಬ್ಬಳು ತಂಗಿ—ಇಷ್ಟು ಮಂದಿಯ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಲ್ಲ? ಮನೆ ಯಲ್ಲಿ ಒಂದಿದ್ದರೆ ಇನ್ನೊಂದಿಲ್ಲದಂತಾಗಿ, 'ಅಯ್ಯೋ ನನ್ನ ಪತಿಯಿದ್ದಿದ್ದರೆ!' ಎಂದು ತಾಯಿ ಚಂದ್ರಮಣಿ ಬಿಸುಸುಯ್ಯುವಂತಾಗಬಾರದಲ್ಲ! ರಾಮಕುಮಾರನ ಸೋದರ ರಾಮೇಶ್ವರನಿಗೆ ಈಗ ಹದಿನೆಂಟು ತುಂಬಿದೆ. ಸ್ಮೃತಿ ಮತ್ತು ಜ್ಯೋತಿಷ ಗಳಲ್ಲಿ ಅಧ್ಯಯನ ನಡೆಯುತ್ತಿದೆ. ಅದನ್ನು ಮುಗಿಸಿ ಅವನೂ ಸದ್ಯದಲ್ಲೇ

ಅಣ್ಣನೊಂದಿಗೆ ಹೆಗಲು ಕೊಡಬೇಕಾಗಿದೆ. ಅಲ್ಲಿಯವರೆಗೆ ರಾಮಕುಮಾರ ಇನ್ನಷ್ಟು ಹೆಚ್ಚು ದುಡಿದು ಮನೆಯಲ್ಲಿ ಉಣ್ಣುವ ಬಾಯಿಗಳನ್ನು ತೃಪ್ತಿಪಡಿಸಬೇಕಾಗಿತ್ತು. ರಾಮಕುಮಾರನ ಮಡದಿಯೂ ಪರಿಸ್ಥಿತಿಯನ್ನು ಅರಿತಳು. ವೃದ್ಧೆ ಚಂದ್ರಮಣಿ ಹೆಚ್ಚು ಕೆಲಸ ಮಾಡುವುದು ತರವಲ್ಲವೆಂದು ತಿಳಿದು ಅಡಿಗೆಯೇ ಮೊದಲಾದ ಹೆಚ್ಚಿನ ಗೃಹಕೃತ್ಯಗಳನ್ನು ತಾನು ಕೈಗೆ ತೆಗೆದುಕೊಂಡಳು.

ಅದೆಲ್ಲ ಸರಿಯೆ. ಆದರೆ ಈಗ ಗದಾಧರ ಹೇಗಿದ್ದಾನೆ? ಅವನ ಭಾವನೆ ಬಹು ಸೂಕ್ಷ್ಮ. ಶೈಶವದಲ್ಲಿ ಮಾತೆ ತೀರಿಕೊಂಡರೆ ಶಿಶುವು ಮಾತೆಯ ಅಗಲಿಕೆಯನ್ನು ಸಹಿಸಿಕೊಳ್ಳಲಾರದು; ಬಾಲ್ಯದಲ್ಲಿ ತಂದೆ ತೀರಿಕೊಂಡರೆ ಬಾಲಕ ತಂದೆಯ ಅಗಲಿಕೆಯನ್ನು ಸಹಿಸಿಕೊಳ್ಳಲಾರ; ಯೌವನದಲ್ಲಿ ಹೆಂಡತಿ ತೀರಿಕೊಂಡರೆ ಗಂಡನು ಹೆಂಡತಿಯ ಅಗಲಿಕೆಯನ್ನು ಸಹಿಸಿಕೊಳ್ಳಲಾರ — ಇದು ಲೋಕದಲ್ಲಿ ಕಂಡುಬರುವ ಸಂಗತಿ. ಇಲ್ಲಿ ಗದಾಧರ ಎಲ್ಲಕ್ಕೂ ತಾಯಿಯನ್ನೇ ಅವಲಂಬಿಸಿಕೊಂಡಿರುವ ಶಿಶುವಲ್ಲ, ತಂದೆಯ ಸ್ನೇಹವನ್ನು ಬಯಸುವ ಬಾಲಕ. ಹುಡುಗ ದೊಡ್ಡವನಾಗುತ್ತ ಬಂದಾಗ ಅವನ ಕೆಲವು ಬಗೆಯ ಬೇಡಿಕೆಗಳನ್ನು ಅವನ ವಾತ್ಸಲ್ಯಮಯಿ ತಾಯಿಯೂ ಈಡೇರಿಸಿಕೊಡಲಾರಳು. ಇಂತಹ ಸಂದರ್ಭದಲ್ಲಿ ಬಾಲಕ ತಂದೆಯನ್ನು ಕಳೆದುಕೊಂಡಾಗ ಅವನ ದುಃಖ ಎಷ್ಟು ತೀವ್ರತರದ್ದಾಗಿರಬಹುದು ಎಂಬುವನ್ನು ನಾವು ಭಾವಿಸಿ ನೋಡಬೇಕು. ಗದಾಧರನ ವಿಷಯದಲ್ಲೂ ಹೀಗೆಯೇ ಆಯಿತು. ದೈನಂದಿನದ ಹಲವು ಸಂದರ್ಭಗಳಲ್ಲಿ ಅವನಿಗೆ ತಂದೆಯ ಆವಶ್ಯಕತೆ ಕಂಡುಬರುತ್ತಿತ್ತು, ದುಃಖ ಉಮ್ಮಳಿಸುತ್ತಿತ್ತು. ಆದರೆ ನಾವು ನೋಡಿದಂತೆ, ಗದಾಧರ ಇತರೆಲ್ಲ ಸಮವಯಸ್ಕ ಬಾಲಕರಿಗಿಂತ ಹೆಚ್ಚು ಪ್ರಜ್ಞಾವಂತ, ಹೆಚ್ಚು ವಿವೇಕಿ. ತಾನೇನಾದರೂ ತಂದೆಗಾಗಿ ಅತ್ತುಕರೆದು ರೋದಿಸಿದರೆ ತಾಯಿಗೆ ಅತೀವ ದುಃಖವಾಗುತ್ತದೆ, ಮೊದಲೇ ನೊಂದ ಹೃದಯಕ್ಕೆ ಮತ್ತಷ್ಟು ನೋವು ಮಾಡಿದಂತಾಗುತ್ತದೆ ಎಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಆದ್ದರಿಂದ ನೋಡುವವರ ಕಣ್ಣಿಗೆ ಖುಷಿಯಾಗಿರುವಂತೆ, ಸಂತಸದಿಂದಿರುವಂತೆ ಇದ್ದುಬಿಟ್ಟ. ಆಗಾಗ ಅವನು ಭೂತೀರ್ ಖಾಲ್ ಎಂಬ ಸ್ಮಶಾನದಲ್ಲೋ ಅಥವಾ ಮಾಣಿಕರಾಜನ ಮಾವಿನತೋಪಿನಲ್ಲೋ ಏಕಾಂಗಿಯಾಗಿರುವುದನ್ನು ಜನ ನೋಡುತ್ತಿದ್ದರು. ಆದರೂ ಯಾರೂ ಅದಕ್ಕೆ ಕಾರಣವನ್ನು ಹುಡುಕಲು ಹೋಗಲಿಲ್ಲ. ಹುಡುಗರು ಅಲ್ಲಿ-ಇಲ್ಲಿ ಅಲೆದಾಡುವುದು ಇದ್ದೇ ಇರುತ್ತದೆ ಎಂದು ಭಾವಿಸಿದರು. ಆದರೆ ನಿಜ ಸಂಗತಿಯೇ ಬೇರೆಯಾಗಿತ್ತು. ಗದಾಧರ ಈಗೀಗ ಏಕಾಂತದಲ್ಲಿದ್ದುಕೊಂಡು ತನ್ನಷ್ಟಕ್ಕೆ ಆಲೋಚನಾಪರನಾಗಿರಲು ಇಷ್ಟಪಡುತ್ತಿದ್ದ. ಅವನ ಸೂಕ್ಷ್ಮ ಕುಶಾಗ್ರ ಬುದ್ಧಿಯು ಜನಜೀವನದ ಒಳಕ್ಕೆ ಪ್ರವೇಶ ಮಾಡಿ ಪರೀಕ್ಷಿಸಿ ನೋಡುತ್ತಿತ್ತು. ಅವನು ಪ್ರತಿಯೊಬ್ಬರ ಚಲನವಲನವನ್ನೂ ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದ.

ಒಬ್ಬ ವ್ಯಕ್ತಿ ಸಾವಿಗೀಡಾದಾಗ ಅದರಿಂದ ಯಾರುಯಾರು ಹೆಚ್ಚಿನ ಸಂತಾಪಕ್ಕೀಡಾಗುತ್ತಾರೋ ಅಂಥವರು ಪರಸ್ಪರ ಮತ್ತಷ್ಟು ಸನಿಹಕ್ಕೆ ಬರುವುದು ತುಂಬ ಸಾಮಾನ್ಯ. ಇದರಿಂದಾಗಿ ಒಬ್ಬರಿಂದ ಇನ್ನೊಬ್ಬರಿಗೆ ಏನೋ ಒಂದು ಅನಿರ್ವಚ

ನೀಯ ಸಮಾಧಾನ, ಶಾಂತಿ. ಬಹುಶಃ ಈ ಕಾರಣದಿಂದಲೇ ಗದಾಧರ–ಚಂದ್ರ ಮಣಿಯರ ನಡುವಿನ ಸೆಳೆತ ಮತ್ತಷ್ಟು ದೃಢವಾಯಿತು. ಈಗ ಗದಾಧರ ಹಿಂದಿಗಿಂತ ಹೆಚ್ಚಾಗಿ ತನ್ನ ತಾಯಿಯ ಬಳಿಯಲ್ಲೇ ಇರುತ್ತಾನೆ. ಆಕೆಯ ಪೂಜಾದಿ ಗಳಲ್ಲಿ, ಮನೆಗೆಲಸದಲ್ಲಿ ತನ್ನಿಂದಾದ ಎಲ್ಲ ಸಹಾಯ ಮಾಡುತ್ತಾನೆ. ತಾನು ಜೊತೆಯಲ್ಲಿರುವಾಗ ಅಮ್ಮನಿಗೆ ಅಪ್ಪನಿಲ್ಲದ ದುಃಖ ಮರೆತೇಹೋಗಿರುತ್ತದೆ ಎಂಬುದನ್ನು ಬಾಲಕನ ಸೂಕ್ಷ್ಮಬುದ್ಧಿ ಬಹುಬೇಗ ಗಮನಿಸಿತು. ಅಮ್ಮನೊಂದಿಗೆ ಬಾಲಕ ಗದಾಧರನ ವರ್ತನೆಯೂ ಸ್ವಲ್ಪ ಬದಲಾದಂತೆ ತೋರಿತು. ಅವನೀಗ ಹಿಂದಿನಷ್ಟು ತಂಟೆ ಮಾಡುವುದಿಲ್ಲ. ತನಗಿಷ್ಟವಾದ ಯಾವುದಾದರೊಂದು ವಸ್ತು ತನಗೆ ಬೇಕೇಬೇಕು ಎಂದು ಹಟ ಹಿಡಿಯುವುದಿಲ್ಲ. ಏಕೆಂದರೆ ತಾನು ಕೇಳಿದ್ದನ್ನು ಕೊಡಲಾಗದಿದ್ದರೆ ಅಮ್ಮನಿಗೆ ದುಃಖವಾಗುತ್ತದೆ, ಆ ಹಿಂದಿನ ಶೋಕ ಮರುಕಳಿಸು ತ್ತದೆ ಎಂದು ಅವನಿಗೆ ಅರಿವಾಗಿತ್ತು. ಒಟ್ಟಿನಲ್ಲಿ ತನ್ನ ತಾಯಿಯ ಮನಸ್ಸಿಗೆ ಯಾವ ರೀತಿಯೂ ಘಾಸಿಯಾಗದಂತೆ ನೋಡಿಕೊಳ್ಳಬೇಕೆಂಬ ನಿರ್ಧಾರ ಬಾಲಕನ ಹೃದಯ ದಲ್ಲಿ ಬಲವಾಗಿ ಮೂಡಿತ್ತು.

ಗದಾಧರ ಈಗ ಮತ್ತೆ ಶಾಲೆಗೆ ಹೋಗಲಾರಂಭಿಸಿದ. ತನ್ನ ಪಾಠಗಳ ಕಡೆಗೆ ಗಮನ ಹರಿಸಿದ. ಆದರೆ ಈಗ ಅವನಿಗೆ ಹರಿಕಥೆ ಕೇಳುವುದು, ದೇವದೇವಿಯರ ವಿಗ್ರಹ ತಯಾರಿಸುವುದು ಎಂದರೆ ಮೊದಲಿಗಿಂತ ಹೆಚ್ಚು ಇಷ್ಟ. ಈ ಕೆಲಸಗಳಲ್ಲಿ ತೊಡಗಿದಾಗ ತನಗೆ ತಂದೆಯ ವಿಯೋಗದುಃಖವನ್ನು ಮರೆಯುವುದು ಸುಲಭ ವಾಗುತ್ತದೆ ಎಂಬುದು ಅವನಿಗೆ ಅರಿವಾಗಿರಬೇಕು. ಈ ದಿನಗಳಲ್ಲಿ ಅವನು ತನ್ನ ಸ್ವಭಾವಕ್ಕೆ ಇಷ್ಟವಾಗುವ ಮತ್ತೊಂದು ವಿಷಯವನ್ನು ಕಂಡುಕೊಂಡ — ಅದು ಸಾಧು ಸಂನ್ಯಾಸಿಗಳ ಸಹವಾಸ ಮಾಡುವುದು.

ಕಾಮಾರಪುಕುರದ ವಾಯುವ್ಯ ದಿಕ್ಕಿನಲ್ಲಿ ಪುರಿಕ್ಷೇತ್ರಕ್ಕೆ ಹೋಗುವ ರಸ್ತೆ ಯಿತ್ತು. ಆ ಮೂಲೆಯಲ್ಲೇ ಧರ್ಮದಾಸ ಲಾಹಾನ ವಂಶಸ್ಥರು ಯಾತ್ರಾರ್ಥಿಗಳ ಅನುಕೂಲಕ್ಕಾಗಿ ಕಟ್ಟಿಸಿದ ಒಂದು ಧರ್ಮಛತ್ರ. ಪುರಿಯ ಜಗನ್ನಾಥನ ದರ್ಶನಕ್ಕೆ ಹೋಗುವ ಮತ್ತು ವಾಪಸು ಬರುವ ಸಾಧುಗಳು ಬೈರಾಗಿಗಳು ಎಷ್ಟೋ ಜನ ಆ ಛತ್ರದಲ್ಲಿ ತಂಗುತ್ತಿದ್ದರು. ಈ ಸಾಧು–ಬೈರಾಗಿಗಳು ಭಿಕ್ಷೆಗಾಗಿ ಹಳ್ಳಿಗೆ ಬರುತ್ತಿದ್ದರು. ಸಾಧುಗಳಾದವರು ಈ ನಶ್ವರಪ್ರಪಂಚವನ್ನು ತ್ಯಾಗಮಾಡಿ ಭಗವಂತನ ದರ್ಶನ ಕ್ಕಾಗಿ ತಪಸ್ಸು ಮಾಡುತ್ತಾರೆ ಎಂಬ ವಿಷಯ ಗದಾಧರನಿಗೆ ಪುರಾಣ ಹರಿಕಥೆಗಳ ಮೂಲಕ ಚೆನ್ನಾಗಿ ತಿಳಿದಿತ್ತು. ಅಲ್ಲದೆ ತಂದೆಯ ಸಾವಿನ ಬಳಿಕ ಐಹಿಕ ಜಗತ್ತಿನ ನಶ್ವರತೆ ಅವನಿಗೆ ಇನ್ನಷ್ಟು ಮಂದಟ್ಟಾಗಿತ್ತು. ಸಾಧು ಸಜ್ಜನರ ಸಹವಾಸ ಮಾಡಿದರೆ ಚಿರಶಾಂತಿ ಲಭಿಸುತ್ತದೆಂದೂ ಅವನು ಅರಿತಿದ್ದ. ಆದ್ದರಿಂದ ಸಮಯವೊದಗಿದಾಗ ಲೆಲ್ಲ ಆ ಛತ್ರಕ್ಕೆ ಹೋಗಲಾರಂಭಿಸಿದ. ಅಲ್ಲಿ ಆ ಸಾಧುಗಳ ರೀತಿನೀತಿಗಳನ್ನು ಗಮನಿಸ ತೊಡಗಿದ. ಮುಂಜಾನೆ ಮತ್ತು ಸಂಜೆಯ ವೇಳೆಗೆ ಸಾಧುಗಳು ಧುನಿ ಹೊತ್ತಿಸಿಕೊಳ್ಳುತ್ತಿದ್ದರು; ಅದನ್ನು ಊದಿ ಪ್ರಜ್ವಲಗೊಳಿಸಿ, ಗಾಢಧ್ಯಾನಮಗ್ನರಾಗಿ ಕುಳಿತುಬಿಡುತ್ತಿದ್ದರು. ಭಿಕ್ಷೆಯಲ್ಲಿ ಏನು ದೊರೆತರೆ ಅದನ್ನೇ ತಮ್ಮ ಇಷ್ಟದೇವತೆಗೆ

ನೈವೇದ್ಯ ಮಾಡಿ ಸಂತೋಷದಿಂದ ಭುಜಿಸುತ್ತಿದ್ದರು. ಎಂತಹ ಕಾಯಿಲೆ ಬಂದರೂ ಸರಿಯೆ, ದೇವರ ಮೇಲೆ ಭಾರ ಹಾಕಿ ಸುಮ್ಮನೆ ಮಲಗಿಬಿಡುತ್ತಿದ್ದರು. ಏನು ಬೇಕಾಗಿ ಬಂದರೂ ಸರಿಯೆ, ಇತರರಿಗೆ ಮಾತ್ರ ತೊಂದರೆ ಕೊಡುತ್ತಿರಲಿಲ್ಲ. ಇದನ್ನೆಲ್ಲ ಗದಾಧರನ ದೃಷ್ಟಿ ಗಮನಿಸುತ್ತಿತ್ತು. ಆದರೆ ಇನ್ನು ಕೆಲವು ಕಳ್ಳಸಾಧುಗಳು ಸುಮ್ಮನೆ ಹೊಟ್ಟೆಪಾಡಿಗಾಗಿ ವೇಷಧರಿಸಿ ಬರುವುದು, ನಿಯಮಗಳೊಂದನ್ನೂ ಪಾಲಿಸದಿರುವುದು ಸಹ ಗೊತ್ತಾಗುತ್ತಿತ್ತು.

ಕ್ರಮೇಣ ಗದಾಧರ ಸಾಧುಗಳೊಂದಿಗೆ ನಿಕಟವಾಗಿ ಬೆರೆಯಲಾರಂಭಿಸಿದ. ಅವರಿಗೆ ಬೇಕಾದ ಸೌದೆಗಳನ್ನು ಆರಿಸಿಕೊಡುವುದು, ನೀರು ತಂದುಕೊಡುವುದು ಇತ್ಯಾದಿ ಸಹಾಯ ಮಾಡುತ್ತಿದ್ದ. ಈ ಮುಗ್ಧ ಬಾಲಕನ ಸದ್ವರ್ತನೆಯಿಂದ ಸಂಪ್ರೀತರಾದ ಆ ಸಾಧುಗಳು ಅವನನ್ನು ಸಲಿಗೆಯಿಂದ ಮಾತನಾಡಿಸುತ್ತಿದ್ದರು. ಕೆಲವರು ಅವನಿಗೆ ಪ್ರಾರ್ಥನೆ ಮಾಡುವುದನ್ನು, ನಾಮಸಂಕೀರ್ತನೆ ಮಾಡುವುದನ್ನು ಹೇಳಿಕೊಟ್ಟರು. ಇನ್ನು ಕೆಲವರು ಇತರ ಆಧ್ಯಾತ್ಮಿಕ ವಿಚಾರಗಳನ್ನು ಬೋಧಿಸಿದರು. ಆ ಛತ್ರದಲ್ಲಿ ಬಹಳ ದಿನ ಉಳಿದುಕೊಂಡು ಅವನೊಂದಿಗೆ ತುಂಬ ಸಲಿಗೆ ಬೆಳೆಸಿದ ಸಾಧುಗಳು ಕೆಲವೊಮ್ಮೆ ಆತನಿಗೆ ತಮ್ಮ ಭಿಕ್ಷೆಯಲ್ಲಿ ಒಂದು ತುತ್ತು ಕೊಡುವುದೂ ಇತ್ತು.

ಬಾಲಕನಿಗೆ ಆಗ ಎಂಟು ವರ್ಷ ವಯಸ್ಸು. ಕಾಮಾರಪುಕುರದ ಆ ಛತ್ರಕ್ಕೆ ಒಮ್ಮೆ ಕೆಲವು ಸಾಧುಗಳು ಬಂದರು. ಸುದೀರ್ಘ ಪ್ರಯಾಣ ಮಾಡಿ ಆಯಾಸಗೊಂಡಿದ್ದರಿಂದಲೊ ಏನೋ, ಅಲ್ಲಿಯೇ ಬಹಳ ದಿನ ಉಳಿದುಕೊಂಡರು. ಎಂದಿನಂತೆ ಗದಾಧರ ಅವರೊಂದಿಗೆ ಬೆರೆತ, ಅವರಿಗೆ ತುಂಬಾ ಪ್ರಿಯನಾದ. ಮೊದಮೊದಲು ಮನೆಯಲ್ಲಿ ಯಾರಿಗೂ ಈ ವಿಷಯ ತಿಳಿಯಲಿಲ್ಲ. ಆದರೆ ಗದಾಧರ ಅವರೊಂದಿಗೆ ಬಹಳ ಹೊತ್ತು ಕಳೆಯಲಾರಂಭಿಸಿದಾಗ ಮನೆಯವರಿಗೆ ವಿಷಯ ತಿಳಿಯಿತು. ಒಂದೊಂದು ದಿನ ಸಾಧುಗಳು ಬಾಲಕನಿಗೆ ತುಂಬ ತಿನಿಸನ್ನು ಕೊಟ್ಟುಬಿಡುತ್ತಿದ್ದರು. ಮನೆಗೆ ಬಂದಾಗ ಅವನಿಗೆ ಹಸಿವೇ ಇರುತ್ತಿರಲಿಲ್ಲ. ಚಂದ್ರಮಣಿ ಹೀಗೇಕೆಂದು ಕೇಳಿದಾಗ ಮಗ ವಿಷಯವನ್ನೆಲ್ಲ ಹೇಳಿದ. ಅವಳಿಗೂ ಮೊದಲಿಗೆ ಏನೂ ಅನ್ನಿಸಲಿಲ್ಲ. ಅಷ್ಟೇ ಅಲ್ಲ, ಸಾಧುಗಳು ಮಗನ ವಿಷಯದಲ್ಲಿ ಸಂತುಷ್ಟರಾಗಿರುವುದು ಅವನಿಗೊಂದು ಆಶೀರ್ವಾದ ಎಂದು ಸಂತೋಷಪಟ್ಟುಕೊಂಡಳು. ಆದ್ದರಿಂದ ಮಗನ ಕೈಯಲ್ಲಿ ಆ ಸಾಧುಗಳಿಗೆ ಆಹಾರವನ್ನೋ ಇನ್ನಿತರ ಆವಶ್ಯಕ ವಸ್ತುಗಳನ್ನೋ ಕೊಟ್ಟು ಕಳಿಸುತ್ತಿದ್ದಳು.

ಆದರೆ ಕೆಲವೊಮ್ಮೆ ಗದಾಧರ ಮನೆಗೆ ಬರುವಾಗ ವಿಭೂತಿ ಬಳಿದುಕೊಂಡೋ ತಿಲಕವಿಟ್ಟುಕೊಂಡೋ ಬರತೊಡಗಿದ. ಅದೂ ಅಲ್ಲದಿದ್ದರೆ, ಉಟ್ಟ ಬಟ್ಟೆಯನ್ನೇ ಹರಿದು ಕೌಪೀನದಂತೆ ಕಟ್ಟಿಕೊಂಡುಬಂದು ಹೇಳುತ್ತಿದ್ದ:

"ನೋಡಮ್ಮ ಸಾಧುಗಳು ನನ್ನನ್ನು ಹೇಗೆ ಅಲಂಕರಿಸಿದ್ದಾರೆ!"

ಇದನ್ನು ಕಂಡಾಗ ಮಾತ್ರ ಚಂದ್ರಮಣಿಯ ಎದೆ ತಲ್ಲಣಿಸಿತು. ಆ ಬೈರಾಗಿಗಳು ಮಗನ ಮನವೊಲಿಸಿ ಕರೆದುಕೊಂಡು ಹೋಗಿಬಿಟ್ಟರೆ! ತನ್ನ

ಭಯವನ್ನು ಮಗನ ಮುಂದೆ ತೋಡಿಕೊಂಡು ಆಕೆ ಅತ್ತೇ ಬಿಟ್ಟಳು. ಗದಾಧರನಿಗೆ ಕಸಿವಿಸಿಯಾಯಿತು. "ಅಯ್ಯೋ, ಹಾಗೆಲ್ಲ ನಾನೆಲ್ಲೂ ಹೋಗುವುದಿಲ್ಲಮ್ಮ!" ಎಂದು ಸಮಾಧಾನ ಪಡಿಸಲು ಎಷ್ಟೋ ಪ್ರಯತ್ನಿಸಿದ. ಆದರೆ ಪ್ರಯೋಜನವಾಗ ಲಿಲ್ಲ. ಆಗ ಗದಾಧರ, ತಾನಿನ್ನು ಆ ಸಾಧುಗಳ ಬಳಿಗೆ ಹೋಗುವುದೇ ಇಲ್ಲ ಎಂದು ಶಪಥ ಮಾಡಿಬಿಟ್ಟ; ಮತ್ತು ತಾಯಿಯ ಮುಂದೆ ಅದನ್ನು ಹೇಳಿಯೂ ಬಿಟ್ಟ. ಅಂತೂ ಕಡೆಗೆ ಚಂದ್ರಾದೇವಿಯ ಚಿಂತೆ ಹರಿಯಿತು.

ಈಗ ಗದಾಧರ ಆ ಸಾಧುಗಳಿಗೆ ವಿದಾಯ ಹೇಳಿಬರಲು ಹೊರಟ. ಅಲ್ಲಿದ್ದ ಸಾಧುಗಳಿಗೆಲ್ಲ ಅಚ್ಚರಿ. "ಏಕಪ್ಪಾ!" ಎಂದು ಕೇಳಿದಾಗ ಗದಾಧರ ಕಾರಣವನ್ನು ವಿವರಿಸಿದ. ಅದನ್ನು ಕೇಳಿ ಆ ಸಾಧುಗಳು ತಾವೇ ಎದ್ದು ಅವನ ಮನೆಗೆ ಬಂದರು. ತಾಯಿಯನ್ನು ಕರೆದು ಹೇಳಿದರು:

"ಅಮ್ಮಾ ನಿಮ್ಮ ಹುಡುಗನನ್ನು ಕರೆದುಕೊಂಡು ಹೋಗುವ ಆಲೋಚನೆ ಎಂದೂ ನಮ್ಮ ಮನಸ್ಸಿಗೆ ಬಂದಿರಲಿಲ್ಲ. ತಾಯ್ತಂದೆಯರ ಸಮ್ಮತಿಯಿಲ್ಲದೆ ಇಂತಹ ಎಳೆಯ ಬಾಲಕನನ್ನು ಕರೆದೊಯ್ದರೆ ಅದು ಕಳ್ಳತನ ಮಾಡಿದಂತೆಯೇ ಸರಿ. ಸಾಧುಗಳಾದವರು ಅಂತಹ ಪಾಪವನ್ನು ಮಾಡಿಯಾರೇನಮ್ಮ!"

ಈಗ ಚಂದ್ರಾದೇವಿಯ ಶಂಕೆ ಪೂರ್ತಿ ಮಾಯವಾಯಿತು. ಮನಸ್ಸು ಹಗುರವಾಯಿತು. ಮಗನನ್ನು ಹಿಂದಿನಂತೆಯೇ ಸಾಧುಗಳ ಬಳಿಗೆ ಹೋಗಲು ಬಿಟ್ಟುಬಿಟ್ಟಳು.

ಗದಾಧರನ ವಿಷಯದಲ್ಲಿ ಚಂದ್ರಮಣಿಯ ಈ ಒಂದು ಚಿಂತೆಯೇನೊ ಬಗೆಹರಿಯಿತು. ಆದರೆ ಇನ್ನೊಂದು ಚಿಂತೆ ಎದುರಾಯಿತು. ಅದೇ ಒಂದು ಕಥೆ.

ಕಾಮಾರಪುಕುರದ ಎರಡು ಮೈಲಿ ಉತ್ತರಕ್ಕೆ ಆನೂರು ಎಂಬ ಗ್ರಾಮ. ಅಲ್ಲಿನ ದೇವಿ ವಿಶಾಲಾಕ್ಷಿ ಜಾಗೃತ ದೇವತೆಯೆಂದು ಪ್ರಸಿದ್ಧಿ. ಸುತ್ತಮುತ್ತಲ ಹಳ್ಳಿಗಳ ಜನರು ತಮ್ಮ ಕಷ್ಟ ಕಾರ್ಪಣ್ಯಗಳನ್ನು ಹೋಗಲಾಡಿಸಿಕೊಳ್ಳಲು, ವಿವಾಹ ಧನಪ್ರಾಪ್ತಿ ಸಂತಾನಪ್ರಾಪ್ತಿಯೇ ಮೊದಲಾದ ಅನುಗ್ರಹಗಳನ್ನು ಹೊಂದಲು ದೇವಿಗೆ ಹರಕೆ ಹೇಳಿಕೊಳ್ಳುತ್ತಿದ್ದರು. ಅವುಗಳು ಈಡೇರಿದಾಗ ಆಕೆಗೆ ಪೂಜೆ ಕೊಡಿಸಲು ಅಲ್ಲಿಗೆ ಬರುತ್ತಿದ್ದರು. ಹಾಗೆ ಅಲ್ಲಿಗೆ ಬರುತ್ತಿದ್ದವರಲ್ಲಿ ಪುರುಷರಿಗಿಂತ ಮಹಿಳೆಯರೇ ಅಧಿಕ. ಅವರಲ್ಲಿ ಅನೇಕ ಮನೆತನಸ್ಥ ಶ್ರೀಮಂತ ಮಹಿಳೆಯರೂ ಇರುತ್ತಿದ್ದರು. ಬಹುಶಃ ಮಹಿಳೆಯರಿಗೇ ತಾಪತ್ರಯಗಳು ಅಧಿಕವೋ ಏನೋ! ಅವರೆಲ್ಲ ದೇವಿಯ ಬಳಿಗೆ ನಡೆದು ಬರುವಾಗ ಆ ದೇವಿ ಅಲ್ಲಿ ಮೊದಲು ಹೇಗೆ ಕಾಣಿಸಿಕೊಂಡಳು, ಹೇಗೆ ಪ್ರತಿಷ್ಠಾಪಿತಳಾದಳು ಎಂಬ ಅಂಶಗಳನ್ನೊಳಗೊಂಡ ಹಾಡುಗಳನ್ನು ಹಾಡುತ್ತ, ಅವಳ ಮಹಿಮೆಯನ್ನು ಕೊಂಡಾಡುತ್ತ ಬರುತ್ತಿದ್ದರು.

ಹಾಗಾದರೆ ದೇವಿ ವಿಶಾಲಾಕ್ಷಿಗೆ ಒಂದು ಭಾರೀ ದೇವಾಲಯವಿರಬಹುದು ಎಂದು ನಮಗನ್ನಿಸಬಹುದಲ್ಲವೆ? ಆದರೆ ಅವಳಿದ್ದುದು ಬಟ್ಟಬಯಲಲ್ಲಿ! ಹಳ್ಳಿಯ ರೈತರು ಆ ಸ್ಥಳವನ್ನು ಬಿಸಿಲು ಮಳೆಗಳಿಂದ ರಕ್ಷಿಸಲು ಆಗಾಗ ಒಂದು ಜೋಪಡಿ ಕಟ್ಟುವುದುಂಟು, ಅಷ್ಟೆ. ಅದರ ಬಳಿಯಲ್ಲೇ ಒಂದು ಕಟ್ಟಡದ

ಅವಶೇಷವಿರುವುದನ್ನು ಕಂಡರೆ, ಹಿಂದೆ ಅಲ್ಲೊಂದು ಇಟ್ಟಿಗೆಯಿಂದ ಕಟ್ಟಿದ ದೇವಾಲಯವೂ ಇತ್ತು ಎನ್ನುವುದು ತಿಳಿದುಬರುತ್ತದೆ. ಈ ದೇವಾಲಯ ಹಾಗೆ ಹಾಳುಬಿದ್ದಿರುವುದಕ್ಕೂ ಒಂದು ಕಥೆಯಿದೆ:

ದೇವಿ ವಿಶಾಲಾಕ್ಷಿಗೆ ಊರ ಜನರೆಲ್ಲ ಬಂದು ಪೂಜೆ ಮಾಡುತ್ತಿದ್ದರಾದರೂ ಅವಳ ಅಚ್ಚುಮೆಚ್ಚಿನ ಭಕ್ತರೆಂದರೆ ಅಲ್ಲಿಗೆ ಬರುತ್ತಿದ್ದ ದನಕಾಯುವ ಮಕ್ಕಳು. ಈ ಮಕ್ಕಳು ಪ್ರತಿದಿನ ಬೆಳಗ್ಗೆ ಊರ ಹಸುಗಳನ್ನು ತಂದು ಅಲ್ಲಿ ಮೇಯಲು ಬಿಟ್ಟು, ತಾವು ದೇವಿಯ ಸುತ್ತ ಕುಳಿತುಕೊಂಡು ಹಾಡು ಹೇಳುತ್ತ, ದೇವಿಯ ಕಥೆ ಹೇಳುತ್ತ ಆಟವಾಡುತ್ತ ಆನಂದದಿಂದ ಸಮಯ ಕಳೆಯುತ್ತಿದ್ದರು. ಅಲ್ಲದೆ ಊರ ಜನರು ಪೂಜೆಮಾಡಿ ದೇವಿಯ ಸನ್ನಿಧಿಯಲ್ಲಿ ಕಾಣಿಕೆ ಹಾಕಿದ್ದರೆ, ಈ ಮಕ್ಕಳು ಆ ಹಣವನ್ನು ತೆಗದುಕೊಂಡು ಅದರಿಂದ ಸಿಹಿ ತಿಂಡಿ, ಮಂಡಕ್ಕಿ ತಂದು ದೇವಿಗೆ ನೈವೇದ್ಯ ಮಾಡಿ ತಿನ್ನುತ್ತಿದ್ದರು. ಈ ಮಕ್ಕಳು ತನ್ನ ವಿಷಯದಲ್ಲಿ ಇಷ್ಟೊಂದು ಸ್ವತಂತ್ರವಾಗಿ ವರ್ತಿಸುತ್ತ ಆಟವಾಡಿಕೊಂಡು ಖುಷಿಯಾಗಿರುವುದು ದೇವಿಗೆ ಬಹಳ ಇಷ್ಟ. ಆ ಮಕ್ಕಳ ತಮಾಷೆಯ ಚೇಷ್ಟೆಗಳಿಲ್ಲದಿದ್ದರೆ ಅವಳಿಗೆ ಸಮಾಧಾನವೇ ಇಲ್ಲ!

ಹೀಗಿರುವಾಗ ಒಮ್ಮೆ ಒಬ್ಬ ಶ್ರೀಮಂತ ತಾನು ಹೊತ್ತ ಯಾವುದೋ ಹರಕೆ ಈಡೇರಿದ್ದರಿಂದ ದೇವಿಗೆ ಒಂದು ಒಳ್ಳೆಯ ದೇವಾಲಯವನ್ನು ಕಟ್ಟಿಸಿ ಅವಳನ್ನು ಅದರೊಳಗೆ ಪ್ರತಿಷ್ಠಾಪಿಸಿದ. ಅರ್ಚಕ ಪ್ರತಿದಿನ ಬೆಳಗ್ಗೆ–ಸಂಜೆ ಪೂಜಾದಿಗಳನ್ನು ಮಾಡಲು ಬರುತ್ತಿದ್ದ; ಬಳಿಕ ಬಾಗಿಲು ಹಾಕಿಕೊಂಡು ಹೊರಟುಹೋಗುತ್ತಿದ್ದ. ಹಿಂದೆ ದೇವಾಲಯವೇ ಇರಲಿಲ್ಲ, ಆದ್ದರಿಂದ ಬಾಗಿಲು ಹಾಕುವ ಕೆಲಸವೂ ಇರಲಿಲ್ಲ. ಈಗ ಪೂಜಾವೇಳೆಯಲ್ಲದೆ ಇತರ ವೇಳೆಯಲ್ಲಿ ಬರುವವರು ತಮ್ಮ ಕಾಣಿಕೆಯನ್ನು ಬಾಗಿಲ ಕಿಂಡಿಯೊಳಗೆ ಹಾಕಿ ಪ್ರಣಾಮ ಸಲ್ಲಿಸಿ ಹೊರಟುಹೋಗ ತೊಡಗಿದರು. ಇದರ ಪರಿಣಾಮವಾಗಿ ಗೋವಳ ಬಾಲಕರಿಗೆ ದೇವಿಯ ಹಣ ತಪ್ಪಿಹೋಯಿತು; ಆ ಹಣದಿಂದ ಸಿಹಿತಿಂಡಿ ತಂದು ದೇವಿಗೆ ನೈವೇದ್ಯ ಮಾಡಿ ತಾವೂ ತಿಂದು ಕುಣಿದಾಡುವುದೂ ತಪ್ಪಿಹೋಯಿತು. ಮಕ್ಕಳ ಮನಸ್ಸಿಗೆ ಬಹಳ ವೇದನೆಯಾಯಿತು. ಜಗನ್ಮಾತೆಯ ಮುಂದೆ ಮೊರೆಯಿಟ್ಟು ತಮ್ಮ ಕಷ್ಟವನ್ನು ಹೇಳಿಕೊಂಡರು:

"ಅಮ್ಮಾ ನಿನ್ನಿಂದಾಗಿ ನಮಗೆ ದಿನವೂ ಹಬ್ಬವಾಗುತ್ತಿತ್ತು. ನಿನ್ನ ಹಣದಿಂದ ನಾವು ದಿನಾಗಲೂ ಸಿಹಿತಿಂಡಿ ತಿನ್ನುತ್ತಿದ್ದೆವು ಈಗ ನೀನೇ ಅದನ್ನು ನಿಲ್ಲಿಸಿಬಿಟ್ಟೆ. ಇನ್ನು ಆ ಸಿಹಿ ತಿಂಡಿಯನ್ನೆಲ್ಲ ನಮಗೆ ಯಾರು ಕೊಡುತ್ತಾರೆ?"

ಸರಳ ಹೃದಯದ ಈ ಮಕ್ಕಳ ದೂರನ್ನು ದೇವಿ ಕೇಳಿಸಿಕೊಂಡಳು. ಕೇಳಿಸಿಕೊಂಡು ಸುಮ್ಮನಿರಲಿಲ್ಲ. ಅಂದು ರಾತ್ರಿಯೇ ದೇವಾಲಯದಲ್ಲಿ ದೊಡ್ಡ ಬಿರುಕು ಬಿಟ್ಟಿತು! ಮರುದಿನ ಬೆಳಗ್ಗೆ ಎಂದಿನಂತೆ ಅರ್ಚಕ ಬಂದ, ಬಿರುಕನ್ನು ಕಂಡ. ಭಯವಾಯಿತು. ಈ ದೇವಾಲಯ ಮುರಿದುಬಿದ್ದು ಇಟ್ಟಿಗೆಯ ರಾಶಿಯಲ್ಲಿ ದೇವಿ ಹೂತುಹೋಗುವುದು ಖಂಡಿತವೆಂದು ಅವನಿಗೆ ಖಾತ್ರಿಯಾಯಿತು.

ಕೂಡಲೇ ಅವನು ದೇವಿಯನ್ನು ಹೊರಗೆ ತಂದು ಹಿಂದಿನಂತೆ ಬಟ್ಟಬಯಲಲ್ಲೇ ಇಟ್ಟು ಪೂಜೆ ಮುಗಿಸಿ ಹೊರಟು ಹೋದ. ಅಂದಿನಿಂದ ಪುನಃ ದೇವಾಲಯವನ್ನು ಕಟ್ಟಿಸಲು ಯಾರೇ ಮುಂದೆ ಬರಲಿ, ಅವರಿಗೆ ಸ್ವಪ್ನದಲ್ಲಾಗಲಿ ಅಥವಾ ಬೇರೆ ರೀತಿಯಲ್ಲಾಗಲಿ ದೇವಿ ಎಚ್ಚರಿಕೆ ನೀಡುತ್ತಿದ್ದಳು – "ದೇವಾಲಯ ಕಟ್ಟಿಸಬೇಡ, ನನಗದು ಬೇಕಿಲ್ಲ" ಎಂದು. ಕೆಲವು ರೈತರನ್ನಂತೂ ದೇವಿ ಸ್ವಪ್ನದಲ್ಲಿ ಹೆದರಿಸಿ ಅವರಿಗೆ ಹೀಗೆಂದಿದ್ದಳು: "ನಾನಿಲ್ಲಿ ಈ ಹೊಲದಲ್ಲಿ ದನಕಾಯುವ ಮಕ್ಕಳೊಂದಿಗೆ ಆನಂದದಿಂದಿದ್ದೇನೆ. ನೋಡಿಕೊ, ನೀನೇನಾದರೂ ನನ್ನನ್ನು ದೇವಾಲಯದಲ್ಲಿ ಕೂಡಿಹಾಕುವುದಕ್ಕೆ ಬಂದರೆ ನಿನ್ನನ್ನು ನಾಶ ಮಾಡಿಬಿಡುತ್ತೇನೆ! ಮತ್ತು, ನಿನ್ನ ಮನೆಯವರಾರನ್ನೂ ಜೀವಸಹಿತ ಬಿಡುವುದಿಲ್ಲ!" ಎಂದು. ಅಂದಿನಿಂದ ಯಾರೂ ದೇವಾಲಯವನ್ನು ಕಟ್ಟುವ ಸುದ್ದಿಗೇ ಹೋಗಲಿಲ್ಲ ಎಂದು ಐತಿಹ್ಯ.

ಒಮ್ಮೆ ಈ ವಿಶಾಲಾಕ್ಷಿಯ ದರ್ಶನಕ್ಕೆ ಚಂದ್ರಮಣಿಯ ಪರಿಚಿತ ಮಹಿಳೆಯರೆಲ್ಲ ಹೊರಟಿದ್ದರು. ಅವರಲ್ಲಿ ಒಂದಿಬ್ಬರು ಆಕೆಯ ಸಂಬಂಧಿಕರೇ. ಜೊತೆಗೆ ಧರ್ಮದಾಸ ಲಾಹಾನ ಸೋದರಿಯಾದ ಪ್ರಸನ್ನಮಯಿಯೂ ಇದ್ದಳು. ಇವಳು ವಿಧವೆ. ಮಹಿಳೆಯರು ವಿಶಾಲಾಕ್ಷಿಯ ದರ್ಶನಕ್ಕೆ ಹೊರಟದ್ದನ್ನು ಕಂಡು ಗದಾಧರ, "ನಾನೂ ಬರುತ್ತೇನೆ ನಿಮ್ಮೊಂದಿಗೆ" ಎಂದ. ಆಗ ಮಹಿಳೆಯರು ಹೇಳಿದರು:

"ಬೇಡ ಮಗು, ಬಹಳ ದೂರ ನಡೆಯಬೇಕಾಗುತ್ತದೆ. ನೀನಿನ್ನೂ ಸಣ್ಣವನು. ದಾರಿಯಲ್ಲಿ ಆಯಾಸವಾಗಬಹುದು."

ಗದಾಧರ ಹಿಡಿದ ಹಟ ಬಿಡಲಿಲ್ಲ. ಆದರೆ ಇದರಿಂದ ಆ ಮಹಿಳೆಯರಿಗೇನೂ ಕಿರಿಕಿರಿಯೆನಿಸಲಿಲ್ಲ, ಬದಲಾಗಿ ಸಂತೋಷವೇ ಆಯಿತು. ಮುದ್ದಾದ ಮಾತು, ಹಿತವಾದ ತಮಾಷೆ, ಸದಾ ನಗುಮುಖದ ಹುಡುಗ ಜೊತೆಯಲ್ಲಿದ್ದರೆ ಯಾರಿಗೆ ತಾನೆ ಸಂತೋಷವಾಗುವುದಿಲ್ಲ! ಅಲ್ಲದೆ, ಈ ವೇಳೆಗಾಗಲೇ, ಗದಾಧರನಿಗೆ ಹಲವಾರು ದೇವದೇವಿಯರ ಹಾಡುಗಳೆಲ್ಲ ಬಾಯಿಗೇ ಬರುತ್ತಿದ್ದುವು. ದೇವಾಲಯಕ್ಕೆ ಹೋಗುವ ದಾರಿಯುದ್ದಕ್ಕೂ ಅವನ ಹಾಡುಗಳನ್ನು ಕೇಳುತ್ತ ಹೋಗುವುದಕ್ಕೆ ಎಷ್ಟು ಸೊಗಸು! ಒಂದು ವೇಳೆ ವಾಪಸು ಬರುವಾಗ ದಾರಿಯಲ್ಲಿ ಗದಾಧರನಿಗೆ ಹಸಿವು–ಬಾಯಾರಿಕೆ ಆಗಬಹುದು ಎಂದಿಟ್ಟುಕೊಳ್ಳೋಣ. ಆದರೂ ಚಿಂತೆಯಿಲ್ಲ; ದೇವಿಗೆ ನೈವೇದ್ಯ ಮಾಡಿದ ಹಣ್ಣು ಹಾಲು ಇದ್ದೇ ಇರುತ್ತದೆ. ಹೀಗಿರುವಾಗ ಗದಾಧರನನ್ನು ತಮ್ಮೊಂದಿಗೆ ಕರೆದುಕೊಂಡು ಹೋಗುವುದಕ್ಕೇನು ಕಷ್ಟ? ಸರಿ; ಅವನನ್ನೂ ಜೊತೆಯಲ್ಲಿ ಕರೆದುಕೊಂಡು ಹೊರಟರು. ಅವನೂ ಆನಂದದಿಂದ ಅವರೊಂದಿಗೆ ನಡೆದ. ಅವರೆಲ್ಲರ ಅಭೀಷ್ಟದಂತೆ ದೇವದೇವಿಯರ ಕಥೆ ಹೇಳಿದ, ಹಾಡು ಹೇಳಿದ. ನಿರಾಯಾಸವಾಗಿ ದಾರಿ ಸಾಗಿತು.

ಸ್ವಲ್ಪ ದೂರ ಹೀಗೆ ಸಾಗಿರಬಹುದು; ದೇವದೇವಿಯರ ಹಾಡುಗಳನ್ನು ಹೇಳುತ್ತ ಸಂತಸದಿಂದಿದ್ದ ಗದಾಧರನಿಗೆ ಅದೇನಾಯಿತೋ ಏನೋ, ಇದ್ದಕ್ಕಿದ್ದಂತೆ ಹಾಡುವುದನ್ನು ನಿಲ್ಲಿಸಿಬಿಟ್ಟ. ಅವನ ಅಂಗಾಂಗಗಳೆಲ್ಲ ಸೆಟೆದು ಮರಗಟ್ಟಿದುವು. ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯತೊಡಗಿತು. ಹೆಂಗಸರೆಲ್ಲ ಮತ್ತೆ

ಮತ್ತೆ ಕರೆದು ಕೇಳಿದರು:

"ಗದಾಯ್, ಏನಾಯಿತಪ್ಪ! ನೀರು ಬೇಕೇನು? ಆಯಾಸವಾಯಿತೆ?"

ಆದರೆ ಉತ್ತರವೇ ಇಲ್ಲ! ಈಗ ಅವರಿಗೆಲ್ಲ ದಿಗಿಲಾಯಿತು. ಪ್ರಾಯಶಃ ಹುಡುಗನಿಗೆ ಬಿಸಿಲಿನ ಹೊಡೆತ ಅತಿಯಾಗಿರಬೇಕೆಂದು ಭಾವಿಸಿದರು. ಬಳಿಯಲ್ಲಿದ್ದ ಕೆರೆಯಿಂದ ನೀರು ತಂದು ಹಣೆಗೆ ತಟ್ಟಿದರು, ಕಣ್ಣಿಗೂ ಚಿಮುಕಿಸಿದರು. ಆದರೆ ಹುಡುಗನಿಗೆ ಪ್ರಜ್ಞೆ ಮರಳಲಿಲ್ಲ. ಮಹಿಳೆಯರ ಕಳವಳ ಹೆಚ್ಚಿತು; ದಿಕ್ಕೇ ತೋಚದಾಯಿತು. ಉಪಾಯವೇನು? ಹೋಗಲಿ, ಏನಾದರೂ ಸ್ವಲ್ಪ ಆಹಾರ ಕೊಡೋಣವೆಂದರೆ ದೇವಿಯ ನೈವೇದ್ಯಕ್ಕೆ ತಂದ ಹಣ್ಣು ಹಾಲನ್ನು ಹುಡುಗನಿಗೆ ಕೊಡುವುದಾದರೂ ಹೇಗೆ? ಈಗ ಚಂದ್ರಮಣಿಯ ಮುದ್ದು ಕುವರನನ್ನು ಮನೆಗೆ ತಲುಪಿಸುವವರು ಯಾರು? ಸುತ್ತಮುತ್ತ ಎಲ್ಲಿ ನೋಡಿದರೂ ಒಬ್ಬನೇ ಒಬ್ಬ ಗಂಡಾಳು ಕಣ್ಣಿಗೆ ಬೀಳಬೇಕಲ್ಲ! ಈಗೇನು ಮಾಡುವುದು? ಮಹಿಳೆಯರೆಲ್ಲ ಈಗ ಮಹಾ ಸಂದಿಗ್ಧದಲ್ಲಿ ಸಿಕ್ಕಿಕೊಂಡರು. ದೇವದೇವಿಯರೆಲ್ಲ ಮರೆತೇಹೋಯಿತು! ಮಹಿಳೆಯರೆಲ್ಲ ಹುಡುಗನ ಸುತ್ತ ಕುಳಿತು ಆತಂಕದಿಂದ ನೋಡತೊಡಗಿದರು. ಕೆಲವರು ಗಾಳಿ ಬೀಸಿದರು; ಕೆಲವರು ನೀರು ಚಿಮುಕಿಸಿದರು; ಮತ್ತೆಮತ್ತೆ 'ಗದಾಯ್, ಓ ಗದಾಯ್' ಎಂದು ಕೂಗಿದರು.

ಹೀಗೇ ಸ್ವಲ್ಪ ಹೊತ್ತು ಕಳೆದಿರಬಹುದು. ಆಗ ಇದ್ದಕ್ಕಿದ್ದಂತೆ ಪ್ರಸನ್ನಮಯಿಗೆ ಅನ್ನಿಸಿತು – 'ಈ ದೇವದೇವಿಯರು ಶುದ್ಧ ಹೃದಯದ ಸ್ತ್ರೀಪುರುಷರ ಮೇಲೂ ಮಕ್ಕಳ ಮೇಲೂ ಬರುವುದುಂಟು ಎಂದು ಕೇಳಿದ ನೆನಪಾಗುತ್ತಿದೆ. ಈಗ ಈ ಸರಳ ಹೃದಯದ ಬಾಲಕನ ಮೇಲೂ ದೇವಿ ವಿಶಾಲಾಕ್ಷಿಯೇ ಬಂದಿರಬಾರದೇಕೆ?' ಪ್ರಸನ್ನಮಯಿ ತನ್ನ ಈ ಅನಿಸಿಕೆಯನ್ನು ಗೆಳತಿಯರ ಮುಂದಿಟ್ಟು ಹೇಳಿದಳು:

"ಸುಮ್ಮನೆ 'ಗದಾಯ್ ಗದಾಯ್' ಎನ್ನಬೇಡಿ. ಭಕ್ತಿಯಿಂದ ದೇವಿ ವಿಶಾಲಾಕ್ಷಿಯನ್ನು ಸ್ಮರಿಸುತ್ತ ಅವಳನ್ನೇ ಕರೆಯಿರಿ. ಆಗ ಅವನು ಏಳುತ್ತಾನೆ."

ಪ್ರಸನ್ನಮಯಿ ಶುದ್ಧಚರಿತಳಾದ ಭಕ್ತಳೆಂಬುದು ಎಲ್ಲರಿಗೂ ತಿಳಿದಿತ್ತು; ಅವಳ ಬಗ್ಗೆ ತುಂಬ ಗೌರವವಿತ್ತು. ಕೂಡಲೇ ಅವಳ ಮಾತಿಗನುಸಾರವಾಗಿ ಹುಡುಗನ ಕಡೆಗೆ ಕೈಜೋಡಿಸಿಕೊಂಡು, "ಓ ತಾಯಿ ವಿಶಾಲಾಕ್ಷಿ! ನಮ್ಮ ಮೇಲೆ ಕೃಪೆದೋರಮ್ಮ! ನಮ್ಮನ್ನು ಕಾಪಾಡಮ್ಮ! ದಯಮಾಡಿ ನಮ್ಮನ್ನು ಸುರಕ್ಷಿತ ಸ್ಥಳಕ್ಕೆ ಮುಟ್ಟಿಸಮ್ಮ!" ಎಂದು ಪ್ರಾರ್ಥಿಸಿದರು.

ಆಶ್ಚರ್ಯವೋ ಆಶ್ಚರ್ಯ! ದೇವಿ ವಿಶಾಲಾಕ್ಷಿಯ ದಿವ್ಯನಾಮವನ್ನು ಕೆಲವು ಬಾರಿ ಉಚ್ಚರಿಸುತ್ತಲೇ ಗದಾಧರನ ಮುಖ ಮಧುರವಾದ ಮುಗುಳ್ನಗೆಯಿಂದ ಮಿನುಗಿತು; ಆತ ಮೆಲ್ಲನೆ ಮೈತಿಳಿದೇಳುವ ಸೂಚನೆ ಕಂಡುಬಂದಿತು. ಈಗ ಆ ಮಹಿಳೆಯರಿಗೆಲ್ಲ ಜೀವ ಬಂದಂತಾಯಿತು. ಗದಾಧರನ ಮೇಲೆ ದೇವಿ ವಿಶಾಲಾಕ್ಷಿ ಬಂದುದರಿಂದಲೇ ಅವನು ಆನಂದಪರವಶನಾಗಿ ಹಾಗೆ ಪ್ರಜ್ಞೆ ತಪ್ಪಿದ್ದು ಎಂಬ ನಂಬಿಕೆಯೂ ಮೂಡಿತು. ಅವರೆಲ್ಲ ಈಗ ಸಾಕ್ಷಾತ್ ದೇವಿಯ ಮುಂದೆಯೇ ಕುಳಿತಿರುವೆವೋ ಎಂಬಂತೆ ಗದಾಧರನಿಗೆ ಮತ್ತೆ ಮತ್ತೆ ಪ್ರಣಾಮ ಮಾಡಿದರು;

"ತಾಯೀ!" ಎಂದು ಕರೆದರು; ಪ್ರಾರ್ಥನೆ ಸಲ್ಲಿಸಿದರು. ಇನ್ನು ಕೆಲವು ಸ್ತ್ರೀಯರಂತೂ ತಾವು ವಿಶಾಲಾಕ್ಷಿಗೆಂದು ತಂದ ನೈವೇದ್ಯವನ್ನು ಅವನಿಗೇ ತಿನ್ನಿಸಿದರು.

ಗದಾಧರ ಮೆಲ್ಲಮೆಲ್ಲನೆ ಮೈತಿಳಿದೆದ್ದು ಕ್ರಮೇಣ ಸಹಜಸ್ಥಿತಿಗೆ ಮರಳಿದ. ಆದರೆ, ಆಶ್ಚರ್ಯಕರ ಸಂಗತಿಯೆಂದರೆ, ಆಗತಾನೆ ಉಂಟಾಗಿದ್ದ ಆ ಪರಿವರ್ತನೆಯಿಂದಾಗಿ ಅವನಲ್ಲಿ ಸ್ವಲ್ಪವೂ ಆಯಾಸ, ನಿಶ್ಶಕ್ತಿ ಕಾಣಿಸಲಿಲ್ಲ. ಈಗ ಮಹಿಳೆಯರು ಭಕ್ತ್ಯಾವೇಶಭರಿತರಾಗಿ, ಗದಾಧರನನ್ನು ಕರೆದುಕೊಂಡು ದೇವಿ ವಿಶಾಲಾಕ್ಷಿಯ ಬಳಿಗೆ ಬಂದರು. ದೇವಿಗೆ ಪೂಜೆ, ನೈವೇದ್ಯಾದಿಗಳನ್ನು ಸಲ್ಲಿಸಿದರು. ಆದರೆ ನೈವೇದ್ಯದ ಒಂದಂಶವನ್ನು ಗದಾಧರ ಆದಾಗಲೇ ಸ್ವೀಕರಿಸಿಯಾಗಿತ್ತು—ದೇವಿಗಿಂತ ಮೊದಲೇ ಇವನಿಗೆ ನೈವೇದ್ಯ! ಇದರಲ್ಲೇನಾದರೂ ಮುನ್ಸೂಚನೆ ಇರಬಹುದೇ? ಯಾರಿಗೆ ಗೊತ್ತು!

ಮನೆಗೆ ಹಿಂದಿರುಗಿದ ಮಹಿಳೆಯರು ಚಂದ್ರಮಣಿಗೆ ವಿಷಯವನ್ನೆಲ್ಲ ವಿವರಿಸಿದಾಗ ಅವಳಿಗಾದ ದಿಗಿಲನ್ನು ಅವಳೇ ಬಲ್ಲಳು. ಹುಡುಗನಿಗೇನೂ ಅಪಾಯ ಸಂಭವಿಸದಿರಲೆಂದು ಶ್ರೀರಘುವೀರನಿಗೆ ವಿಶೇಷ ಪೂಜೆ ಸಲ್ಲಿಸಿದಳು; ವಿಶಾಲಾಕ್ಷಿಗೆ ಮತ್ತೆಮತ್ತೆ ನಮಸ್ಕರಿಸಿ ಅವಳಿಗೂ ವಿಶೇಷ ಪೂಜೆ ಮಾಡಿಸುವುದಾಗಿ ಹರಕೆ ಹೊತ್ತಳು. ಆದರೆ ಗದಾಧರ ತಾಯಿಯನ್ನು ಸಂತೈಸುತ್ತ ಹೇಳಿದ, "ಅಮ್ಮ ನನಗೇನೂ ಆಗಲಿಲ್ಲ. ನಾನಾಗ ಆನಂದದಿಂದಲೇ ಇದ್ದೆ." ಮಗನಿಗೇನು ಗೊತ್ತು ತಾಯಿಯ ತಳಮಳ!

೧೧

## ಬಾಲಕ ಬೀರಿದ ಬೆಳಕು

ಹೀಗೆಯೇ ಮತ್ತೆರಡು ವರ್ಷಗಳು ಉರುಳಿಹೋದುವು. ಜೀವನದ ಏಳು ಬೀಳುಗಳ ಮಧ್ಯೆ ಗದಾಧರ ತನ್ನ ತಂದೆಯ ವಿಯೋಗದ ದುಃಖವನ್ನು ಹೆಚ್ಚು ಕಡಮೆ ಸಂಪೂರ್ಣವಾಗಿ ಮರೆತುಬಿಟ್ಟ. ಈ ನಡುವೆ ಅವನಿಗೊಬ್ಬ ಆಪ್ತ ಸ್ನೇಹಿತ ದೊರಕಿದ್ದ. ಅವನು ಮತ್ತಾರೂ ಅಲ್ಲ, ಕ್ಷುದಿರಾಮನ ಪ್ರಾಣಸ್ನೇಹಿತ ಧರ್ಮದಾಸನ ಮಗ, ಗಯಾವಿಷ್ಣು. ಇಬ್ಬರೂ ಸಮಾನ ವಯಸ್ಕರು. ಶಾಲೆಯಲ್ಲೂ ಆಟ–ಓಡಾಟಗಳಲ್ಲೂ ಇಬ್ಬರೂ ಜೊತೆಯಾಗಿರುತ್ತಿದ್ದರು. ಇಬ್ಬರ ನಡುವಣ ಸ್ನೇಹ ಕ್ರಮೇಣ ದೃಢವಾಯಿತು. ಪ್ರತಿದಿನವೂ ಬಹಳ ಹೊತ್ತು ಒಟ್ಟಾಗಿರತೊಡಗಿದರು.

ಗದಾಧರ ಊರ ಹೆಂಗಸರಿಗೆಲ್ಲ ಅಚ್ಚುಮೆಚ್ಚಿನವನು. ಅವರು ಮುದ್ದು ಗದಾಯಿಯನ್ನು ಆಗಾಗ ಮನೆಗೆ ಕರೆದು ತಿಂಡಿತಿನಿಸು ಹಣ್ಣುಹಂಪಲು ಕೊಡುವುದುಂಟು. ಮನೆಯಲ್ಲಿ ಏನಾದರೂ ವಿಶೇಷ ಮಾಡಿದರೆ ಗದಾಯಿಗೆ ಕರೆಕಳುಹಿಸುವುದುಂಟು. ಅಂತಹ ಸಂದರ್ಭಗಳಲ್ಲಿ ಗದಾಧರ ತನ್ನ ಪ್ರಿಯಮಿತ್ರ ಗಯಾವಿಷ್ಣುವನ್ನೂ ಕರೆದೊಯ್ಯುತ್ತಿದ್ದ. ತನ್ನ ಸ್ನೇಹಿತನನ್ನು ಬಿಟ್ಟು ತಾನೊಬ್ಬನೇ ತಿನ್ನುವುದು ತರವೇ? ಗದಾಧರನ ವೃದ್ಧ ದಾದಿ ಧನಿಯೂ ಕೆಲವೊಮ್ಮೆ ಸಿಹಿತಿಂಡಿಗಳನ್ನು ಮಾಡಿಕೊಡುತ್ತಿದ್ದಳು. ಅದರಲ್ಲೂ ಒಂದು ಪಾಲನ್ನು ಗೆಳೆಯನಿಗೆ ಕೊಟ್ಟಲ್ಲದೆ ಗದಾಧರ ಅದನ್ನು ಮುಟ್ಟುತ್ತಲೇ ಇರಲಿಲ್ಲ. ಈ ಬಾಲಕರ ಸ್ನೇಹ–ವಿಶ್ವಾಸವನ್ನು ಕಂಡು ಇಬ್ಬರ ಮನೆಯವರಿಗೂ ಸಂತೋಷ.

ಗದಾಧರನಿಗೆ ಒಂಬತ್ತು ವರ್ಷ ತುಂಬುತ್ತ ಬಂದಿತು. ಬ್ರಾಹ್ಮಣ ಸಂಪ್ರದಾಯದ ಪ್ರಕಾರ ಉಪನಯನಕ್ಕೆ ಸರಿಯಾದ ವಯಸ್ಸು. ಹಿರಿಯಣ್ಣ ರಾಮಕುಮಾರ ಉಪನಯನದ ಸಿದ್ಧತೆಗೆ ತೊಡಗಿದ. ಈ ನಡುವೆ ಒಂದು ಸ್ವಾರಸ್ಯಕರ ಸಂಗತಿ ನಡೆದಿತ್ತು. ಗದಾಧರನ ಮೇಲೆ ಧನಿಯ ವಾತ್ಸಲ್ಯ ಅದೆಷ್ಟಿತ್ತೆಂಬುದನ್ನು ನಾವು ಬಲ್ಲೆವು. ಒಂದಾನೊಂದು ದಿನ ಅವಳು ಗದಾಧರನೊಡನೆ ಕುಳಿತುಕೊಂಡು ಪ್ರೀತಿಯಿಂದ ಮಾತನಾಡುತ್ತ ಹೇಳಿದ್ದಳು:

"ಗದಾಯ್, ನನ್ನದೊಂದು ಸಣ್ಣ ಆಸೆಯಿದೆಯಪ್ಪ. ನೀನದನ್ನು ನಡೆಸಿಕೊಡುವೆಯಾ?"

"ಏನದು, ಹೇಳವ್ವ," ಗದಾಧರ ಅಷ್ಟೇ ಪ್ರೀತಿಯಿಂದ ಕೇಳಿದ.

"ನೋಡು ಗದಾಯ್, ನಿನಗೆ ಉಪನಯನವಾಗುತ್ತದಲ್ಲ, ಅಂದು ನೀನು

ಮೊದಲ ಭಿಕ್ಷೆಯನ್ನು ನನ್ನಿಂದ ತೆಗೆದುಕೊಂಡರೆ ನನಗೆ ಬಹಳ ಸಂತೋಷವಾಗುತ್ತದೆ. ಹಾಗೆ ಮಾಡುವೆಯೇನಪ್ಪಾ?"

ಇಷ್ಟು ಸುಲಭವಾಗಿ ಸಂತೋಷಗೊಳಿಸಲು ಸಾಧ್ಯವಾಗುವುದಾದರೆ ಯಾಕಾಗಬಾರದು? ಗದಾಧರ ತಕ್ಷಣ ಹೇಳಿದ:

"ಆಗಲವ್ವ, ನಾನು ಖಂಡಿತ ನಿನ್ನಿಂದಲೇ ಮೊದಲ ಭಿಕ್ಷೆ ತೆಗೆದುಕೊಳ್ಳುತ್ತೇನೆ. ಸರಿಯೇ?"

'ಧನ್ಯಳಾದೆ' ಎಂದು ಧನಿ ಗದಾಧರನನ್ನು ಬಾಚಿ ತಬ್ಬಿಕೊಂಡಳು.

ಧನಿಯು ಮನದಲ್ಲಿ ಈ ಬಗೆಯ ಆಸೆ ಹೇಗಾದರೂ ಎದ್ದಿರಬಹುದೋ, ಆಶ್ಚರ್ಯ! ಏಕೆಂದರೆ ಸಂಪ್ರದಾಯಸ್ಥ ಬ್ರಾಹ್ಮಣರ ಮನೆಯಲ್ಲಿ, ಉಪನಯನದ ಶುಭ ಘಳಿಗೆಯಲ್ಲಿ ಸಕಲ ಬ್ರಾಹ್ಮಣಬಂಧುಗಳ ಮುಂದೆ ವಟುವಿನ ಭಿಕ್ಷಾಪಾತ್ರೆಗೆ ಶೂದ್ರಳೊಬ್ಬಳು ಭಿಕ್ಷೆಹಾಕುವುದೆಂದರೇನು! ಅದೂ ಅಂದಿನ ಆ ಕಾಲ! ಸಾಲದ್ದಕ್ಕೆ, ಧನಿಗೂ ಇದೆಲ್ಲ ಗೊತ್ತಿಲ್ಲವೆಂದಲ್ಲ. ಆದರೂ ಆಕೆ ಹಾಗೆ ಕೇಳಿಕೊಂಡಿದ್ದಾಳೆ; ಗದಾಧರ ಒಪ್ಪಿಕೊಂಡಿದ್ದಾನೆ! ಆದರೆ ಇನ್ನೂ ಒಂಬತ್ತು ತುಂಬದ ಪೋರ ಗದಾಧರನಿಗೆ ಅಷ್ಟೆಲ್ಲ ಸ್ವಾತಂತ್ರ್ಯವಿದೆಯೆ? 'ಏನೋ ಹುಡುಗುಬುದ್ಧಿಯು ಆಕೆ ಕೇಳಿಕೊಂಡಳು, ಹುಡುಗುಬುದ್ಧಿಯು ಈತ ಒಪ್ಪಿಕೊಂಡ; ಅದೆಲ್ಲ ಆಗಹೋಗದ ಮಾತು' ಎನ್ನುವಿರೇನು? ಇಲ್ಲ, ಇಲ್ಲ; ಅದು ಹಾಗಾಗಲಿಲ್ಲ.

ಒಂದು ದಿನ ಸಂದರ್ಭವೊದಗಿದಾಗ, ಗದಾಧರ ತಾನು ಧನಿಗೆ ಮಾತುಕೊಟ್ಟ ವಿಷಯವನ್ನು ಹಿರಿಯಣ್ಣ ರಾಮಕುಮಾರನಿಗೆ ತಿಳಿಸಿದ. ರಾಮಕುಮಾರ ಒಪ್ಪಿಯಾನೆ? ಹೇಳಿದ:

"ಅದೆಲ್ಲ ಹೇಗಾದೀತಪ್ಪ? ನೋಡು, ಸಂಪ್ರದಾಯ ಹೇಗಿದೆಯೋ ಹಾಗೆ ಮಾಡಬೇಕು, ಅರ್ಥವಾಯಿತೆ? ಹಾಗೆಲ್ಲ ಇತರೇ ಜನಗಳ ಹತ್ತಿರ ಭಿಕ್ಷೆ ತೆಗೆದುಕೊಳ್ಳಬಾರದಪ್ಪ."

ಹೀಗೆಂದು ಹುಡುಗನಿಗೆ ಬುದ್ಧಿ ಹೇಳಲು ನೋಡಿದ. ಆದರೆ ಗದಾಧರ ಹಿಡಿದ ಪಟ್ಟು ಬಿಡಲಿಲ್ಲ.

"ನೋಡಣ್ಣ, ನಾನು ಅವಳಿಗೆ ಮಾತು ಕೊಟ್ಟಾಗಿದೆ. ಈಗ ನಾನು ಕೊಟ್ಟ ಮಾತಿಗೆ ಹೇಗೆ ತಪ್ಪಲಿ? ಹಾಗೆ ಮಾಡಿದರೆ ಸುಳ್ಳು ಹೇಳಿದಂತಾಗಲಿಲ್ಲವೇ? ಸುಳ್ಳು ಹೇಳುವ ಮನುಷ್ಯ ಗಾಯತ್ರೀಮಂತ್ರವನ್ನು ಸ್ವೀಕರಿಸಲು ಯೋಗ್ಯನಾಗುವನೆ? ನೀನೇ ಹೇಳಣ್ಣ!"

ರಾಮಕುಮಾರನಿಗೆ ಇದಕ್ಕೇನು ಹೇಳಬೇಕೋ ತೋಚಲಿಲ್ಲ. ಆದರೆ ಸಂಪ್ರದಾಯವನ್ನು ಮುರಿಯುವುದು ಮಾತ್ರ ಅವನಿಗೆ ಸುತರಾಂ ಇಷ್ಟವಿಲ್ಲ. ಉಪನಯನಕ್ಕೆ ಸಿದ್ಧತೆಗಳೆಲ್ಲ ಮುಗಿಯುತ್ತ ಬಂದುವು. ಆದರೆ ಯಾರೇನು ಹೇಳಿದರೂ ಗದಾಧರ ಮಾತ್ರ ತನ್ನ ಹಟ ಬಿಡಲಿಲ್ಲ. ಕಡೆಗೆ ರಾಮಕುಮಾರನೆಂದ:

"ಹಾಗಾದರೆ ಒಂದು ಕೆಲಸ ಮಾಡೋಣ. ಈ ವಿಷಯದಲ್ಲಿ ಹಿರಿಯರ ಅಭಿಪ್ರಾಯ ಪಡೆದು, ಅದರಂತೆ ನಡೆಯೋಣ. ಏನೆನ್ನುವೆ?"

"ಹಾಗೇ ಆಗಲಿ," ಒಪ್ಪಿದ ಗದಾಧರ.

ತಂದೆ ಕ್ಷುದಿರಾಮನ ಪರಮ ಸ್ನೇಹಿತನೂ ಊರ ಹಿರಿಯನೂ ಆದ ಧರ್ಮದಾಸ ಲಾಹಾನ ಸಲಹೆಯನ್ನು ಕೇಳುವುದೆಂದು ನಿಶ್ಚಯವಾಯಿತು. ರಾಮ ಕುಮಾರನೂ ಗದಾಧರನೂ ಆತನ ಮುಂದೆ ತಮ್ಮ ತಮ್ಮ ನಿಲುವನ್ನು ವ್ಯಕ್ತಪಡಿಸಿದರು. ಧರ್ಮದಾಸ ಸಾವಧಾನದಿಂದ ಆಲಿಸಿದ. ಆಳವಾಗಿ ಆಲೋಚಿಸಿದ. ಕಡೆಗೆ ಒಮ್ಮನಸ್ಸಿನಿಂದ ರಾಮಕುಮಾರನನ್ನು ಉದ್ದೇಶಿಸಿ ಹೇಳಿದ:

"ನೋಡಪ್ಪ, ನಿಮ್ಮ ಕುಟುಂಬದಲ್ಲಿ ಇಲ್ಲಿಯವರೆಗೂ ಇಂಥದೇನೂ ನಡೆದಿಲ್ಲ, ನಿಜ. ಆದರೆ ಎಷ್ಟೋ ಮನೆತನಸ್ಥ ಬ್ರಾಹ್ಮಣರ ಮನೆಗಳಲ್ಲಿ ಹೀಗೆ ನಡೆದಿರುವುದು ನನಗೆ ಗೊತ್ತಿದೆ. ಆದ್ದರಿಂದ ಇದರಲ್ಲೇನೂ ದೋಷವಿಲ್ಲ. ನೀನೇನೂ ಆ ಬಗ್ಗೆ ಚಿಂತಿಸಬೇಡ. ಅಲ್ಲದೆ, ನಾವು ದೊಡ್ಡವರು ಹುಡುಗನ ಭಾವನೆಗೂ ಸ್ವಲ್ಪ ಗಮನ ಕೊಡಬೇಕಾಗುತ್ತದೆ. ಹುಡಗನಿಗೆ ತಾನು ಸುಳ್ಳಾಡಿದೆ, ತಪ್ಪು ಮಾಡಿದೆ ಎಂಬ ಚಿಂತೆಯುಂಟಾಗಿಬಿಟ್ಟರೆ ಕೆಲಸ ಕೆಡುತ್ತದೆ."

ರಾಮಕುಮಾರನಿಗೆ ಈ ಮಾತು ಒಪ್ಪಿಗೆಯಾಯಿತು; ಸಮಾಧಾನವಾಯಿತು. ಅದಾದ ಮೇಲೆ ಅವನಾಗಲಿ ಇತರರಾಗಲಿ ಗದಾಧರನನ್ನು ಆ ಬಗ್ಗೆ ಒತ್ತಾಯಪಡಿಸಲಿಲ್ಲ. ಬ್ರಹ್ಮೋಪದೇಶ ಸಮಾರಂಭ ನೆರವೇರಿತು. ಗದಾಧರ ತಾನು ಮಾತು ಕೊಟ್ಟಂತೆ ಧನಿಯಿಂದ ಪ್ರಥಮ ಭಿಕ್ಷೆ ಪಡೆದ. ಈಗ ಅವನು ಸಂತೃಪ್ತ ಮನಸ್ಕನಾಗಿ ಒಬ್ಬ ಯೋಗ್ಯ ವಟುವಿನಂತೆ ಸಂಧ್ಯಾವಂದನಾದಿಗಳ ಕಡೆಗೆ ಗಮನ ಹರಿಸಿದ. ಗದಾಧರನಂತಹ ದಿವ್ಯ ವಟುವಿಗೆ ಪ್ರಥಮ ಭಿಕ್ಷೆ ನೀಡಿದ ಧನಿಯ ಆನಂದ ಅತ್ಯಗಾಧ.

ಈ ದಿನಗಳಲ್ಲೇ ಒಮ್ಮೆ ಗದಾಧರನ ದೈವದತ್ತವಾದ ಅಸಾಧಾರಣ ಪ್ರತಿಭೆ ಪ್ರಕಟಗೊಳ್ಳುವ ಘಟನೆಯೊಂದು ನಡೆಯಿತು. ಊರಿನ ಶ್ರೀಮಂತ ಜಮೀನ್ದಾರರಾದ ಲಾಹಾರ ಮನೆಯಲ್ಲಿ ಶ್ರಾದ್ಧ. ಸುತ್ತಮುತ್ತಲಿನ ಅನೇಕ ಹೆಸರಾಂತ ಪಂಡಿತರು ಆಗಮಿಸಿದ್ದರು. ಶ್ರಾದ್ಧಕರ್ಮ, ಭೋಜನಾದಿಗಳೆಲ್ಲ ಮುಗಿದುವು. ಪಂಡಿತರೆಲ್ಲ ಹರಟುತ್ತ ಕುಳಿತರು. ಆಗ ಶಾಸ್ತ್ರಗಳಲ್ಲಿನ ಯಾವುದೋ ಒಂದು ವಿವಾದಾಸ್ಪದ ವಿಚಾರದ ಪ್ರಸ್ತಾಪ ಬಂದಿತು. ಬೇಗನೆ ಚರ್ಚೆ ಬಿಸಿಯೇರಿತು. "ನೋಡಿ, ಅದರ ಅರ್ಥ ಹೀಗಿರಬೇಕು" ಎಂದು ಒಬ್ಬರೆಂದರೆ ಇನ್ನೊಬ್ಬರು, "ಛೆ, ಛೆ, ಎಲ್ಲಾದರೂ ಉಂಟೆ ? ಸಾಧ್ಯವೇ ಇಲ್ಲ. ಅಲ್ಲಿ ಹೇಳಿರುವುದು ಈ ಅರ್ಥದಲ್ಲಿ" ಎನ್ನುತ್ತಿದ್ದರು. ಎಷ್ಟು ಹೊತ್ತಾದರೂ ಪಂಡಿತರು ಯಾವೊಂದು ಇತ್ಯರ್ಥಕ್ಕೂ ಬರುವ ಸೂಚನೆ ಕಾಣಲಿಲ್ಲ.

ತನ್ಮಧ್ಯೆ, ಈ ವಾದವಿವಾದವನ್ನೆಲ್ಲ 'ನೋಡುತ್ತ' ಕುಳಿತ ಮಕ್ಕಳಿಗೆ ಭಾರೀ ಮೋಜು ! ಆ ಬ್ರಾಹ್ಮಣರ ಮಾತಿನ ವೈಖರಿಯೇನು ! ಅವರ ಹಾವಭಾವಗಳೇನು ! ಜೊತೆಗೆ ಅವರ ಹೊಟ್ಟೆಗಳೂ ತಲೆಗಳೂ ತೂಗಾಡುವುದೇನು ! ಅದನ್ನೆಲ್ಲ ನೋಡಿ ಕೆಲವು ಮಕ್ಕಳು ಕೇಕೆ ಹಾಕಿ ನಕ್ಕರೆ, ಇನ್ನು ಕೆಲವು ಅವರನ್ನೇ ಅನುಕರಿಸುತ್ತಿದ್ದುವು. ಒಬ್ಬರಿಗೂ ಆ ಪಂಡಿತರ ಮಾತಿನ ತಲೆಬುಡ ಅರ್ಥವಾಗುವಂತಿಲ್ಲ. ಇನ್ನು ಕೆಲವು

ಮಕ್ಕಳು ಇವೆಲ್ಲ ಬೇಡವೇ ಬೇಡವೆಂದು ಇನ್ನೊಂದೆಡೆ ಸೇರಿ ಆಟವಾಡುತ್ತ ಬೊಬ್ಬೆ ಹೊಡೆಯುತ್ತಿದ್ದುವು. ಆದರೆ ಇಷ್ಟೆಲ್ಲ ದೊಂಬಿಯ ನಡುವೆ ಬಾಲಕ ಗದಾಧರ ಮಾತ್ರ ಪಂಡಿತರ ಬಳಿಯೇ ಕುಳಿತು, ಗಲ್ಲಕ್ಕೆ ಕೈಕೊಟ್ಟು ಅವರ ಚರ್ಚೆಯನ್ನು ಆಲಿಸುತ್ತಿದ್ದ. ಯಾವ ಗಲಾಟೆಯಿಂದಲೂ ಅವನ ಏಕಾಗ್ರತೆಗೆ ಭಂಗವಾಗಲಿಲ್ಲ. ಅವನ ಮನದೊಳಗೆ ಮಂಥನ ನಡೆಯುತ್ತಿತ್ತು. ಕಡೆಗೆ ಅವನು ತನ್ನ ಬಳಿಯಲ್ಲೇ ಕುಳಿತಿದ್ದ ಪರಿಚಯದ ಬ್ರಾಹ್ಮಣರೊಬ್ಬರನ್ನು ಕರೆದು ಹೇಳಿದ – "ಅಲ್ಲ, ಈ ಬಿಕ್ಕಟ್ಟನ್ನು ಹೀಗೆ ಇತ್ಯರ್ಥ ಮಾಡಬಹುದಲ್ಲವೆ ?" ಹೀಗೆನ್ನುತ್ತ ಅವನು ಆ ಬಗ್ಗೆ ತನ್ನ ಅಭಿಪ್ರಾಯವನ್ನು ತಿಳಿಸಿದ.

ಅದನ್ನು ಕೇಳಿದ ಆ ಪಂಡಿತರಿಗೆ ಪರಮಾಶ್ಚರ್ಯ. ಏಕೆಂದರೆ, ಇಷ್ಟೆಲ್ಲ ಗಲಾಟೆ ಗೊಂದಲಗಳ ಮಧ್ಯದಲ್ಲಿ ಈ ಪೋರ ತಮ್ಮ ಮಾತನ್ನು ಆಲಿಸುತ್ತ ಕುಳಿತಿದ್ದಾನಲ್ಲ! ಅಲ್ಲದೆ ಅವನು ವ್ಯಕ್ತಪಡಿಸಿದ ಅಭಿಪ್ರಾಯವಾದರೂ ಸರಿಯಾಗೇ ತೋರುತ್ತಿದೆ!! ಗದಾಧರ ಸೂಚಿಸಿದ ಪರಿಹಾರವನ್ನು ಅವರು ಇತರ ಪಂಡಿತರ ಮುಂದಿಟ್ಟರು. ಅರೆ, ಹೌದಲ್ಲಾ! ಇದೇ ಸರಿಯಾದ ಉತ್ತರ! ಯಾರು ಇದನ್ನು ಹೇಳಿದ್ದು? ಈ ಬಾಲಕನೆ? ಅಲ್ಲಿದ್ದ ಪಂಡಿತರೆಲ್ಲ ಗದಾಧರನನ್ನೇ ಬೆರಗುಗಣ್ಣಿಂದ ನಿಟ್ಟಿಸಿದರು. ಇವನಲ್ಲಿ ಏನೋ ಒಂದು ದೈವೀಶಕ್ತಿಯಿರಬೇಕು ಎಂದು ಮತ್ತೆ ಮತ್ತೆ ಅವನನ್ನೇ ಕಣ್ತೆರೆದು ನೋಡಿದರು! ಇನ್ನು ಕೆಲವರು ತಮ್ಮ ಆನಂದವನ್ನು ತಾಳಲಾರದೆ ಅವನನ್ನು ಮಡಿಲಲ್ಲಿ ಕುಳ್ಳಿರಿಸಿಕೊಂಡು ತಲೆ ನೇವರಿಸುತ್ತ ಹೃತ್ಪೂರ್ವಕವಾಗಿ ಹರಸಿದರು.

ಉಪನಯನವಾದ ಬಳಿಕ ಗದಾಧರನಿಗೆ ತನ್ನ ಹೃದಯಕ್ಕೆ ಪ್ರಿಯವಾದ ಕಾರ್ಯಗಳನ್ನೆಲ್ಲ ಮಾಡಲು ಅವಕಾಶ ಸಿಕ್ಕಿತು. ಆಧ್ಯಾತ್ಮಿಕ ಪ್ರವೃತ್ತಿ ಅವನಲ್ಲಿ ರಕ್ತಗತವಾಗಿ ಬಂದುದಲ್ಲವೆ? ರಘುವೀರನ ಜೀವಂತ ಚಿಹ್ನೆಯಾದ ಸಾಲಿಗ್ರಾಮವು ತನ್ನ ತಂದೆಗೆ ಸ್ವಪ್ನದಲ್ಲಿ ಗೋಚರವಾದದ್ದು, ಅದು ತಮ್ಮ ಮನೆಯನ್ನು ಪ್ರವೇಶಿಸಿದ್ದು, ಅದರ ಪ್ರತಿಷ್ಠಾಪನೆಯಾದಾಗಿನಿಂದ ತಮ್ಮ ಬಡತನ ದೂರ ವಾದದ್ದು, ತಮ್ಮ ಪುಟ್ಟ ಗದ್ದೆಯಲ್ಲೇ ಬತ್ತ ಹೇರಳವಾಗಿ ಬೆಳೆದು ತಮ್ಮ ಹಸಿವನ್ನು ಹಿಂಗಿಸಿದ್ದಲ್ಲದೆ ಕರುಣಾಳುವಾದ ತನ್ನ ತಾಯಿಯು ಮನೆಗೆ ಬಂದ ಬಡವರಿಗೆಲ್ಲ ಉಣಬಡಿಸಲು ಅವಕಾಶವಾದದ್ದು–ಇವೆಲ್ಲ ಬಾಲಕ ಗದಾಧರನಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದ ಮೊದಲಿನಿಂದಲೂ ಅವನಿಗೆ ತಮ್ಮ ಮನೆದೇವರೆಂದರೆ ಅತ್ಯಂತ ಭಕ್ತಿ, ಪೂಜ್ಯಭಾವ. ಈಗ ಉಪನಯನವಾದ ಮೇಲೆ ಶ್ರೀರಘುವೀರನ ಸಾಲಿಗ್ರಾಮವನ್ನು ಮುಟ್ಟಲು, ಪೂಜೆ ಮಾಡಲು ಅವಕಾಶ ದೊರೆತದ್ದರಿಂದ ಅವನ ಹೃದಯದಲ್ಲಿ ಸುಪ್ತವಾಗಿದ್ದ ಭಕ್ತಿಯು ಮಹಾಪೂರವಾಗಿ ಹರಿಯಲಾರಂಭಿಸಿತು. ಈಗ ಅವನು ತನ್ನ ಸಂಧ್ಯಾದಿಗಳನ್ನು ಮುಗಿಸಿದ ಮೇಲೆ ಬಹುಳಷ್ಟು ಹೊತ್ತನ್ನು ಪೂಜೆ, ಧ್ಯಾನಗಳಲ್ಲಿ ಕಳೆಯತೊಡಗಿದ. ಅದರಲ್ಲೂ ಮನೆದೇವರಾದ ರಘುವೀರನ ಮೇಲೆ ಅವನಿಗೆ ಅಂಥಾ ಭಕ್ತಿ, ನಿಷ್ಠೆ. ತನ್ನ ತಂದೆಗೆ ಆಗಾಗ ದರ್ಶನವಿತ್ತು ಕಾಲಕಾಲಕ್ಕೆ ಮಾರ್ಗದರ್ಶನವಿತ್ತವನು ರಘುವೀರನಲ್ಲವೆ? 'ಹೇ ರಾಮ, ನನ್ನ

ವಿಷಯದಲ್ಲಿ ಸಂಪ್ರೀತನಾಗಿ ಕರುಣೆದೋರು' ಎಂಬುದೇ ಅವನ ನಿತ್ಯ ಪ್ರಾರ್ಥನೆಯಾಗಿತ್ತು. ರಘುವೀರನನ್ನಲ್ಲದೆ ಶಿವನನ್ನೂ ಶೀತಲಾದೇವಿಯನ್ನೂ ಅವನು ಭಕ್ತಿಯಿಂದ ಪೂಜಿಸುತ್ತಿದ್ದ. ಬಾಲಕನ ಪರಿಶುದ್ಧ ಹೃದಯವು ಆ ಪೂಜೆಯ ಭಾವದಲ್ಲೇ ಹೇಗೆ ಓತಪ್ರೋತವಾಯಿತೆಂದರೆ, ಕೆಲಕಾಲದಲ್ಲೇ ಆತ ಭಾವ ಸಮಾಧಿಯ ಆನಂದವನ್ನು ಅನುಭವಿಸಿದ.

೧೨

# 'ಶಿವಾನಂದಲಹರಿ'

ಗದಾಧರನ ಈ ದಿವ್ಯಾನಂದ ಪ್ರಕಟಗೊಳ್ಳುವ ಒಂದು ಘಟನೆ ನಡೆಯಿತು. ಅದು ನಡೆದುದು ಆ ವರ್ಷದ ಶಿವರಾತ್ರಿಯಂದು. ಆ ದಿನವಿಡೀ ಗದಾಧರ ಉಪವಾಸದಿಂದಿದ್ದ. ಅವನ ಸ್ನೇಹಿತ ಗಯಾವಿಷ್ಣು ಹಾಗೂ ಇನ್ನು ಕೆಲವು ಹುಡುಗರು ಅಂದು ಉಪವಾಸವಿದ್ದರು. ಶಿವರಾತ್ರಿ ವ್ರತವೆಂದ ಮೇಲೆ ಜಾಗರಣೆಯೂ ಇರಲೇಬೇಕು. ಪಕ್ಕದ ಸೀತಾನಾಥ ಪೈನೆ ಎಂಬವನ ಮನೆಯಲ್ಲಿ ಆ ರಾತ್ರಿ ಶಿವಮಹಿಮೆಯ ಕುರಿತಾದ ಒಂದು ನಾಟಕ ನಡೆಯಲಿತ್ತು. ನಾಟಕ ಇದ್ದುಬಿಟ್ಟರೆ ಜಾಗರಣೆ ಬಹಳ ಸುಲಭ. ಆದ್ದರಿಂದ ಗ್ರಾಮಸ್ಥರೆಲ್ಲ ಬಹಳ ಉತ್ಸಾಹದಿಂದ ಜಾಗರಣೆಗೆ ಸಿದ್ಧರಾದರು.

ನಾಟಕದ ತಂಡದವರು ಪಕ್ಕದ ಗ್ರಾಮದಿಂದ ಬಂದವರು. ಸೂರ್ಯ ಮುಳುಗಿದ ಅರ್ಧ ಘಂಟೆಗೆ ನಾಟಕ ಪ್ರಾರಂಭವಾಗಬೇಕು. ಆದರೆ ಸಂಜೆಯ ವೇಳೆಗೆ ಸುದ್ದಿ ಬಂತು—ಶಿವನ ಪಾತ್ರ ಮಾಡಬೇಕಾಗಿದ್ದವನು ಕಾಯಿಲೆ ಬಿದ್ದು ಹಾಸಿಗೆ ಹಿಡಿದಿದ್ದಾನೆ, ಬರುವುದಕ್ಕೆ ಸಾಧ್ಯವೇ ಇಲ್ಲ ಎಂದು. ಆ ಪಾತ್ರವನ್ನು ಅವನ ಬದಲಾಗಿ ವಹಿಸುವಂಥವರು ಯಾರೂ ಸಿಗಲಿಲ್ಲ. ತಂಡದ ಯಜಮಾನ ಹತಾಶನಾದ. ನಾಟಕವನ್ನು ಮುಂದೆ ಹಾಕಲು ಅವಕಾಶ ಕೊಡಬೇಕು ಎಂದು ಊರವರನ್ನು ಬೇಡಿಕೊಂಡ. ಆದರೆ ನಾಟಕವಿಲ್ಲದಿದ್ದರೆ ಜಾಗರಣೆಯ ಗತಿ ? ಈಗೇನು ಮಾಡುವುದು ? ಹಿರಿಯರೆಲ್ಲ ಕುಳಿತು ಆಲೋಚನೆ ಮಾಡಿದರು. ಕಡೆಗೆ ತಂಡದ ಯಜಮಾನನಿಗೆ ಹೇಳಿಕಳಿಸಿದರು — 'ಶಿವನ ಪಾತ್ರಕ್ಕೆ ಯಾರನ್ನಾದರೂ ಹುಡುಕಿ ಕೊಟ್ಟರೆ ನಾಟಕ ಆಡಿಸುತ್ತೀಯಾ ?' ಎಂದು. ಯಜಮಾನ 'ಆಗಬಹುದು' ಎಂದ. ಸರಿ, ಹಿರಿಯರು ಮತ್ತೆ ಕುಳಿತು ಚರ್ಚಿಸಿದರು. ಯಾರನ್ನು ಆರಿಸುವುದು ? ಗದಾಯಿಯನ್ನೆ ? ಗದಾಯ್ ಬಹಳ ಚಿಕ್ಕವನಾದ. ಆದರೆ ಅವನಿಗೆ ಶಿವನ ಕುರಿತಾದ ಹಾಡುಗಳು ಬೇಕಾದಷ್ಟು ಬರುತ್ತವೆ. ಅಲ್ಲದೆ ಅವನ ಮುಖಲಕ್ಷಣವೂ ಶಿವನ ಪಾತ್ರಕ್ಕೆ ಚೆನ್ನಾಗಿ ಒಪ್ಪುತ್ತದೆ. ಸರಿ, ಗದಾಯಿಗೇ ಹೇಳುವುದೆಂದು ತೀರ್ಮಾನವಾಯಿತು. ಆದರೆ ನಾಟಕ ಎಂದಮೇಲೆ ಮಾತುಗಳು ಇರುತ್ತವಲ್ಲವೆ ? ಅದಕ್ಕೇನು ಮಾಡುವುದು ? ಆ ವಿಷಯ ಮಾತ್ರ ಯಜಮಾನನಿಗೆ ಬಿಟ್ಟದ್ದು. ಅದೊಂದನ್ನು ಅವನು ಹೇಗೋ ನೋಡಿಕೊಳ್ಳಬೇಕು ಎಂಬ ನಿಶ್ಚಯಕ್ಕೆ ಬಂದರು.

ಇತ್ತ ಗದಾಧರ ಸಂಜೆಯ ವೇಳೆಗೆ ಮಾಡಬೇಕಾದ ಪೂಜೆಗಳನ್ನೆಲ್ಲ ಮುಗಿಸಿ

ಶಿವನನ್ನೇ ಧ್ಯಾನಿಸುತ್ತ ಕುಳಿತಿದ್ದ. ಆಗ ಇದ್ದಕ್ಕಿದ್ದಂತೆ ಅವನ ಕೆಲವು ಸ್ನೇಹಿತರು ಓಡಿಬಂದು ಅವನನ್ನು ಎಬ್ಬಿಸಿದರು. ನಾಟಕದಲ್ಲಿ ಶಿವನ ಪಾತ್ರಧಾರಿ ಕಾಯಿಲೆ ಬಿದ್ದಿರುವುದನ್ನು ತಿಳಿಸಿ, ಗದಾಧರನೇ ಶಿವನ ಪಾತ್ರ ಮಾಡಬೇಕು ಎಂಬ ಗ್ರಾಮಸ್ಥರ ತೀರ್ಮಾನವನ್ನು ತಿಳಿಸಿದರು. ಅದಕ್ಕೆ ಗದಾಧರನೆಂದ :

"ಆದರೆ ಇದರಿಂದ ನಾನು ಕೈಗೊಂಡಿರುವ ಪೂಜೆಗೆ ತೊಂದರೆಯಾಗುತ್ತದಲ್ಲ!"

ಹುಡುಗರು ಬಿಡಲಿಲ್ಲ.

"ನೋಡು ಗದಾಯ್, ಶಿವನ ಪಾತ್ರ ಮಾಡಿದೆಯೆಂದರೆ ನೀನು ಅವನ ಬಗ್ಗೆಯೇ ಚಿಂತಿಸುತ್ತಿರಬೇಕಾಗುತ್ತದೆ. ಅದು ಪೂಜೆ ಮಾಡಿದಂತೆಯೇ ಆಯಿತಲ್ಲವೆ? ಅಲ್ಲದೆ, ಈಗ ನೀನು ಒಪ್ಪಿಕೊಳ್ಳದಿದ್ದರೆ ಎಷ್ಟು ಜನರಿಗೆ ನಿರಾಶೆಯಾಗುತ್ತದೆ ನೋಡು! ನಾವು ಕೂಡ ನಾಟಕ ನೋಡುತ್ತ ಜಾಗರಣೆ ಮಾಡಬೇಕು ಅಂತ ಎಷ್ಟು ಆಸೆ ಇಟ್ಟುಕೊಂಡಿದ್ದೇವೆ ಗೊತ್ತೆ?"

ಸ್ನೇಹಿತರ ವಿಶ್ವಾಸವನ್ನು ತಳ್ಳಿಹಾಕಲು ಗದಾಧರನಿಗೆ ಸಾಧ್ಯವಾಗಲಿಲ್ಲ. ತಾಯಿಗೆ ವಿಷಯ ತಿಳಿಸಿ ಗೆಳೆಯರೊಂದಿಗೆ ಹೊರಟ.

ಗಯಾವಿಷ್ಣುವೂ ಇತರ ಸ್ನೇಹಿತರೂ ಸೇರಿ ಗದಾಧರನಿಗೆ ಶಿವನ ವೇಷ ತೊಡಿಸಿದರು. ಅವನಿಗೆ ಆ ವೇಷ ಬಹಳ ಚೆನ್ನಾಗಿ ಒಪ್ಪುತ್ತಿತ್ತು. ರಂಗಮಂಟಪದ ಪಕ್ಕದ ಕೋಣೆಯಲ್ಲಿ ಅವನು ಶಿವನ ಬಗ್ಗೆಯೇ ಆಲೋಚಿಸುತ್ತ ಕುಳಿತ. ಸಮಯಕ್ಕೆ ಸರಿಯಾಗಿ ಪರದೆ ಸರಿಯಿತು. ಒಬ್ಬ ಸ್ನೇಹಿತ ಬಂದು ಗದಾಧರನನ್ನು ಕರೆದುಕೊಂಡು ರಂಗಮಂಟಪದ ಕಡೆಗೆ ಹೊರಟ. ಗದಾಧರ ಅತ್ತಿತ್ತ ನೋಡದೆ ಯಾವುದೋ ಭಾವದಲ್ಲಿರುವಂತೆ ಮಂಟಪವನ್ನು ಪ್ರವೇಶಿಸಿದ. ನಿಧಾನವಾಗಿ, ಶಾಂತವಾಗಿ ಹೆಜ್ಜೆಯಿಡುತ್ತ ಮಂಟಪದ ಮಧ್ಯಕ್ಕೆ ಬಂದು ನಿಶ್ಚಲವಾಗಿ ನಿಂತುಬಿಟ್ಟ. ಜಟಾಜೂಟಧಾರಿಯಾಗಿ, ವ್ಯಾಘ್ರಾಂಬರವನ್ನು ಧರಿಸಿ, ರುದ್ರಾಕ್ಷಿಮಾಲೆ ಹಾಗೂ ಭಸ್ಮವಿಲೇಪದಿಂದ ಶೋಭಿಸುತ್ತ ತ್ರಿಶೂಲಧಾರಿಯಾಗಿ ನಿಂತ ಆ ಪರಮ ಶಾಂತಮೂರ್ತಿಯನ್ನು ಕಂಡ ಜನ ರೋಮಾಂಚಿತರಾದರು. ಆಹ್! ಅಲೌಕಿಕ ಸೌಂದರ್ಯ! ಅದರಲ್ಲೂ ಶಿವಭಾವದಲ್ಲೇ ತನ್ಮಯವಾದ ಆ ದೃಷ್ಟಿ! ತುಟಿಗಳ ಮೇಲಿನ ಮಧುರ ಮಂದಹಾಸ! ಹಲವಾರು ಜನ ಆನಂದಿತರಾಗಿ ಇದ್ದಕ್ಕಿದ್ದಂತೆ ಹರಿನಾಮವನ್ನುಚ್ಚರಿಸಿದರು. ಮುಂದೆ ನಿಂತವನು ಹರ! ಆದರೆ ಜನರೆನ್ನುತ್ತಿದ್ದಾರೆ 'ಹರಿ ಹರಿ' ಎಂದು. ಇದೇಕೆ ಹೀಗೆ? ಅವರೆಲ್ಲ ವೈಷ್ಣವರು. ಹರಿನಾಮವನ್ನುಚ್ಚರಿಸುವ ಅಭ್ಯಾಸ ಅವರದು. ಈಗ ತಮ್ಮ ಕಣ್ಮುಂದಿನ ದಿವ್ಯಾದ್ಭುತ ದೃಶ್ಯವನ್ನು ಕಂಡು ಅವರ ಬಾಯಿಂದ ತಾನೇತಾನಾಗಿ ಹರಿದುಬಂದಿದೆ ಹರಿನಾಮೋಚ್ಚಾರ! ಇನ್ನು ಕೆಲವು ಮಹಿಳೆಯರು ಗಟ್ಟಿಯಾಗಿ, "ಉಲು ಉಲು ಉಲು" ಎಂಬ ಶಬ್ದಮಾಡಿದರು. ಬಂಗಾಳದಲ್ಲಿ ಶಿವನ ಸನ್ನಿಧಿಯಲ್ಲಿ ಮಹಿಳೆಯರು ಮಾಡುವ ಮಂಗಳಧ್ವನಿ ಇದು. ಆನಂದಾತಿಶಯವನ್ನು ವ್ಯಕ್ತಗೊಳಿಸಲು ಬೇರೆ ಶಬ್ದಗಳುಂಟೆ? ಆದ್ದರಿಂದ ಈ ಬಗೆಯ ಶಬ್ದ. ಮತ್ತೆ ಕೆಲವರು ಶಂಖಗಳನ್ನೂದಿದರು. ಈಗ, ಸಭಿಕರನ್ನು

ಶಾಂತರನ್ನಾಗಿಸಿ, ಅವರ ಗಮನ ಸೆಳೆಯಲು ಸೂತ್ರಧಾರ ಗಟ್ಟಿಯಾಗಿ ಶಿವನ ಕುರಿತಾದ ಸ್ತೋತ್ರವನ್ನು ಹಾಡತೊಡಗಿದ. ತಕ್ಷಣ ಗಲಾಟೆ ಸ್ವಲ್ಪ ಕಡಮೆಯಾಯಿತಾದರೂ ಜನರು ಮೆಲುದನಿಯಲ್ಲಿ ಒಬ್ಬರಿಗೊಬ್ಬರು ಹೇಳಿಕೊಂಡರು: "ಅಬ್ಬ, ಏನು ಚೆನ್ನಾಗಿ ಕಾಣುತ್ತಾನೆ ನಮ್ಮ ಗದಾಯ್! ಇವನಿಗೆ ಶಿವನ ವೇಶ ಇಷ್ಟು ಚೆನ್ನಾಗಿ ಒಪ್ಪುತ್ತದೆಯೆಂದು ನಮಗಾರಿಗೂ ಅನ್ನಿಸಿರಲಿಲ್ಲ. ಇವನನ್ನು ಹೇಗಾದರೂ ಮಾಡಿ ಒಪ್ಪಿಸಿ ನಮ್ಮ ಹಳ್ಳಿಯಲ್ಲೇ ಒಂದು ನಾಟಕದ ತಂಡ ಮಾಡುವುದಾದರೆ ಎಷ್ಟು ಚೆನ್ನಾಗಿರುತ್ತದಲ್ಲವೆ?" ಹೀಗೆ ಏನೇನೋ ಗುಸುಗುಸು ಮಾತು ನಡೆಯುತ್ತಿತ್ತು. ಆದರೆ ಈ ಮಧ್ಯೆ ಗದಾಧರ ಯಾವ ಚಲನೆಯನ್ನೂ ತೋರದೆ ಅದೇ ಭಂಗಿಯಲ್ಲಿ ನಿಂತಿದ್ದಾನೆ; ಅಲ್ಲದೆ ಅವನ ಕಂಗಳಿಂದ ನೀರು ಧಾರೆಯಾಗಿ ಹರಿಯಲಾರಂಭಿಸಿದೆ. ಹೀಗೆಯೇ ಇನ್ನೂ ಒಂದೆರಡು ನಿಮಿಷ ಕಳೆಯಿತು. ಆದರೂ ಮಾತಿಲ್ಲ, ಚಲನೆಯಿಲ್ಲ. ತಂಡದ ಯಜಮಾನನೂ ಇನ್ನೊಂದಿಬ್ಬರೂ ಹತ್ತಿರ ಬಂದು ನೋಡಿದರು. ಹುಡುಗನಿಗೆ ಬಾಹ್ಯಪ್ರಜ್ಞೆ ಇರುವಂತೆ ಕಾಣಲಿಲ್ಲ. ಈಗ ಗಲಾಟೆ ಶುರುವಾಯಿತು. ಯಾರೋ ಕೂಗಿದರು:

"ಹೋ! ಹುಡುಗನಿಗೆ ಜ್ಞಾನ ತಪ್ಪಿಹೋಗಿದೆ. ನೀರು ತನ್ನಿ! ನೀರು ತನ್ನಿ!"

"ಎಲ್ಲಿ, ಸ್ವಲ್ಪ ದೂರ ನಿಲ್ಲಿ; ಗಾಳಿ ಹಾಕಿ."

"ಇಲ್ಲ, ನಿಜಕ್ಕೂ ಇವನಿಗೆ ಶಿವನ ಆವೇಶ ಬಂದುಬಿಟ್ಟಿದೆ!"

"ಹಾಗಾದರೆ ಗಟ್ಟಿಯಾಗಿ ಕಿವಿಯಲ್ಲಿ ಶಿವನಾಮವನ್ನು ಉಚ್ಚಾರಮಾಡಿ, ಎಚ್ಚರವಾಗುತ್ತದೆ."

ಇನ್ನು ಕೆಲವರು ಗೊಣಗುಟ್ಟಿದರು: "ಈ ಹುಡುಗ ಒಳ್ಳೇ ತರಲೆ ತಂದುಬಿಟ್ಟನಲ್ಲಪ್ಪ. ಇನ್ನಿವತ್ತು ನಾಟಕವಿಲ್ಲ ಬಿಡಿ."

ಏನು ಮಾಡಿದರೂ ಹುಡುಗನಿಗೆ ಪ್ರಜ್ಞೆ ಮರಳಲಿಲ್ಲ; ನಾಟಕವೂ ಮುಂದುವರಿಯಲಿಲ್ಲ. ಈಗ ಚಂದ್ರಮಣಿಯ ದುಗುಡವನ್ನಂತೂ ಹೇಳುವಂತೆಯೇ ಇಲ್ಲ. ಮನೆಯವರೆಲ್ಲ ಸೇರಿ ಏನೇನು ಸಾಧ್ಯವೋ ಎಲ್ಲ ಉಪಚಾರವನ್ನೂ ಮಾಡಿದರು. ಆದರೂ ಅವನು ಆ ಸ್ಥಿತಿಯಿಂದಿಳಿಯಲಿಲ್ಲ. ಆದರೆ ಮರುದಿನ ಸೂರ್ಯೋದಯದ ಹೊತ್ತಿಗೆ ತಾನಾಗಿಯೇ ಸಹಜ ಸ್ಥಿತಿಗೆ ಮರಳಿದ. ಅಂತೂ ಶಿವಭಾವದಲ್ಲೇ ರಾತ್ರಿ ಕಳೆದ—ಮಹಾಜಾಗರಣೆ!

ಈ ಘಟನೆಯಾದ ಮೇಲೆ ಗದಾಧರನಿಗೆ ಇಂತಹ ಉನ್ಮಾದ ಸ್ಥಿತಿ ಆಗಾಗ ಉಂಟಾಗತೊಡಗಿತು. ದೇವದೇವಿಯರ ಕುರಿತಾದ ಹಾಡುಗಳನ್ನು ಕೇಳುತ್ತ ಅಥವಾ ಧ್ಯಾನ ಮಾಡುತ್ತ ಕುಳಿತನೆಂದರೆ ಸಂಪೂರ್ಣ ಮೈಮರೆತುಬಿಡುತ್ತಿದ್ದ. ಆಗ ಅವನ ಮನಸ್ಸು ತಾತ್ಕಾಲಿಕವಾಗಿ ಒಳಮುಖವಾಗುತ್ತಿತ್ತು. ಅವನು ಈ ಸ್ಥಿತಿಯಿಂದ ಕೆಲವೊಮ್ಮೆ ಬೇಗ ಹಿಂದಿರುಗಿದರೆ ಇನ್ನು ಕೆಲವೊಮ್ಮೆ ಬಹಳ ಹೊತ್ತಾಗುತ್ತಿತ್ತು. ಇಂತಹ ಸ್ಥಿತಿಯಿಂದ ಅವನು ತಾನಾಗಿಯೇ ಇಳಿದು ಬರಬೇಕೇ ಹೊರತು ಹೊರಗಿನ ಯಾವ ಉಪಾಯಕ್ಕೂ ಅದು ಜಗ್ಗುತ್ತಿರಲಿಲ್ಲ. ಒಂದೊಂದು ಸಲವಂತೂ ಅವನು ಹೀಗೆ ಕುಳಿತುಬಿಟ್ಟನೆಂದರೆ ನಿಶ್ಚೇಷ್ಟಿತ ವಿಗ್ರಹದಂತೆ ಕಾಣುತ್ತಿದ್ದ!

ಇದನ್ನು ಕಂಡು ಗಲಿಬಿಲಿಗೊಂಡವರು ಆಮೇಲೆ ಅವನನ್ನು "ಏನಪ್ಪ ಗದಾಯ್, ಇಷ್ಟು ಹೊತ್ತು ಏನಾಗಿತ್ತು ನಿನಗೆ ?" ಎಂದು ಕೇಳಿದರೆ, "ನಾನು ಒಂದು ದಿವ್ಯ ದರ್ಶನ ಮಾಡುತ್ತ ಅಪೂರ್ವ ಆನಂದವನ್ನು ಅನುಭವಿಸುತ್ತಿದ್ದೆ" ಎನ್ನುತ್ತಿದ್ದ.

ಎಳೆಯ ಬಾಲಕ ಹೀಗೆಲ್ಲ ವರ್ತಿಸಿದರೆ, ಮಾತನಾಡಿದರೆ ಯಾವ ಮನೆಯವರಿಗೆ ತಾನೆ ಚಿಂತೆಯಾಗದಿದ್ದೀತು ? ಅವನನ್ನು ಈ ವಿಚಿತ್ರ ಸ್ಥಿತಿಯಿಂದ ಪಾರು ಮಾಡಲು ಅವರೆಲ್ಲ ಎಷ್ಟೋ ಪ್ರಯತ್ನಪಟ್ಟರು. ಆದರೆ ಏನು ಮಾಡಿದರೂ ಯಾವುದೇ ಪ್ರಯೋಜನವಾಗಲಿಲ್ಲ. ಕೊನೆಗೆ ಮನೆಯವರು ಇನ್ನೊಂದು ವಿಷಯವನ್ನು ಗಮನಿಸಿದರು—ಗದಾಧರ ಹೀಗೆಲ್ಲ ವಿಚಿತ್ರವಾಗಿ ವರ್ತಿಸಿದರೂ ಅವನ ದೇಹಾರೋಗ್ಯ ಮಾತ್ರ ಚೆನ್ನಾಗಿಯೇ ಇತ್ತು. ಅಲ್ಲದೆ ಯಾವ ವಿಷಯದಲ್ಲೂ ಅವನು ಹಿಂದೆ ಬೀಳಲಿಲ್ಲ. ಎಲ್ಲ ಕೆಲಸದಲ್ಲೂ ಚೂಟಿಯಾಗಿಯೇ ಇದ್ದ; ಯಾವಾಗಲೂ ಹಸನ್ಮುಖಿಯಾಗಿಯೇ ಇರುತ್ತಿದ್ದ. ಆದ್ದರಿಂದ ಮನೆಯವರು ಅವನ ಕುರಿತಾಗಿ ಗಾಬರಿಗೊಳ್ಳುವುದನ್ನು ಬಿಟ್ಟುಬಿಟ್ಟರು. ಬರಬರುತ್ತ ಗದಾಧರನಿಗಂತೂ ಈ ಬಗೆಯ ಭಾವಾವಸ್ಥೆ ಎಷ್ಟು ಸಾಮಾನ್ಯವಾಯಿತೆಂದರೆ ಅದಕ್ಕೆ ಅವನು ಚೆನ್ನಾಗಿ ಹೊಂದಿಕೊಂಡುಬಿಟ್ಟ. ಅಲ್ಲದೆ ತನ್ನ ಇಚ್ಛಾನುಸಾರ ಆ ಸ್ಥಿತಿಯನ್ನು ಹೊಂದುತ್ತ ಅದರಿಂದ ಹೊರಬರಬಲ್ಲವನಾದ. ಹೀಗೆ ಭಾವಾವಸ್ಥೆಯಲ್ಲಿದ್ದಾಗ ಅವನಿಗೆ ದೇವದೇವಿಯರಿಗೆ ಸಂಬಂಧಿಸಿದ ಎಷ್ಟೋ ಸೂಕ್ಷ್ಮ ವಿಚಾರಗಳ ಸ್ಪಷ್ಟ ಅರಿವು ಉಂಟಾಗುತ್ತಿತ್ತು. ಸಹಜವಾಗಿಯೇ ಅವನಿಗೆ ಇದರಿಂದ ತುಂಬ ಸಂತೋಷವಾಗುತ್ತಿತ್ತು. ಅಲ್ಲದೆ ತಾನೊಂದು ಅಸಹಜ ಸ್ಥಿತಿಯಲ್ಲಿರುತ್ತೇನೆಂಬುದು ತಿಳಿದರೂ ಅವನಿಗೆ ಆ ಬಗ್ಗೆ ಸ್ವಲ್ಪವೂ ಆತಂಕವಿರಲಿಲ್ಲ.

ದಿನಗಳೆದಂತೆ ಗದಾಧರನ ಆಧ್ಯಾತ್ಮಿಕ ಸ್ವಭಾವ ದೃಢವಾಗುತ್ತಲೇ ಬಂದಿತು. ಹಳ್ಳಿಯಲ್ಲಿ ಯಾವುದೇ ದೇವದೇವಿಯರ ಉತ್ಸವವಾಗಲಿ, ಅದರಲ್ಲಿ ಅವನು ಉತ್ಸಾಹದಿಂದ ಭಾಗವಹಿಸುತ್ತಿದ್ದ. ಆ ಹಳ್ಳಿಯಲ್ಲಿ ಸಾಮಾನ್ಯವಾಗಿ ಹೀಗೆ ಪೂಜಿಸಲ್ಪಡುತ್ತಿದ್ದ ದೇವರುಗಳೆಂದರೆ ಹರಿ, ಶಿವ, ಮನಸಾದೇವಿ, ಇಲ್ಲವೆ ಆ ಗ್ರಾಮದ ಧರ್ಮದೇವತೆ. ಗದಾಧರನಿಗೆ ಈ ದೇವದೇವಿಯರಲ್ಲಿ ಯಾವುದೇ ಭೇದಬುದ್ಧಿಯಿರಲಿಲ್ಲ. ಅಷ್ಟೇ ಅಲ್ಲ, ಅವನಿಗೆ ಯಾವ ದೇವತೆಯ ಭಕ್ತರ ವಿಷಯದಲ್ಲೂ ಅನಾದರವಿರಲಿಲ್ಲ. ಎಲ್ಲರೊಂದಿಗೂ ಅವನದು ಸಮಾನ ಸ್ನೇಹ. ಅಲ್ಲದೆ ಆ ಹಳ್ಳಿಯ ವಾತಾವರಣವೂ ಅವನಿಗೆ ಈ ದಿಸೆಯಲ್ಲಿ ನೆರವಾಯಿತೆನ್ನಲೇ ಬೇಕು. ಏಕೆಂದರೆ ಆ ಪ್ರಾಂತದ ಇತರ ಹಳ್ಳಿಗಳಲ್ಲಿ ವಿವಿಧ ಭಕ್ತರ ನಡುವೆ ವೈಷಮ್ಯ ಸರ್ವೇಸಾಮಾನ್ಯವಾಗಿತ್ತು. ಆದರೆ ಕಾಮಾರಪುಕುರದಲ್ಲಿ ಮಾತ್ರ ಜನರು ಅಂತಹ ಭೇದಭಾವವಿಲ್ಲದೆ ಸಾಮರಸ್ಯದಿಂದಿದ್ದರು.

## ಸಂಕ್ರಮಣದಲ್ಲಿ ಸಂಸಾರ

ಗದಾಧರ ಯಾವ ವಿಷಯದಲ್ಲೂ ಹಿಂದೆ ಬೀಳಲಿಲ್ಲವೆಂಬುದೇನೊ ನಿಜವೆ. ಆದರೆ ಪುಸ್ತಕವಿದ್ಯೆ ಮಾತ್ರ ಅವನಿಗೆ ಎಂದಿಗೂ ಸರಿಹೋಗಲೇ ಇಲ್ಲ. ಇದಕ್ಕೆ ಕಾರಣವೂ ಇಲ್ಲದಿರಲಿಲ್ಲ. ಸಾಕಷ್ಟು ವಿದ್ಯಾವಂತರು ಎನ್ನಿಸಿಕೊಂಡ ಪಂಡಿತರ ವರ್ತನೆಯನ್ನು ಅವನು ಗಮನಿಸುತ್ತಿದ್ದ. ಅವರ ತೋರಾಣಿಕೆಯನ್ನು, ಭೋಗಾಭಿ ಲಾಷೆಯನ್ನು ಬೆರಗುಗಣ್ಣಿಂದ ಈಕ್ಷಿಸುತ್ತಿದ್ದ. ಆ ಪಂಡಿತಾದಿಗಳ ದರ್ಪವನ್ನು, ದುರಹಂಕಾರವನ್ನು ಕಂಡು ಖೇದಗೊಂಡಿದ್ದ. ಅವನ ಸೂಕ್ಷ್ಮಬುದ್ಧಿ ಈ ಅಂಶಗಳ ನ್ನೆಲ್ಲ ಮತ್ತೆಮತ್ತೆ ವಿಚಾರ ಮಾಡುತ್ತಿತ್ತು. ತನ್ನ ತಂದೆಯ ಸದ್ಗುಣಗಳ ಮುಂದೆ ಈ ಪಂಡಿತರುಗಳ ವರ್ತನೆಯನ್ನು ಹೋಲಿಸಿನೋಡುತ್ತಿತ್ತು. ತಂದೆಯ ವೈರಾಗ್ಯ ಬುದ್ಧಿಯೆಂಥದು ! ದೈವಭಕ್ತಿಯೆಂಥದು ! ಸತ್ಯಪ್ರಿಯತೆಯೆಂಥದು ! ಆ ಸದಾಚಾರ ಸಂಪನ್ನನಾದ ತನ್ನ ತಂದೆಯೆಲ್ಲಿ; ಈ ದರ್ಪಿಷ್ಠರಾದ, ಧರ್ಮದ ಸೋಗಿನವರಾದ ಪಂಡಿತರೆಲ್ಲಿ! ಹೀಗೆ ಹೋಲಿಸಿನೋಡಿದಾಗ ಅವನ ಅರಿವಿಗೆ ಬಂದುದೇನೆಂದರೆ ಮೂಲತಃ ತನ್ನ ತಂದೆಯ ಜೀವನಾದರ್ಶವೇ ಬೇರೆ, ಈ ಪಂಡಿತರ ಜೀವನಾ ದರ್ಶವೇ ಬೇರೆ ಎಂಬುದು. ಐಹಿಕ ಜಗತ್ತಿನ ನಶ್ವರತೆಯನ್ನು ಅದಾಗಲೇ ಮನಗಂಡಿದ್ದ ಗದಾಧರನಿಗೆ ಭೋಗವನ್ನೇ ಜೀವನದ ಪರಮಾದರ್ಶವನ್ನಾಗಿಸಿ ಕೊಂಡ ಈ ಪಂಡಿತರನ್ನು ಕಂಡು ಆಶ್ಚರ್ಯವಾಯಿತು. ಮತ್ತು ಅದಕ್ಕಿಂತ ಹೆಚ್ಚಾಗಿ, ಅವರೆಲ್ಲರ ಭ್ರಮಾಧೀನ ಸ್ಥಿತಿಯನ್ನು ಕಂಡು ದುಃಖವಾಯಿತು. ಹಾಗಾದರೆ ಪುಸ್ತಕವಿದ್ಯೆಯಲ್ಲಿ ಪಾರಂಗತರಾಗಿ ಇವರೆಲ್ಲ ಪಡೆದದ್ದೇನು ? ಇವರು ಸಾಧಿಸಿದ ಪುರುಷಾರ್ಥವೇನು ? ಏನೇನೂ ಇಲ್ಲ ! ಹೀಗೆ ಚಿಂತಿಸಿದ ಗದಾಧರನಿಗೆ ಶಾಲಾ ವಿದ್ಯಾಭ್ಯಾಸದ ಬಗ್ಗೆ ಸ್ವಲ್ಪವೂ ಒಲವುಂಟಾಗದಿದ್ದುದರಲ್ಲಿ ಆಶ್ಚರ್ಯವೇನಿದೆ ?

ದಿನಗಳೆದಂತೆ, ಗದಾಧರನಿಗೆ ವಿದ್ಯಾಭ್ಯಾಸದ ಬಗ್ಗೆ ಅನಾದರ ಹೆಚ್ಚಿದರೂ ಶಾಲೆಗೆ ಹೋಗುವುದನ್ನಂತೂ ಬಿಡಲಿಲ್ಲ. ಈ ವೇಳೆಗೆ (ಸುಮಾರು ಹತ್ತು-ಹನ್ನೊಂದನೆಯ ವಯಸ್ಸಿಗೆ) ಅವನು ತನ್ನ ಮಾತೃಭಾಷೆಯಲ್ಲಿ ಚೆನ್ನಾಗಿ ಓದಲು ಬರೆಯಲು ಕಲಿತಿದ್ದ. ರಾಮಾಯಣ ಮಹಾಭಾರತಗಳನ್ನು ಓದುವುದೆಂದರೆ ಅವನಿಗೆ ತುಂಬ ಸಂತೋಷ. ಅನಕ್ಷರರಾದ ಹಳ್ಳಿಗರು ಅವನಿಂದ ಆ ಗ್ರಂಥಗಳನ್ನೆಲ್ಲ ಓದಿಸಿ ಕೇಳುತ್ತಿದ್ದರು. ಈ ಸರಳ ಜೀವಿಗಳ ಆಸೆಯನ್ನು ಗದಾಧರ ಆನಂದದಿಂದ ಈಡೇರಿಸಿಕೊಡುತ್ತಿದ್ದ. ಅವನು ತನ್ನ ಮಧುರ ಕಂಠದಿಂದ, ಭಕ್ತಿಭಾವವುಕ್ಕುವಂತೆ

ವಾಚನ ಮಾಡುವುದನ್ನು ಕೇಳುವುದೆಂದರೆ ಹಳ್ಳಿಯವರಿಗೆಲ್ಲ ಬೆಲ್ಲ ತಿಂದಂತೆ. ಆ ಊರಿನ ಸೀತಾನಾಥ ಪೈನೆ, ಮಧು ಜುಗಿ ಮತ್ತಿತರರು ರಾಮಾಯಣ–ಮಹಾಭಾರತಗಳ ಕಥಾ ಪ್ರಸಂಗಗಳನ್ನೋ, ಪ್ರಹ್ಲಾದಚರಿತ್ರೆ, ಧ್ರುವಚರಿತ್ರೆಗಳನ್ನೋ ಓದಿಸಿ ಕೇಳಲು ಆಗಾಗ ಗದಾಧರನನ್ನು ಕರೆಸುತ್ತಿದ್ದರು. ಆ ಸಂದರ್ಭಗಳಲ್ಲಿ ಹಳ್ಳಿಗರೆಷ್ಟೋ ಜನ ಅಲ್ಲಿಗೆ ಬಂದು ಸೇರುತ್ತಿದ್ದರು.

ರಾಮಾಯಣ–ಮಹಾಭಾರತಗಳಂತಹ ಪುರಾತನ ಕಾವ್ಯಗಳಲ್ಲದೆ ಹಲವಾರು ದೇವದೇವಿಯರ ಮಹಿಮೆಯನ್ನು ಸರಳ ಭಾಷೆಯಲ್ಲಿ ತಿಳಿಸುವಂತಹ ಎಷ್ಟೋ ಹಾಡುಗಳು, ಲಾವಣಿಗಳು ಆ ಪ್ರಾಂತಗಳಲ್ಲಿ ಇಂದಿಗೂ ಪ್ರಚಲಿತವಾಗಿವೆ. ಅಸಾಧಾರಣ ಸ್ಮರಣಶಕ್ತಿಯುವನಾದ ಗದಾಧರ ಇಂತಹ ಅನೇಕ ಪದ್ಯಗಳನ್ನು ಸಂಪೂರ್ಣ ಹೃದ್ಗತಗೊಳಿಸಿಕೊಂಡಿದ್ದ. ಅಲ್ಲದೆ ಅವುಗಳನ್ನೊಳಗೊಂಡ ಪುಸ್ತಕಗಳೋ ಹಸ್ತಪ್ರತಿಗಳೋ ಸಿಕ್ಕರೆ ತಾನೇ ನಕಲು ಮಾಡಿಟ್ಟುಕೊಳ್ಳುತ್ತಿದ್ದ.

ಗದಾಧರ ಶಾಲೆಯಲ್ಲಿ ಬಂಗಾಳೀ ಲಿಪಿಯನ್ನೇನೋ ಚೆನ್ನಾಗಿ ಕಲಿತ. ಆದರೆ ಗಣಿತವೆಂದರೆ ಮಾತ್ರ ಅವನಿಗೇಕೋ ಆಗುತ್ತಲೇ ಇರಲಿಲ್ಲ. ಸರಳ ಗುಣಾಕಾರ–ಭಾಗಾಕಾರಗಳನ್ನು ಅವನು ಈ ಹೊತ್ತಿಗೆ ಕಲಿತುಕೊಂಡಿದ್ದ. ಅಲ್ಲದೆ ಮಗ್ಗಿ ಪುಸ್ತಕದ ಅನೇಕ ಕೋಷ್ಟಕಗಳು ಬಾಯಿಪಾಠವಾಗಿದ್ದುವು. ಇಷ್ಟನ್ನು ಕಲಿತುಕೊಳ್ಳುವ ಹೊತ್ತಿಗೆ ಅವನಿಗೆ ಸಾಕುಸಾಕಾಗಿ ಹೋಗಿತ್ತು. ಆದರೆ ಸುಮಾರು ಹತ್ತನೆಯ ವಯಸ್ಸಿನ ಮೇಲೆ ಗದಾಧರನಿಗೆ ಮತ್ತೆ ಮತ್ತೆ ಭಾವಸಮಾಧಿಯಂತಹ ಅನುಭವಗಳು ಆಗತೊಡಗಿದಾಗ, ಅವನಿಗೆ 'ವಾಯು' ಪ್ರಕೋಪವುಂಟಾಗಿರಬೇಕು ಎಂದು ಅಣ್ಣ ರಾಮಕುಮಾರನಿಗೆ ತೋರಿತು. ಆಗಿನಿಂದ ವಿದ್ಯಾಭ್ಯಾಸದ ವಿಷಯದಲ್ಲಿ ತಮ್ಮನ ಮೇಲೆ ಒತ್ತಡ ಹಾಕುವುದನ್ನು ನಿಲ್ಲಿಸಿಬಿಟ್ಟ. ಅವನಿಗೆ ಇಷ್ಟಬಂದಾಗ ಶಾಲೆಗೆ ಹೋಗಲು ಮತ್ತು ಇಷ್ಟ ಬಂದ ವಿಷಯವನ್ನು ಕಲಿಯಲು ಬಿಟ್ಟುಬಿಟ್ಟ. ಗದಾಧರನಿಗೆ ಬೇಕಾಗಿದ್ದುದೂ ಅದೇ. ಹೀಗೆ ಅವನ ಓದು ಅಲ್ಲಿಗೇ ನಿಂತಿತೆನ್ನಬಹುದು.

ಇನ್ನೂ ಎರಡು ವರ್ಷಗಳು ಉರುಳಿದುವು. ಗದಾಧರನಿಗೀಗ ಹನ್ನೆರಡು ತುಂಬಿದೆ. ಇವನಿಗೆ ರಾಮಕುಮಾರನಲ್ಲದೆ ಇನ್ನೊಬ್ಬ ಅಣ್ಣ ಇದ್ದಾನೆ—ರಾಮೇಶ್ವರ. ಅವನಿಗೀಗ ಇಪ್ಪತ್ತೆರಡು ವರ್ಷ ವಯಸ್ಸು. ಗದಾಧರನ ತಂಗಿಯೊಬ್ಬಳಿದ್ದಾಳೆ—ಸರ್ವಮಂಗಳಾ. ಇವಳಿಗೆ ಒಂಬತ್ತು ತುಂಬಿದೆ. ರಾಮೇಶ್ವರ, ಸರ್ವಮಂಗಳಾ ಇರ್ವರಿಗೂ ಈಗ ವಿವಾಹದ ವಯಸ್ಸು ಎಂಬುದನ್ನರಿತ ರಾಮಕುಮಾರ ವಧು–ವರರ ಶೋಧನೆಗೆ ಹೊರಟ. ಕಾಮಾರಪುಕುರದ ಹತ್ತಿರವೇ ಇರುವ ಗೌರಹಾಟಿಯಲ್ಲಿದ್ದ ರಾಮಸದಯ ವಂದ್ಯೋಪಾಧ್ಯಾಯನೆಂಬೊಬ್ಬ ಯುವಕನನ್ನು ಸರ್ವಮಂಗಳೆಗೂ, ಅವನ ತಂಗಿಯನ್ನು ರಾಮೇಶ್ವರನಿಗೂ ಕೊಟ್ಟು ಮದುವೆ ಮಾಡುವುದೆಂದು ನಿಶ್ಚಯವಾಯಿತು. ಹೀಗೆ ಇದೊಂದು ಪರಸ್ಪರ ವಿನಿಮಯವಾದ್ದರಿಂದ ಕನ್ಯಾಶುಲ್ಕದ ತಕರಾರಿಗೆ ಅವಕಾಶವೇ ಇಲ್ಲದಂತೆ ವಿವಾಹವಾಗಿ ಹೋಯಿತು. ಚಂದ್ರಮಣಿ ಹೊಸ ಸೊಸೆಯನ್ನು—ಸಂಭ್ರಮದಿಂದಲ್ಲ—ವಾತ್ಸಲ್ಯ

ದಿಂದ ಸ್ವಾಗತಿಸಿದಳು.

ಇದೇ ವೇಳೆಗೆ ವೃದ್ಧೆ ಚಂದ್ರಮಣಿಯ ಕಣ್ಮುಂದೆ ಇನ್ನೊಂದು ಬಹು ಮುಖ್ಯ ಘಟನೆ ನಡೆಯಿತು. ರಾಮಕುಮಾರನ ಹೆಂಡತಿಯು ಯೌವನ ದಾಟಿದ್ದರೂ ಅವಳಿಗಿನ್ನೂ ಸಂತತಿಯೇ ಆಗಿರಲಿಲ್ಲ. ಇದನ್ನು ಕಂಡು ಮನೆಯವರಿಗೆಲ್ಲರಿಗೂ ನಿಶ್ಚಯವಾಗಿತ್ತು—ಅವಳೊಬ್ಬಳು ಬಂಜೆ ಎಂದು. ಆದರೆ, ಈಗ ನೋಡಿದರೆ ಗರ್ಭಿಣಿಯಾಗಿದ್ದಾಳೆ! ಇದು ಎಲ್ಲರಿಗೂ ಸಂತೋಷವನ್ನುಂಟು ಮಾಡಿತು. ಆದರೆ ಜೊತೆಜೊತೆಗೇ ದುಃಖವೂ ಆಯಿತು. ಏಕೆಂದರೆ ಅವರು ರಾಮಕುಮಾರ ತನ್ನ ಪತ್ನಿಯ ವಿಷಯದಲ್ಲಿ ನುಡಿದ ಭವಿಷ್ಯವಾಕ್ಯವನ್ನು ಕೇಳಿದ್ದರು—ಅವಳು ಹಡೆದರೆ ಬದುಕುವ ಸಂಭವವಿಲ್ಲ ಎಂದು.

ಈಗ ರಾಮಕುಮಾರನ ಮನೆಯ ಪರಿಸ್ಥಿತಿಯೆಲ್ಲ ಪಲ್ಲಟಗೊಳ್ಳಲಾರಂಭಿಸಿತು. ಇದಕ್ಕೆ ಕಾರಣ? ಕಣ್ಮುಂದೆಯೇ ಇದೆ. ರಾಮಕುಮಾರನ ಮನೆಗೆ ಭಾಗ್ಯ ತಂದವಳು ಅವನ ಹೆಂಡತಿಯಲ್ಲವೆ? ಅದೇ ರಾಮಕುಮಾರನ ಭವಿಷ್ಯವಾಣಿಯ ಪ್ರಕಾರ ಈಗವಳು ಹೋಗಲಣಿಯಾಗುತ್ತಿದ್ದಾಳಲ್ಲವೆ? ಆದ್ದರಿಂದ ಮನೆಯ ಭಾಗ್ಯವೂ ಹೋಗತೊಡಗಿದೆ! ಇದ್ದಕ್ಕಿದ್ದಂತೆ ರಾಮಕುಮಾರನ ಆರೋಗ್ಯಭಾಗ್ಯವೂ ಕುಂಠಿತಗೊಂಡದ್ದರಿಂದ ಮೊದಲಿನಂತೆ ಹೆಚ್ಚು ಸಂಪಾದನೆ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಅವನ ಹೆಂಡತಿಯ ನಡವಳಿಕೆಯಲ್ಲೂ ಏನೇನೋ ಬದಲಾವಣೆಗಳು ಕಾಣತೊಡಗಿದವು. ಕ್ಷುದಿರಾಮನ ಕಾಲದಿಂದಲೂ ಆ ಮನೆಯಲ್ಲೊಂದು ಕಟ್ಟುನಿಟ್ಟಿನ ಕಟ್ಟಳೆಯಿತ್ತು. ಶ್ರೀರಘುವೀರನ ಪೂಜೆಯಾಗದೆ ಮನೆಮಂದಿ ಯಾರೂ ಏನನ್ನೂ ತಿನ್ನುವಂತಿರಲಿಲ್ಲ, ಒಂದು ತೊಟ್ಟು ನೀರು ಕೂಡ ಕುಡಿಯುವಂತಿರಲಿಲ್ಲ. ಮಕ್ಕಳಿಗೆ, ರೋಗಿಗಳಿಗೆ ಮಾತ್ರ ವಿನಾಯಿತಿ. ರಾಮಕುಮಾರನ ಹೆಂಡತಿ ಈ ನಿಯಮವನ್ನು ಉಲ್ಲಂಘಿಸತೊಡಗಿದಳು. ಹಾಗೆ ಮಾಡಬಾರದೆಂದು ಮನೆಯವರು ಯಾರೇ ಹೇಳಿದರೂ ಅದಕ್ಕವಳು ಕಿವಿಗೊಡಲಿಲ್ಲ. ಅಷ್ಟೇ ಅಲ್ಲ, ಮನೆಯ ಪ್ರತಿಯೊಬ್ಬರೊಂದಿಗೂ ಸಣ್ಣಸಣ್ಣ ವಿಷಯಕ್ಕೂ ಜಗಳವೆತ್ತಲಾರಂಭಿಸಿದಳು. ಪರಿಣಾಮವಾಗಿ ಮನೆಯೊಳಗೆಲ್ಲ ವೈಮನಸ್ಯದ ವಿಷಗಾಳಿ. ಚಂದ್ರಮಣಿ, ರಾಮಕುಮಾರ ಬಗೆಬಗೆಯಾಗಿ ಬುದ್ಧಿಹೇಳಿ ನೋಡಿದರು. ಪ್ರಯೋಜನವಾಗಲಿಲ್ಲ. ಕೊನೆಗೆ, ಗರ್ಭಿಣಿಯರಲ್ಲಿ ಈ ರೀತಿಯ ಬದಲಾವಣೆಗಳು ತಲೆದೋರುವುದುಂಟು ಎಂಬ ಅಂಶವನ್ನು ಮನಗಂಡು ಇಬ್ಬರೂ ಸುಮ್ಮನಾದರು. ಅಂತೂ ಹಿಂದಿದ್ದ ಶಾಂತಿಯ ವಾತಾವರಣ ಈಗ ಉಳಿಯಲಿಲ್ಲ.

ರಾಮಕುಮಾರನ ಸೋದರ ರಾಮೇಶ್ವರ ಸಾಕಷ್ಟು ಶಾಸ್ತ್ರಾಧ್ಯಯನ ಮಾಡಿ ಪಂಡಿತನೆನಿಸಿದರೂ ಹಣ ಸಂಪಾದನೆ ಮಾಡುವ ವಿಷಯದಲ್ಲಿ ಅವನು ಬಹಳ ಹಿಂದೆ. ಸಂಪಾದನೆಯಿಲ್ಲದವರಿಗೆ ಉಣ್ಣುವ ಹಕ್ಕಿಲ್ಲ ಎಂಬ ನಿಯಮವನ್ನು ಈವರೆಗೂ ಯಾರೂ ಮಾಡಿದವರಿಲ್ಲ. ಎಂದಮೇಲೆ, ರಾಮಕುಮಾರ ತನ್ನ ಸೋದರನನ್ನೂ ಸೋದರನ ಕುಟುಂಬವನ್ನೂ ಪೋಷಿಸಬೇಕಾಯಿತು. ಕೂತುಂಬಗೆ ಕುಡಿಕೆ ಹಣವೂ ಸಾಲದಿರುವಾಗ, ಇನ್ನು ಹಣವೇ ಇಲ್ಲದವರು ಕೂತುಣ್ಣಲು

ಸಾಧ್ಯವೆ ? ರಾಮಕುಮಾರನ ಮನೆಯ ಸ್ಥಿತಿ ಚಿಂತಾಜನಕವಾಯಿತು. ಅವನೇನೋ ಸಮಸ್ಯೆಯ ಪರಿಹಾರಕ್ಕೆ ಬಹಳಷ್ಟು ಯೋಚಿಸಿದ, ಶ್ರಮಿಸಿದ. ಆದರೆ ಶ್ರಮ ಸಫಲವಾಗದಿದ್ದರೆ ಅವನೇನು ತಾನೆ ಮಾಡಬಲ್ಲ. ಅವನ ಪರಿಸ್ಥಿತಿಯನ್ನು ನೋಡಿದರೆ ಯಾವುದೋ ಕಾಣದ ಕೈಯೊಂದು ಅವನ ಯೋಜನೆಗಳನ್ನೆಲ್ಲ ತಲೆಕೆಳಗು ಮಾಡುತ್ತಿದ್ದಂತೆ ತೋರುತ್ತಿತ್ತು. ಹೀಗೇ ದಿನಗಳು ಕಳೆದುವು, ತಿಂಗಳುಗಳೂ ಉರುಳಿದುವು. ಹೆಂಡತಿ ತುಂಬುಗರ್ಭಿಣಿಯಾದ್ದರಿಂದ ರಾಮಕುಮಾರ ಸಂಪಾದನೆಗಾಗಿ ಪರವೂರಿಗೂ ಹೋಗುವಂತಿರಲಿಲ್ಲ. ದಿನ ಕಳೆದಂತೆ ಅವನ ಮನದ ತಳಮಳ ಹೆಚ್ಚಾಗತೊಡಗಿತು.

ಕೊನೆಗೂ ನಿರೀಕ್ಷಿಸಿದ್ದು ನಡೆದೇಹೋಯಿತು. ರಾಮಕುಮಾರನ ಹೆಂಡತಿ ಒಂದು ಸುಂದರ ಮಗುವಿಗೆ ಜನ್ಮವಿತ್ತಳು; ಆ ಮಗುವಿನ ಮುದ್ದುಮುಖವನ್ನು ನೋಡುತ್ತ ನೋಡುತ್ತಲೇ ಶರೀರ ಬಿಟ್ಟಳು. ಮನೆಯಲ್ಲಿ ಯಾರೂ ಪುತ್ರೋತ್ಸವದ ಸಂತೋಷವನ್ನು ಅನುಭವಿಸಲಿಲ್ಲ.

# ವಿಧಿ ತೆರೆದ ದಾರಿ

ಮನುಷ್ಯನ ಜೀವನದಲ್ಲಿ ಅದೃಷ್ಟ ಕಾಲಿಟ್ಟಾಗ ಒಂದು ಬಗೆ, ಕಾಲ್ತೆಗೆದಾಗ ಇನ್ನೊಂದು ಬಗೆ. ಪತ್ನಿಯ ಆಗಮನದಿಂದ ರಾಮಕುಮಾರನ ಅದೃಷ್ಟ ಅರಳಿತ್ತು, ಜೀವನದ ಬಗೆ ಸುಧಾರಿಸಿತ್ತು. ಸುಖಕರವಾಗಿತ್ತು. ಈಗ ಪತ್ನಿಯ 'ನಿರ್ಗಮನ'ದಿಂದ ಅದೃಷ್ಟ ಅದೃಶ್ಯವಾಯಿತು, ಅನನುಕೂಲ ಪರಂಪರೆ ಮುತ್ತಿಕೊಂಡಿತು. ದಿನದಿನಕ್ಕೂ ಬಡವನಾಗುತ್ತ ಬಂದ. ಪೌರೋಹಿತ್ಯದಿಂದ ದಕ್ಷಿಣೆ–ಕಾಣಿಕೆಗಳ ರೂಪದಲ್ಲಿ ಬರುತ್ತಿದ್ದ ವರಮಾನವೂ ಇಳಿಮುಖವಾಯಿತು. ಲಕ್ಷ್ಮೀಜಲವೆಂಬಲ್ಲಿ ಇದ್ದ ಅವರದೇ ಆದ•ಗದ್ದೆಯಿಂದ ಬತ್ತವೇನೋ ಸಂಸಾರಕ್ಕೆ ಸಾಲುವಷ್ಟು ಸಿಗುತ್ತಿತ್ತು. ಆದರೆ ಇತರೇ ಖರ್ಚುಗಳಿಗೇನು ಮಾಡುವುದು? ವೃದ್ಧ ತಾಯಿ ಚಂದ್ರಾದೇವಿಗೂ ಮಗು ಅಕ್ಷಯನಿಗೂ ಹಾಲು ಬೇಕು. ಎಲ್ಲಿಂದ ತರುವುದು? ಮನೆಯಲ್ಲೀಗ ಹಸುವೂ ಇಲ್ಲ. ಆದ್ದರಿಂದ ಸಾಲ ಮಾಡಿ ಹಾಲುತಂದ. ಇನ್ನೂ ಎಷ್ಟೋ ಪದಾರ್ಥಗಳಿಗೆ ಸಾಲವೇ ಗತಿ. ಏನೊ ಬ್ರಾಹ್ಮಣ, ಮರ್ಯಾದಸ್ಥ, ಕ್ಷುದಿರಾಮನ ಮಗ ಎಂದು ಜನ ಸಾಲ ಕೊಟ್ಟರು. ಆದರೆ ಎಷ್ಟು ದಿನ ಹೀಗೇ ನಡೆದೀತು? ರಾಮಕುಮಾರನಿಗೆ ಇದು ಗೊತ್ತಿಲ್ಲವೆಂದಲ್ಲ. ಆದರೆ ಬೇರೆ ದಾರಿಯೇ ಇಲ್ಲ. ಆಗ ಅವನ ಸ್ನೇಹಿತರು ಸಲಹೆ ಮಾಡಿದರು: 'ಈ ಸಣ್ಣ ಊರಿನಲ್ಲಿ ಸಂಪಾದನೆ ಕಷ್ಟ. ಬೇರೆ ಯಾವುದಾದರೂ ಜಾಗ ಹುಡುಕಿಕೊ' ಎಂದು. ರಾಮಕುಮಾರನಿಗೂ ಇದು ಸರಿಯೆಂದು ತೋರಿತು. ಅದೂ ಅಲ್ಲದೆ ಮೂವತ್ತು ವರ್ಷಗಳ ವರೆಗೆ ತನ್ನೊಂದಿಗೆ ಸಹಬಾಳ್ವೆ ನಡೆಸಿದ್ದ ಅರ್ಧಾಂಗಿಯ ಸಾವಿನ ನೋವು ಮನದಲ್ಲಿ ಕೊರೆಯುತ್ತಿತ್ತು. ಆ ನೆನಪುಗಳೇ ತುಂಬಿರುವ ಈ ಮನೆಯಿಂದ ಸ್ವಲ್ಪಕಾಲ ದೂರ ಹೋಗಿರುವುದು ಒಳ್ಳೆಯದೆಂದು ತೀರ್ಮಾನಿಸಿದ. ಈಗ, ಯಾವ ಊರಿಗೆ ಹೋಗುವುದೆಂಬ ಬಗ್ಗೆ ಚರ್ಚೆ ನಡೆಯಿತು. ಸಂಪಾದನೆಗೆ ಬರ್ದ್ವಾನ್ (ವರ್ಧಮಾನ ಪಟ್ಟಣ) ಮೇಲೋ ಕಲ್ಕತ್ತ ಮೇಲೋ? ಕೊನೆಗೆ ಕಲ್ಕತ್ತವೇ ಮೇಲೆಂದು ತೀರ್ಮಾನವಾಯಿತು. ಏಕೆಂದರೆ, ಅವನ ಪರಿಚಯಸ್ಥನಾದ ಸಿಹೋರಿನ ಮಹೇಶಚಂದ್ರ ಚಟರ್ಜಿ, ದೇಸ್ರಾ ಗ್ರಾಮದ ರಾಮಧನ ಘೋಷ್ ಮೊದಲಾದವರೆಲ್ಲ ಕಲ್ಕತ್ತಕ್ಕೆ ಹೋಗಿ ಎಷ್ಟೋ ಸುಧಾರಿಸಿದ ವಿಷಯ ಅವನಿಗೆ ತಿಳಿದಿತ್ತು. ಹಾಗೆ ನೋಡಿದರೆ ವಿದ್ಯೆಯಲ್ಲಾಗಲಿ, ಬುದ್ಧಿಯಲ್ಲಾಗಲಿ, ಶೀಲಬಲದಲ್ಲಾಗಲಿ ಇವರೆಲ್ಲರಿಗಿಂತಲೂ ರಾಮಕುಮಾರ ಎಷ್ಟೋ ಪಾಲು ಉತ್ತಮ ಎಂಬ ಅಂಶ

ವನ್ನೂ ಅವನ ಸ್ನೇಹಿತರು ಸೂಚಿಸಿದರು. ಇವರ ಪ್ರೋತ್ಸಾಹದ ಮಾತಿನಿಂದ ಅವನಲ್ಲಿ ಒಂದು ನಂಬಿಕೆ ಉದಿಸಿತು. ಸಂಸಾರದ ಜವಾಬ್ದಾರಿಯನ್ನು ತಮ್ಮ ರಾಮೇಶ್ವರನಿಗೆ ಒಪ್ಪಿಸಿ, ಶ್ರೀರಘುವೀರನ ಮೇಲೆ ಭಾರಹಾಕಿ ಕಲ್ಕತ್ತಕ್ಕೆ ಹೊರಟ. ಕೆಲದಿನಗಳಲ್ಲೇ ಅವನು ಕಲ್ಕತ್ತದ ಝಾಮಾಪುಕುರ ಎಂಬಲ್ಲಿ ಬಾಲಕರಿಗಾಗಿ ಒಂದು ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸಿದ.

ರಾಮಕುಮಾರನೇನೋ ಅತ್ತ ಕಲ್ಕತ್ತಕ್ಕೆ ಹೊರಟುಹೋದ. ಆದರೆ ಇತ್ತ ಅವನ ಪತ್ನಿಯ ಸಾವಿನಿಂದ ಕುಟುಂಬದಲ್ಲಿ ಉಂಟಾಗಿದ್ದ ಪರಿಸ್ಥಿತಿಯೊಂದಿಗೆ ಮನೆಮಂದಿ ಏಗಬೇಕಾಯಿತು. ಅವಳಿರುವವರೆಗೂ ಚಂದ್ರಮಣಿಗೆ ಮನೆ ವಾರ್ತೆಯ ಜವಾಬ್ದಾರಿ ತಪ್ಪಿತ್ತು. ಈಗ ಐವತ್ತೆಂಟು ವರ್ಷದ ವೃದ್ಧೆ ಚಂದ್ರಮಣಿಗೆ ಆ ಕೆಲಸಗಳಲ್ಲದೆ ಮಗು ಅಕ್ಷಯನನ್ನು ಲಾಲಿಸುವ ಕೆಲಸವೂ ಸೇರಿಕೊಂಡಿತು. ರಾಮೇಶ್ವರನ ಹೆಂಡತಿಯೂ ಇಲ್ಲಿಯೇ ಇದ್ದಳಲ್ಲವೆ ? ಹೌದು; ಆದರೆ ಅವಳಿನ್ನೂ ತುಂಬ ಚಿಕ್ಕವಳು. ಅವಳಿಂದ ಅಂಥಾ ಪ್ರಯೋಜನವೇನೂ ಇರಲಿಲ್ಲ. ಈಗ, ಬೆಳಗಾಗೆದ್ದು ಶ್ರೀರಘುವೀರನ ಪೂಜಾದಿಗಳಿಂದ ಹಿಡಿದು, ಮಗುವಿನ ಸೇವೆ, ಅಡಿಗೆ ಕೆಲಸ ಎಲ್ಲವನ್ನೂ ಚಂದ್ರಮಣಿಯೇ ಮಾಡಬೇಕಾಯಿತು. ದಿನವೆಲ್ಲ ಕೆಲಸ ಮಾಡಿದರೂ ಒಂದು ನಿಮಿಷದ ಪುರುಸೊತ್ತೂ ಸಿಗುತ್ತಿರಲಿಲ್ಲ. ಅವಳಿಗೆ ಸಾಕಷ್ಟು ಕಷ್ಟವೇ ಆಯಿತು ಎಂದು ಹೇಳಬೇಕಾಗಿಯೇ ಇಲ್ಲ. ಆದರೆ ಚಂದ್ರಮಣಿ ಮಾತ್ರ, ಇದೆಲ್ಲವೂ ರಘುವೀರನ ಇಚ್ಛೆ ಎಂದು ತಿಳಿದು ಒಂದು ಸಲವೂ ಗೊಣಗದೆ ಪಾಲಿಗೆ ಬಂದದ್ದು ಪಂಚಾಮೃತವೆಂದು ಸ್ವೀಕರಿಸಿದಳು.

ರಾಮೇಶ್ವರನೇ ಈಗ ಮನೆಯ ಯಜಮಾನ. ಮನೆಯ ಆಯವ್ಯಯಗಳನ್ನು ಸರಿದೂಗಿಸಲು ಅವನೂ ಸಾಕಷ್ಟು ಪ್ರಯತ್ನಿಸಿದ. ಮನೆಮಂದಿಯನ್ನೆಲ್ಲ ಸುಖವಾಗಿರಿಸಬೇಕೆಂದು ಎಷ್ಟೋ ಕಷ್ಟ ಪಟ್ಟ. ಆದರೆ ಅವನಿಗೆ ಸರಸ್ವತಿ ಒಲಿದಿದ್ದಳೇ ಹೊರತು ಲಕ್ಷ್ಮಿ ಬಳಿಸುಳಿಯಲೇ ಇಲ್ಲ! ಅಷ್ಟೇ ಅಲ್ಲ, ಯಾರಾದರೂ ಸಾಧು–ಸಜ್ಜನರು, ಬೈರಾಗಿಗಳು ಸಿಕ್ಕಾಗ ಅವರೊಂದಿಗೆ ಮಾತನಾಡುತ್ತ ನಿಲ್ಲುವುದೆಂದರೆ ಅವನಿಗೆ ಬಲು ಪ್ರೀತಿ. ಮಾತನಾಡಿದ ಮೇಲೆ ಅವರನ್ನು ಮನೆಗೆ ಕರೆತಂದು ಉಪಚರಿಸಿ ಅವರಿಗೆ ಬೇಕಾದ್ದನ್ನು ಕೊಟ್ಟುಬಿಡುತ್ತಿದ್ದ. ಹೀಗಾಗಿ, ಅವನು ಪೂಜೆ–ಪೌರೋಹಿತ್ಯಾದಿಗಳಿಂದ ನಾಲ್ಕು ಕಾಸು ಹೆಚ್ಚಾಗಿಯೇ ಸಂಪಾದಿಸಿದರೂ ಅದು ಅಲ್ಲಿಗಲ್ಲಿಗೇ ಸರಿಹೋಗುತ್ತಿತ್ತು. ಮನೆಯ ಸಾಲವೊಂದೂ ತೀರಲಿಲ್ಲ. ಉಳಿತಾಯದ ಮಾತೇ ಇಲ್ಲದ ಮೇಲೆ ಸಾಲ ತೀರುವ ಬಗೆ ಹೇಗೆ ? ಹೀಗೇ ಆ ಸಂಸಾರ ಕುಂಟಿಕೊಂಡು, ತೆವಳಿಕೊಂಡು ಸಾಗಿತು. "ಇಷ್ಟರ ಮೇಲೆ ರಘುವೀರ ಹೇಗೋ ನೋಡಿಕೊಳ್ಳುತ್ತಾನೆ" ಎಂದು ರಾಮೇಶ್ವರ ನಿಶ್ಚಿಂತೆಯಿಂದಿದ್ದು ಬಿಟ್ಟ.

ರಾಮೇಶ್ವರನಿಗೆ ಕಿರಿಯ ಸೋದರ ಗದಾಧರನ ಮೇಲೆ ವಿಶೇಷವಾದ ವಾತ್ಸಲ್ಯ, ಮಮತೆ. ಗದಾಧರನ ಗುಣ–ನಡತೆ ಅವನಿಗೆ ತುಂಬ ಮೆಚ್ಚಿಗೆಯಾಗಿತ್ತು. ಆ ಎಳೆಯ ವಯಸ್ಸಿನಲ್ಲೇ ತನ್ನ ತಮ್ಮನಲ್ಲಿ ಆಧ್ಯಾತ್ಮಿಕತೆಯು ಆಶ್ಚರ್ಯಕರವಾಗಿ ವ್ಯಕ್ತವಾಗುತ್ತಿದ್ದುದನ್ನು ಗಮನಿಸಿ ರಾಮೇಶ್ವರ ಬೆರಗಾಗುತ್ತಿದ್ದ. ಆದರೆ ಅವನು

ತಮ್ಮನ ಓದು–ಬರಹದ ಕಡೆಗೆ ಮಾತ್ರ ಒಮ್ಮೆಯೂ ಗಮನ ಕೊಡಲಿಲ್ಲ. ಏಕೆಂದರೆ ಅಂತಹ ವಿಷಯಗಳ ಕಡೆಗೆ ಗಮನ ಕೊಡುವುದು, ಬುದ್ಧಿ ಹೇಳುವುದು —ಇವೆಲ್ಲ ಅವನ ಸ್ವಭಾವಕ್ಕೇ ಬಂದುದಲ್ಲ. ಅಲ್ಲದೆ, ಯಾವಾಗಲೂ ಒಂದಲ್ಲ ಒಂದು ಸರಿಯಾದ ಕೆಲಸ ಹುಡುಕಿಕೊಂಡು ಸುತ್ತಾಡುತ್ತಿದ್ದ ಅವನಿಗೆ ಇದಕ್ಕೆಲ್ಲ ಸಮಯವೂ ಇರಲಿಲ್ಲ. ಆದರವನು ಗದಾಧರನನ್ನು ಸಂಪೂರ್ಣ ನಿರ್ಲಕ್ಷಿಸಿಬಿಟ್ಟ ಎನ್ನಲಾಗದು. ಗದಾಧರನ ಸೂಕ್ಷ್ಮ ವಿವೇಕ ಪ್ರಜ್ಞೆಯೇ ಅವನಿಗೆ ಕಾವಲಾಗಿರುತ್ತದೆ ಎಂದು ರಾಮೇಶ್ವರನಿಗೆ ವಿಶ್ವಾಸವಿತ್ತು. ಗಂಡಸರು–ಹೆಂಗಸರೆಂಬ ಭೇದವಿಲ್ಲದೆ ಗ್ರಾಮಸ್ಥರೆಲ್ಲ ಗದಾಧರನನ್ನು ಪ್ರೀತಿಸುವುದನ್ನು, ಅವನಲ್ಲಿ ವಿಶ್ವಾಸವಿಡುವುದನ್ನು ಕಂಡಾಗ ರಾಮೇಶ್ವರನ ಈ ನಂಬಿಕೆ ಮತ್ತಷ್ಟು ದೃಢವಾಯಿತು. 'ಒಬ್ಬ ವ್ಯಕ್ತಿ ನಿಜಕ್ಕೂ ಅಸಾಧಾರಣ ಗುಣವಂತನೂ ಶೀಲವಂತನೂ ಆಗಿದ್ದ ಹೊರತು ಅವನು ಎಲ್ಲರ ಹೃದಯವನ್ನೂ ಗೆಲ್ಲಬಲ್ಲನೆ? ಸಮಸ್ತರ ಪ್ರಶಂಸೆಗೆ ಪಾತ್ರನಾಗಬಲ್ಲನೆ?' ಎಂದು ಆಲೋಚಿಸಿದ ರಾಮೇಶ್ವರ. ಗದಾಧರನ ಭವ್ಯ ಭವಿತವ್ಯವನ್ನು ಕಾಣಲು ಅವನು ಉತ್ಕಂಠಿತನಾಗಿದ್ದ. ಅಂತೂ ಗದಾಧರನಿಗೀಗ, 'ನೀನು ಹೀಗೆಯೇ ಮಾಡಬೇಕು, ಹಾಗೆಯೇ ಇರಬೇಕು' ಎಂದು ಹೇಳುವವರು ಯಾರೂ ಇಲ್ಲದಂತಾಯಿತು. ತತ್ಪರಿಣಾಮವಾಗಿ ಅವನ ವ್ಯಕ್ತಿತ್ವ ಅನಿರ್ಬಂಧಿತವಾಗಿ ವಿಕಸನಗೊಳ್ಳಲು ಅವಕಾಶವಾಯಿತು.

೧೫

# ಕಾಮಾರಪುಕುರದ ಕಣ್ಮಣಿ

ರಾಮಕುಮಾರ ಕಲ್ಕತ್ತಕ್ಕೆ ಹೋದಾಗ ಗದಾಧರನಿಗೆ ಹದಿಮೂರು ವರ್ಷ ವಯಸ್ಸು. ಈಗ ಅವನ ಮನಸ್ಸು ಮತ್ತಷ್ಟು ಆಲೋಚಿಸಲು, ಭಾವಿಸಲು ಸಮರ್ಥವಾಗಿತ್ತು. ಪ್ರತಿಯೊಬ್ಬ ವ್ಯಕ್ತಿಯನ್ನೂ, ಪ್ರತಿಯೊಂದು ವಸ್ತುವನ್ನೂ ಅವನ ಮನಸ್ಸು ಸೂಕ್ಷ್ಮವಾಗಿ ಪರಿಶೀಲಿಸಿ ನೋಡುತ್ತಿತ್ತು. ಪ್ರತಿಯೊಬ್ಬ ವ್ಯಕ್ತಿಯ ಪ್ರತಿಯೊಂದು ಕಾರ್ಯದ ಹಿಂದೆಯೂ ಅಡಗಿರುವ ಉದ್ದೇಶವನ್ನು ವಿವೇಚಿಸಿ ನೋಡುತ್ತಿತ್ತು. ಆದ್ದರಿಂದ ಶಾಲೆಯಲ್ಲಿಯೇ ಆಗಲಿ, ಸಂಸ್ಕೃತ ಪಾಠಶಾಲೆಯಲ್ಲೇ ಆಗಲಿ, ಓದಿ ಜಾಣರೆನ್ನಿಸಿಕೊಳ್ಳುವುದರ ಏಕಮಾತ್ರ ಉದ್ದೇಶವೆಂದರೆ ಧನಾರ್ಜನೆ; ಅರ್ಥಾತ್, ಅವನೇ ಹೇಳುತ್ತಿದ್ದಂತೆ 'ಅಕ್ಕಿ–ಬಾಳೆಹಣ್ಣು ಗಂಟು ಕಟ್ಟುವುದು' ಮಾತ್ರವೇ—ಎನ್ನುವುದು ಅವನಿಗೆ ಸ್ಪಷ್ಟವಾಗಿತ್ತು. ಊರಿನ ಎಷ್ಟೋ ಮನೆಗಳಲ್ಲಿ ಆಸ್ತಿಪಾಸ್ತಿಗಾಗಿ ನಡೆಯುತ್ತಿದ್ದ ಕದನವನ್ನು ಗದಾಧರ ನೋಡುತ್ತಿದ್ದ. 'ನನ್ನ ಪಾಲು, ತನ್ನ ಪಾಲು' ಎನ್ನುತ್ತ ಕಿತ್ತಾಡಿ ಕೋರ್ಟಿಗೆ ಹೋಗಿ, ಕಡೆಗೆ ಏನೋ ಒಂದು ತೀರ್ಮಾನವಾದ ಮೇಲೆ ಅಳತೆ ಟೇಪು ಹಿಡಿದುಕೊಂಡು ಭೂಮಿ–ಮನೆಗಳನ್ನು ಭಾಗಮಾಡುತ್ತಾರೆ; 'ಆ ಕಡೆ ನಿನ್ನದು, ಈ ಕಡೆ ನನ್ನದು' ಎಂದು ಹೇಳಿಕೊಳ್ಳುತ್ತಾರೆ. ಹೋಗಲಿ, ಕಡೆಗಾದರೂ ಸುಖವಾಗಿರುತ್ತಾರೆಯೆ ? ಸುಖ ಪಡುವುದಕ್ಕೆ ಅವರೇ ಇರುವುದಿಲ್ಲ! ಎಲ್ಲ ಇತ್ಯರ್ಥವಾಯಿತು ಎನ್ನುವ ವೇಳೆಗೆ ಅವರ ಜೀವನವೇ ಇತ್ಯರ್ಥವಾಗಿಬಿಟ್ಟಿರುತ್ತದೆ! ಇದನ್ನೆಲ್ಲ ಕಣ್ಣಾರೆ ಕಾಣುತ್ತಿದ್ದ ಗದಾಧರನ ಮನಸ್ಸಿನಲ್ಲಿ ಮಂಥನ ನಡೆಯುತ್ತಿತ್ತು. ಈ ಹಣ ಮತ್ತು ಭೋಗ—ಇವೇ ಮನುಷ್ಯನ ಕಷ್ಟಪರಂಪರೆಗಳೆಲ್ಲಕ್ಕೂ ಮೂಲಕಾರಣ ಎಂಬುದು ಅವನಿಗೆ ಗಟ್ಟಿಯಾಯಿತು. ಎಂದಮೇಲೆ ಅವುಗಳನ್ನೇ ತಂದುಕೊಡುವ ವಿದ್ಯೆಯ ಬಗ್ಗೆ ಅವನಲ್ಲಿ ಜುಗುಪ್ಸೆ ಮೂಡಿದ್ದರೆ ಆಶ್ಚರ್ಯವೇನು ? ಭಗವಂತನಲ್ಲಿ ಭಕ್ತಿ ಗಳಿಸುವುದೇ ಜೀವನದ ಪ್ರಥಮ–ಪ್ರಮುಖ ಉದ್ದೇಶ ಎಂದು ಆ ವಯಸ್ಸಿನಲ್ಲಿಯೇ ಅವನಿಗೆ ತೋರ ಲಾರಂಭಿಸಿತು. ಅವನಿಗೆ ತನ್ನ ತಂದೆಯಂತೆಯೇ 'ಅರೆಹೊಟ್ಟೆ ಭೋಜನ, ಅರೆಬಟ್ಟೆ ಭೂಷಣ'ವಿದ್ದರೆ ಸಾಕಷ್ಟಾಯಿತು ಎನ್ನುವ ಅಲ್ಪತೃಪ್ತಿಯ ಮನೋಭಾವ ಬೆಳೆ ಯಿತು. ಆದರೂ ಅವನು ಶಾಲೆಗೆ ಹೋಗುವುದನ್ನು ಬಿಟ್ಟುಬಿಡಲಿಲ್ಲ. ಆದರೆ ಅದಕ್ಕೆ ಮುಖ್ಯ ಕಾರಣವೆಂದರೆ ಪಾಠವಲ್ಲ, ಓರಗೆಯ ಹುಡುಗರ ಸ್ನೇಹ. ಜೊತೆಗೆ ಅವನು ದಿನದಲ್ಲಿ ಬಹಳಷ್ಟು ಸಮಯವನ್ನು ರಘುವೀರನ ಪೂಜೆಯಲ್ಲಿ ಮತ್ತು

ತಾಯಿಗೆ ಮನೆಗೆಲಸದಲ್ಲಿ ನೆರವಾಗುವುದರಲ್ಲಿ ಕಳೆಯುತ್ತಿದ್ದ.

ಈ ಆಧ್ಯಾತ್ಮಿಕ ಅಂಶದ ಜೊತೆಜೊತೆಗೇ ಗದಾಧರನಲ್ಲಿ ಇನ್ನೂ ಅನೇಕ ಅಸಾಧಾರಣ ಪ್ರತಿಭೆಗಳು, ಗುಣಗಳು ವ್ಯಕ್ತವಾಗುತ್ತಿದ್ದುವು. ಉದಾಹರಣೆಗೆ ಒಂದು ದೃಶ್ಯ ನೋಡಿ: ಅವನು ತನ್ನ ಸ್ನೇಹಿತರೊಂದಿಗೆ ಹರಟುತ್ತ, ಒಂದು ರಸ್ತೆಯಲ್ಲಿ ನಡೆದಾಡುತ್ತ ಬರುತ್ತಾನೆ; ಗ್ರಾಮದ ಗುಡಿಗಾರ ಅಲ್ಲಿ ಶಿವ, ದುರ್ಗೆ ಮೊದಲಾದ ದೇವದೇವಿಯರ ವಿಗ್ರಹಗಳನ್ನು ತಯಾರು ಮಾಡುತ್ತ ಕುಳಿತಿರುತ್ತಾನೆ. ಸ್ನೇಹಿತರೆಲ್ಲ ಅಲ್ಲೇ ಬದಿಯಲ್ಲಿ ಮಾತನಾಡುತ್ತ ನಿಲ್ಲುತ್ತಾರೆ. ಆದರೆ ಗದಾಧರನ ಕಣ್ಣು ಆ ಗುಡಿಗಾರನ ಕೆಲಸದ ಮೇಲೆಯೇ ನೆಟ್ಟಿದೆ. ಇದ್ದಕ್ಕಿದ್ದಂತೆ ಅವನು ಗುಡಿಗಾರನಿಗೆ ಹೇಳುತ್ತಾನೆ, "ಓ, ಅದೇನದು! ಆ ದೇವಿಯ ಕಣ್ಣನ್ನು ಹಾಗೆ ಮಾಡಿಬಿಟ್ಟೆಯಲ್ಲಪ್ಪ! ಅದು ಅಷ್ಟು ಚಪ್ಪಟೆಯಾಗಿರುತ್ತದೆಯೆ? ಅದು ಹೀಗಿರಬೇಕು—" ಹೀಗೆನ್ನುತ್ತ ಆ ಕಣ್ಣುಗಳಲ್ಲಿ ಕರುಣೆ, ಅತಿಮಾನುಷ ಶಕ್ತಿ, ಅಂತರ್ಮುಖತೆ, ಆನಂದಗಳೆಲ್ಲ ಹೇಗೆ ಒಡಮೂಡಿ ಬರಬೇಕು, ಆ ಗೆರೆಗಳನ್ನು ಹೇಗೆ ಎಳೆಯಬೇಕು ಎಂಬುದನ್ನು ವಿವರಿಸುತ್ತಾನೆ. ಆ ಮುಖಭಾವದಲ್ಲಿ ಜೀವಂತಿಕೆ, ದೈವೀ ತೇಜಸ್ಸುಗಳನ್ನು ತರುವುದು ಹೇಗೆ ಎಂದು ತೋರಿಸಿಕೊಡುತ್ತಾನೆ. ಇವನ್ನೆಲ್ಲ ಕೇಳಿ ಆ ಗುಡಿಗಾರ, 'ಎಲಎಲಾ, ಈ ಪೋರ ನನಗೇ ಹೇಳಿಕೊಡುತ್ತಾನಲ್ಲ!... ಆದರೆ ಅವನು ಹೇಳಿದ್ದು ಮಾತ್ರ ಸರಿಯಾಗಿದೆ!' ಎಂದು ಚಕಿತನಾಗುತ್ತಾನೆ. ಈ ದೃಶ್ಯವನ್ನು ಕಂಡವರೆಲ್ಲ, 'ಇಷ್ಟು ಸಣ್ಣ ಹುಡುಗನಿಗೆ ಇಂತಹ ಅತಿ ಸೂಕ್ಷ್ಮ ವಿಚಾರಗಳೆಲ್ಲ ಹೇಗೆ ಅರ್ಥವಾಗುತ್ತವೆ? ಅವನಿಗಿದು ವಂಶಪಾರಂಪರ್ಯವಾಗಿ ಬಂದ ವಿದ್ಯೆಯೂ ಅಲ್ಲ; ಎಂದಮೇಲೆ ಅವನು ಇದನ್ನೆಲ್ಲ ಎಲ್ಲಿ ಕಲಿತುಕೊಂಡ?' ಎಂದು ಆಲೋಚಿಸುತ್ತ ಮೂಕರಾಗುತ್ತಾರೆ.

ಮತ್ತೊಂದು ದೃಶ್ಯ: ಹುಡುಗರೆಲ್ಲ ಸೇರಿಕೊಂಡು ಯಾವುದಾದರೂ ದೇವ-ದೇವಿಯರ ಪೂಜೆ ಮಾಡುವ ಆಟವಾಡಲು ನಿಶ್ಚಯಿಸುತ್ತಾರೆ. ಪೂಜೆಗೊಂದು ವಿಗ್ರಹವೋ ಪಟವೋ ಬೇಕಲ್ಲ? ಅದಕ್ಕೇನೂ ಚಿಂತೆಯಿಲ್ಲ. ನಮ್ಮ ಗದಾಧರನೇ ಅದನ್ನು ತಯಾರಿಸಬಲ್ಲ— ಕೆರೆಯ ಬದಿಯಲ್ಲಿ ಜೇಡಿಮಣ್ಣು ಇದ್ದೇ ಇದೆ! ಇಲ್ಲವೆ, ಯಾವುದಾದರೊಂದು ದೇವತೆಯ ಚಿತ್ರ ಬೇಕೆಂದರೆ, ಅದನ್ನೂ ಅವನೇ ನಿಮಿಷಮಾತ್ರದಲ್ಲಿ ರಚಿಸಬಲ್ಲ. ಅವನು ಆಟಕ್ಕೆಂದು ಬರೆದ ಚಿತ್ರವನ್ನೋ ನಿರ್ಮಿಸಿದ ವಿಗ್ರಹವನ್ನೋ ಅನಂತರ ಕಂಡ ಹಿರಿಯರು, ಇದು ಯಾರೋ ನಿಪುಣ ಕಲಾಕಾರನ ಕೃತಿಯಿರಬೇಕೆಂದು ಭಾವಿಸಿ ಸುಮ್ಮನಾಗುತ್ತಾರೆ!

ಈ ಪ್ರಚಂಡ ಬಾಲಕನನ್ನು ಕೆಲವೊಮ್ಮೆ ಯಾರಾದರೂ ದೊಡ್ಡವರು ಲೋಕಾಭಿರಾಮವಾಗಿ ಮಾತನಾಡಿಸುತ್ತಿರುತ್ತಾರೆ. ಆ ಸಂದರ್ಭದಲ್ಲಿ ಇವನು ಇದ್ದಕ್ಕಿದ್ದಂತೆ ಅದೇನೋ ಹೇಳಿಬಿಡುತ್ತಾನೆ. ಆ ದೊಡ್ಡವರು, 'ಆ! ಇದೇನು ಹೇಳಿದ ಇವನು!' ಎಂದು ಆಲೋಚಿಸುತ್ತ ನಿಲ್ಲುತ್ತಾರೆ. ಆಗ ಅವರ ಮನಸ್ಸಿನಲ್ಲೊಂದು ಮಿಂಚು ಹೊಳೆಯುತ್ತದೆ. ಬಹಳ ದಿನಗಳಿಂದ ಅವರ ಮನಸ್ಸನ್ನು ಕೊರೆಯುತ್ತಿದ್ದ ಯಾವುದೋ ಸಂದೇಹಕ್ಕೆ, ಯಾವುದೋ ಪ್ರಶ್ನೆಗೆ ಉತ್ತರ ಸಿಕ್ಕಿಬಿಟ್ಟಿರುತ್ತದೆ!

ಇದರಿಂದ ಅವರಿಗೆ ತಮ್ಮ ಮುಂದಿನ ಜೀವನದ ದಾರಿ ಗೋಚರವಾಗುತ್ತದೆ. 'ನನ್ನ ಇಷ್ಟದೇವತೆಯೇ ನನ್ನ ಮೇಲೆ ಕರುಣೆ ತಾಳಿ ಈ ಬಾಲಕನ ಮೂಲಕ ಮಾರ್ಗದರ್ಶನ ಮಾಡಿರಬಹುದೆ!' ಎಂದು ಅವರು ಆಶ್ಚರ್ಯಚಕಿತರಾಗುತ್ತಾರೆ.

ಈ ಬಗೆಯ ಅತಿಮಾನುಷ ಗುಣಗಳಂತಿರಲಿ; ಸಾಮಾನ್ಯರಲ್ಲೂ ಇರಬಹುದಾದ ಅನೇಕ ಶ್ರೇಷ್ಠ ಗುಣಗಳು ಬಾಲಕ ಗದಾಧರನಲ್ಲಿ ವಿಶೇಷ ಪ್ರಮಾಣದಲ್ಲಿ ಪ್ರಕಟವಾಗುತ್ತಿದ್ದುವು. ಅವನು ತನ್ನ ಶರೀರ–ಮಾತು–ಮನಸ್ಸುಗಳಿಂದ ನಡೆಸುವ ಪ್ರತಿಯೊಂದು ಕ್ರಿಯೆಯಲ್ಲೂ ಪರಿಶುದ್ಧತೆ, ನಿಃಸ್ವಾರ್ಥತೆ ಮತ್ತು ಶ್ರದ್ಧೆಗಳು ಎದ್ದುಕಾಣುತ್ತಿದ್ದುವು.

ಗದಾಧರ ಇಂತಹ ಶ್ರೇಷ್ಠ ಗುಣಗಳ ಗಣಿಯೇ ಆಗಿದ್ದರೂ, ಅವನು ಕೇವಲ ಒಬ್ಬ 'ಒಳ್ಳೆಯ' ಹುಡುಗನೆಂದರ್ಥವಲ್ಲ. ಹಾಸ್ಯ, ವಿನೋದಗಳಲ್ಲಿ ಅವನು ತನ್ನ ಓರಗೆಯವರಿಗಿಂತ ಒಂದು ಕೈ ಮೇಲು ಎಂದೇ ಎನ್ನಬೇಕು. ಆದರೆ ಇನ್ನೊಬ್ಬರಿಗೆ ಕಿರಿಕಿರಿ ಮಾಡುವ, ಬೇಸರವನ್ನುಂಟುಮಾಡುವ ತಮಾಷೆ ಅವನದ್ದಲ್ಲ. ಅವನ ಹಾಸ್ಯವೆಂದರೆ ಮಗು ಕಚಗುಳಿಯಿಟ್ಟಂತೆ—ತುಂಬ ನವುರಾದದ್ದು. ಅದರಲ್ಲೂ ಅಣಕವೆಂದರೆ ಅವನಿಗೆ ಬಹಳ ಪ್ರೀತಿ. ಯಾರನ್ನು ಬೇಕಾದರೂ ಅನುಕರಿಸಿ ತೋರಿಸಬಲ್ಲ ಸಾಮರ್ಥ್ಯ ಅವನದು.

ಆ ಹಳ್ಳಿಗಳಲ್ಲಿ ಓದುಬರಹ ಬಾರದವರು ಆಗ ಬಹಳ ಮಂದಿ. ಕೆಳವರ್ಗಗಳಲ್ಲಂತೂ ಅಕ್ಷರಸ್ಥರ ಪ್ರಮಾಣ ಸೊನ್ನೆಗೆ ತುಂಬ ಹತ್ತಿರ. ಆದರೆ ಇಂಥವರಿಗೆ ಸದಭಿರುಚಿಗಳೇ ಇರುವುದಿಲ್ಲವೆಂದಲ್ಲ. ಈ ಜನಗಳು ಆಗಾಗ ರಾಮಾಯಣವನ್ನೋ ಭಾಗವತವನ್ನೋ ಕೇಳಲು ಬಯಸುತ್ತಿದ್ದರು. ಅದಕ್ಕಾಗಿ ಯಾರಾದರೊಬ್ಬ ಬ್ರಾಹ್ಮಣನನ್ನೋ ಅಥವಾ ತಮ್ಮ ಜಾತಿಗೇ ಸೇರಿದ ಒಬ್ಬ ಅಕ್ಷರಸ್ಥನನ್ನೋ ಕರೆಸುತ್ತಿದ್ದರು. ಹೀಗೆ ಪಾರಾಯಣ ಮಾಡಲು ಬಂದವರಿಗೆ ಎಲ್ಲಿಲ್ಲದ ಮರ್ಯಾದೆ. ಬರುತ್ತಿದ್ದಂತೆ ಕಾಲು ತೊಳೆಯಲು ನೀರು; ಒಂದು ಹೊಸ ಹುಕ್ಕಾ ಕೊಳವೆ; ಕುಳಿತುಕೊಳ್ಳಲು ಮೆತ್ತನೆಯ ಆಸನ, ಇಲ್ಲವೆ ಕಡೆಯ ಪಕ್ಷ ಒಂದು ಚಾಪೆ ಇತ್ಯಾದಿ. ಹೀಗೆ ಮರ್ಯಾದೆ ಪಡೆದ ಆ ವ್ಯಕ್ತಿಯ ಪ್ರತಿಷ್ಠೆಯೇನು! ಬಿಂಕವೇನು! ಧೋರಣೆಯೇನು! ಎತ್ತರದ ಜಾಗದಲ್ಲಿ ಕುಳಿತ ಈ ವ್ಯಕ್ತಿ ಪುರಾಣವನ್ನು ಓದುತ್ತಿದ್ದಂತೆ ತನ್ನ ಬಗೆಬಗೆಯ ಹಾವಭಾವಗಳಿಂದ, ಧ್ವನಿಯ ಏರಿಳಿತಗಳಿಂದ ತನ್ನ ದೊಡ್ಡಸ್ತಿಕೆಯನ್ನು ಪ್ರದರ್ಶಿಸುತ್ತಿದ್ದ. ಎದುರಿಗೆ ಕುಳಿತ ಮಂದಮತಿಗಳತ್ತ 'ನೋಡಿದಿರೋ ನನ್ನ ಪಾಂಡಿತ್ಯವನ್ನು!' ಎಂಬಂತೆ ಆಗಾಗ ದೃಷ್ಟಿ ಹಾಯಿಸುತ್ತಿದ್ದ. ಬಾಲಕ ಗದಾಧರ ಒಳಗೊಳಗೇ ನಗುತ್ತ ಇದನ್ನೆಲ್ಲ ಗಮನಿಸಿಟ್ಟುಕೊಂಡಿರುತ್ತಿದ್ದ. ಸಮಯ ಬಂದಾಗ ತಾನೂ ಹಾಗೆಯೇ ಆಸನದ ಮೇಲೆ ಕುಳಿತು, ಗಂಭೀರ ಮುಖಮುದ್ರೆ ಧರಿಸಿ ಆ ವಿಚಿತ್ರ ವರ್ತನೆಯನ್ನು, ಅಂಗಭಂಗಿಗಳನ್ನು ಚಾಚೂ ತಪ್ಪದೆ ಅಭಿನಯಿಸಿ ತೋರಿಸುತ್ತಿದ್ದ. ಅದನ್ನು ಕಂಡವರೆಲ್ಲ ಹೊಟ್ಟೆಹಿಡಿದುಕೊಂಡು ನಗುತ್ತಿದ್ದರು.

ಗ್ರಾಮದ ಮಹಿಳೆಯರಿಗೆಲ್ಲ ಗದಾಧರನೆಂದರೆ ಅಚ್ಚುಮೆಚ್ಚಲ್ಲವೆ? ಅವನು

ಈ ನಡುವೆ ಶಾಲೆಗೆ ಹೋಗದೆ ಮನೆಯಲ್ಲೇ ಬಹಳ ಹೊತ್ತು ಇರತೊಡಗಿರುವುದರಿಂದ ಅವರಿಗೆ ಅವನನ್ನು ಕಾಣುವುದು ಹೆಚ್ಚು ಸುಲಭವಾಯಿತು. ತಮ್ಮ ಮನೆಗೆಲಸವೆಲ್ಲ ಮುಗಿದಿದ್ದರೆ ಈ ಮಹಿಳೆಯರು ನೇರವಾಗಿ ಓಡಿಬರುತ್ತಿದ್ದುದು ಚಂದ್ರಾದೇವಿಯ ಮನೆಗೆ. ಅಲ್ಲಿ ಗದಾಧರ ಅವರ ಕಣ್ಣಿಗೆ ಬಿದ್ದರೆ ಸಾಕು, ಅವನನ್ನು ಸುತ್ತುವರಿದು ಕುಳಿತುಕೊಂಡು "ಗದಾಯ್, ಒಂದು ಹಾಡು ಹೇಳೋ; ಗದಾಯ್, ಒಂದು ಕಥೆ ಹೇಳೋ" ಎನ್ನಲು ಪ್ರಾರಂಭ. ಆ ವೇಳೆಗೆ ಗದಾಧರನೇನಾದರೂ ತಾಯಿಗೆ ಮನೆಗೆಲಸದಲ್ಲಿ ನೆರವಾಗುತ್ತಿದ್ದರೆ, ಈ ಹೆಂಗಸರು ತಾವೂ ಒಂದು ಕೈ ಹಾಕಿ ಕೆಲಸವನ್ನು ಬೇಗ ಮುಗಿಸಿಬಿಡುತ್ತಿದ್ದರು. ಇದು ಹೆಚ್ಚು ಕಡಮೆ ರೂಢಿಯೇ ಆಗಿಬಿಟ್ಟಿತು. ಆ ಹೆಂಗಸರಿಗೆ ಗದಾಧರನ ಹಾಡು, ಕಥೆಗಳನ್ನು ಕೇಳುವುದು ಎಷ್ಟು ಪ್ರಿಯವಾಗಿತ್ತೆಂದರೆ ಅವರು ಸಾಧ್ಯವಾದಷ್ಟು ಬೇಗ ತಮ್ಮ ಮನೆಗೆಲಸಗಳನ್ನು ಮುಗಿಸಿ ಚಂದ್ರಮಣಿಯ ಮನೆಗೆ ಓಡಿಬಂದುಬಿಡುತ್ತಿದ್ದರು. ಆದಷ್ಟು ಹೊತ್ತು ಕುಳಿತು ಆಲಿಸುವ ಆಸೆ ಅವರದು.

ಪುರಾಣಗಳನ್ನು ಓದುವುದಷ್ಟೇ ಅಲ್ಲದೆ, ಗದಾಧರ ಇನ್ನೂ ಹಲವಾರು ರೀತಿಯಲ್ಲಿ ಜನರ ಮನರಂಜಿಸಬಲ್ಲವನಾಗಿದ್ದ. ಅವನ ಗ್ರಾಮದಲ್ಲಿ ನಾಟಕಕಾರರ, ಲಾವಣಿಕಾರರ ತಂಡಗಳಿದ್ದುವು. ಈ ತಂಡಗಳ ಹಾಡು–ಅಭಿನಯಗಳನ್ನೆಲ್ಲ ಗದಾಧರ ಚೆನ್ನಾಗಿ ಗಮನಿಸಿಟ್ಟುಕೊಂಡಿದ್ದ. ಅಲ್ಲದೆ, ಗ್ರಾಮದ ಎಷ್ಟೋ ವೈಷ್ಣವರ ಮನೆಗಳಲ್ಲಿ ಪ್ರತಿ ಸಂಜೆಯೂ ಭಾಗವತ ವಾಚನ, ಭಜನೆಗಳು ನಡೆಯುತ್ತಿದ್ದುವು. ಬಾಲ್ಯದಿಂದಲೂ ಇಂಥವನ್ನೆಲ್ಲ ಕೇಳಿದ್ದ ಗದಾಧರ ತನ್ನ ಅಸಾಮಾನ್ಯ ಧಾರಣಶಕ್ತಿಯಿಂದ ಇವುಗಳಲ್ಲಿ ಹೆಚ್ಚಿನವನ್ನು ನೆನಪಿಟ್ಟುಕೊಂಡಿದ್ದ. ಗ್ರಾಮದ ಮಹಿಳೆಯರು ಮತ್ತೆಮತ್ತೆ ಮನೆಗೆ ಬಂದು ಪ್ರೀತಿಯಿಂದ 'ಗದಾಯ್, ಒಂದು ಹಾಡು ಹೇಳಪ್ಪ,' ಎಂದು ಬೇಡಿಕೊಂಡಾಗ ತನ್ನ ನೆನಪಿನ ಚೀಲದಿಂದ ಒಂದೊಂದನ್ನೇ ತೆಗೆದು ಹಾಡುತ್ತಿದ್ದ. ಯಾವುದಾದರೂ ಬಯಲಾಟದ ಸನ್ನಿವೇಶವನ್ನು ಅಭಿನಯಿಸುವಾಗ, ತಾನೇ ಅದರಲ್ಲಿನ ಎಲ್ಲ ಪಾತ್ರಗಳನ್ನೂ ಧ್ವನಿಯ ಏರಿಳಿತಗಳೊಂದಿಗೆ ಅಭಿನಯಿಸುತ್ತಿದ್ದ. ಎಂದಾದರೂ ತನ್ನ ತಾಯಿಯೋ ಇನ್ನಾರಾದರೂ ಹೆಂಗಸರೋ ಖಿನ್ನಮನಸ್ಕರಾಗಿದ್ದಂತೆ ಕಂಡರೆ, ಅಂದು ಬಯಲಾಟದ ಒಂದು ತಮಾಷೆಯ ದೃಶ್ಯವನ್ನು ಪ್ರಾರಂಭಿಸುತ್ತಿದ್ದ. ಇಲ್ಲವೆ, ಊರಿನ ಯಾರಾದರೊಬ್ಬ ವಿಲಕ್ಷಣ ವ್ಯಕ್ತಿಯ ವಿಚಿತ್ರ ಹಾವಭಾವವನ್ನೋ ಅಂಗಭಂಗಿಯನ್ನೋ ಹೇಗೆ ಅಣಕವಾಡಿ ತೋರಿಸುತ್ತಿದ್ದನೆಂದರೆ ನೋಡುವವರೆಲ್ಲ ನಕ್ಕುನಕ್ಕು ಬಿದ್ದು ಹೊರಳಾಡಬೇಕು !

ಹೀಗೆ ಬಾಲಕ ಗದಾಧರ ಹಳ್ಳಿಯ ಮಹಿಳಾ ಸಾಮ್ರಾಜ್ಯದ ಮೇಲೆ ತನ್ನ ಪ್ರಭಾಜಾಲವನ್ನು ಬೀರಿದ್ದ. ಅವನ ಜನನದ ಸಮಯದಲ್ಲಿ ಚಂದ್ರಮಣಿ–ಕ್ಷುದಿರಾಮರಿಗಾಗಿದ್ದ ವಿಚಿತ್ರ ಕನಸುಗಳ, ಅದ್ಭುತ ದರ್ಶನಗಳ ವಿಷಯ ಅವರಿಗೆಲ್ಲ ತಿಳಿದಿತ್ತು. ದೇವದೇವಿಯರ ಭಾವ ಜಾಗೃತವಾದರೆ ಅವನಲ್ಲಿ ಕೂಡಲೇ ಎಂತಹ ಅದ್ಭುತ ಪರಿವರ್ತನೆಯಾಗುತ್ತದೆ ಎಂಬುದನ್ನಂತೂ ಕಣ್ಣಾರೆ ಕಾಣುತ್ತಿದ್ದರು. ಅವನ ಭಕ್ತಿಯೇನು! ಪುರಾಣಗಳನ್ನು ಓದುವಾಗ ಅವನ ತನ್ಮಯತೆಯೇನು! ಆ

ಸುಮಧುರ ಕಂಠದ ಗಾಯನವೇನು! ಇನ್ನು, ಪ್ರತಿಯೊಬ್ಬರ ವಿಷಯದಲ್ಲೂ ಪ್ರೀತಿಯಿಂದ ನಡೆದುಕೊಳ್ಳುವ ಅವನ ಹೃದಯವಂತಿಕೆಯೆಂಥದು! ಇಂತಿಂಥ ದೈವೀ ಗುಣಗಳನ್ನು ಕಂಡು ಆ ಹಳ್ಳಿಯ ಸರಳ ಹೆಂಗಸರ ಹೃದಯದಲ್ಲಿ ಗದಾಧರನ ಬಗ್ಗೆ ಒಂದು ವಿಶಿಷ್ಟ ಭಕ್ತಿ–ವಾತ್ಸಲ್ಯ ಮೂಡಿತ್ತು. ಪ್ರಸನ್ನಮಯಿಯೇ ಮೊದಲಾದ ವೃದ್ಧ ಸ್ತ್ರೀಯರನೇಕರು ಗದಾಧರನಲ್ಲಿ ಬಾಲಗೋಪಾಲನನ್ನೇ ಕಾಣುತ್ತಿದ್ದರು. ತಮ್ಮ ಸ್ವಂತ ಮಕ್ಕಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರು. ಇತರ ಸ್ತ್ರೀಯರೂ ಅವನನ್ನು ಶ್ರೀಕೃಷ್ಣಾಂಶ ಸಂಭೂತನೆಂದು ನಂಬಿ, ತಮ್ಮ ಇಷ್ಟದೇವತೆಯಂತೆ, ಇಲ್ಲವೆ ಸಖನಂತೆ ಕಾಣುತ್ತಿದ್ದರು. ಶ್ರೀಚೈತನ್ಯ ಮಹಾಪ್ರಭುವಿನ ನಾಡಾದ ಬಂಗಾಳವು ಪರಾಭಕ್ತಿಯ ಗಂಗೆಯಿಂದ ಸೇಚನಗೊಂಡಿರುವಂಥದು. ಪ್ರೇಮಪೂರ್ಣ ಭಕ್ತಿಯೇ ಅಲ್ಲಿನ ವೈಷ್ಣವರಿಗೆ ಧರ್ಮದ ಸಾರಸರ್ವಸ್ವ. ಇಂತಹ ಮನೆತನಗಳಲ್ಲಿ ಹುಟ್ಟಿದ ಆ ವನಿತೆಯರು ಗದಾಧರನಂತಹ ದೈವೀಗುಣಸಂಪನ್ನನಾದ ಬಾಲಕನನ್ನು ಸಾಕ್ಷಾತ್ ಭಗವಂತನೆಂಬಂತೆ ಕಂಡುದರಲ್ಲಿ ಅಚ್ಚರಿಯೇನಿದೆ? ಅವರಿಗೆ ಅವನಲ್ಲಿ ಎಂಥ ಗಾಢ ಶ್ರದ್ಧೆ ಬಲಿಯಿತೆಂದರೆ, ಕೆಲವೊಮ್ಮೆ ಅವರು ಅವನ ಬಳಿಯಲ್ಲಿ ತಮ್ಮ ಅಂತರಾಳದ ಭಾವಗಳನ್ನು ಯಾವ ಬಗೆಯ ಮುಚ್ಚುಮರೆಯಿಲ್ಲದೆ ಹೇಳಿಕೊಂಡು ಅವನ ಸಲಹೆ ಕೇಳುತ್ತಿದ್ದರು. ಆಗ ಗದಾಧರನೂ, ಅವರು ಪರಕೀಯರೆಂಬ ಭಾವನೆಯೇ ಇಲ್ಲದೆ, ತನ್ನ ಒಡಹುಟ್ಟಿದವರಂತೆ ಅವರ ಬಳಿ ವರ್ತಿಸುತ್ತಿದ್ದ; ಅವರಿಗೆ ಸಲಹೆ ನೀಡುತ್ತಿದ್ದ. ಆ ವನಿತೆಯರು ಗದಾಧರನ ಮಾತಿನಂತೆಯೇ ನಡೆದುಕೊಳ್ಳುತ್ತಿದ್ದರು.

ಗದಾಧರ ಒಳ್ಳೆಯ ಅಭಿನಯ ಕುಶಲಿ ಎನ್ನುವುದು ಹಳ್ಳಿಯ ಹೆಂಗಸರಿಗೆ ಚೆನ್ನಾಗಿ ಗೊತ್ತಿತ್ತು. ಅವನು ಆಗಾಗ ಯಾರಾದರೊಬ್ಬ ಪ್ರಖ್ಯಾತ ಸ್ತ್ರೀಯಂತೆ ಸೀರೆಯುಟ್ಟು ಆಭರಣ ತೊಟ್ಟು, ಅವಳಂತೆಯೇ ಹಾವಭಾವ ಮಾಡುತ್ತ ಒಯ್ಯಾರ ದಿಂದ ಹಾಗೆ ಹೀಗೆ ಬಳಕುತ್ತ ಅವರನ್ನೆಲ್ಲ ರಂಜಿಸುತ್ತಿದ್ದ. ಒಮ್ಮೆ ಅವನು ಮಹಿಳೆಯರ ಅಪೇಕ್ಷೆಯಂತೆ ರಾಧೆಯ ವೇಷತೊಟ್ಟಿದ್ದ. ಆಗ ಅವನ ಮೈ–ಕೈ–ಮುಖಗಳ ಚಲನವಲನವನ್ನು ನೋಡಬೇಕು! ಸ್ತ್ರೀಯರೇ ಬೆರಗಾಗುವಂತಿತ್ತು ಅದು. ಅವನ ಕಂಠಸ್ವರ, ಮಾತಿನ ರೀತಿ ಎಲ್ಲ ಎಷ್ಟು ಸ್ತ್ರೀಸಹಜವಾಗಿತ್ತೆಂದರೆ ಅವನೊಬ್ಬ ಹುಡುಗ ಎಂಬುದೇ ಮರೆತುಹೋಗುತ್ತಿತ್ತು. ಹೆಂಗಸರು ನಗುನಗುತ್ತ ಮಾತನಾಡಿ ಕೊಳ್ಳುತ್ತಿದ್ದರು, "ನೋಡೇ, ಅವನು ನಮ್ಮ ಗದಾಯ್ ಅಂತಲೇ ತಿಳಿಯುವುದಿಲ್ಲವಲ್ಲೇ!" ಗದಾಧರ ಅಷ್ಟು ಸೂಕ್ಷ್ಮವಾಗಿ ವ್ಯಕ್ತಿಗಳ ಚಲನವಲನ ಗಳನ್ನು ಅನುಕರಿಸಬಲ್ಲವನಾಗಿದ್ದ. ಕೆಲವೊಮ್ಮೆ ತಮಾಷೆ ಮಾಡಿ ನಗಿಸುವುದ ಕ್ಕೋಸ್ಕರ ಅವನು ಸೀರೆಯುಟ್ಟುಕೊಂಡು, ಆಭರಣ ತೊಟ್ಟುಕೊಂಡು, ಸೊಂಟದ ಮೇಲೆ ಬಿಂದಿಗೆಯನ್ನು ಇಟ್ಟುಕೊಂಡು ಗಂಡಸರ ಮುಂದೆಯೇ ಬಳುಕುತ್ತ ನೀರು ತರಲು ಹಾಲ್ದಾರಪುಕುರದೆಡೆಗೆ ಹೊರಟುಬಿಡುತ್ತಿದ್ದ. ಗಂಡಸರೆಲ್ಲ ಬೇಸ್ತು! ಅವನು ಹೆಣ್ಣಲ್ಲ ಎನ್ನುವುದು ಅವರಿಗೆ ತಿಳಿಯುತ್ತಿದ್ದುದು ವೇಷ ತೆಗೆದ ಮೇಲೆಯೇ.

ಗದಾಧರ ಒಮ್ಮೆ ಆ ಊರಿನ ದುರ್ಗಾದಾಸ ಎಂಬವನನ್ನು ಬೇಸ್ತು

ಬೀಳಿಸಿದ್ದು ತುಂಬ ಸ್ವಾರಸ್ಯವಾಗಿದೆ. ಸೀತಾನಾಥ ಪೈನೆಗೆ ಏಳು ಗಂಡುಮಕ್ಕಳು, ಎಂಟು ಹೆಣ್ಣು ಮಕ್ಕಳು. ಈ ಹೆಣ್ಣುಮಕ್ಕಳಿಗೆಲ್ಲ ಮದುವೆಯಾಗಿದ್ದರೂ ತವರು ಮನೆಯಲ್ಲೇ ವಾಸ. ಏಕೆಂದರೆ ಅವರದು ಅವಿಭಾಜ್ಯ ಕುಟುಂಬ. ಅವರದು ಅದೆಷ್ಟು ದೊಡ್ಡ ಸಂಸಾರವೆಂದರೆ ಅವರಿಗೆ ಒಂದು ದಿನದ ಅಡಿಗೆಗೆ ಮಸಾಲೆ ರುಬ್ಬುವುದಕ್ಕೆ ಹತ್ತು ರುಬ್ಬುವ ಕಲ್ಲುಗಳು ತಿರುಗಬೇಕಾಗಿತ್ತಂತೆ! ಸೀತಾನಾಥ ಪೈನೆಯ ಸಂಬಂಧಿಕರೆಲ್ಲ ಅವನ ಮನೆಯ ಸುತ್ತಮುತ್ತಲಲ್ಲೇ ಮನೆ ಕಟ್ಟಿಕೊಂಡು ವಾಸವಾಗಿದ್ದರು. ಆದ್ದರಿಂದ ಅದು ವೈಶ್ಯರ ಕೇರಿ ಎಂದೇ ಹೆಸರಾಗಿತ್ತು. ಚಂದ್ರ ಮಣಿಯ ಮನೆ ಹತ್ತಿರದಲ್ಲೇ ಇದ್ದುದರಿಂದ ಸೀತಾನಾಥ ಪೈನೆಯ ಹೆಂಡತಿ, ಹೆಣ್ಣು ಮಕ್ಕಳು ಹಾಗೂ ಕೇರಿಯ ಮತ್ತಿತರ ಮಹಿಳೆಯರು ಅವಳ ಮನೆಗೆ ಬರುತ್ತಿದ್ದರು. ಅವರಿಗೆಲ್ಲ ಗದಾಧರನ ಪರಿಚಯ ಚೆನ್ನಾಗಿಯೇ ಇತ್ತು. ಅವರು ಎಷ್ಟೋ ಬಾರಿ ಅವನನ್ನು ತಮ್ಮ ಮನೆಗೆ ಬರಮಾಡಿಕೊಂಡು ನಾಟಕದ ಯಾವುದಾದರೂ ಭಾಗವನ್ನು ಅಭಿನಯಿಸುವಂತೆ ಅಥವಾ ಹೆಂಗಸರಂತೆ ಉಡಿಗೆತೊಡಿಗೆ ತೊಟ್ಟು ಹೆಂಗಸರ ನಡೆನುಡಿಗಳನ್ನು ಅನುಕರಿಸಿ ತೋರಿಸುವಂತೆ ಕೇಳಿಕೊಳ್ಳುತ್ತಿದ್ದರು. ಆ ವೈಶ್ಯರ ಕೇರಿಯ ಇತರ ಸ್ತ್ರೀಯರು ಸೀತಾನಾಥನ ಮನೆಯ ಸ್ತ್ರೀಯರಂತೆ ಮನೆ ಬಿಟ್ಟು ಹೊರಗೆ ಬರುವಷ್ಟು ಸ್ವತಂತ್ರರಾಗಿರಲಿಲ್ಲ— ಗಂಡಸರ ಸರ್ಪಗಾವಲು! ಆದ್ದರಿಂದ ಚಂದ್ರಮಣಿಯ ಮನೆಗೇ ಹೋಗಿ ಗದಾಧರನ ಹಾಡುಗಳನ್ನು ಕೇಳುವ, ನಟನಕೌಶಲವನ್ನು ನೋಡುವ ಭಾಗ್ಯ ಅವರ ಪಾಲಿಗಿರಲಿಲ್ಲ. ಬಹುಶಃ ಈ ಕಾರಣಕ್ಕಾಗಿಯೇ ಇರಬೇಕು, ಸೀತಾನಾಥನ ಹೆಂಡತಿ–ಮಕ್ಕಳು ಗದಾಧರನನ್ನು ಆಗಾಗ ತಮ್ಮ ಮನೆಗೆ ಕರೆಯಿಸಿಕೊಳ್ಳುತ್ತಿದ್ದುದು. ತನ್ಮೂಲಕ ಅವರಿಗೆಲ್ಲ ಗದಾ ಧರನ ಕೌಶಲವನ್ನು ಕಂಡು ಆನಂದಪಡಲು ಸಾಧ್ಯವಾಯಿತು. ಹೀಗೆ ಅವನು ಎಲ್ಲರಿಗೂ ಅಚ್ಚುಮೆಚ್ಚಿನವನಾದ. ಸೀತಾನಾಥನ ಮನೆಯಲ್ಲಿ ಗದಾಧರನ ಕಾರ್ಯ ಕ್ರಮವಿದೆಯೆಂಬ ಸೂಚನೆ ಸಿಕ್ಕಿದರೆ ಸಾಕು, ಕೇರಿಯ ಮಹಿಳೆಯರೆಲ್ಲರೂ ಅಲ್ಲಿಗೆ ಧಾವಿಸುತ್ತಿದ್ದರು; ಅವನ ಹಾಡುಗಳನ್ನು ಕೇಳಿ, ನಟನೆಯನ್ನು ನೋಡಿ ಹೃದಯದ ತುಂಬ ಆನಂದಿಸುತ್ತಿದ್ದರು. ಮನೆಯ ಯಜಮಾನನಾದ ಸೀತಾನಾಥ ಪೈನೆಗೂ ಗದಾಧರನೆಂದರೆ ಬಹಳ ಇಷ್ಟ. ಅವನಿಗೆ ಮಾತ್ರವಲ್ಲ, ಆ ಕೇರಿಯ ಎಲ್ಲ ಗಂಡಸರಿಗೂ ಅವನು ಅತ್ಯುತ್ಕೃಷ್ಟ ಬಾಲಕ ಎಂಬುದು ತಿಳಿದಿತ್ತು. ಆದ್ದರಿಂದ ತಮ್ಮ ಮನೆಯ ಹೆಂಗಸರು ಸೀತಾನಾಥ ಪೈನೆಯ ಮನೆಯಲ್ಲಿ ಗದಾಧರನ ವಿವಿಧ 'ಕಾರ್ಯಕ್ರಮ'ವನ್ನು ನೋಡಲು ಅವರಾರ ಅಡ್ಡಿಯೂ ಇರಲಿಲ್ಲ.

ಈ ವೈಶ್ಯರ ಕೇರಿಯಲ್ಲೇ ಇದ್ದವನು, ಮೇಲೆ ಹೇಳಿದ ದುರ್ಗಾದಾಸ ಪೈನೆ. ಅವನಿಗೂ ಗದಾಧರನ ಮೇಲೆ ಬಹಳ ಒಳ್ಳೆಯ ಅಭಿಪ್ರಾಯವಿತ್ತು; ಪ್ರೀತಿಯೂ ಇತ್ತು. ಅದೆಲ್ಲ ಸರಿಯೆ. ಆದರೆ ತನ್ನ ಮನೆಯ ಹೆಂಗಸರಿಗೆ ಮಾತ್ರ ಪರದೆಯಿಂದ ಹೊರಬಂದು ಗದಾಧರನನ್ನು—ಅವನಿನ್ನೂ ಬಾಲಕನೇ ಆದರೂ ಕೂಡ— ನೋಡಲು ಬಿಡುತ್ತಿರಲಿಲ್ಲ. ಅವನು ಸೀತಾನಾಥ ಹಾಗೂ ಇತರ ಬಂಧುಬಳಗದವ ರೊಡನೆ ಆಗಾಗ ಜಂಬ ಕೊಚ್ಚಿಕೊಳ್ಳುತ್ತಿದ್ದ:

"ನನ್ನ ಮನೆಯ ಹೆಂಗಸರನ್ನು ಮಾತ್ರ ಇಲ್ಲಿಯವರೆಗೆ ಪರಪುರುಷರಾರೂ ಕಣ್ಣಿಂದ ಕಂಡದ್ದೇ ಇಲ್ಲ. ಅಷ್ಟೇ ಅಲ್ಲ, ಅವರಿರುವ 'ಅಂತಃಪುರ'ದೊಳಗಿನ ಒಂದು ಸಣ್ಣ ವಸ್ತುವನ್ನೂ ಕಂಡವರಿಲ್ಲ. ಹಾಗಿಟ್ಟಿದ್ದೇನೆ ನಾನು, ಗೊತ್ತೋ ?"

ಅವನು ಇಷ್ಟು ಹೇಳಿ ಸುಮ್ಮನಿದ್ದಿದ್ದರೆ ಚೆನ್ನಾಗಿತ್ತು. ಆದರೆ ಅಷ್ಟಕ್ಕೇ ನಿಲ್ಲಲಿಲ್ಲ. ಮನೆಯ ಸ್ತ್ರೀಯರನ್ನು ಪರದೆಯೊಳಗೆ 'ಸುರಕ್ಷಿತ' ವಾಗಿ ಇಡದಿರುವ ಸೀತಾನಾಥ ಹಾಗೂ ಇತರ ಬಳಗದವರನ್ನು ಹೀಯಾಳಿಸಿ ತಿರಸ್ಕಾರವಾಗಿ ಮಾತ ನಾಡುತ್ತಿದ್ದ.

ಒಂದು ದಿನ ದುರ್ಗಾದಾಸ ಹೀಗೆಯೇ ತನ್ನ ಒಬ್ಬ ಸಂಬಂಧಿಕನ ಮುಂದೆ ಬಡಾಯಿ ಕೊಚ್ಚಿಕೊಳ್ಳುತ್ತಿದ್ದ. ಆ ವೇಳೆಗೆ ಗದಾಧರ ಅಲ್ಲಿಗೆ ಬಂದ. ದುರ್ಗಾದಾಸನ ಬಡಾಯಿಯನ್ನೆಲ್ಲ ಕೇಳಿದ. ಬಳಿಕ ಹೇಳಿದ:

"ಏನ್ ತಾತ, ಹೆಂಗಸರನ್ನು ಪರದೆಯೊಳಗೆ ಮುಚ್ಚಿಟ್ಟು ರಕ್ಷಿಸಲು ಸಾಧ್ಯವೆ ? ಹಾಗೆ ಕಾಪಾಡಲು ಅವರೇನು ನಿರ್ಜೀವ ವಸ್ತುಗಳೆ ? ಸರಿಯಾದ ನೀತಿ–ನಡೆವಳಿಕೆಗಳನ್ನು ಕಲಿಸುವುದರಿಂದ ಮತ್ತು ದೇವರಲ್ಲಿ ಭಕ್ತಿ ಬೆಳೆಸುವುದ ರಿಂದ ಮಾತ್ರವೇ ಹೆಂಗಸರನ್ನು ಸಂರಕ್ಷಿಸಲು ಸಾಧ್ಯ. ಈಗ ಬೇಕೆಂದರೆ ನಾನು ನಿಮ್ಮ ಮನೆಯೊಳಗೆ ಹೋಗಿ ಎಲ್ಲ ಹೆಂಗಸರನ್ನೂ ನೋಡಬಲ್ಲೆ; ಅಷ್ಟೇ ಅಲ್ಲ, ಮನೆಯೊಳಗಿನ ಎಲ್ಲ ವಿಚಾರಗಳನ್ನೂ ತಿಳಿದುಕೊಳ್ಳಬಲ್ಲೆ, ಗೊತ್ತೆ ?"

ಗದಾಧರ ಹೀಗೆಂದಾಗ ದುರ್ಗಾದಾಸನನ್ನು ಕೆಣಕಿದಂತಾಯಿತು. ಅವನೊಮ್ಮೆ ಗಟ್ಟಿಯಾಗಿ ನಕ್ಕು ನುಡಿದ:

"ಏನೆಂದೆ, ಏನೆಂದೆ ! ನನ್ನ ಮನೆಯ ಒಳಗಿನ ಕೋಣೆಗೂ ಹೋಗಬಲ್ಲೆಯೊ ನೀನು ? ಆಗಲಿ, ಅದು ಹೇಗೆ ಹೋಗುತ್ತೀಯೋ ನೋಡಿಬಿಡುತ್ತೇನೆ !"

ಗದಾಧರ "ಇರಲಿ ಇರಲಿ, ನೋಡುವಿರಂತೆ ತಾಳಿ" ಎನ್ನುತ್ತ ಅಲ್ಲಿಂದ ಹೊರಟುಹೋದ.

ಇದು ನಡೆದು ಕೆಲದಿನಗಳಾಗಿರಬಹುದು. ಸೂರ್ಯ ಮುಳುಗುವ ಹೊತ್ತಾ ಗಿದೆ. ದುರ್ಗಾದಾಸ ತನ್ನ ಮನೆಯ ಜಗಲಿಯಲ್ಲಿ ಕುಳಿತು ಸ್ನೇಹಿತರೊಂದಿಗೆ ಹರಟುತ್ತಿದ್ದಾನೆ. ಆಗ ಯಾರೋ ಒಬ್ಬಳು ನೇಕಾರ ಹೆಂಗಸು ಅತ್ತ ಬಂದಳು. ಒರಟಾದ ಹಳೆಯ ಸೀರೆಯನ್ನು ಉಟ್ಟಿದ್ದಾಳೆ. ಕಂಕುಳಲ್ಲಿ ಬುಟ್ಟಿ, ಕೈಗೆ ದಪ್ಪನೆಯ ಬೆಳ್ಳಿಯ ಬಳೆಗಳು. ಮುಖದ ಮೇಲೆ ಸೆರಗೆಳೆದುಕೊಂಡಿದ್ದಾಳೆ. ಸಂತೆಕಟ್ಟೆಯ ಕಡೆಯಿಂದ ಬಂದ ಆಕೆ, ಮನೆಯ ಮುಂದೆ ನಿಂತು "ಸೋಮೀS" ಎಂದಳು.

ದುರ್ಗಾದಾಸ ಕೇಳಿದ, "ಏನಮ್ಮಾ ಏನು ಬೇಕು ?"

"ನೂಲು ಮಾರುವುದಕ್ಕೆ ಅಂತ ಆ ಕಡೆ ಹಳ್ಳಿಯಿಂದ ಸಂತೆಗೆ ಬಂದಿದ್ದೆ ಸೋಮಿ. ಆದರೆ ಸ್ವಲ್ಪ ತಡವಾಯ್ತು. ಜೊತೆಗೆ ಬಂದಿದ್ದ ಹೆಂಗಸರೆಲ್ಲ ನನ್ನನ್ನು ಬಿಟ್ಟು ಹೊರಟುಹೋದರು. ನಾನು ಒಬ್ಬಂಟಿಯಾಗಿಬಿಟ್ಟೆ. ಆದ್ದರಿಂದ, ಇವತ್ತೊಂದು ರಾತ್ರಿ ಮಲಗಿಕೊಳ್ಳಲು ಜಾಗಕೊಡಬೇಕು ಧಣಿಯವರು. ಬೆಳಗಾ ಗೆದ್ದು ಹೊರಟುಹೋಗುತ್ತೇನೆ."

ದುರ್ಗಾದಾಸ, ಆಕೆ ಯಾರು ಏನು ಎತ್ತ ಎಂದೆಲ್ಲ ವಿಚಾರಿಸಿದ. ಎಲ್ಲಕ್ಕೂ ಸಮರ್ಪಕ ಉತ್ತರ ಬಂದಿತು. ಕಡೆಗವನು, "ಸರಿ ಹಾಗಾದರೆ, ಒಳಗಡೆ ಹೆಂಗಸರಿದ್ದಾರೆ. ನಾನು ಹೇಳಿದೆ ಅಂತ ಹೇಳು, ಜಾಗ ಕೊಡುತ್ತಾರೆ" ಎಂದು ಹೇಳಿ ಮತ್ತೆ ಮಾತಿನಲ್ಲಿ ಮಗ್ನನಾದ. ನೇಕಾರಮ್ಮ ಕೃತಜ್ಞತೆಯಿಂದ ಕೈ ಮುಗಿದು ಒಳಗೆ ಹೋದಳು.

ಒಳಗಡೆಯಿದ್ದ ಹೆಂಗಸರ ಮುಂದೆ ಆಕೆ ತನ್ನ ಕಥೆಯನ್ನು ಮತ್ತೆ ಹೇಳಿಕೊಂಡಳು. ಹೆಂಗಸರು ನೋಡಿದರು—ಇನ್ನೂ ಯುವತಿ, ಅಲ್ಲದೆ ಬಹಳ ಹಿತಕರವಾಗಿ ಮಾತನಾಡುತ್ತಾಳೆ. ಆದ್ದರಿಂದ ಅವಳಿಗೆ ಇರಲು ತಮ್ಮ ಬಳಿಯಲ್ಲೇ ಒಂದು ಜಾಗ ಕೊಟ್ಟರು. ಅಲ್ಲದೆ ತಿನ್ನಲು ಸ್ವಲ್ಪ ಮಂಡಕ್ಕಿಯನ್ನೂ ಅವಲಕ್ಕಿ ಬೆಲ್ಲವನ್ನೂ ಕೊಟ್ಟರು. ನೇಕಾರಮ್ಮ ಅದನ್ನು ಸಂತೋಷದಿಂದ ತಿನ್ನುತ್ತ ಮನೆಯ ಹೆಂಗಸರೊಡನೆ ಮಾತನಾಡತೊಡಗಿದಳು. ಎಲ್ಲರ ಹೆಸರನ್ನೂ ಕೇಳಿ ತಿಳಿದುಕೊಂಡಳು. ಅವಳು ತುಂಬ ಸ್ವಾರಸ್ಯವಾಗಿ ಮಾತನಾಡುವುದನ್ನು ಕಂಡು ಮನೆಯ ಹೆಂಗಳೆಯರಿಗೆ ಬಹುಬೇಗ ಅವಳ ಮೇಲೆ ಆತ್ಮೀಯತೆ ಬೆಳೆಯಿತು. ನೇಕಾರಮ್ಮ ಕುತೂಹಲದಿಂದ ಮನೆಯ ಪ್ರತಿಯೊಂದು ಕೋಣೆಯನ್ನು ಕುಳಿತಲ್ಲಿಂದಲೇ ಪರಿಶೀಲಿಸಿ ನೋಡಿದಳು. ಹೀಗೇ ಸ್ವಲ್ಪ ಹೊತ್ತು ಕಳೆಯಿತು.

ಇತ್ತ ಚಂದ್ರಮಣಿ ಸಂಜೆಯ ಕೆಲಸಕಾರ್ಯಗಳನ್ನೆಲ್ಲ ಮುಗಿಸಿ, ಗದಾಧರನನ್ನು ಊಟಕ್ಕೆ ಕರೆದಳು. ಆದರೆ ಎಲ್ಲೂ ಅವನ ಪತ್ತೆಯೇ ಇಲ್ಲ. ದಿನವೂ ಸಂಜೆಯ ವೇಳೆಗೆಲ್ಲ ಮನೆಯಲ್ಲಿರುತ್ತಿದ್ದವನು ಇಂದು ಅದೆಲ್ಲಿಗೆ ಹೋಗಿರಬಹುದು! ಚಂದ್ರಮಣಿ ರಾಮೇಶ್ವರನನ್ನು ಕರೆದು ಕೇಳಿದಳು: "ನೋಡು, ಗದಾಧರ ಯಾಕೋ ಇಷ್ಟು ಹೊತ್ತಾದರೂ ಬರಲೇ ಇಲ್ಲ. ಬಹುಶಃ ಅವನಿನ್ನೂ ಆ ಸೀತಾನಾಥ ಪೈನೆಯ ವಠಾರದಲ್ಲೇ ಇರಬೇಕು. ಬೇಗ ಹೋಗಿ ಕರೆದು ತಾ."

ರಾಮೇಶ್ವರ ಸೀತಾನಾಥ ಪೈನೆಯ ಮನೆಗೆ ಬಂದು ವಿಚಾರಿಸಿದ. ಗದಾಧರ ಅಲ್ಲಿಲ್ಲವೆಂದು ತಿಳಿಯಿತು. ಬಳಿಕ ಅವನು ದುರ್ಗಾದಾಸನ ಮನೆಯ ಬಳಿಯಲ್ಲಿ ನಿಂತು 'ಗದಾಯ್, ಓ ಗದಾಯ್, ಎಲ್ಲಿದ್ದೀಯ ?" ಎಂದು ಗಟ್ಟಿಯಾಗಿ ಕೂಗು ಹಾಕಿದ. ಆಗ ದುರ್ಗಾದಾಸನ ಮನೆಯೊಳಗಿಂದ ಸದ್ದುಕೇಳಿಸಿತು: "ಬಂದೆ ಅಣ್ಣ, ಇಗೋ ಬಂದುಬಿಟ್ಟೆ." ಈ ಧ್ವನಿಯೊಂದಿಗೆ ಹೊರಗೋಡಿ ಹೋದದ್ದು ಮಾತ್ರ ಗದಾಧರನಲ್ಲ, 'ನೇಕಾರ ಹೆಂಗಸು'! ಇದನ್ನು ಕಂಡ ಮನೆಯ ಹೆಂಗಸರಿಗೆ ದಿಗ್ಭ್ರಾಂತಿ! "ಅಯ್ಯೋ, ಇಷ್ಟು ಹೊತ್ತು ನಮ್ಮೊಂದಿಗಿದ್ದವಳು 'ನೇಕಾರಮ್ಮ' ಅಲ್ಲ, ಗದಾಯ್!" ದುರ್ಗಾದಾಸನಿಗೆ ವಿಷಯವೇನೆಂದು ಅರ್ಥವಾಗಲು ಒಂದು ನಿಮಿಷ ಬೇಕಾಯಿತು. ಮೊದಲು ಅವನಿಗೆ ತುಂಬ ಕಸಿವಿಸಿಯಾಯಿತು. 'ಎಲಾ, ಇವನು ನನ್ನನ್ನೇ ಏಮಾರಿಸಿಬಿಟ್ಟನಲ್ಲ!' ಎಂದು ಚಡಪಡಿಸಿದ. ಆದರೆ ಗದಾಧರ ಎಷ್ಟು ಚೆನ್ನಾಗಿ ನಾಟಕವಾಡಿದ ಎಂಬುದನ್ನು ನೆನಪಿಸಿಕೊಂಡಾಗ "ಭಲೇ ಹುಡುಗ" ಎನ್ನಿಸಿತು, ನಕ್ಕುಬಿಟ್ಟ. ಮರುದಿನ ಸೀತಾನಾಥನ ವಠಾರಕ್ಕೆಲ್ಲ ವಿಷಯ ತಿಳಿಯಿತು. 'ದುರ್ಗಾದಾಸನ ಒಣಜಂಬಕ್ಕೆ ಗದಾಧರ ಸರಿಯಾಗಿ ಬುದ್ಧಿ ಕಲಿಸಿದ' ಎಂದು

ಅವರೆಲ್ಲ ಮಾತನಾಡಿಕೊಂಡು ನಕ್ಕರು. ಅಂದಿನಿಂದ ಗದಾಧರ ಸೀತಾನಾಥನ ಮನೆಗೆ ಬಂದಾಗಲೆಲ್ಲ ದುರ್ಗಾದಾಸನ ಮನೆಯ ಹೆಂಗಸರೂ ಬರತೊಡಗಿದರು.

ಆದರೆ, ಎಷ್ಟೇ ಆದರೂ ಒಬ್ಬ ಹುಡುಗನನ್ನು ಹಾಗೆಲ್ಲ ಮನೆಯೊಳಗೆ ಸೇರಿಸುವುದು, ಬೆಳೆದ ಹೆಣ್ಣುಮಕ್ಕಳೊಂದಿಗೆ ಬೆರೆಯಲು ಬಿಡುವುದು – ಇವೆಲ್ಲ ತರವೆ ? ನೋಡುವವರ ಕಣ್ಣಿಗೆ ಹೇಗೆ ಕಂಡೀತು ? ಹೀಗೆಂದು ಯಾರಿಗಾದರೂ ಅನ್ನಿಸದಿರದು. ಕೆಲವರು ಒಮ್ಮೊಮ್ಮೆ ಸೀತಾನಾಥನನ್ನೇ ಹಾಗೆ ಕೇಳಿದ್ದುಂಟು. ಆಗ ಅವನು ನಕ್ಕು ನುಡಿಯುತ್ತಿದ್ದ, "ನೀವು ಆ ಬಗ್ಗೆ ಚಿಂತಿಸಲೇಬೇಡಿ. ನನಗೆ ಗದಾಯಿಯ ಸ್ವಭಾವ ಚೆನ್ನಾಗಿ ಗೊತ್ತು." ಅವನು ಹಾಗೆಂದ ಮೇಲೆ ಯಾರೇನು ಹೇಳಿಯಾರು ? ಸೀತಾನಾಥನಿಗಾದರೂ ಗದಾಧರನ ಮೇಲೆ ಎಂತಹ ಪ್ರೀತಿ, ಎಂತಹ ಭಕ್ತಿ! ಅವನನ್ನು ಆತ ಕೇವಲ ಒಬ್ಬ ಬಾಲಕನಂತಲ್ಲ, ತನ್ನ ಇಷ್ಟ ದೇವತೆಯೋ ಎಂಬಂತೆ ಕಾಣುತ್ತಿದ್ದ.

ದಿನಕಳೆದಂತೆ ಸೀತಾನಾಥನ ಮನೆಯ ಹಾಗೂ ಅವನ ಬಂಧುಬಳಗಕ್ಕೆ ಸೇರಿದ ಇಡೀ ಸ್ತ್ರೀಸಂಕುಲಕ್ಕೆ ಗದಾಧರ ಎಷ್ಟು ಪ್ರೀತಿಪಾತ್ರನಾದನೆಂದರೆ ಅವನು ಒಂದು ದಿನ ಕಾಣದಿದ್ದರೂ ಅವರಿಗೆ ಏನೋ ಚಡಪಡಿಕೆ, ಏನೋ ಕಾತರ. ಗದಾಧರನಿಗೇನಾದರೂ ಅನಾರೋಗ್ಯವಾಗಿರಬಹುದೆ ? ಅಥವಾ ಇನ್ನೇನಾದರೂ ತೊಂದರೆಯೋ ? ಹೇಗಾದರಾಗಲಿ, ಒಮ್ಮೆ ನೋಡಿಕೊಂಡು ಬರೋಣ ಎಂದು ಅವರಲ್ಲಿ ಯಾರಾದರೊಬ್ಬರು ಅವನ ಮನೆಗೆ ಬಂದುಬಿಡುತ್ತಿದ್ದರು – ಏನಾದ ರೊಂದು ನೆಪ ಹೂಡಿಕೊಂಡು ! ಚಂದ್ರಮಣಿಯ ಬಳಿ ಏನಾದರೂ ವಸ್ತುವನ್ನು ಕೇಳಲೆಂದೊ ಅಥವಾ ಅವಳಿಗೆ ಏನನ್ನಾದರೂ ಕೊಡಲೆಂದೊ ಬರುತ್ತಿದ್ದರು; ಗದಾಯಿಯ ವಿಷಯವನ್ನು ತಿಳಿದುಕೊಂಡು ಹೋಗುತ್ತಿದ್ದರು ! ಈಕೆ ಬಂದು ಸುದ್ದಿತಿಳಿಸಿದ ಮೇಲೆಯೇ ಎಲ್ಲರ ಮನಸ್ಸಿಗೂ ಶಾಂತಿ. ಗದಾಧರ ಬಾರದೆಯಿದ್ದ ದಿನವೆಲ್ಲ ಅವನ ವಿಷಯವಾಗಿಯೇ ಮಾತುಕತೆ.

ಸೀತಾನಾಥನ ಮನೆಯವರ ಪಾಲಿಗೆ ಗದಾಧರನಾಡಿದ ಒಂದೊಂದು ಮಾತೂ ಅಮೃತಬಿಂದು. ಅವರ ಮನೆಯಲ್ಲಿ ಹಾಡುವಾಗ ಇಲ್ಲವೆ ಪುರಾಣಾದಿ ಗಳನ್ನು ಓದುವಾಗ ಗದಾಧರ ಕೆಲವೊಮ್ಮೆ ತನಗರಿವಿಲ್ಲದಂತೆಯೇ ಭಾವಸಮಾಧಿ ಗೇರಿಬಿಡುತ್ತಿದ್ದ. ಇದನ್ನು ಕಂಡಾಗಲಂತೂ ಅವನ ಬಗ್ಗೆ ಆ ಸ್ತ್ರೀಯರ ಹೃದಯದಲ್ಲಿ ಭಕ್ತಿಯ ಚಿಲುಮೆಯೇ ಚಿಮ್ಮುತ್ತಿತ್ತು. ಅವನು ಆ ಉನ್ನತ ಸ್ಥಿತಿಯಲ್ಲಿದ್ದಾಗ ಅವರಲ್ಲನೇಕರು ಅವನನ್ನು ಬಾಲಕೃಷ್ಣನ ಅಥವಾ ಶ್ರೀಚೈತನ್ಯ ಮಹಾಪ್ರಭುವಿನ ಸಾಕಾರಮೂರ್ತಿಯಂತೆ ಕಂಡು ಪೂಜಿಸುತ್ತಿದ್ದರು. ಎಷ್ಟೋ ಸಲ ಗದಾಧರ ಅವರ ಮುಂದೆ ಶ್ರೀಕೃಷ್ಣನ ಮತ್ತು ಇತರ ದೇವದೇವಿಯರ ಪಾತ್ರಗಳನ್ನು ಅಭಿನಯಿಸಿ ತೋರುತ್ತಿದ್ದನಲ್ಲವೆ ? ಪಾತ್ರಕ್ಕೆ ತಕ್ಕಂತೆ ವೇಷಭೂಷಣವೂ ಇದ್ದರೆ ಮತ್ತಷ್ಟು ಸೊಗಸು. ಆದ್ದರಿಂದ ಆ ಸಿರಿವಂತ ಮಹಿಳೆಯರು ಅಂತಹ ಸಂದರ್ಭಗಳಿಗಾಗಿಯೇ ಒಂದು ಚಿನ್ನದ ಕೊಳಲನ್ನೂ ಇತರ ವಸ್ತ್ರಾಭರಣಗಳನ್ನೂ ಮೀಸಲಾಗಿರಿಸಿದ್ದರು.

ಗದಾಧರನ ಮನಸ್ಸಿನಲ್ಲಿ ಕೆಲವೊಮ್ಮೆ ಸ್ತ್ರೀಭಾವ ತುಂಬ ಸಹಜವಾಗಿ

ಸ್ಫುರಿಸುವುದಿತ್ತು. ಆಗ ಆತನ ಅಸೀಮ ಕಲ್ಪನಾಸಾಮ್ರಾಜ್ಯದಲ್ಲಿ ಸುಂದರ ದೃಶ್ಯಗಳು ಮೂಡಿ ನಿಲ್ಲುತ್ತಿದ್ದುವು: 'ವಜ್ರವಾಸಿಗಳಾದ ಗೋಪಿಕೆಯರು ಎಂಥ ಸೌಭಾಗ್ಯಶಾಲಿಗಳು! ಸ್ತ್ರೀಶರೀರದಲ್ಲಿ ಜನಿಸಿದ ಅವರು, ಸಚ್ಚಿದಾನಂದಸ್ವರೂಪನಾದ ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನನ್ನೇ ಆಧ್ಯಾತ್ಮಿಕ ಭಾವದಿಂದ ಪ್ರೇಮಿಸಿ ತಮ್ಮ ಪತಿಯೆಂದು ಭಾವಿಸಿದರು. ಅದೆಂಥ ಅದ್ಭುತ ಭಾವ! ತಾನೂ ಸಹ ಸ್ತ್ರೀಶರೀರದಲ್ಲಿ ಜನಿಸಿದ್ದಿದ್ದರೆ, ಆ ಗೋಪಿಕಾ ಸ್ತ್ರೀಯರಂತೆ ಶ್ರೀಕೃಷ್ಣನನ್ನು ಪತಿಯನ್ನಾಗಿ ಪಡೆದು ಧನ್ಯನಾಗಬಹುದಿತ್ತು....' ಹೀಗೆ ಆಲೋಚಿಸುತ್ತ ಗದಾಧರನಿಗೆ, ತನ್ನ ಪುರುಷಶರೀರವು ಆ ಸ್ಥಿತಿಯನ್ನು ಮುಟ್ಟುವಲ್ಲಿ ಒಂದು ಅಡಚಣೆಯೆಂಬಂತೆ ಭಾಸವಾಗುತ್ತಿತ್ತು. ಆಗ ಅವನು ಮತ್ತೆ ತನ್ನ ಕಲ್ಪನಾರಾಜ್ಯಕ್ಕೆ ಜಿಗಿಯುತ್ತಿದ್ದ: 'ತಾನೇನಾದರೂ ಮತ್ತೆ ಜನ್ಮವೆತ್ತಬೇಕಾದರೆ, ತಾನೊಂದು ಬ್ರಾಹ್ಮಣಕುಟುಂಬದಲ್ಲಿ ಹುಟ್ಟಿ, ಬಾಲವಿಧವೆಯಾಗಬೇಕು. ತಾನು ತುಂಬ ಸುಂದರಿಯಾಗಿರಬೇಕು; ಕಣ್ಸೆಳೆಯುವಂತಹ ದೀರ್ಘ ಕೇಶರಾಶಿಯಿರಬೇಕು. ಮತ್ತು ಶ್ರೀಕೃಷ್ಣನಲ್ಲದೆ ಮತ್ತಾರನ್ನೂ ತನ್ನ ಪತಿಯೆಂದು ಭಾವಿಸಬಾರದು. ಒಂದು ತುತ್ತು ಅನ್ನಕ್ಕೂ, ಮೈಮುಚ್ಚುವಷ್ಟು ಬಟ್ಟೆಗೂ ಒಂದು ವ್ಯವಸ್ಥೆಯಿರಬೇಕು. ತಾನೊಂದು ಗುಡಿಸಲಿನಲ್ಲಿ ವಾಸಿಸಿರಬೇಕು; ಜೊತೆಗೊಬ್ಬಳು ಮುದುಕಿಯಿರಬೇಕು. ಗುಡಿಸಲಿನ ಬಳಿಯಲ್ಲೇ ಒಂದು ಚೂರು ಭೂಮಿ. ಅಲ್ಲಿ ತನ್ನ ಉಪಯೋಗಕ್ಕಾಗುವಷ್ಟು ಸೊಪ್ಪು–ತರಕಾರಿಯನ್ನು ತಾನೇ ಬೆಳೆದುಕೊಳ್ಳುವುದು. ನೂಲು ತೆಗೆಯಲೊಂದು ಚರಕಾ, ಮತ್ತು ತಾನೇ ಹಾಲು ಕರೆಯಲು ಒಂದು ಹಸು....'

ಗದಾಧರನ ಕಲ್ಪನಾ ಲಹರಿ ಇನ್ನೂ ಮುಂದುವರಿಯುತ್ತಿತ್ತು: 'ಬೆಳಗಿನ ಕೆಲಸಕಾರ್ಯಗಳನ್ನೆಲ್ಲ ಮುಗಿದುವೆಂದರೆ, ಶ್ರೀಕೃಷ್ಣನ ಕುರಿತಾಗಿ ಹಾಡು ಹೇಳಿಕೊಳ್ಳುತ್ತ, ಚರಕದಿಂದ ನೂಲು ತೆಗೆಯುತ್ತ ಮೈಮರೆಯಬೇಕು. ಸಂಜೆಗತ್ತಲು ಕವಿಯುವ ವೇಳೆಗೆ, ಹಾಲಿನಿಂದ ತಯಾರಿಸಿದ ಸಿಹಿತಿನಿಸುಗಳನ್ನು ಸಿದ್ಧಪಡಿಸಿಕೊಂಡು, ಕೃಷ್ಣನಿಗೆ ತಿನ್ನಿಸಲು ತಾನು ರಹಸ್ಯವಾಗಿ ಕಾಯುತ್ತಿರಬೇಕು. ಕ್ಷಣಗಳು ಯುಗಗಳಂತೆ ಪರಿಣಮಿಸಿ, ತಾನು ತೀವ್ರ ವ್ಯಾಕುಲತೆಯಿಂದ ಮೌನವಾಗಿ ಕಣ್ಣೀರು ಸುರಿಸುತ್ತಿರಬೇಕು. ಆಗ ಕೃಷ್ಣನು ಗೊಲ್ಲ ಬಾಲಕನ ರೂಪ ಧರಿಸಿ ಪ್ರತ್ಯಕ್ಷನಾಗಿ ಸಿಹಿತಿನಿಸನ್ನೆಲ್ಲ ತಿನ್ನಬೇಕು! ಹೀಗೆ ಅವನು ಪ್ರತ್ಯಕ್ಷನಾಗುವುದು, ಮಾಯವಾಗುವುದು — ಇದು ಇತರಾರಿಗೂ ತಿಳಿಯದಂತೆ ಪ್ರತಿದಿನವೂ ನಡೆಯುತ್ತಿರಬೇಕು....'

ಗದಾಧರನ ಈ ಕನಸು ಇದೇ ರೀತಿಯಲ್ಲದಿದ್ದರೂ ಮತ್ತೊಂದು ರೀತಿಯಲ್ಲಿ ನನಸಾಗುವುದನ್ನು ಮುಂದೆ ನಾವು ನೋಡಲಿದ್ದೇವೆ.

ಗದಾಧರ ಊರ ಸ್ತ್ರೀವರ್ಗಕ್ಕೆ ಮಾತ್ರವಲ್ಲ, ಹೆಚ್ಚುಕಡಮೆ ಪ್ರತಿಯೊಬ್ಬರಿಗೂ ಪ್ರಿಯನಾಗಿದ್ದ. ಅವನ ಬಹುಮುಖ ಪ್ರತಿಭೆ, ಸರಳತೆ, ನಗೆಮೊಗ, ಮೇಲಾಗಿ ನಯವಿನಯ—ಇವುಗಳಿಗೆ ಮನಸೋಲದಿದ್ದವರಾರು? ಪ್ರತಿದಿನ ಊರಿನ ದೊಡ್ಡವರು ಚಿಕ್ಕವರೆಲ್ಲ ಅಲ್ಲಲ್ಲಿ ಸೇರಿ ಪುರಾಣವಾಚನವನ್ನೋ, ಭಗವನ್ನಾಮ ಸಂಕೀರ್ತನೆಯನ್ನೋ ಮಾಡುತ್ತಿದ್ದರು. ಇಂಥದು ಊರಿನಲ್ಲಿ ಎಲ್ಲೇ ನಡೆಯಲಿ,

ಅಲ್ಲಿ ಗದಾಧರ ಹಾಜರು! ಅವನು ಬಂದನೆಂದರೆ ಅಲ್ಲಿದ್ದವರಿಗೆಲ್ಲ ಸಂತೋಷ.

ಗದಾಧರನಿಗೆ ದೈವದತ್ತವಾಗಿ ಬಂದಿದ್ದ ಒಂದು ಅದ್ಭುತ ಗುಣವೆಂದರೆ ವಿವೇಕಪ್ರಜ್ಞೆ, ಅಸಾಮಾನ್ಯ ವಿವೇಚನಾ ಶಕ್ತಿ. ಬಾಲ್ಯದಲ್ಲೇ ಅವನಲ್ಲಿ ಈ ಸಾಮರ್ಥ್ಯ ಸ್ಫುಟವಾಗಿ ಪ್ರಕಟಗೊಂಡಿತ್ತು. ಆದ್ದರಿಂದ ಎಷ್ಟೋ ಜನ ಹಳ್ಳಿಗರು ತಮ್ಮ ಲೌಕಿಕ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಆತನ ಸಲಹೆ ಕೋರುವುದು ಸಾಮಾನ್ಯವಾಗಿತ್ತು. ಅಷ್ಟು ಮಾತ್ರವಲ್ಲ, ಅವನ ಪರಿಶುದ್ಧ ಚಾರಿತ್ರ್ಯವನ್ನೂ ಅಸಾಮಾನ್ಯ ಆಧ್ಯಾತ್ಮಿಕ ಲಕ್ಷಣಗಳನ್ನೂ ಕಂಡು, ಧಾರ್ಮಿಕ ಪ್ರವೃತ್ತಿಯುಳ್ಳ ವ್ಯಕ್ತಿಗಳು ತಮ್ಮ ತಮ್ಮ ಆಧ್ಯಾತ್ಮಿಕ ಸಾಧನೆಗಳಿಗೆ ಸಂಬಂಧಿಸಿದಂತೆಯೂ ಅವನ ಸಲಹೆ–ಮಾರ್ಗದರ್ಶನ ಗಳನ್ನು ಕೋರಿ ಬಹಳಷ್ಟು ಪ್ರಯೋಜನ ಪಡೆಯುತ್ತಿದ್ದರು. ಆದರೆ ಆಷಾಡಭೂತಿ ಗಳು, ಲಫಂಗರು ಮಾತ್ರ ಅವನ ಬಳಿ ಸುಳಿಯುತ್ತಲೇ ಇರಲಿಲ್ಲ. ಏಕೆಂದರೆ ಈ ಬಾಲಕನ ಸೂಕ್ಷ್ಮದೃಷ್ಟಿ ತಮ್ಮ ಕೃತ್ರಿಮ ಮೇಲ್ಮೈವ್ಯಕ್ತಿತ್ವವನ್ನು ಭೇದಿಸಿ ಒಳಗಿನ ಪೊಳ್ಳುತನವನ್ನೂ ಹೀನ ಆಲೋಚನೆಗಳನ್ನೂ ಕಂಡು ಬಯಲಿಗೆಳೆಯುವು ದೆಂಬುದು ಅವರಿಗೆಲ್ಲ ಗೊತ್ತು. ಗದಾಧರನಿಗೆ ಇಂತಹ ದುಷ್ಟ ಬುದ್ಧಿಯನ್ನು ಕಂಡರಾಗದು. ಒಮ್ಮೊಮ್ಮೆ ಅವನು ಇಂಥವರ ತೋರಾಣಿಕೆಯ ವರ್ತನೆಯನ್ನು ಎಲ್ಲರೆದುರಿಗೂ ಅಣಕವಾಡಿ ತೋರಿಸಿಬಿಡುತ್ತಿದ್ದ. ಅಂಥವರೆಲ್ಲ ಪೋರನೊಬ್ಬ ತಮ್ಮನ್ನು ಹೀಗೆ ಸತಾಯಿಸುತ್ತಾನಲ್ಲ ಎಂದು ಹಲ್ಲುಕಡಿಯುತ್ತಿದ್ದರು, ಅಷ್ಟೆ. ಅವರು ಬೇರೇನೂ ಮಾಡುವಂತಿರಲಿಲ್ಲ. ಏಕೆಂದರೆ ಊರವರೆಲ್ಲರ ಬೆಂಬಲವೂ ಗದಾಧರ ನಿಗೇ. ಆದ್ದರಿಂದ ಈಗ ಅವರಿಗಿರುವ ಒಂದೇ ಒಂದು ದಾರಿಯೆಂದರೆ ಗದಾಧರನ ಮೊರೆಹೋಗುವುದು. "ಏನಪ್ಪ ಗದಾಯ್, ಎಲ್ಲರೆದುರಿಗೂ ನಮ್ಮ ಮರ್ಯಾದೆ ತೆಗೆಯುತ್ತೀಯಲ್ಲ. ನೀನು ಹೀಗೆಲ್ಲ ಮಾಡಿದರೆ ನಾವು ಈ ಊರಲ್ಲಿ ತಲೆಯೆತ್ತಿ ಕೊಂಡು ತಿರುಗುವುದಾದರೂ ಹೇಗೆ?" ಎಂದು ಅವನ ಬಳಿ ತಮ್ಮ ಕಷ್ಟವನ್ನು ಹೇಳಿಕೊಂಡರೆ, ಅವನು ತಕ್ಷಣ ಮೃದುವಾಗಿಬಿಡುತ್ತಿದ್ದ. ತನ್ನಲ್ಲೇ ಮರೆಹೊಕ್ಕವರ ವಿಚಾರದಲ್ಲಿ ಗದಾಧರ ಯಾವಾಗಲೂ ಕರುಣಾಮಯ.

೧೬

## ಸೂತ್ರಧಾರ ಗದಾಧರ

ಹದಿನಾಲ್ಕು ವರ್ಷದವರೆಗೆ ಗದಾಧರ ನಿತ್ಯವೂ ಸ್ವಲ್ಪ ಹೊತ್ತಿನ ಮಟ್ಟಿಗಾದರೂ ಶಾಲೆಗೆ ಹೋಗುತ್ತಿದ್ದ. ಆದರೆ ಬರಬರುತ್ತ ಅವನಲ್ಲಿ ಭಕ್ತಿಭಾವವೂ ಧ್ಯಾನಮಯ ಜೀವನದ ಕುರಿತಾಗಿ ಆಕರ್ಷಣೆಯೂ ಎಷ್ಟುರಮಟ್ಟಿಗೆ ಹೆಚ್ಚಿತೆಂದರೆ ಇನ್ನು ತನ್ನಿಂದ ಈ ಹೊಟ್ಟೆಪಾಡಿನ ವಿದ್ಯೆಯನ್ನು ಕಲಿಯುವುದು ಸಾಧ್ಯವೇ ಇಲ್ಲ ಎಂದು ಅವನಿಗೆ ಖಚಿತವಾಯಿತು. 'ನನ್ನ ಜೀವನದಲ್ಲಿ ನಾನು ಸಾಧಿಸಬೇಕಾದ ಯಾವುದೋ ಒಂದು ಉನ್ನತ ಆದರ್ಶವಿದೆ. ನಾನು ನನ್ನ ಶಕ್ತಿಯಷ್ಟನ್ನೂ ಆ ಆದರ್ಶವನ್ನು ಸಿದ್ಧಿಸಿಕೊಳ್ಳುವತ್ತ ಹರಿಸಬೇಕಾಗುತ್ತದೆ' ಎಂದು ಆಗಿನಿಂದಲೂ ಅವನಿಗೆ ಅನ್ನಿಸುತ್ತಿತ್ತು. ತನ್ನ ಜೀವನದ ಆ ಆದರ್ಶದ ಒಂದು ಚಿತ್ರ ಅವನ ಮನಸ್ಸಿನಲ್ಲಿ ಆಗಾಗ ಮೂಡುವುದಿತ್ತು. ಆದರದು ಅವನಿಗೇ ಅರ್ಥವಾಗದಷ್ಟು ಅಸ್ಪುಟ. ಹಾಗಿದ್ದರೂ ಕೂಡ, ತಾನು ಮುಂದೆ ಯಾವ ರೀತಿಯಾಗಿ ಬದುಕಬೇಕು ಎಂಬ ಪ್ರಶ್ನೆಯೇನಾದರೂ ಎದ್ದರೆ ತಕ್ಷಣವೇ ಅವನ ವಿವೇಕಬುದ್ಧಿ ಅವನಿಗೊಂದು ದೃಶ್ಯದತ್ತ ಬೆರಳು ಮಾಡಿ "ಅದೋ ನೋಡು" ಎಂದು ತೋರಿಸುತ್ತಿತ್ತು. ಏನದು ? ಸಂಪೂರ್ಣವಾಗಿ ಭಗವಂತನನ್ನೇ ಆಶ್ರಯಿಸಿ ನಡೆಸುವಂತಹ ಜೀವನ ! ಕಾಷಾಯ ವಸ್ತ್ರ ! ಪವಿತ್ರ ಧುನಿಯ ಬೆಂಕಿ ! ಭಿಕ್ಷಾನ್ನ ! ಎಲ್ಲ ಬಂಧನಗಳಿಂದಲೂ ಮುಕ್ತವಾದ ಪರಿವ್ರಾಜಕ ಜೀವನ !! ಓಹ್, ಅದೆಷ್ಟು ಭವ್ಯ ! ಅದೆಷ್ಟು ಸುಂದರ ! ಆದರೆ ಮರುಕ್ಷಣವೇ ಅವನ ಪ್ರೇಮಪೂರಿತ ಹೃದಯ ಅವನಿಗೆ ಮತ್ತೊಂದು ದೃಶ್ಯವನ್ನು ನೆನಪಿಸಿಕೊಡುತ್ತಿತ್ತು: ಅದರಲ್ಲಿ ತನ್ನ ತಾಯಿ, ಪ್ರೀತಿಯ ಅಣ್ಣ, ಮನೆಯ ಇತರರು ಇವರನ್ನೆಲ್ಲ ಕಾಣುತ್ತಿದ್ದ. ಮೊದಲನೆಯ ಮಾರ್ಗವನ್ನು ಬಿಟ್ಟುಬಿಡುವಂತೆ ಈ ಎರಡನೆಯ ದೃಶ್ಯ ಅವನನ್ನು ಪ್ರೇರೇಪಿಸುತ್ತಿತ್ತು. ಅದರ ಬದಲಾಗಿ ಅವನ ತಂದೆಯಂತೆಯೇ ಲೌಕಿಕ ಜಗತ್ತಿನಲ್ಲೇ ಉಳಿದುಕೊಂಡರೂ ಭಗವಂತನಲ್ಲಿ ಶರಣಾಗಿ, ಮನೆಮಂದಿಗೆ ತನ್ನಿಂದ ಸಾಧ್ಯವಾದಷ್ಟೂ ನೆರವಾಗುವಂತೆ ಒತ್ತಾಯಿಸುತ್ತಿತ್ತು. ಹೀಗೆ ಬುದ್ಧಿ–ಹೃದಯಗಳು ಪರಸ್ಪರ ವಿರುದ್ಧವಾದ ದಿಕ್ಕುಗಳನ್ನು ಸೂಚಿಸಿದರೆ ಗದಾಧರ ಏನು ಮಾಡಬೇಕು ? ಶ್ರೀರಘುವೀರನೇ ತನಗೆ ದಾರಿ ತೋರಬೇಕು, ಎಲ್ಲವೂ ಅವನ ಇಚ್ಛೆಯೇ ಎಂದು ಅವನಲ್ಲೇ ಶರಣಾದ. ಒಮ್ಮೆ ರಘುವೀರನಿಗೆ ತನ್ನನ್ನು ಮುನ್ನಡೆಸುವ ಜವಾಬ್ದಾರಿಯನ್ನು ಒಪ್ಪಿಸಿದ ಮೇಲೆ

ಗದಾಧರನಿಗಿನ್ನು ನಿಶ್ಚಿಂತೆ. ಏಕೆಂದರೆ ರಘುವೀರನಲ್ಲಿ ಅವನಿಗೆ ಅಷ್ಟು ವಿಶ್ವಾಸ; ರಘುವೀರ ತನ್ನವನೇ ಎಂಬುದರಲ್ಲಿ ಅಂತಹ ಶ್ರದ್ಧೆ. ಚಿಕ್ಕಂದಿನಿಂದಲೂ ತನ್ನ ಬುದ್ಧಿ ಹೃದಯಗಳಲ್ಲಿ ಭಿನ್ನಾಭಿಪ್ರಾಯ ಮೂಡಿದಾಗಲೆಲ್ಲ ಗದಾಧರ ಕೇಳುತ್ತಿದ್ದುದು ಹೃದಯದ ಮಾತನ್ನೇ. ಈಗ ಈ ವಿಷಯದಲ್ಲೂ ಅವನು ಮಾಡಿದ್ದು ಅದನ್ನೇ.

ಇದೇ ಸಮಯದಲ್ಲಿ ಗದಾಧರನ ಪರಿಶುದ್ಧ ಹೃದಯದಲ್ಲಿ ಆಗಾಗ ಅನು ಕಂಪೆಯ ಮಹಾತರಂಗವೊಂದು ಏಳುತ್ತಿತ್ತು. ಯಾರ ಕುರಿತಾಗಿ ಅನುಕಂಪೆ? ತನ್ನ ಸುತ್ತಮುತ್ತಲಿನ ಎಲ್ಲರ ಕುರಿತಾಗಿ; ಸಕಲ ಸ್ತ್ರೀಪುರುಷರ ಕುರಿತಾಗಿ! ಗದಾಧರನಿಗೆ ಅವರೆಲ್ಲರೊಂದಿಗೂ ಎಂತಹ ನಿಕಟ ಬಾಂಧವ್ಯವಿದ್ದಿತೆಂದರೆ ಪ್ರತಿ ಯೊಬ್ಬರನ್ನೂ ಅವನು ತನ್ನ ಆತ್ಮೀಯರಂತೆಯೇ ಪರಿಗಣಿಸುತ್ತಿದ್ದ. ಅವರೆಲ್ಲರ ಸುಖದುಃಖಗಳಲ್ಲೂ ಅವನು ಸಮಭಾಗಿ. ಸರಳಹೃದಯಿಗಳಾದ ಆ ಹಳ್ಳಿಗರೆಲ್ಲ ತನ್ನನ್ನು ಹೇಗೆ ಆಧರಿಸಿಕೊಂಡಿದ್ದಾರೆ ಎಂಬುದನ್ನು ಅವನ ಅಂತರಂಗ ನೆನಪಿಸಿ ಕೊಡುತ್ತಿತ್ತು. ಹೀಗಿರುವಾಗ ಅವರೆಲ್ಲರಿಗೂ ಆದರ್ಶಪ್ರಾಯವಾದ ಹಾಗೂ ಅನು ಕರಣೀಯವಾದ ಶ್ರೇಷ್ಠ ಜೀವನವೊಂದನ್ನು ನಡೆಸುತ್ತ ಅವರಿಗೆ ಮಾದರಿ ಯಾಗಿರುವುದು, ತನ್ಮೂಲಕ ಪ್ರತಿಯೊಬ್ಬರೂ ಉದಾತ್ತ–ಆಧ್ಯಾತ್ಮಿಕ ಜೀವನವನ್ನು ನಡೆಸಲು ನೆರವಾಗುವಂತೆ ಮಾಡುವುದು ತನ್ನ ಕರ್ತವ್ಯವಲ್ಲವೆ? ತನ್ನ ಸೌಭಾಗ್ಯ ವಲ್ಲವೆ? ಲೇಶಮಾತ್ರವೂ ಸ್ವಾರ್ಥತೆಯ ಕಿಲುಬಿಲ್ಲದ ಅವನ ಹೃದಯ ನುಡಿ ಯಿತು: 'ನೋಡು, ಕೇವಲ ನಿನ್ನ ಸ್ವಂತ ಮುಕ್ತಿಗಾಗಿ ಈ ಜಗತ್ತನ್ನು ಬಿಟ್ಟು ಸಂನ್ಯಾಸಿ ಯಾಗುವುದು ಸ್ವಾರ್ಥತೆ. ಅದರ ಬದಲಾಗಿ ಇತರರಿಗೂ ಒಳಿತಾಗುವಂತೆ ಏನಾದರೂ ಮಾಡು.'

ಹಾಗೆ ನೋಡಿದರೆ, ಗದಾಧರ ಶಾಲೆಯನ್ನು ಒಮ್ಮೆಗ್ರೇ ಬಿಟ್ಟುಬಿಡದಿದ್ದುದಕ್ಕೂ ಅವನ ಉದಾರಬುದ್ಧಿಯೇ ಕಾರಣವೆನ್ನಬೇಕು. ಏಕೆಂದರೆ ತಾನು ಶಾಲೆ ಬಿಟ್ಟುಬಿಟ್ಟರೆ ತನ್ನ ಸಹಪಾಠಿಗಳಿಗೆಲ್ಲ ಅಪಾರ ವೇದನೆಯಾಗುವುದೆಂದು ಅವನಿಗೆ ಗೊತ್ತಿತ್ತು. ಅತಿಶಯ ಬುದ್ಧಿವಂತಿಕೆ, ಧೀರತನ, ಸ್ನೇಹಪರತೆ—ಈ ಗುಣಗಳು ಗದಾಧರನನ್ನು ಅವನ ಸಹಪಾಠಿಗಳೆಲ್ಲರ ಕಣ್ಮಣಿಯನ್ನಾಗಿಸಿದ್ದವು. ಆದ್ದರಿಂದ ಶಾಲೆಯನ್ನು ತ್ಯಜಿಸಲು ಅವನೊಂದು ಅವಕಾಶಕ್ಕಾಗಿ ಕಾಯುತ್ತಿದ್ದ.

ಒಂದು ದಿನ ಈ ಹುಡುಗರೆಲ್ಲ ಸೇರಿ ಒಂದು ಆಲೋಚನೆ ಮಾಡಿದರು: 'ನಾವೆಲ್ಲ ಏಕೆ ನಮ್ಮದೇ ಒಂದು ಬಯಲಾಟದ ತಂಡವನ್ನು ಕಟ್ಟಿಕೊಳ್ಳಬಾರದು?' ಎಲ್ಲರಿಗೂ ಈ ಆಲೋಚನೆ ತುಂಬ ಪ್ರಿಯವಾಯಿತು. ಹೇಗಿದ್ದರೂ ತಮ್ಮ ಗದಾಯ್ ಇದ್ದೇ ಇದ್ದಾನೆ! ಅವನಿಗೆ ಬರದಿರುವ ನಾಟಕ ಯಾವುದಿದೆ, ಪಾತ್ರ ಯಾವುದಿದೆ? ಸರಿ, ಎಲ್ಲರೂ ಅವನನ್ನು "ನೀನೇ ಈ ತಂಡದ ನಾಯಕನಾಗ ಬೇಕು" ಎಂದು ಕೇಳಿಕೊಂಡರು. ಗದಾಧರ ಸಂತೋಷದಿಂದ ಒಪ್ಪಿಕೊಂಡ. ಆದರೆ ಬಯಲಾಟ, ಕುಣಿತ ಎಂದರೆ ಮನೆಯವರು ಬಿಡುತ್ತಾರೆಯೆ? ಅವರಿಗೆ ತಿಳಿಯ ದಂತೆ, ಅದಕ್ಕಿಂತ ಮುಖ್ಯವಾಗಿ ಅವರಿಗೆ ತೊಂದರೆಯಾಗದಂತೆ, ಅಭ್ಯಾಸ– ತಯಾರಿ ಮಾಡಿಕೊಳ್ಳಬೇಕು. ಇದಕ್ಕೆ ಜಾಗ ಯಾವುದಿದೆ? ತಲೆ ಕೆರೆದುಕೊಂಡರು.

ಕಡೆಗೆ ಗದಾಧರನಿಗೊಂದು ಉಪಾಯ ಹೊಳೆಯಿತು — ಮಾಣಿಕರಾಜನ ಮಾವಿನ ತೋಪೇ ಸರಿಯಾದ ಸ್ಥಳ! ಅಲ್ಲಿ ನೆರಳೂ ಇದೆ, ಇತರರ ಕಾಟವೂ ಇಲ್ಲ. ಪ್ರತಿದಿನ ತಮ್ಮಲ್ಲಿ ಕೆಲವರಾದರೂ ಶಾಲೆಗೆ ಚಕ್ಕರ್ ಕೊಟ್ಟು, ಒಂದು ಗೊತ್ತಾದ ಹೊತ್ತಿಗೆ ಈ ಮಾವಿನ ತೋಪಿಗೆ ಬಂದು ನಾಟಕ ಅಭ್ಯಾಸ ಮಾಡುವುದು ಎಂದು ತೀರ್ಮಾನವಾಯಿತು.

ಸರಿ, ಈಗ ಗದಾಧರನ ನೇತೃತ್ವದಲ್ಲಿ ನಾಟಕದ ಅಭ್ಯಾಸ ಪ್ರಾರಂಭವಾಗಿಯೇ ಬಿಟ್ಟಿತು. ಇತರ ಹುಡುಗರೆಲ್ಲ ತಮ್ಮ ತಮ್ಮ ಪಾತ್ರಗಳ ಮಾತುಗಳನ್ನು, ಹಾಡುಗಳನ್ನು ಕಂಠಪಾಠ ಮಾಡಿದರು; ಹಾವಭಾವಗಳನ್ನು ಅಭ್ಯಾಸ ಮಾಡಿದರು. ಈಗ ಆ ಮಾವಿನ ತೋಪು ಒಂದು ರಂಗಮಂಟಪವೇ ಆಗಿ ಮಾರ್ಪಟ್ಟಿತು. ನಿತ್ಯವೂ ಅಲ್ಲೀಗ ಶ್ರೀರಾಮನ, ಶ್ರೀಕೃಷ್ಣನ ದಿವ್ಯಲೀಲಾಮಯ ಜೀವನದ ಬಗೆಬಗೆಯ ದೃಶ್ಯಗಳ ರಸಭರಿತ, ಭಾವಭರಿತ ಅಭಿನಯಗಳನ್ನು ಕಾಣಬಹುದಾಗಿದೆ. ಆ ಪ್ರತಿಯೊಂದು ದೃಶ್ಯವೂ ಭಾವಪ್ರಚೋದಕವಾಗುವಂತೆ ಮಾಡಲು ಯಾವ ಯಾವ ವಿವರಗಳ ಕಡೆಗೆ ಗಮನ ಕೊಡಬೇಕೆಂಬುದು ಗದಾಧರನ ಕಲ್ಪನಾಲೋಕಕ್ಕೆ ಸಂಬಂಧಪಟ್ಟ ವಿಷಯ. ಮತ್ತು ಪ್ರತಿಯೊಂದು ನಾಟಕದ ಮುಖ್ಯ ಪಾತ್ರಧಾರಿ — ಎಂದರೆ ಕಥಾನಾಯಕ — ಇನ್ನಾರೂ ಆಗಲು ಸಾಧ್ಯವಿಲ್ಲ. ಆ ಪಾತ್ರ ಸರ್ವಾನುಮತದಿಂದ ಗದಾಧರನಿಗೇ ಮೀಸಲು. ಶ್ರೀರಾಮಚಂದ್ರನ ಅಥವಾ ಶ್ರೀಕೃಷ್ಣನ ಭಾವದಲ್ಲೇ ತನ್ಮಯನಾಗಿ ಅಭಿನಯಿಸುತ್ತಿದ್ದರೆ ಅವನು ಆಗಾಗ ಇದ್ದಕ್ಕಿದ್ದಂತೆ ಪರಮಾನಂದಪರವಶನಾಗಿ ಭಾವಾವಸ್ಥೆಗೇರುತ್ತಿದ್ದುದೂ ಅಪರೂಪವಲ್ಲ.

ಅಂತೂ ನೂತನವಾಗಿ ನಿರ್ಮಾಣಗೊಂಡ ಅವರ ನಾಟಕ ಮಂಡಳಿ ಎಲ್ಲ ವಿಧದಿಂದಲೂ ಯಶಸ್ವಿಯಾಗಿ ಜನಾದರಣೆಯನ್ನೂ ಪಡೆಯಿತು. ಇದನ್ನು ಕಂಡ ಮಂಡಳಿಯ ಸದಸ್ಯರ ಸಂತೋಷಕ್ಕೆ ಪಾರವೇ ಇಲ್ಲ. ಎಲ್ಲರ ಮನದಲ್ಲೂ ಒಂದು ಕೃತಕೃತ್ಯಭಾವ.

ಗದಾಧರನಿಗೆ ಅದ್ಭುತವಾದ ಗ್ರಹಣಶಕ್ತಿ, ಧಾರಣಶಕ್ತಿಗಳು ದೈವದತ್ತವಾಗಿ ಬಂದಿದ್ದುವು. ಒಮ್ಮೆ ಗ್ರಾಮದಲ್ಲಿ ಒಂದು ಬಯಲಾಟ ನಡೆಯಿತು. ಬಯಲಾಟದ ಪ್ರಸಂಗ ರಾಮನಿಗೋ ಕೃಷ್ಣನಿಗೋ ಸಂಬಂಧಿಸಿದ್ದು. ಹಳ್ಳಿಯವರೆಲ್ಲ ಬಂದರು, ನೋಡಿದರು; ಮಾತುಕತೆ–ಅಭಿನಯ–ಹಾಡುಗಳನ್ನೆಲ್ಲ ಕಂಡು ಕೇಳಿ ಆನಂದಿಸಿದರು. 'ಚೆನ್ನಾಗಿತ್ತು, ಬಹಳ ಚೆನ್ನಾಗಿತ್ತು' ಎಂದು ಮಾತನಾಡಿಕೊಳ್ಳುತ್ತ ಮನೆಗಳಿಗೆ ನಡೆದರು. ಮರುದಿನ ತಮ್ಮತಮ್ಮ ದಿನನಿತ್ಯದ 'ಪ್ರಸಂಗ'ಗಳಲ್ಲಿ ಅಂದಿನ ಪ್ರಸಂಗವನ್ನು ಮರೆತೂಬಿಟ್ಟರು. ಸಹಜವೇ. ಆದರೆ ಭಕ್ತಿರಸಭರಿತವಾದ ಆ ದೃಶ್ಯಗಳಿಂದ ಬಾಲಕ ಗದಾಧರನ ಮನಸ್ಸಿನಲ್ಲಿ ಉದಿಸಿದ್ದ ಆಧ್ಯಾತ್ಮಿಕ ಭಾವತರಂಗಗಳಿನ್ನೂ ನಿಂತಿರಲಿಲ್ಲ. ಸರಿ, ತನ್ನ ಸ್ನೇಹಿತರನ್ನೆಲ್ಲ ಒಗ್ಗೂಡಿಸಿ ಮಾವಿನ ತೋಪಿಗೆ ಕರೆದೊಯ್ದ. ಹಿಂದಿನ ದಿನ ತಾವೆಲ್ಲ ಕಂಡಿದ್ದ ಆ ಬಯಲಾಟದ ಸನ್ನಿವೇಶವನ್ನು, ಆ ಪಾತ್ರಗಳನ್ನು ಬಣ್ಣಿಸಿ ಅವುಗಳಲ್ಲಡಗಿದ್ದ ಸೂಕ್ಷ್ಮ–ಸುಂದರ ವಿಚಾರಗಳನ್ನೆಲ್ಲ ವಿವರಿಸಿದ. ಗೆಳೆಯರು ತನ್ಮಯತೆಯಿಂದ ಆಲಿಸಿದರು; ಆಲಿಸಿ ತಾವೂ ಉತ್ಸಾಹ

ಗೊಂಡರು. "ಈಗ ನಾವೂ ಆ ಪ್ರಸಂಗವನ್ನೇ ಅಭ್ಯಾಸ ಮಾಡಿ ಆಡೋಣ!" ಎಂದು ಗದಾಧರ ಅವರನ್ನೆಲ್ಲ ಒಪ್ಪಿಸಿದ.

ಎಳೆವಯಸ್ಸಿನಲ್ಲಿ ಬುದ್ಧಿ–ಮನಸ್ಸು ಬಹಳ ಸೂಕ್ಷ್ಮವಾಗಿರುತ್ತವೆ. ಆ ವಯಸ್ಸಿನಲ್ಲಿ ಕಲಿಕೆ ಬಹಳ ವೇಗ. ಇದು ಎಲ್ಲರಿಗೂ ತಿಳಿದಿರುವ ವಿಷಯವೇ. ಅಲ್ಲದೆ, ತಮ್ಮ ಮನಸ್ಸಿಗೆ ಹಿಡಿಸಿದ್ದನ್ನು ಕಲಿಯುವುದೆಂದರೆ ಎಲ್ಲರಿಗೂ ಉತ್ಸಾಹ ಹೆಚ್ಚೇ. ಆದ್ದರಿಂದ ಕಲಿಕೆ ಇನ್ನೂ ವೇಗ. ಗದಾಧರನಿಗೆ ಧರ್ಮ–ಅಧ್ಯಾತ್ಮಗಳೆಂದರೆ ವಿಶೇಷ ಒಲವು ಎಂಬುದೇನೋ ನಿಜವೇ. ಆದರೆ, ಹಿಂದಿನ ದಿನ ನೋಡಿದ್ದ ಆ ಬಯಲಾಟದ ಸಂಭಾಷಣೆ–ಅಭಿನಯ–ಹಾಡುಗಳಲ್ಲಿ ಹೆಚ್ಚು ಕಡಿಮೆ ಪ್ರತಿಯೊಂದು ಪದವೂ ಅವನಿಗೆ ಕಂಠಸ್ಥವಾಗಿತ್ತೆಂದರೆ...! ಗದಾಧರ ತನ್ನ ಸ್ನೇಹಿತರಿಗೆ ಸೂಕ್ತವಾದ ಒಂದೊಂದು ಪಾತ್ರವನ್ನು ವಹಿಸಿಕೊಟ್ಟು, ಮಾತುಕತೆ, ಹಾಡುಗಳಲ್ಲಿ ಸಾಧ್ಯವಾದಷ್ಟನ್ನು ಅವರಿಗೆ ಉರುಹಾಕಿಸಿದ. ತಾನು ನಾಯಕನ ಪಾತ್ರವಹಿಸಿ, ಬಯಲಾಟವನ್ನು ಆಡಿಸಿಯೇ ಬಿಟ್ಟ! ಬಳಿಯ ಹೊಲಗಳಲ್ಲಿ ಉಳುತ್ತಿದ್ದ ಮುಗ್ಧ ಗ್ರಾಮಸ್ಥರೆಲ್ಲ ಇದನ್ನು ಕಂಡು ಆನಂದಿಸಿದರು. ಆದರೆ ಬಯಲಾಟವನ್ನು ಒಂದೇ ಒಂದು ಬಾರಿ ಕಂಡ ಹುಡುಗರು ಅಷ್ಟನ್ನೆಲ್ಲ ಕಂಠಸ್ಥಮಾಡಿಕೊಂಡು ಬಿಟ್ಟಿದ್ದಾರಲ್ಲ, ಅದು ಹೇಗೆ ಸಾಧ್ಯವಾಯಿತು! ಎಂದು ಅವರಿಗೆಲ್ಲ ವಿಸ್ಮಯ.

ಗದಾಧರನ ಹಲವು ಹವ್ಯಾಸಗಳಲ್ಲಿ ಚಿತ್ರ ಬರೆಯುವುದೂ ಒಂದಾಗಿತ್ತು. ಅದರಲ್ಲಿ ಅವನ ಪ್ರತಿಭೆ ಸಾಕಷ್ಟು ಸ್ಪಷ್ಟವಾಗಿಯೇ ವ್ಯಕ್ತವಾಗಿತ್ತು. ಆದರೆ ಈಗ ಅವನು ನಾಟಕದ ಅಭ್ಯಾಸ ಅಭಿನಯ ಪ್ರದರ್ಶನಗಳಲ್ಲಿ ಮುಳುಗಿದ್ದರಿಂದ ಚಿತ್ರಕಲೆ ಸ್ವಲ್ಪ ಹಿಂದಾಗಿತ್ತು. ಇದು ಸ್ವಾಭಾವಿಕವೇ. ಆದರೂ ಸಮಯಸ್ಫೂರ್ತಿ ಎದ್ದಾಗ ಅವನ ಚಿತ್ರಕಲಾಪ್ರತಿಭೆ ಪ್ರಕಟವಾಗದಿರುತ್ತಿರಲಿಲ್ಲ. ಒಮ್ಮೆ ಅವನು ಗೌರಹಾಟಿಯಲ್ಲಿರುವ ತನ್ನ ತಂಗಿ ಸರ್ವಮಂಗಳೆಯ ಮನೆಗೆ ಹೋಗಿದ್ದ. ಅಲ್ಲಿ ಸರ್ವಮಂಗಳೆ ಅತ್ಯಂತ ಹರ್ಷದಿಂದ ಹಸನ್ಮುಖಿಯಾಗಿ ತನ್ನ ಗಂಡನಿಗೆ ಉಣಬಡಿಸುವುದನ್ನು ಹಾಗೂ ಇತರ ಸೇವೆ ಮಾಡುವುದನ್ನು ನೋಡಿದ. ಆ ದೃಶ್ಯ ಅವನ ಮನಮುಟ್ಟಿತು; ಹೃದಯದಿಂದ ಸ್ಫೂರ್ತಿ ಉಕ್ಕಿತು. ಇದರ ಪರಿಣಾಮವಾಗಿ ಅವನು ಆ ದಂಪತಿಗಳ ಆನಂದಮಯ ಜೀವನವನ್ನು ಅಭಿವ್ಯಕ್ತಗೊಳಿಸುವ ಒಂದು ಚಿತ್ರವನ್ನು ಬರೆದೇಬಿಟ್ಟ. ತುಂಬ ಜೀವಕಳೆಯಿಂದ ಕೂಡಿದ ಆ ಚಿತ್ರವನ್ನು ಕಂಡು ಮನೆಮಂದಿಯೆಲ್ಲ ಬಹಳ ಸಂತೋಷಪಟ್ಟರು. ಎಲ್ಲರ ಬಾಯಲ್ಲೂ ಆ ಚಿತ್ರದ ವರ್ಣನೆಯೆ.

ಗದಾಧರನ ಮತ್ತೊಂದು ಹವ್ಯಾಸ ಬೊಂಬೆಗಳನ್ನು ತಯಾರಿಸುವುದು. ಧಾರ್ಮಿಕ ಪ್ರವೃತ್ತಿಯವನಾದ ಅವನು ಅದೂ ಇದೂ ವಿಗ್ರಹ ತಯಾರಿಸಲೊಲ್ಲ. ಅವನು ಮಾಡಿದರೆ ದೇವದೇವಿಯರ ವಿಗ್ರಹಗಳನ್ನೇ. ವಿಗ್ರಹದ ಅಂಗಾಂಗಗಳು ಮಾಟವಾಗಿರಬೇಕು, ಆಯಾ ದೇವದೇವಿಯರಿಗೆ ತಕ್ಕುದಾದ ಆಭರಣಗಳಿರಬೇಕು, ವಿಗ್ರಹದ ಶೋಭೆ ಹೆಚ್ಚುವಂತೆ ಸೂಕ್ತವರ್ಣವಿನ್ಯಾಸಗಳಿರಬೇಕು. ಇವೆಲ್ಲಕ್ಕಿಂತ ಹೆಚ್ಚಾಗಿ ವಿಗ್ರಹದ ಮುಖದಿಂದ ದೈವಿಕ ಕಳೆ ಉಕ್ಕಿ ಹರಿಯುತ್ತಿರಬೇಕು. ಗದಾಧರನ

ಕೈಚಳಕದಿಂದ ಇಷ್ಟೂ ವಿವರಗಳು ವಿಗ್ರಹದಲ್ಲಿ ಮೂಡಿ ಬರುತ್ತಿದ್ದುವು. ವಿಗ್ರಹ ಮಾಡಿ ಸುಮ್ಮನೆ ಒಂದು ಕಡೆ ಪ್ರದರ್ಶನಕ್ಕಿಡುತ್ತಿರಲಿಲ್ಲ ಅವನು. ತನ್ನ ಸ್ನೇಹಿತರನ್ನು ಸೇರಿಸಿಕೊಂಡು ಅದಕ್ಕೆ ವಿಧಿವತ್ತಾದ ಪೂಜೆಯನ್ನೂ ಮಾಡುತ್ತಿದ್ದ, ಪ್ರಸಾದವನ್ನೂ ಹಂಚುತ್ತಿದ್ದ.

ಬರಬರುತ್ತ ಗದಾಧರ ಶಾಲೆಗೆ ಹೋಗುವುದು ನಿಂತೇಹೋಯಿತು. ಆದರೆ ಅವನು ಸಮಯವನ್ನು ಹಾಳುಮಾಡುತ್ತಿರಲಿಲ್ಲ. ಒಂದೋ ತನ್ನ ವಿವಿಧ ಹವ್ಯಾಸ ಗಳಲ್ಲಿ ಮಗ್ನನಾಗಿರುತ್ತಿದ್ದ; ಇಲ್ಲವೆ ತಾಯಿ ಚಂದ್ರಮಣಿಯ ಮನೆಗೆಲಸಗಳಲ್ಲಿ ನೆರವಾಗುತ್ತಿದ್ದ. ಅವನ ಕೆಲಸಗಳಲ್ಲಿ ಮುಖ್ಯವಾದುದೆಂದರೆ, ಅಣ್ಣನ ಮಗ ಅಕ್ಷಯನನ್ನು ಆಟವಾಡಿಸುವುದು. ತಾಯಿಯಿಲ್ಲದ ತಬ್ಬಲಿ ಆ ಮಗು. ಗದಾಧರ ನಿಗೆ ಆ ಮಗುವಿನ ಮೇಲೆ ತುಂಬ ಅಕ್ಕರೆ, ತುಂಬ ಸಹಾನುಭೂತಿ. ತಾಯಿ ಚಂದ್ರಮಣಿ ಮನೆಕೆಲಸದ ಕಡೆಗೆ ಪೂರ್ಣಗಮನ ಕೊಡಲು ಅನುಕೂಲಿಸುವಂತೆ ಮಗುವನ್ನು ಮಡಿಲಲ್ಲೆತ್ತಿಕೊಂಡು ಆಟವಾಡಿಸುತ್ತ, ತಮಾಷೆ ಮಾಡುತ್ತ ಅದನ್ನು ಖುಷಿಯಾಗಿಟ್ಟಿರುವುದು ಗದಾಧರನ ಒಂದು ದಿನಚರಿಯೇ ಆಯಿತೆನ್ನಬಹುದು.

ಹೀಗೆಯೇ ಕಳೆಯಿತು ಮೂರು ವರ್ಷ.

## 'ತುತ್ತಿನ ವಿದ್ಯೆಯು ನಾನೊಲ್ಲೆ'

ಇತ್ತ ರಾಮಕುಮಾರ ಕಲ್ಕತ್ತದಲ್ಲಿ ಸಂಸ್ಕೃತ ಪಾಠಶಾಲೆಯೊಂದನ್ನು ಸ್ಥಾಪಿಸಿ ನಡೆಸಿಕೊಂಡು ಬರುತ್ತಿದ್ದ. ಜೊತೆಗೆ ಪೌರೋಹಿತ್ಯ ವೃತ್ತಿ. ಊರಿಗೆ ಹೆಚ್ಚಾಗಿ ಬಂದುಹೋಗಲು ಸಮಯವಿರಲಿಲ್ಲ. ಆದ್ದರಿಂದ ವರ್ಷಕ್ಕೊಮ್ಮೆ ಬಂದು, ಎರಡು–ಮೂರು ವಾರ ಇದ್ದು ತಾಯಿ ತಮ್ಮಂದಿರ ಯೋಗಕ್ಷೇಮವನ್ನು ನೋಡಿ ಕೊಂಡು ಹೋಗುತ್ತಿದ್ದ. ಸಂಸಾರ ರಥ ಹೇಗೋ ಸಾಗುತ್ತಿತ್ತು. ಮಗ ಅಕ್ಷಯನೂ ಅಜ್ಜಿ ಚಿಕ್ಕಪ್ಪಂದಿರ ಆರೈಕೆಯಲ್ಲಿ ಚೆನ್ನಾಗಿ ಬೆಳೆಯುತ್ತಿದ್ದ. ಆದ್ದರಿಂದ ಅವನಿಗೆ ಆ ಬಗ್ಗೆ ಅಂತಹ ಚಿಂತೆಯೇನೂ ಇರಲಿಲ್ಲ.

ಆದರೆ ಈ ಸಲ ಕಾಮಾರಪುಕುರಕ್ಕೆ ಬಂದಾಗ ರಾಮಕುಮಾರ ಮೊದಲು ಗಮನಿಸಿದ್ದೆಂದರೆ, ಓದು–ಬರಹದ ಬಗ್ಗೆ ಗದಾಧರನಿಗಿದ್ದ ಅನಾಸಕ್ತಿಯನ್ನು. ಇದನ್ನು ಕಂಡು ಅವನಿಗೆ ಬಹಳ ಚಿಂತೆಯಾಯಿತು. ಗದಾಧರ ತನ್ನ ಸಮಯ ವನ್ನೆಲ್ಲ ಹೇಗೆ ಕಳೆಯುತ್ತಾನೆ, ಯಾರೊಡನೆ ಹೆಚ್ಚಾಗಿ ಒಡನಾಡುತ್ತಾನೆ, ಏನನ್ನು ಇಷ್ಟಪಡುತ್ತಾನೆ ಎಂಬ ವಿಷಯಗಳ ಬಗ್ಗೆ ಚಂದ್ರಮಣಿ ಹಾಗೂ ರಾಮೇಶ್ವರ ರೊಂದಿಗೆ ಚರ್ಚಿಸಿ ತಿಳಿದುಕೊಂಡ. ಈ ರೀತಿ ಆದರೆ ಗದಾಧರ ತನ್ನ ಕಾಲಮೇಲೆ ತಾನು ನಿಂತುಕೊಳ್ಳುವುದುಂಟೆ ? — ಎಂದೆನ್ನಿಸಿತು ಅವನಿಗೆ. ಆದ್ದರಿಂದ ತಾನೇ ಅವನನ್ನು ಖುದ್ದಾಗಿ ನೋಡಿಕೊಳ್ಳುವುದೇ ಮೇಲೆಂದು ಯೋಚಿಸಿದ. ಅಲ್ಲದೆ ಕಲ್ಕತ್ತದಲ್ಲಿ ಅವನ ಪಾಠಶಾಲೆಗೆ ಬರುತ್ತಿದ್ದ ಹುಡುಗರ ಸಂಖ್ಯೆ ಹೆಚ್ಚಾಗಿದ್ದುದರಿಂದ, ಅದರ ಮೇಲ್ವಿಚಾರಣೆಗೆ ಯಾರದಾದರೂ ನೆರವು ಬೇಕಾಗಿತ್ತು. ಈಗ ಗದಾಧರನನ್ನು ಕರೆದೊಯ್ದು ತರಬೇತಿ ಕೊಟ್ಟರೆ, ಅವನಿಗೂ ಜೀವನಕ್ಕೊಂದು ದಾರಿಯಾಗುತ್ತದೆ, ತನಗೂ ಭಾರ ಕಡಿಮೆಯಾಗುತ್ತದೆ ಎಂದುಕೊಂಡ. ಈ ಆಲೋಚನೆಯನ್ನು ಚಂದ್ರ ಮಣಿ–ರಾಮೇಶ್ವರರ ಮುಂದಿರಿಸಿದಾಗ ಅವರೂ ಅದನ್ನು ಅನುಮೋದಿಸಿದರು.

ಗದಾಧರನಿಗೆ ವಿಷಯ ತಿಳಿಯಿತು. ಇದಕ್ಕೆ ಅವನ ಪ್ರತಿಕ್ರಿಯೆ ಏನಿದ್ದಿರ ಬಹುದು ? ತನಗಿಷ್ಟವಿಲ್ಲದ್ದನ್ನು ಹೇರುತ್ತಿದ್ದಾರೆಂದು ಪ್ರತಿಭಟಿಸಿರಬಹುದೆ ? ತಾಯಿಯನ್ನು ಬಿಟ್ಟು ಎಲ್ಲಿಗೂ ಹೋಗಲಾರೆನೆಂದು ಹಟಹಿಡಿದಿರಬಹುದೆ ? ಇಲ್ಲವೇ ಇಲ್ಲ. ಒಂದೇ ಒಂದು ಚಕಾರವೆತ್ತದೆ ಗದಾಧರ ಅಣ್ಣನ ಮಾತಿಗೆ ಒಪ್ಪಿಬಿಟ್ಟ ! ಏಕಿರಬಹುದು ? ತನಗೆ ಅಷ್ಟೊಂದು ಪ್ರಿಯವಾದ ಕಾಮಾರಪುಕುರ ವನ್ನು, ಸ್ನೇಹಿತರನ್ನು, ಎಲ್ಲಕ್ಕೂ ಹೆಚ್ಚಾಗಿ ಪ್ರೀತಿಯ ತಾಯಿಯನ್ನು ಬಿಟ್ಟುಹೋಗ

ಬೇಕಲ್ಲ ಎಂದು ಅವನಿಗೆ ಸಂಕಟವಾಗಲಿಲ್ಲವೆ! 'ಇಲ್ಲ' ಎಂದು ಒಂದೇ ಮಾತಿಗೆ ಹೇಳಲು ಬರುವಂತಿಲ್ಲ; ಆದರೆ ಗದಾಧರನಿಗೆ ಅಣ್ಣನ ಮಾತೆಂದರೆ ವೇದವಾಕ್ಯ. ಆದ್ದರಿಂದ ಒಪ್ಪುವುದು ಕಷ್ಟವಾಗಲಿಲ್ಲ. ತನ್ನನ್ನು ಸ್ವಂತ ತಂದೆಯಂತೆ ಬೆಳೆಸಿದ ಅಣ್ಣನ ವಿಷಯದಲ್ಲಿ ಅವನಿಗಿದ್ದ ಗೌರವ, ಪೂಜ್ಯತೆ ಅಂಥದು. ಗದಾಧರ ಮರುಮಾತಿಲ್ಲದೆ ಒಪ್ಪಿಕೊಂಡದ್ದು ಅವನ ಅಣ್ಣಂದಿರಿಗೂ ತಾಯಿಗೂ ಅತೀವ ಸಮಾಧಾನ ತಂದಿತು. ಒಂದು ಶುಭದಿನದಂದು ರಾಮಕುಮಾರ-ಗದಾಧರರು ಶ್ರೀರಘುವೀರನ ಪೂಜೆಗೈದು, ತಾಯಿಯ ಪಾದಧೂಳಿಯನ್ನು ಸ್ವೀಕರಿಸಿ ಕಲ್ಕತ್ತೆಗೆ ಹೊರಟರು. ಜೊತೆಗೇ ಕಾಮಾರಪುಕುರದ ಭಾಗ್ಯದೇವತೆಯೂ ನಿರ್ಗಮಿಸಿದಂತಾಯಿತು. ಕಣ್ಮುಂದೆಯೇ ಇರಬೇಕಾದ ತನ್ನ ಕಣ್ಮಣಿಯನ್ನು ಕಾಣದ ಊರಿಗೆ ಕಳಿಸುವಾಗ ತಾಯಿಯ ಕರುಳು ಚಡಪಡಿಸಿತು, ಮೌನವಾಗಿ ರೋದಿಸಿತು—ಆದರೆ ಅನಿವಾರ್ಯ!

ಗದಾಧರನ ಅಗಲಿಕೆಯಿಂದ ಅವನ ಗೆಳೆಯರಿಗಾದ ದುಃಖ ಸ್ವಲ್ಪವೆ? ಅವನಲ್ಲೇ ತಮ್ಮ ಜೀವವಿರಿಸಿದ್ದ ಊರ ಮಹಿಳೆಯರ ದುಃಖ ಸ್ವಲ್ಪವೆ? ಗದಾಧರನ ದಿವ್ಯ ಅಸ್ತಿತ್ವದಿಂದ ಸದಾ ಅನಿರ್ವಚನೀಯ ಆನಂದವನ್ನು ಅನುಭವಿಸುತ್ತಿದ್ದ ಊರ ಹಸುಕರುಗಳು, ಗಿಡಮರಬಳ್ಳಿಗಳು ಅವನ ಅಗಲಿಕೆಯನ್ನು ತಾಳಲಾರದೆ, ಮಾತಿನ ಮೂಲಕ ತಿಳಿಸಲೂ ಆಗದೆ ಮೂಕವಾಗಿ ನಿಂತುವು.

ರಾಮಕುಮಾರನ ಸಂಸ್ಕೃತಪಾಠಶಾಲೆಯಿದ್ದದ್ದು ಕಲ್ಕತ್ತದ ಝಾಮಾಪುಕುರದಲ್ಲಿ; ದಿಗಂಬರ ಮಿತ್ರ ಎಂಬೊಬ್ಬ ಶ್ರೀಮಂತನ ಗೃಹದ ಸನಿಹದಲ್ಲಿ. ಪಾಠಶಾಲೆಯಲ್ಲಿ ಬಾಲಕರಿಗೆ ವ್ಯಾಕರಣ, ಸ್ತೋತ್ರ–ಮಂತ್ರಾದಿಗಳನ್ನು ಹೇಳಿಕೊಡಲಾಗುತ್ತಿತ್ತು. ಮೊದಮೊದಲಿಗೆ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಿದ್ದುದು ಕ್ರಮೇಣ ಹೆಚ್ಚಾಯಿತು. ಆದರೆ ಇದರಿಂದ ರಾಮಕುಮಾರನ ಕಾರ್ಯಭಾರ ಹೆಚ್ಚಿತೇ ಹೊರತು ಆದಾಯವೇನೂ ಅಷ್ಟೊಂದು ಹೆಚ್ಚಲಿಲ್ಲ. ಕಾರಣ—ಆಗಿನ ಕಾಲದಲ್ಲಿ ಸಂಸ್ಕೃತ ಪಾಠಶಾಲೆಗಳೆಲ್ಲ ನಡೆಯುತ್ತಿದ್ದುದು ಧರ್ಮಾರ್ಥವಾಗಿಯೇ! ಎಂದರೆ ಸಂಪಾದನೆಯೇ ಇರಲಿಲ್ಲವೆಂದಲ್ಲ. ವಿದ್ಯಾರ್ಥಿಗಳು ಅಲ್ಪ ಸ್ವಲ್ಪ ಪುಡಿಗಾಸನ್ನು—ಅದೂ ತಮಗೆ ಅನುಕೂಲವಾದಾಗ—ಗುರುದಕ್ಷಿಣೆಯೆಂದು ತೆರುವುದಿತ್ತು. ಅದನ್ನೇನೂ ನೆಚ್ಚಿಕೊಳ್ಳುವಂತಿರಲಿಲ್ಲ. ಆದರೆ ಈ ಶಾಲೆಗಳಿಗೆ ಸರ್ಕಾರದಿಂದ ಸಹಾಯಧನ ಸಿಗುತ್ತಿತ್ತು. ಇದರ ರೀತಿ ಮಾತ್ರ ಬಹಳ ವಿಚಿತ್ರ. ಧನದ ಮೊತ್ತ ಆಯಾ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆಯ ಮೇಲೂ, ಅವರು ಗಳಿಸುವ ದರ್ಜೆಯ ಮೇಲೂ ಅವಲಂಬಿತವಾಗಿತ್ತು. ಹೀಗೆ, ಯಾವ ಶಾಲೆಯಲ್ಲಿ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳಿರುತ್ತಾರೋ, ಮತ್ತು ಹೆಚ್ಚು ಪ್ರತಿಭಾವಂತರಿರುತ್ತಾರೋ, ಅಂಥ ಶಾಲೆಗೆ ಒಳ್ಳೇ ಪುರಸ್ಕಾರ. ಆದರೆ ಅಂತಹವರನ್ನು ಅಧ್ಯಾಪಕ ಎಲ್ಲಿಂದ ಹುಡುಕಿ ತರಬೇಕು?

ಒಟ್ಟಿನಲ್ಲಿ ರಾಮಕುಮಾರ ಈ ಶಾಲೆಯನ್ನು ನೆಚ್ಚಿಕೊಂಡು ಜೀವನ ಮಾಡುವಂತಿರಲಿಲ್ಲ. ಆದ್ದರಿಂದ ಅವನು ಶ್ರೀಮಂತರ ಮನೆಗಳಲ್ಲಿ ದೇವತಾರ್ಚನೆ ಮಾಡುವ ಉಪವೃತ್ತಿಯನ್ನು ಪ್ರಾರಂಭಿಸಿದ. ಬೆಳಗ್ಗೆ–ಸಂಜೆ ಎರಡು ಹೊತ್ತೂ ಈ

ಕೆಲಸ. ಆದರಿಂದ ಸಂಪಾದನೆಯೇನೋ ಇದ್ದಿತಾದರೂ, ಅದು ಬಹಳಷ್ಟು ಸಮಯವನ್ನು ತೆಗೆದುಕೊಳ್ಳುತ್ತಿತ್ತು. ಏಕೆಂದರೆ ಅವನು ನಿಷ್ಠಾವಂತ; ಪೂಜೆಯ 'ಶಾಸ್ತ್ರ' ಮಾಡಿ ಬಿಡುವವನಲ್ಲ. ಶ್ರಮವೇನೋ ಬಹಳವೇ, ನಿಜ. ಆದರೆ ವಿಧಿಯಿಲ್ಲ. ಮೊದಮೊದಲಿಗೆ ಪಾಠಶಾಲೆಯನ್ನೂ ಈ ಕೆಲಸವನ್ನೂ ಹೇಗೋ ಒಟ್ಟಿಗೆ ನಿಭಾಯಿಸಿಕೊಂಡು ಬಂದ. ಆದರೆ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾದಾಗ ಮಾತ್ರ ಅಸಾಧ್ಯವಾಯಿತು. ಈಗೇನು ಮಾಡುವುದು ? ಎರಡರಲ್ಲಿ ಯಾವುದನ್ನೂ ಕೈಬಿಡುವಂತಿಲ್ಲ. ತನಗೊಬ್ಬ ಸಹಾಯಕನಿದ್ದರೆ ಎಲ್ಲ ಸರಿಹೋದೀತು....

ಹೀಗೆ ಆಲೋಚಿಸಿಯೇ ರಾಮಕುಮಾರ ತಮ್ಮನನ್ನು ಕರೆತಂದದ್ದು. ಈಗ ಅವನು ಗದಾಧರನಿಗೆ ಪೂಜಾವಿಧಾನಗಳನ್ನೂ ಮಂತ್ರಗಳನ್ನೂ ಬೋಧಿಸಿದ. ಗದಾಧರ ಅವೆಲ್ಲವನ್ನೂ ಶ್ರದ್ಧೆಯಿಂದ ಕಲಿತ. ರಾಮಕುಮಾರ ತಮ್ಮನಿಗೆ ಶ್ರೀಮಂತರ ಮನೆಗಳಲ್ಲಿ ದೇವತಾರ್ಚನೆ ಮಾಡುವ ಕೆಲಸವನ್ನು ಒಪ್ಪಿಸಿದ; ತಾನು ಪಾಠಶಾಲೆಯ ಕಡೆಗೆ ಪೂರ್ಣ ಗಮನ ಹರಿಯಿಸಿದ.

ಅಂತೂ ಕಲ್ಕತ್ತಕ್ಕೆ ಬರುತ್ತಿದ್ದಂತೆಯೇ ಗದಾಧರನಿಗೆ ತನ್ನ ಹೃದಯಕ್ಕೆ ಪ್ರಿಯವಾದ ಕೆಲಸವೇ ಸಿಕ್ಕಿತು. ಅದನ್ನವನು ಆನಂದದಿಂದ, ಶ್ರದ್ಧೆಯಿಂದ ಮಾಡ ತೊಡಗಿದ. ಇದಲ್ಲದೆ ಪಾಠಶಾಲೆಯಲ್ಲೂ ಅವನು ಸ್ವಲ್ಪಹೊತ್ತು ಕಲಿಯುತ್ತಿದ್ದ. ಉಳಿದ ವೇಳೆಯಲ್ಲಿ ಅಣ್ಣನಿಗೆ ಯಾವ ರೀತಿಯಲ್ಲಾದರೂ ವೈಯಕ್ತಿಕ ಸೇವೆ ಮಾಡುತ್ತಿದ್ದ.

ಗದಾಧರನದು ಸದಾ ಮಂದಹಾಸದಿಂದ ಮಿನುಗುವ ಮುಖ. ಅವನ ಮಾತನ್ನು ಕೇಳಿದವರಿಗೆ ಜೇನು ಸವಿಯುವ ಅನುಭವ. ಅವನ ಗುಣ ನಡತೆಗಳೋ, ಹೃದಯಕ್ಕೆ ಹಿತ. ಇಂತಹ ಬಾಲಕ ಆ ಶ್ರೀಮಂತ ಯಜಮಾನರಿಗೂ ಪ್ರಿಯನಾದನೆಂದರೆ ಅಚ್ಚರಿಯೇನಿದೆ ? ಗದಾಧರನ ಬುದ್ಧಿಶಕ್ತಿ, ಚುರುಕುತನ, ಪ್ರಾಮಾಣಿಕತೆ, ಎಲ್ಲಕ್ಕಿಂತ ಹೆಚ್ಚಾಗಿ ಅವನ ದೈವಭಕ್ತಿ– ಇವುಗಳನ್ನು ಎಲ್ಲರೂ ಗಮನಿಸಿದರು, ಮಾರುಹೋದರು. ಆದ್ದರಿಂದ ಆ ಗೌರವಸ್ಥ ಮನೆತನಗಳ, ಪರದೆಯ ಹಿಂದಿನ ಹೆಂಗಸರೂ ಅವನ ಮುಂದೆ ಕಾಣಿಸಿಕೊಳ್ಳಲು ಸಂಕೋಚ ಪಟ್ಟುಕೊಳ್ಳುತ್ತಿರಲಿಲ್ಲ. ಅವನಿಂದ ಹಾಡುಗಳನ್ನು ಹೇಳಿಸಿ ಕೇಳುವುದು, ಇಲ್ಲವೆ ಇನ್ನಾವುದಾದರೂ ಪೂಜೆಯನ್ನೋ ಕೆಲಸವನ್ನೋ ಮಾಡಿಸಿಕೊಳ್ಳುವುದು ಎಂದರೆ ಅವರಿಗೆ ಬಹಳ ಇಷ್ಟ. ಹೀಗೆ ಕಾಮಾರಪುಕುರದಂತೆ ಕಲ್ಕತ್ತದಲ್ಲಿಯೂ ಅಪ್ರಯತ್ನವಾಗಿ ಗದಾಧರನ ಸುತ್ತ ಅವನನ್ನು ಪ್ರೀತಿಸುವ ಜನರ ಗುಂಪೊಂದು ನಿರ್ಮಾಣಗೊಂಡಿತು. ಗದಾಧರ ತನಗೆ ಸಮಯವಾದಾಗಲೆಲ್ಲ ಅವರೊಂದಿಗೆ ಆನಂದದಿಂದ ಕಾಲಕಳೆಯುತ್ತಿದ್ದ. ಆದರೆ ಈ ಎಲ್ಲ ಚಟುವಟಿಕೆಗಳ ನಡುವೆ ಅವನ ಅಧ್ಯಯನ ಮಾತ್ರ ಮುಂದಕ್ಕೆ ಸಾಗಲೇ ಇಲ್ಲ ಎನ್ನಬೇಕು.

ರಾಮಕುಮಾರ ಇದನ್ನೆಲ್ಲ ಗಮನಿಸುತ್ತಿದ್ದ. ಆದರೆ ತಮ್ಮನಿಗೆ ಬುದ್ಧಿ ಹೇಳಲು ಅವನಿಗೇಕೋ ಮನಸ್ಸಾಗಲಿಲ್ಲ. ಗದಾಧರ–ಚಂದ್ರಮಣಿಯರ ನಡುವೆ ಎಂತಹ ಪ್ರೀತಿಯ ಬಂಧನವಿತ್ತೆಂದು ಆತ ಅರಿತಿದ್ದ. ತಾಯಿಯ ವಾತ್ಸಲ್ಯದಿಂದ

ತನ್ನ ತಮ್ಮನನ್ನು ವಂಚಿತನನ್ನಾಗಿಸಿದ್ದೇನೆಂಬ ಅರಿವು ಅವನಿಗಿತ್ತು. ಅವನನ್ನು ಇಷ್ಟು ದೂರ ಕರೆತಂದದ್ದು ಮುಖ್ಯವಾಗಿ ತನ್ನ ಅನುಕೂಲಕ್ಕಾಗಿಯೇ ಅಲ್ಲವೆ? ಗದಾಧರನ ಸದ್ಗುಣಗಳನ್ನು ಕಂಡು ಆಕರ್ಷಿತರಾದ ಜನರು ಅವನನ್ನು ತಮ್ಮಲ್ಲಿಗೆ ಆಹ್ವಾನಿಸಿದರೆ, ಮತ್ತು ಅವನಿಗೂ ಅದರಲ್ಲಿ ಆನಂದವಿದ್ದರೆ ತಾನದನ್ನು ತಪ್ಪಿಸುವುದು ತರವೆ? ಹೀಗೆ ಮಾಡಿದರೆ ಅವನ ಪರಿಸ್ಥಿತಿ ನೀರಿನಿಂದಾಚೆ ತಂದ ಮೀನಿನಂತಾಗದೆ?–ಹೀಗೆ ಆಲೋಚಿಸಿದ ರಾಮಕುಮಾರ. ಹೋಗಲಿ, ಮನೆಗೆ ಆದಾಯವಾದರೂ ಸಾಕಷ್ಟಿರುತ್ತಿದ್ದರೆ ಅವನನ್ನು ತಾಯಿಯಿಂದ ಅಗಲಿಸುವ ಅಗತ್ಯವಿರುತ್ತಿರಲಿಲ್ಲ. ಆಗ ಅವನನ್ನು ಮನೆಯಲ್ಲೇ ಇರಿಸಿಕೊಂಡು ಸಮೀಪದ ಯಾರಾದರೊಬ್ಬ ಪಂಡಿತರ ಬಳಿಗೆ ಪಾಠಕ್ಕೆ ಕಳುಹಿಸಬಹುದಾಗಿತ್ತು. ಇದರಿಂದ ತಾಯಿಗೂ ಎಷ್ಟೋ ಸಂತೋಷವಾಗುತ್ತಿತ್ತು. ಹೀಗೆಲ್ಲ ಆಲೋಚಿಸಿ ರಾಮಕುಮಾರ ಕೆಲಕಾಲ ತಮ್ಮನಿಗೆ ಏನೂ ಬುದ್ಧಿ ಹೇಳದೆ ಸುಮ್ಮನಿದ್ದ.

ಆದರೆ ಎಷ್ಟಾದರೂ ಅವನು ಹಿರಿಯ. ಕಿರಿಯನಾದ ತಮ್ಮನ ಭವಿಷ್ಯದ ಕಡೆಗೆ ಗಮನ ಹರಿಸಬೇಕಾದವನಲ್ಲವೆ? ಈಗೇನೋ ತಾನು ಸುಮ್ಮನಿದ್ದುಬಿಡಬಹುದು. ಆದರೆ ಮುಂದೆ ಅವನ ಗತಿಯೇನು! ಕಡೆಗೊಂದು ದಿನ ಅವನು ತಮ್ಮನನ್ನು ಕರೆದು ಹೇಳಿದ: "ಗದಾಯ್, ನೀನೀಗ ದೊಡ್ಡವನಾಗುತ್ತಿದ್ದೀಯೆ. ಇಷ್ಟು ದಿನವೂ ನೀನು ನಿನ್ನ ಪಾಠ ಪ್ರವಚನಗಳಲ್ಲಿ ಆಸಕ್ತಿ ವಹಿಸಲೇ ಇಲ್ಲ. ಆದರೆ ಮುಂದೆ ನೀನು ನಿನ್ನ ಕಾಲ ಮೇಲೆ ನಿಂತುಕೊಳ್ಳಬೇಡವೇನಪ್ಪ? ನೀನು ನಿನ್ನ ಜೀವನಕ್ಕೊಂದು ದಾರಿ ಮಾಡಿಕೊಳ್ಳದಿದ್ದರೆ ಹೇಗಾದೀತು? ಇನ್ನು ಮುಂದಾದರೂ ನೀನು ಪಾಠಗಳ ಕಡೆಗೆ ಗಮನಕೊಡಬೇಕಾಗುತ್ತದಪ್ಪ." ಹೀಗೆ ರಾಮಕುಮಾರ ತುಂಬ ಸೂಕ್ಷ್ಮವಾಗಿ, ಮೃದುವಾಗಿಯೇ ಹೇಳಿದ.

ಆದರೆ ಗದಾಧರನಂತಹ ಕುಶಾಗ್ರಮತಿಗೆ ಅಣ್ಣನ ಹೃದಯದ ಭಾವ ಅರ್ಥವಾಗದಿದ್ದೀತೆ! ಅಣ್ಣ ಎಷ್ಟೇ ಸೂಕ್ಷ್ಮವಾಗಿ ಹೇಳಿದರೂ ಅವನೆದೆಯ ಆತಂಕವನ್ನು ಗದಾಧರ ಗುರುತಿಸಿದ. ಅವನು ಅಣ್ಣನ ಮಾತಿನಿಂದ ವಿಚಲಿತನಾಗಲಿಲ್ಲ, ಬೇಸರಗೊಳ್ಳಲಿಲ್ಲ. ಬದಲಾಗಿ ಶಾಂತವಾಗಿ, ಗಂಭೀರವಾಗಿ ನುಡಿದ: "ಅಣ್ಣಾ, ನೀನು ಹೇಳಿದ್ದು ನನಗರ್ಥವಾಗುತ್ತಿದೆ. ಆದರೆ ಈ 'ಅಕ್ಕಿ–ಬಾಳೆಹಣ್ಣು ಗಂಟು ಕಟ್ಟುವ' ವಿದ್ಯೆಯನ್ನು ಕಲಿಯಲು ಮಾತ್ರ ನನಗಿಷ್ಟವಿಲ್ಲ. ಬದಲಾಗಿ ಯಾವುದು ಮನುಷ್ಯನಿಗೆ ನಿಜವಾದ ಜ್ಞಾನವನ್ನು ಕೊಡುತ್ತದೆಯೋ, ಯಾವುದು ಮನುಷ್ಯನಿಗೆ ತನ್ನ ಜೀವನದ ಗುರಿಯನ್ನು ಸಾಕ್ಷಾತ್ಕರಿಸಿಕೊಳ್ಳುವಲ್ಲಿ ನಿಜಕ್ಕೂ ನೆರವಾಗುವುದೋ ಅಂತಹ ವಿದ್ಯೆಯನ್ನು ಕಲಿಯಬೇಕೆಂಬುದು ನನ್ನ ಇಚ್ಛೆ."

ಪೌರೋಹಿತ್ಯಕ್ಕೆ ಇಳಿಯುವ ವ್ಯಕ್ತಿ ಸಾಮಾನ್ಯವಾಗಿ ಹಲವಾರು ವರ್ಷ ಆಗಮಗಳನ್ನೂ ಶಾಸ್ತ್ರಗಳನ್ನೂ ಅಧ್ಯಯನ ಮಾಡಿರುತ್ತಾನೆ. ಬಳಿಕ ಮದುವೆ–ಮುಂಜಿ–ಶ್ರಾದ್ಧವೇ ಮೊದಲಾದುವುಗಳನ್ನು ಮಾಡಿಸಲು ತೊಡಗುತ್ತಾನೆ. ಈ ಪೌರೋಹಿತ್ಯಕ್ಕಾಗಿ ಆತನಿಗೆ ಒಂದಿಷ್ಟು ಅಕ್ಕಿ, ತೆಂಗಿನಕಾಯಿ, ಬಾಳೆಹಣ್ಣು, ದಕ್ಷಿಣೆ ಸಿಗುವುದು ಸಂಪ್ರದಾಯ. ಪುರೋಹಿತ ತನ್ನ ಪಾಲಿಗೆ ಸಿಕ್ಕಿದ ಒಂದು ಸೇರು ಅಕ್ಕಿ,

ಒಂದು ತೆಂಗಿನಕಾಯಿ, ನಾಲ್ಕು ಬಾಳೇಹಣ್ಣುಗಳನ್ನು ಗಂಟುಕಟ್ಟಿಕೊಂಡು, ನಾಲ್ಕಾಣೆಯೊ ಎಂಟಾಣೆಯೊ ದಕ್ಷಿಣೆಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಹೊರಡುವ ದೃಶ್ಯ ಆಗಿನ ಕಾಲದಲ್ಲಿ ಸರ್ವೇಸಾಮಾನ್ಯ. ಇಂತಹ ಪುರೋಹಿತರನ್ನು ಗದಾಧರನೂ ದಿನನಿತ್ಯ ಕಾಣುತ್ತಿದ್ದ. ಆಗ ಅವನ ಮನಸ್ಸಿನಲ್ಲಿ ಯಾವ ಬಗೆಯ ಆಲೋಚನೆಗಳು ಏಳುತ್ತಿದ್ದುವೆಂಬುದನ್ನು ನಾವು ಸುಲಭವಾಗಿ ಊಹಿಸಬಹುದು. ಈ ಪುರೋಹಿತರು ಕಲಿತದ್ದು ಘನವಾದ ವಿದ್ಯೆಯನ್ನೇ ಆದರೂ ಆ ವಿದ್ಯೆಯೆಲ್ಲ ಪರಿಸಮಾಪ್ತಗೊಂಡದ್ದು ಉದರಂಭರಣಕ್ಕಾಗಿ ಒಂದಿಷ್ಟು ಅಕ್ಕಿ–ಬಾಳೆಹಣ್ಣು ಗಂಟು ಕಟ್ಟುವುದರಲ್ಲಿ! ಇದರಿಂದ ಸಿಗುವ ಪುರುಷಾರ್ಥವೆಲ್ಲ ಇಷ್ಟೆ ಎಂದು ಗದಾಧರನಿಗೆ ಸ್ಪಷ್ಟವಾಗಿ ಅನ್ನಿಸಿತು. ಅಲ್ಲದೆ ನಿಜವಾದ ವಿದ್ಯೆ ಈ ಎಲ್ಲ ಲೆಕ್ಕಾಚಾರದ ವ್ಯವಹಾರವನ್ನು ಮೀರಿದ್ದು ಎಂಬುದನ್ನೂ ಆತ ದೃಢವಾಗಿ ಮನಗಂಡಿದ್ದ. ಆದ್ದರಿಂದಲೇ ಆತ ಅಣ್ಣನಿಗೆ ಹೇಳಿದ್ದು, "ಅಕ್ಕಿ–ಬಾಳೆಹಣ್ಣು ಗಂಟುಕಟ್ಟುವ ವಿದ್ಯೆಯನ್ನು ಕಲಿಯಲು ನನಗಿಷ್ಟವಿಲ್ಲ" ಎಂದು.

ರಾಮಕುಮಾರನಿಗೆ ತಮ್ಮನ ಮಾತಿನ ಅರ್ಥ ಎಷ್ಟರ ಮಟ್ಟಿಗೆ ಆಯಿತೋ! ಅವನೇನೋ ಸಾತ್ವಿಕಜೀವಿ, ಧರ್ಮಭೀರು, ಅನುಭವಸ್ಥ, ನಿಜವೇ. ಆದರೆ ಗದಾಧರ ಯಾರು, ಅವನ ಸಾಮರ್ಥ್ಯವೇನು, ಸ್ವಭಾವವೆಂಥದು ಎಂಬುದನ್ನೆಲ್ಲ ಅವನೇನು ಬಲ್ಲ! ತಮ್ಮನ ಪ್ರಬುದ್ಧತೆಯೆಂಥದು ಎಂಬುದನ್ನು ಅವನು ಕನಸು–ಮನಸಿನಲ್ಲೂ ಊಹಿಸಲಾರದವನಾಗಿದ್ದ. ಆದ್ದರಿಂದ ಗದಾಧರ ತನ್ನ ಅಂತರಂಗದ ಭಾವವನ್ನು ಹೀಗೆ ವ್ಯಕ್ತಗೊಳಿಸಿದಾಗ ಅವನು ಅದನ್ನು ಅರ್ಥಮಾಡಿಕೊಳ್ಳಲು ಸಮರ್ಥನಾಗ ಲಿಲ್ಲ ಎಂದೇ ಹೇಳಬೇಕು. ಅವನು ಭಾವಿಸಿದ—'ಗದಾಧರ ಈ ರೀತಿಯಾಗಿ ಇನ್ನೊಬ್ಬರಿಂದ ಹೇಳಿಸಿಕೊಂಡದ್ದು ಬಹುಶಃ ಅವನ ಜೀವನದಲ್ಲೇ ಇದು ಮೊದಲ ನೆಯ ಸಲವಲ್ಲವೆ? ಅವನ ಸೂಕ್ಷ್ಮ ಮನಸ್ಸು ಘಾಸಿಗೊಂಡಿರಬೇಕು; ಆದ್ದರಿಂದ ಹೀಗೆ ಏನೇನೋ ಮಾತನಾಡುತ್ತಿದ್ದಾನೆ' ಎಂದು. ಮತ್ತೆ ಮಾತನಾಡಿ ಅವನ ಎಳೆಯ ಮನಸ್ಸನ್ನು ಇನ್ನಷ್ಟು ನೋಯಿಸುವುದು ಬೇಡವೆನ್ನಿಸಿ ಅಲ್ಲಿಗೇ ಸುಮ್ಮ ನಾದ. ಆದರೆ ಗದಾಧರನಿಗೆ ಇದು ಅರಿವಾಗಿರಬೇಕು. ಆದ್ದರಿಂದ ಅವನು ಅಣ್ಣನಿಗೆ ತನ್ನ ಮನದ ಆಲೋಚನೆಗಳನ್ನು ವಿವರಿಸಲು ಹಲವು ವಿಧದಲ್ಲಿ ಯತ್ನಿಸಿದ. ಹೊಟ್ಟೆಪಾಡಿನ ವಿದ್ಯೆಯನ್ನು ಕಲಿಯಲು ತನಗೆ ಸ್ವಲ್ಪವೂ ಇಷ್ಟವಿಲ್ಲವೆಂದು ಮನಗಾಣಿಸಲು ನೋಡಿದ. ಆದರೆ ರಾಮಕುಮಾರ ತಮ್ಮನ ಮಾತುಗಳನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಎಷ್ಟಾದರೂ ಹುಡುಗ, ಏನೇನೋ ಮಾತಾಡುತ್ತಾನೆ ಎಂದುಕೊಂಡು ಸುಮ್ಮನಾದ. ಹುಡುಗನಿರಲಿ, ವಯಸ್ಸಾದವನೂ ಕೂಡ ಲೋಕದ ರೀತಿಗೆ ವಿರುದ್ಧವಾಗಿ ನಡೆದುಕೊಂಡಲ್ಲಿ ಅವನ ಬುದ್ಧಿ ನೆಟ್ಟಗಿದೆಯೆಂದು ಯಾರಾದರೂ ಹೇಳಿಯಾರೆ?

ಅಂದು ರಾಮಕುಮಾರ ತಮ್ಮನ ಮನಸ್ಸನ್ನು ಅರ್ಥಮಾಡಿಕೊಳ್ಳಲಿಲ್ಲವಷ್ಟೇ ಅಲ್ಲ, ತಾನು ಅವನನ್ನು ನೋಯಿಸಿಬಿಟ್ಟೆನಲ್ಲ ಎಂದು ಪಶ್ಚಾತ್ತಾಪದಿಂದ ಕುಗ್ಗಿದ. ತಮಗೆ ಪ್ರೀತಿಪಾತ್ರರಾದ ಯಾರನ್ನಾದರೂ ಬೈದುಬಿಟ್ಟರೆ ಮರುಕ್ಷಣವೇ

ಪಶ್ಚಾತ್ತಾಪ ಪಡುವುದು, ಮತ್ತು ಮೊದಲಿಗಿಂತ ಹೆಚ್ಚಾಗಿ ಪ್ರೀತಿ ತೋರಿಸುವುದರ ಮೂಲಕ ಸಮಾಧಾನ ತಂದುಕೊಳ್ಳುವುದು ಮನುಷ್ಯನ ಸ್ವಭಾವ. ರಾಮ ಕುಮಾರನೂ ತಮ್ಮನೊಂದಿಗೆ ಕೆಲಕಾಲ ಹಾಗೆಯೇ ವರ್ತಿಸಿದ. ಆದರೆ ಇತ್ತ ಗದಾಧರನ ಸ್ವಭಾವದಲ್ಲೇನೂ ಬದಲಾವಣೆ ಕಂಡುಬರಲಿಲ್ಲ. ಅವನ ಮುಂದಿನ ಕ್ರಿಯೆಗಳೆಲ್ಲವೂ ಅವನು ಅಂದು ಆಡಿದ ಮಾತುಗಳನ್ನೇ ಸ್ಪಷ್ಟೀಕರಿಸುವಂತಿದ್ದುವು.

ಕಾಲಚಕ್ರ ವೇಗವಾಗಿ ಉರುಳತೊಡಗಿತು. ನೋಡನೋಡುತ್ತಿದ್ದಂತೆಯೇ ಮತ್ತೆರಡು ಸಂವತ್ಸರಗಳು ಕಳೆದುಹೋದುವು. ಈ ಮಧ್ಯೆ ರಾಮಕುಮಾರ ಇನ್ನಷ್ಟು ಹಣ್ಣಾದ. ಅವನ ಆರ್ಥಿಕ ಪರಿಸ್ಥಿತಿ ದಿನ ದಿನಕ್ಕೂ ಹದಗೆಟ್ಟಿತು. ಕಲ್ಕತ್ತದಂತಹ ಮಹಾನಗರದಲ್ಲಿಯೇ ಪೌರೋಹಿತ್ಯವನ್ನೂ ಮಾಡಿ ಪಾಠಶಾಲೆ ಯನ್ನೂ ನಡೆಸಿ ಜೀವನಕ್ಕೆ ಬೇಕಾಗುವಷ್ಟನ್ನು ಸಂಪಾದಿಸಲು ಸಾಧ್ಯವಾಗದಿರ ಬೇಕಾದರೆ ಅಂದಿನ ಹಿಂದುಗಳಲ್ಲಿ ನಾಸ್ತಿಕತೆ ಬೆಳೆದಿತ್ತು ಎನ್ನಲೆ? ಅಥವಾ ರಾಮ ಕುಮಾರನ ಗ್ರಹಗತಿಯೇ ಕೆಟ್ಟಿತ್ತೆನ್ನಲೆ? ನಾವು ಹಿಂದೆಯೇ ಗಮನಿಸಿದಂತೆ ರಾಮಕುಮಾರನ ಭವಿಷ್ಯ ಹೇಳುವ ಸಾಮರ್ಥ್ಯವನ್ನು ನೋಡಿದರೆ, ಇಂದಿನ ಕಾಲದಲ್ಲಿ ಲಕ್ಷಗಟ್ಟಲೆ ದುಡಿಯಬಹುದಾಗಿತ್ತು. ಆದರೆ ರಾಮಕುಮಾರನಿಗೆ ಮಾತ್ರ ಭಿಕ್ಷೆಗಿಳಿಯುವ ಪರಿಸ್ಥಿತಿಯೊದಗಿತು. ಏನು ಮಾಡಿದರೂ ಅವನ ಆದಾಯ ಹೆಚ್ಚಲಿಲ್ಲ. ಅವನೂ ಆ ಬಗ್ಗೆ ಸಾಕಷ್ಟು ಆಲೋಚಿಸಿದ—ಪಾಠಶಾಲೆಯನ್ನು ಮುಚ್ಚಿಬಿಡುವುದೆ? ಬೇರಾವುದಾದರೂ ಕೆಲಸ ಹುಡುಕುವುದೆ? ಅವನಿಗೇನೂ ತೋಚಲಿಲ್ಲ. ಇದು ಹೀಗೆಯೇ ಮುಂದುವರಿದರೆ ತಾನು ಸಾಲದಲ್ಲಿ ಸಿಕ್ಕಿಬೀಳು ವುದೇ ಖಂಡಿತ ಎಂದು ಅವನಿಗನ್ನಿಸಿತು. ಆದರೇನು ಮಾಡುವುದು? ಅವನು ಚಿಕ್ಕಂದಿನಿಂದಲೂ ಕಲಿತದ್ದು ಅಷ್ಟೆ—ಸಂಸ್ಕೃತ ಪಾಠ ಹೇಳುವುದು, ಪೌರೋಹಿತ್ಯ ಮಾಡುವುದು ಹಾಗೂ ಜ್ಯೋತಿಷ ಹೇಳುವುದು. ಈಗ ಕಾಲ ಬದಲಾಯಿತೆಂದು ಹೊಸ ವಿದ್ಯೆಯೊಂದನ್ನು ಕಲಿತು ಸಂಪಾದನೆಗೆ ಇಳಿಯಲು ಅವನಿಂದಾದೀತೆ? ಅಂಥದೇನನ್ನಾದರೂ ಒಂದು ವೇಳೆ ಕಲಿತರೂ, ತನ್ನ ದೈನಂದಿನ ಪೂಜಾದಿ ಕರ್ತವ್ಯಗಳನ್ನು ನೆರವೇರಿಸಲು ಸಮಯವುಳಿದೀತೆ? ರಾಮಕುಮಾರ ಚಿಂತೆಗಳ ಹೊಯ್ದಾಟದಲ್ಲಿ ಸಿಲುಕಿ ನಲುಗಿದ. ಕೊನೆಗೆ 'ಎಲ್ಲವನ್ನೂ ರಘುವೀರ ತನಗೆ ಹೇಗೆ ಬೇಕೋ ಹಾಗೆ ಮಾಡಿಸಲಿ' ಎಂದು ನಿರ್ಧರಿಸಿ, ಚಿಂತೆಗಳನ್ನೆಲ್ಲ ದೂರಕ್ಕಟ್ಟಲು ಪ್ರಯತ್ನಿಸಿದ; ತಾನು ಇಷ್ಟು ದಿನ ಮಾಡುತ್ತಿದ್ದುದನ್ನೇ ಮುಂದುವರಿಸಿಕೊಂಡು ಹೋಗಲು ಮನಮಾಡಿದ. ರಾಮಕುಮಾರ ತುಂಬ ಸಾತ್ವಿಕ ವ್ಯಕ್ತಿ, ಅಲ್ಪತೃಪ್ತ. ಆದ್ದರಿಂದ ಅವನಲ್ಲಿ ಅಂತಹ ಮುನ್ನುಗ್ಗಿ ಹೋಗುವ ಗುಣ ಇಲ್ಲದುದು ಸಹಜವೇ. ಆದರೆ ಈ ನಡುವೆ ಭಗವದಿಚ್ಛೆಯಂತೆ, ಅವನನ್ನು ಆ ಅನಿಶ್ಚಿತತೆಯಿಂದ ಪಾರುಮಾಡಿ, ಅವನ ಚಿಂತೆಗಳನ್ನೆಲ್ಲ ದೂರ ಮಾಡುವಂತಹ ಘಟನೆಯೊಂದು ನಡೆಯಿತು.

೧೮

# ಲೀಲಾಕ್ಷೇತ್ರದ ಉದಯ

ಅಂದಿನ ಭಾರತದ ರಾಜಧಾನಿ ಕಲ್ಕತ್ತಾ ಮಹಾನಗರ. ಜಾನ್‌ಬಜಾರ್ ಎಂಬುದು ಆ ನಗರದ ದಕ್ಷಿಣ ದಿಕ್ಕಿನ ಒಂದು ಪ್ರದೇಶ. ರಾಸಮಣಿ ಎಂಬ ಮಹಾ ಸಿರಿವಂತ ಮಹಿಳೆ ಅಲ್ಲಿ ವಾಸವಾಗಿದ್ದಳು. ಈಕೆಯ ಪತಿ ರಾಜಚಂದ್ರ ದಾಸ ಕೆಲವರ್ಷಗಳ ಹಿಂದೆ ತೀರಿಕೊಂಡಿದ್ದ. ಅಂದಿನಿಂದಲೂ ಇವಳೇ ಪತಿಯ ಆಸ್ತಿ ಯನ್ನು ನಿರ್ವಹಿಸುತ್ತ ಅದನ್ನು ಮತ್ತಷ್ಟು ಊರ್ಜಿತಗೊಳಿಸಿದ್ದಳು. ತನ್ನ ಸಿರಿವಂತಿಕೆ ಯಿಂದ, ಮತ್ತು ಅದಕ್ಕಿಂತ ಹೆಚ್ಚಾಗಿ ತನ್ನ ಸದ್ಗುಣಗಳಿಂದ ಕೀರ್ತಿವಂತಳಾಗಿದ್ದಳು, ಸರ್ವಜನ ಸಮ್ಮಾನಿತೆಯಾಗಿದ್ದಳು. ಆಕೆಯ ದೈವಭಕ್ತಿ, ಶಕ್ತಿ, ಸಾಹಸ, ಬುದ್ಧಿ ವಂತಿಕೆ, ಪ್ರತ್ಯುತ್ಪನ್ನಮತಿತ್ವ, ಮಿಗಿಲಾಗಿ ಬಡಜನರ ಬಗೆಗಿನ ಅನುಕಂಪೆ—ಇವು ಗಳಿಂದಾಗಿ ಆಕೆಯ ಹೆಸರು ಮನೆಮಾತಾಗಿತ್ತು. ಮಾತ್ರವಲ್ಲ ಅವಳೊಂದು ಜೀವಂತ ದಂತಕಥೆಯೇ ಆಗಿದ್ದಳು. ಸಂದರ್ಭ ಬಂದಾಗಲೆಲ್ಲ ಯಥೇಚ್ಛವಾಗಿ ಅನ್ನದಾನ, ಧನದಾನಾದಿಗಳನ್ನು ಮಾಡಿ ಬಡವರ ಭಾಗ್ಯದೇವತೆಯೆನಿಸಿದ್ದಳು. ಬಡವರಿಗೆ ಸಹಾಯವಾಗುವಂತಿದ್ದರೆ ಅವಳು ಏನನ್ನು ಮಾಡಲೂ ಸಿದ್ಧಳಾಗಿದ್ದಳು.

ಒಮ್ಮೆ ಕಂಪನಿ ಸರ್ಕಾರದ ಕಾಕದೃಷ್ಟಿ ಬಡ ಬೆಸ್ತರ ಮೇಲೆ ಬಿದ್ದಿತು. ಅವರು ಗಳಿಸಿದ ಪುಡಿಗಾಸಿನಲ್ಲೇ ಇಂತಿಷ್ಟು ಎಂದು ತೆರಿಗೆ ಹೇರಿತು. ಹೊಳೆ ನೀರಿಗೆ ದೊಣೆನಾಯಕನ ಅಪ್ಪಣೆಯೆಂದರೆ ಇದೇ ಅಲ್ಲವೆ ? ಆದರೇನು ಮಾಡುವುದು ? ಪಾರತಂತ್ರ್ಯದ ದುರವಸ್ಥೆ! ಅಂತೂ ಗಂಗೆಯ ದಡದಲ್ಲಿ ವಾಸವಾಗಿದ್ದ ಬೆಸ್ತರಿಗೆ ಒಳ್ಳೇ ಪೀಕಲಾಟ. ಅವರೆಲ್ಲ ರಾಣಿ ರಾಸಮಣಿಯ ಬಳಿಗೆ ಬಂದು ತಮ್ಮ ಗೋಳನ್ನು ಹೇಳಿಕೊಂಡರು. ರಾಣಿ ಎಲ್ಲವನ್ನೂ ಕೇಳಿ, "ಹೆದರಬೇಡಿ, ನಾನು ನೋಡಿಕೊಳ್ಳು ತ್ತೇನೆ" ಎಂದು ಭರವಸೆಯಿತ್ತಳು. ಬಳಿಕ ಅವಳು ಹೂಡಿದ ಉಪಾಯವಿಷ್ಟೆ: ಬೆಸ್ತರು ಮೀನು ಹಿಡಿಯುವ ನದೀ ಭಾಗವನ್ನು ಭಾರೀ ಹಣ ಕೊಟ್ಟು, ಅಲ್ಲಿ ಮೀನು ಹಿಡಿಯುವ ಏಕಸ್ವಾಮ್ಯ ಪಡೆದುಕೊಂಡಳು. ಇದನ್ನು ಕಂಡ ಸರ್ಕಾರ ಭಾವಿಸಿತು, ಬಹುಶಃ ರಾಣಿ ಬಹಳ ದೊಡ್ಡ ಮೀನಿನ ವ್ಯಾಪಾರಕ್ಕೆ ತೊಡಗಬಹುದು ಎಂದು. ಇದರಿಂದ ಸರ್ಕಾರಕ್ಕೆ ಸಂತೋಷವೇ ಆಯಿತು. ಏಕೆಂದರೆ, ರಾಣಿ ವ್ಯಾಪಾರಕ್ಕೆ ತೊಡಗಿದಳೆಂದರೆ ಭರ್ಜರಿಯಾಗೇ ಮಾಡುತ್ತಾಳೆ. ಇದರಿಂದ ಸರ್ಕಾರಕ್ಕೂ ಹೆಚ್ಚಿನ ಆದಾಯ. ಅಷ್ಟೊಂದು ಜನ ಬೆಸ್ತರಿಂದ ತೆರಿಗೆ ವಸೂಲಿ ಮಾಡುವ ತರಲೆಯೂ ತಪ್ಪಿದಂತಾಯಿತು —ಇದು ಅಧಿಕಾರಿಗಳ ಆಲೋಚನೆ.

ಆದರೆ ರಾಣಿ ಮಾಡಿದ್ದೇ ಬೇರೆ. ನದೀಭಾಗದ ಅಧಿಕಾರ ಪತ್ರ ಕೈಸೇರುತ್ತಲೇ ಹಲವೆಡೆಗಳಲ್ಲಿ ನದಿಗೆ ಅಡ್ಡವಾಗಿ ಭಾರೀ ಸರಪಣಿಗಳನ್ನು ಬಿಗಿಸಿದಳು. ಇದರ ಕೆಳಗೆ ಸಣ್ಣ ದೋಣಿಗಳು ಮಾತ್ರ ಹೋಗಬಹುದಾಗಿತ್ತು. ಪರಿಣಾಮವಾಗಿ ಸರ್ಕಾರದ ದೊಡ್ಡ ದೊಡ್ಡ ದೋಣಿಗಳು, ಜಹಜುಗಳು ನದಿಯಲ್ಲಿ ಸಾಗುವುದು ಅಸಾಧ್ಯವಾಯಿತು. ಸರ್ಕಾರ ರಾಣಿಯ ಈ ಕಾರ್ಯವನ್ನು ಪ್ರತಿಭಟಿಸಿತು. ರಾಣಿ ಶಾಂತವಾಗಿ ಸರ್ಕಾರಕ್ಕೊಂದು ಮಾತನ್ನು ಬರೆದು ಕಳಿಸಿದಳು: "ನಾನು ನದಿಯಲ್ಲಿ ಮೀನು ಹಿಡಿಯುವುದಕ್ಕಾಗಿ ನಿಮಗೆ ಭಾರೀ ಮೊಬಲಗನ್ನು ತೆತ್ತು ಈ ಭಾಗವನ್ನು ಗುತ್ತಿಗೆಗೆ ಹಿಡಿದಿದ್ದೇನೆ. ಈಗ ನಾನು ಅಲ್ಲಿ ಮಾಡಿದ ಸರಪಣಿ ಬಿಗಿದಿರುವ ಕಾರ್ಯ ಕಾನೂನುಬದ್ಧವಾಗಿಯೇ ಇದೆ. ಆ ದಾರಿಯಾಗಿ ನಿಮ್ಮ ದೋಣಿಗಳು, ಜಹಜುಗಳು ಸದಾ ಓಡಾಡುತ್ತಿದ್ದರೆ ಮೀನುಗಳು ಚೆಲ್ಲಾಪಿಲ್ಲಿಯಾಗಿ ಬೇರೆಡೆಗೆ ಓಡಿಹೋಗುತ್ತವೆ. ಇದರಿಂದ ನಾನು ನಷ್ಟಕ್ಕೆ ಗುರಿಯಾಗಬೇಕಾಗುತ್ತದೆ. ಆದ್ದರಿಂದ, ಸರಪಣಿಯನ್ನು ಹೇಗೆ ಬಿಚ್ಚಲಾದೀತು? ಆದರೆ ಒಂದು ಮಾತು: ನೀವು ನದಿಯಲ್ಲಿ ಮೀನು ಹಿಡಿಯುವ ತೆರಿಗೆಯನ್ನು ರದ್ದು ಮಾಡಿದಲ್ಲಿ ನಾನು ಸರಪಣಿಯನ್ನು ಬಿಚ್ಚಿಸುವ ವ್ಯವಸ್ಥೆ ಮಾಡುತ್ತೇನೆ. ಇಲ್ಲದಿದ್ದರೆ ನಾನು ಮೊಕದ್ದಮೆ ಹೂಡಬೇಕಾಗುತ್ತದೆ, ಸರ್ಕಾರ ನನಗೆ ತಕ್ಕ ದಂಡ ತೆರಬೇಕಾಗುತ್ತದೆ."

ಈ ಪತ್ರ ಪರಿಣಾಮ ಬೀರಿತು. ಬಡ ಮೀನುಗಾರರಿಗೆ ಉಪಕಾರವಾಗಲೆಂದೇ ರಾಣಿ ಈ ಉಪಾಯ ಹೂಡಿದಳೆಂದರಿತ ಸರ್ಕಾರ ಆಕೆಯ ಮಾತನ್ನು ಅಂಗೀಕರಿಸಿತು, ತೆರಿಗೆ ರದ್ದು ಮಾಡಿತು. ಬಡ ಬೆಸ್ತರು ಎಂದಿನಂತೆ ಸಂತೋಷದಿಂದ ಮೀನು ಹಿಡಿದು ಜೀವನ ಸಾಗಿಸಿದರು; ರಾಣಿಯನ್ನು ಕೊಂಡಾಡಿದರು.

ಅಂಬಿಗರ ಕುಲದಲ್ಲಿ ಹುಟ್ಟಿದವಳಾದರೂ ರಾಸಮಣಿ ತನ್ನ ಉದಾತ್ತ ಗುಣಗಳಿಂದಲೂ ಕಾರ್ಯಗಳಿಂದಲೂ ಜಾತಿ ಮತ ಭೇದವಿಲ್ಲದೆ—ಬ್ರಾಹ್ಮಣರೂ ಸೇರಿದಂತೆ—ಸಕಲ ಜನರ ಪ್ರೀತ್ಯಾದರಗಳಿಗೆ ಪಾತ್ರಳಾಗಿದ್ದಳು. ಮತ್ತು 'ರಾಣಿ' ಎಂಬ ತನ್ನ ಬಿರುದಿಗೆ ತಕ್ಕವಳಾಗಿದ್ದಳು. ರಾಸಮಣಿಗೆ ನಾಲ್ವರು ಹೆಣ್ಣುಮಕ್ಕಳು. ಮೊದಲ ಮೂವರಿಗೆ ಮದುವೆಯಾಗಿತ್ತು. ಮೂರನೆಯವಳೇ ಕರುಣಾಮಯಿ; ಈಕೆಯ ಗಂಡ ಮಥುರಾಮೋಹನ ವಿಶ್ವಾಸ. ಇವರಿಗೆ ಒಬ್ಬ ಮಗ. ಆದರೆ ಕರುಣಾಮಯಿ ಅಕಾಲಮರಣಕ್ಕೀಡಾದಳು. ಸುಂದರಾಂಗನೂ ಗುಣವಂತನೂ ಆದ ಅಳಿಯ ಮಥುರಾನಾಥನನ್ನು ದೂರಮಾಡಿಕೊಳ್ಳಲು ರಾಸಮಣಿಯ ಮನಸ್ಸು ಒಪ್ಪಲಿಲ್ಲ. ಆದ್ದರಿಂದ ಆಕೆ ತನ್ನ ಕೊನೆಯ ಮಗಳಾದ ಜಗದಂಬಾಳನ್ನೇ ಅವನಿಗೆ ಕೊಟ್ಟು ಮದುವೆ ಮಾಡಿ, ತನ್ನೊಂದಿಗೇ ಇಟ್ಟುಕೊಂಡಳು.

ರಾಣಿ ರಾಸಮಣಿ ಕಾಳಿಕಾದೇವಿಯ ಪರಮಭಕ್ತೆ. ಆಕೆ ತನ್ನ ಆಸ್ತಿಯ ಮೊಹರಿನ ಮೇಲೆ "ಕಾಳೀಪದ ಅಭಿಲಾಷಿಣಿ ಶ್ರೀಮತಿ ರಾಣಿ ರಾಸಮಣಿ ದಾಸಿ" ಎಂದು ಬರೆಸಿದ್ದಳು.

ಬಹು ಕಾಲದಿಂದಲೂ ರಾಣಿಯ ಮನಸ್ಸಿನಲ್ಲಿ ಒಂದು ಮಹದಭಿಲಾಷೆ ಇತ್ತು. ತನ್ನ ಪತಿಯೊಂದಿಗೆ ಕಾಶೀ ಕ್ಷೇತ್ರವನ್ನೊಮ್ಮೆ ಸಂದರ್ಶಿಸಿ ವಿಶ್ವೇಶ್ವರ–ಅನ್ನ

ಪೂರ್ಣೆಯರ ದರ್ಶನ ಪಡೆದು ವಿಶೇಷ ಪೂಜೆ ಸಲ್ಲಿಸಬೇಕೆಂಬುದೇ ಆ ಅಭಿಲಾಷೆ. ಈ ಉದ್ದೇಶಕ್ಕಾಗಿಯೇ ಆಕೆ ಬಹಳಷ್ಟು ಹಣ ಕೂಡಿಟ್ಟುಕೊಂಡಿದ್ದಳು. ಆದರೆ ಆ ಹೊತ್ತಿಗೆ ಆಕೆಯ ಗಂಡ ಹಠಾತ್ತನೆ ನಿಧನ ಹೊಂದಿದ್ದರಿಂದ ಆಸ್ತಿಯನ್ನೆಲ್ಲ ನಿಭಾಯಿಸುವ ಹೊಣೆ ಅವಳ ಮೇಲೆ ಬಿದ್ದಿತು. ವಿಶಾಲವಾದ ಆಸ್ತಿಯ ವಹಿವಾಟನ್ನು ನೋಡಿಕೊಳ್ಳುವುದೇನು ಹುಡುಗಾಟವೆ? ಅದಕ್ಕೆ ಎಂತಹ ಚಾಕಚಕ್ಯತೆ, ದೂರದೃಷ್ಟಿ, ಬುದ್ಧಿವಂತಿಕೆಗಳಿರಬೇಕಾಗುತ್ತದೆ ಮತ್ತು ಎಷ್ಟು ಪರಿಶ್ರಮ–ಸಮಯ ಬೇಕಾಗುತ್ತದೆ ಎಂಬುದನ್ನು, ಬಲ್ಲವರೇ ಬಲ್ಲರು. ಇಂತಹ ಭಾರೀ ಹೊಣೆಗಾರಿಕೆ ಅವಳ ಹೆಗಲ ಮೇಲಿದ್ದುದರಿಂದ ಬಹಳ ದಿನಗಳವರೆಗೆ ಆಕೆಗೆ ತನ್ನ ಮನೋರಥವನ್ನು ಈಡೇರಿಸಿಕೊಳ್ಳುವ ಅವಕಾಶ ಲಭ್ಯವಾಗಲಿಲ್ಲ. ಬರಬರುತ್ತ ಅವಳ ಅಳಿಯಂದಿರು ಆಸ್ತಿಯ ಮೇಲ್ವಿಚಾರಣೆ ನೋಡಿಕೊಳ್ಳುವ ವಿಷಯದಲ್ಲಿ ಸಾಕಷ್ಟು ಪರಿಣತರಾದರು. ಕೊನೇ ಅಳಿಯ ಮಥುರಾನಾಥನಂತೂ ಆಕೆಯ ಬಲಗೈ ಬಂಟನೇ ಆದ. ಆದ್ದರಿಂದ ಇದೀಗ ಸೂಕ್ತ ಸಮಯ ಒದಗಿದೆಯೆಂದು ಭಾವಿಸಿಗಲರ್ಲಿರಲ್ಲಿ ರಾಣಿ ರಾಸಮಣಿ ಮತ್ತೊಮ್ಮೆ ಕಾಶೀಯಾತ್ರೆಗೆ ಅನುವಾದಳು.

ಯಾತ್ರೆಗೆ ಸಿದ್ಧತೆಗಳೆಲ್ಲ ಮುಗಿದುವು. ಮರುದಿನ ಬೆಳಗ್ಗೆ ಹೊರಡಬೇಕು. ಸುಮಾರು ಒಂದು ನೂರು ಚಿಕ್ಕ–ದೊಡ್ಡ ದೋಣಿಗಳು ಹಲವಾರು ಸಾಮಗ್ರಿಗಳನ್ನು ತುಂಬಿಕೊಂಡು ಸಿದ್ಧವಾಗಿ ನಿಂತಿದ್ದವು. ಆ ರಾತ್ರಿ ರಾಸಮಣಿಗೆ ಸ್ವಪ್ನದಲ್ಲಿ ತನ್ನ ಇಷ್ಟದೇವತೆಯಾದ ಕಾಳಿಕಾಂಬೆಯ ದರ್ಶನಲಾಭವಾಯಿತು. ದೇವಿಯು ರಾಸಮಣಿಗೆ ಒಂದು ನಿರ್ದೇಶನ ನೀಡಿದಳು: "ನೀನು ಕಾಶಿಗೆ ಹೋಗಬೇಕಾದ ಅಗತ್ಯವಿಲ್ಲ. ಅದರ ಬದಲಾಗಿ ಭಾಗೀರಥಿಯ ದಡದ ಒಂದು ಸುಂದರ ಸ್ಥಳದಲ್ಲಿ ನನ್ನ ಶಿಲಾವಿಗ್ರಹವೊಂದನ್ನು ಪ್ರತಿಷ್ಠಾಪಿಸು; ಮತ್ತು ಅಲ್ಲಿ ನನಗೆ ಪ್ರತಿದಿನವೂ ಪೂಜೆ, ಅನ್ನನೈವೇದ್ಯ ನಡೆಯುವಂತೆ ವ್ಯವಸ್ಥೆ ಮಾಡು. ನಾನು ಆ ಪ್ರತಿಮೆಯಲ್ಲಿ ಪ್ರತಿಷ್ಠಿತಳಾಗಿ ನಿನ್ನ ಪೂಜೆಯನ್ನು ಸ್ವೀಕರಿಸುತ್ತೇನೆ."

ಪರಮಭಕ್ತೆಯಾದ ರಾಸಮಣಿ, ದೇವಿಯ ದರ್ಶನದಿಂದ, ಆಕೆಯ ನಿರ್ದೇಶನದಿಂದ ಅತ್ಯಾನಂದಿತಳಾದಳು. ಮರುದಿನವೇ ಆಕೆ ತನ್ನ ಸ್ವಪ್ನದರ್ಶನದ ವಿಷಯವನ್ನು ಎಲ್ಲರಿಗೂ ತಿಳಿಸಿದಳು; ಕಾಶೀಯಾತ್ರೆಯನ್ನು ರದ್ದುಪಡಿಸಿದಳು. ತಾನು ಕೂಡಿಟ್ಟ ಹಣವನ್ನು ದೇವಾಲಯ ಸ್ಥಾಪನೆಯ ಪವಿತ್ರ ಕಾರ್ಯಕ್ಕೆ ವಿನಿಯೋಗಿಸಲು ತೀರ್ಮಾನಿಸಿದಳು.

ಹೀಗೆ ರಾಣಿ ರಾಸಮಣಿಗೆ ದೇವಿಯ ಮೇಲೆ ದೀರ್ಘಕಾಲದಿಂದಲೂ ಇದ್ದ ಭಕ್ತಿ ಇದೀಗ ಒಂದು ಸಾಕಾರರೂಪವನ್ನು ಪಡೆಯಲಿತ್ತು. ಸ್ವಲ್ಪವೂ ವಿಳಂಬ ಮಾಡದೆ ಆಕೆ ಈ ಮಹತ್ಕಾರ್ಯವನ್ನು ಪ್ರಾರಂಭಿಸಿಯೇ ಬಿಟ್ಟಳು. ಗಂಗೆಯ ಪಶ್ಚಿಮ ದಂಡೆಯ ಪ್ರದೇಶವು ವಾರಾಣಸಿಗೆ ಸಮನಾದ ಮಹಿಮೆಯುಳ್ಳದ್ದು ಎಂಬ ನಂಬಿಕೆಯಿಂದ ಆಕೆ ಅಲ್ಲಿನ ಬಾಲಿ, ಉತ್ತರಪಾರಾ ಮೊದಲಾದ ಪ್ರದೇಶಗಳಲ್ಲಿ ನಿವೇಶನಕ್ಕಾಗಿ ಹುಡುಕಾಟ ನಡೆಸಿದಳು. ಅದಕ್ಕಾಗಿ ಅವಳು ಎಷ್ಟೇ ಹಣವನ್ನಾದರೂ ಖರ್ಚು ಮಾಡಲು ಸಿದ್ಧಳಿದ್ದರೂ ಸೂಕ್ತ ನಿವೇಶನವೊಂದು ಸಿಗಲೇ

ಇಲ್ಲ. ಕೊನೆಗೆ ಗಂಗೆಯ ಪೂರ್ವ ತೀರದ ಮೇಲಿನ ದಕ್ಷಿಣೇಶ್ವರ ಎಂಬ ಸ್ಥಳದಲ್ಲಿ ಸುಮಾರು ಮೂವತ್ತು ಎಕರೆ ವಿಸ್ತಾರವಾದ ಸ್ಥಳವೊಂದು ದೊರೆಯಿತು.

ಈ ನಿವೇಶನದ ಒಂದು ಭಾಗ ಒಬ್ಬ ಆಂಗ್ಲನಿಗೆ ಸೇರಿತ್ತು. ಇನ್ನೊಂದು ಭಾಗದಲ್ಲಿ ಮುಸಲ್ಮಾನ ಸಂತನೊಬ್ಬನ ಗೋರಿಯಿತ್ತು. ಈ ಭಾಗ ಆಮೆಯ ಬೆನ್ನಿನ ಆಕಾರದಲ್ಲಿತ್ತು. ತಂತ್ರಗಳ ಪ್ರಕಾರ, ಇಂತಹ ಸ್ಮಶಾನವು ಶಕ್ತಿಯ ಆವಾಹನೆಗೂ ಉಪಾಸನೆಗೂ ಅತ್ಯಂತ ಪ್ರಶಸ್ತ. ಈ ನಿವೇಶನ ದೊರೆತದ್ದು ದೈವಸಂಕಲ್ಪದಿಂದಲೇ ಏನೋ ಎಂಬಂತಿತ್ತು.

ನಿರ್ಮಾಣಕಾರ್ಯ ಭರದಿಂದ ಆರಂಭವಾಯಿತು. ಒಂಬತ್ತು ಗೋಪುರಗಳನ್ನೊಳಗೊಂಡ ಕಾಳಿಯ ಮುಖ್ಯ ದೇವಾಲಯ; ಅಲ್ಲದೆ ಇತರ ಅನೇಕ ಪುಟ್ಟ ದೇವಾಲಯಗಳು. ಇವುಗಳಿಗೆ ಸೇರಿದಂತೆ ಒಂದು ದೊಡ್ಡ ಉದ್ಯಾನವನ. ರಾಸಮಣಿ ಹಣವನ್ನು ನೀರಿನಂತೆ ಖರ್ಚು ಮಾಡಿದಳು. ಸುಮಾರು ಐದು ವರ್ಷಗಳ ಕಾಲ ನಿರ್ಮಾಣಕಾರ್ಯ ನಿರಂತರವಾಗಿ ಸಾಗಿತು. ದೇವಿಯ ವಿಗ್ರಹದ ಕೆತ್ತನೆಯ ಕೆಲಸ ಪ್ರಾರಂಭವಾದಂದಿನಿಂದ ರಾಸಮಣಿ ಶಾಸ್ತ್ರವಿಧಿಯಂತೆ ಕಠಿಣ ವ್ರತಗಳನ್ನಾರಂಭಿಸಿದಳು. ದಿನಕ್ಕೆ ಮೂರು ಬಾರಿ ಸ್ನಾನ ಮಾಡುತ್ತಿದ್ದಳು; ಶಕ್ತ್ಯನುಸಾರ ಜಪ–ಪೂಜೆಗಳನ್ನು ಮಾಡುತ್ತಿದ್ದಳು. ಆಹಾರಕ್ಕೆ ಹವಿಷ್ಯಾನ್ನ ಮಾತ್ರ. ಮಲಗುವುದು ಬರಿನೆಲದ ಮೇಲೆ. ದೇವಾಲಯದ ಕಾರ್ಯ ಮುಗಿಯುತ್ತ ಬಂದಿತು. ವಿಗ್ರಹವೂ ಸಿದ್ಧವಾಯಿತು. ವಿಗ್ರಹ ಯಾವ ಕಾರಣದಿಂದಲೂ ಘಾಸಿಗೊಳ್ಳಬಾರದೆಂದು ಅದನ್ನು ಎಚ್ಚರಿಕೆಯಿಂದ ಪೆಟ್ಟಿಗೆಯಲ್ಲಿ ಮುಚ್ಚಿರಿಸಿದಳು. ದೇವಾಲಯ ಪೂರ್ಣಗೊಂಡ ಮೇಲೆ ಸಾವಧಾನವಾಗಿ ಸುಮುಹೂರ್ತದಲ್ಲಿ ಶಾಸ್ತ್ರೋಕ್ತವಾಗಿ ಪ್ರತಿಷ್ಠಾಪನೆ ಮಾಡುವುದೆಂದು ನಿಶ್ಚಯಿಸಿ ರಾಣಿ ನಿಶ್ಚಿಂತೆಯಿಂದಿದ್ದಳು.

ಆದರೆ ಈ ನಡುವೆ ಅವಳಲ್ಲಿ ಒಂದು ಆಲೋಚನೆ ತಾನೇತಾನಾಗಿ ಮೇಲೆದ್ದು ಬಂದಿತು —'ಈ ಜೀವನವೆಂಬುದು ತುಂಬ ಅನಿಶ್ಚಿತವಾದದ್ದು. ಯಾವಾಗ ಏನಾಗುತ್ತದೆಯೋ ಹೇಳಬಲ್ಲವರಿಲ್ಲ. ದೇವಾಲಯವನ್ನು ಕಟ್ಟುವುದಕ್ಕೇ ಇಷ್ಟು ದಿನವಾದರೆ ಇನ್ನು ಜಗನ್ಮಾತೆಯ ಪ್ರತಿಷ್ಠಾಪನೆ ನನ್ನ ಜೀವಿತಕಾಲದಲ್ಲೇ ಆಗುವುದೋ ಇಲ್ಲವೊ ! ಆದ್ದರಿಂದ ಇನ್ನು ತಡಮಾಡದೆ ಪ್ರತಿಷ್ಠಾಪನೆಯನ್ನು ಮಾಡಿ ಮುಗಿಸಿಬಿಡುವುದು ಒಳ್ಳೆಯದು' ಎಂದು. ಈ ವೇಳೆಗೆ ಸರಿಯಾಗಿ ಒಂದು ಆಶ್ಚರ್ಯಕರ ಸಂಗತಿ ನಡೆಯಿತು. ಯಾರೋ ಒಬ್ಬರು ವಿಗ್ರಹವನ್ನು ಸುರಕ್ಷಿತವಾಗಿಟ್ಟಿದ್ದ ಪೆಟ್ಟಿಗೆಯನ್ನು ಒಂದು ದಿನ ಆಕಸ್ಮಿಕವಾಗಿ ತೆರೆದು ನೋಡಿದಾಗ ಒಳಗಿದ್ದ ವಿಗ್ರಹ ಬೆವತಿತ್ತು ! ರಾಣಿಗೆ ಸುದ್ದಿ ಹೋಯಿತು. ಈಗ ಅವಳು ನಿಜವೆಂದು ನಂಬುವುದೇ ? ಅಥವಾ ಒಳಗೆ ಅಕಸ್ಮಾತ್ತಾಗಿ ಸೇರಿಕೊಂಡ ನೀರಿನ ಆವಿ ಇದ್ದಿರಬಹುದು ಎಂದು ಭಾವಿಸಿ ಸುಮ್ಮನಾಗುವುದೇ ? ಆದರೆ ಈ ಸಂದಿಗ್ಧಕ್ಕೆ ಅವಕಾಶವೇ ಉಂಟಾಗಲಿಲ್ಲ. ಏಕೆಂದರೆ, ಅದೇ ರಾತ್ರಿ, ರಾಣಿಗೆ ದೇವಿ ದರ್ಶನವಿತ್ತು ನುಡಿದಳು —"ಇನ್ನೆಷ್ಟು ದಿನ ನನ್ನನ್ನು ಹೀಗೇ ಬಂಧನದಲ್ಲಿಡುವೆ ? ನನಗೆ ಉಸಿರುಕಟ್ಟಿದಂತಾಗುತ್ತಿದೆ. ಇನ್ನು ತಡಮಾಡದೆ ಸಾಧ್ಯವಾದಷ್ಟು ಬೇಗ ಪ್ರತಿಷ್ಠೆ ಮಾಡು."

ದೇವಿ ಹೀಗೆ ಆಜ್ಞೆ ಮಾಡಿದಾಗ ರಾಸಮಣಿ ಗಾಬರಿಗೊಂಡಳು. ಕೂಡಲೇ ಪಂಚಾಂಗವನ್ನು ತರಿಸಿ ಶುಭದಿನವನ್ನು ಹುಡುಕಿಸಿದಳು. ಆದರೆ ಎಷ್ಟೋ ತಿಂಗಳ ವರೆಗೆ, ಎಂದರೆ 'ಸ್ನಾನಜಾತ್ರೆ'ಯ ಹುಣ್ಣಿಮೆಯವರೆಗೂ ಯಾವ ಶುಭದಿನವೂ ಸಿಗಲಿಲ್ಲ. ಆದ್ದರಿಂದ ೧೮೫೫ರ ಮೇ ೩೧ರಂದು, ಎಂದರೆ ಸ್ನಾನಯಾತ್ರೆಯ ಶುಭದಿನದಂದು, ಪ್ರತಿಷ್ಠಾಪನೆಯೆಂದು ಗೊತ್ತು ಮಾಡಿದರು.

## ವಿಚಿತ್ರ ಸನ್ನಿವೇಶ

ಜಗನ್ಮಾತೆಗೆ ಪ್ರತಿದಿನವೂ ಅನ್ನನೈವೇದ್ಯವನ್ನು ಮಾಡಬೇಕೆಂಬ ಉತ್ಕಟೇಚ್ಛೆ ರಾಸಮಣಿಯ ಮನದಲ್ಲಿತ್ತು. ಅಲ್ಲದೆ ಅಂದು ಕನಸಿನಲ್ಲಿ ದೇವಿ ನೀಡಿದ ನಿರ್ದೇಶನವೂ ಅದೇ ಅಲ್ಲವೆ! ರಾಸಮಣಿ ಆಲೋಚಿಸಿದಳು, 'ದೇವಸ್ಥಾನ–ವಿಗ್ರಹಗಳೇನೋ ನನ್ನ ಇಷ್ಟದ ಪ್ರಕಾರವೇ ನಿರ್ಮಾಣಗೊಂಡಿವೆ. ಇನ್ನು ಆಕೆಯ ಪೂಜೆಗಾಗಿಯೇ ನಾನು ಪ್ರತ್ಯೇಕವಾಗಿ ನಿಧಿಯನ್ನೂ ಮಾಡಲಿದ್ದೇನೆ. ಆದರೆ ಇಷ್ಟೆಲ್ಲ ಆಗಿಯೂ ನಾನು ಜಗನ್ಮಾತೆಗೆ ನನ್ನ ಹೃದಯ ತಣಿಯುವಂತೆ ಸೇವೆಗೈಯದಿದ್ದರೆ, ಆಕೆಗೆ ಅನ್ನನೈವೇದ್ಯ ಮಾಡದಿದ್ದರೆ, ನನ್ನೆಲ್ಲ ಶ್ರಮವೂ ವ್ಯರ್ಥವಾದಂತೆಯೇ. ಹೆಚ್ಚೆಂದರೆ ನನಗದರಿಂದ ಒಂದಿಷ್ಟು ಹೆಸರು–ಕೀರ್ತಿ ಬರಬಹುದು. 'ಆಹಾ! ರಾಣಿ ರಾಸಮಣಿ ಎಂಥಾ ಭವ್ಯವಾದ ದೇವಾಲಯವನ್ನು ಕಟ್ಟಿಸಿ ಹೋಗಿದ್ದಾಳೆ!' ಎಂದು ಜನ ಹೊಗಳಬಹುದು. ಆದರೆ ಅದರಿಂದ ಪ್ರಯೋಜನವೇನಾಯಿತು?' ಹೀಗೆ ಭಾವಿಸಿದ ರಾಸಮಣಿ ವ್ಯಾಕುಲಹೃದಯದಿಂದ ದೇವಿಯನ್ನು ಪ್ರಾರ್ಥಿಸಿಕೊಂಡಳು, "ಅಮ್ಮಾ! ಜಗನ್ಮಾತೆ! ಇತರ ವಿಷಯಗಳಲ್ಲಿ ನೀನು ನನಗೆ ಸಾಕಷ್ಟು ಹೆಸರು ಕೀರ್ತಿ ಕೊಟ್ಟಿರುವೆ. ಆದರೆ ಈ ದೇವಸ್ಥಾನವನ್ನು ಕಟ್ಟಿಸಿದ್ದಕ್ಕೆ ಮಾತ್ರ ದಯವಿಟ್ಟು ನನಗೆ, ಅಂತಹ ಕೆಲಸಕ್ಕೆ ಬಾರದ ವಸ್ತುವನ್ನು ಕೊಟ್ಟು ಮೋಸಮಾಡಬೇಡ. ನನ್ನ ಹೆಸರಿಗೆ ಕೀರ್ತಿ ಅಂಟಿಕೊಳ್ಳುವುದೋ ಇಲ್ಲವೊ, ನನಗೆ ಅದರ ಗಣನೆಯಿಲ್ಲ. ಆದರೆ ಕೃಪೆಮಾಡಿ ನೀನು ಇಲ್ಲಿಯೇ ನೆಲೆ ನಿಂತು ಈ ದೀನ ದಾಸಿಯ ಹೃದಯದ ಅಭಿಲಾಷೆಯನ್ನು ಈಡೇರಿಸು! ಇದೊಂದೇ ನನ್ನ ಬೇಡಿಕೆ." ದೇವಿಯನ್ನು ಪ್ರತಿಷ್ಠಾಪಿಸಿ ತನ್ಮೂಲಕ ತಾನು ಸಾಮಾಜಿಕರ ನಾಲ್ಕು ಹೊಗಳಿಕೆಯ ಮಾತುಗಳಿಗೆ ಬಾಯ್ಬಿಟ್ಟುಕೊಂಡು ಕುಳಿತಿರದೆ ದೇವಿಯ ವಾತ್ಸಲ್ಯಪೂರ್ಣ ಕೃಪೆಗೆ ಪಾತ್ರಳಾಗುವುದೇ ಹೆಚ್ಚು ಶ್ರೇಯಸ್ಕರ ಎಂದು ಭಾವಿಸಿದ ರಾಸಮಣಿಯ ವಿವೇಕ ಶ್ಲಾಘನೀಯ!

ಆದರೆ ಶೂದ್ರಳಾದ ರಾಸಮಣಿ ಪ್ರತಿಷ್ಠಾಪಿಸಿದ ದೇವಾಲಯದಲ್ಲಿ ಅನ್ನವನ್ನು ನೈವೇದ್ಯ ಮಾಡುವುದಕ್ಕೆ ಸಮಾಜದ ಅನುಮೋದನೆಯಿರಲಿಲ್ಲ. ಅದು ಸಂಪ್ರದಾಯವಿರುದ್ಧವಾದುದು. ಈ ವಿಷಯ ತಿಳಿದು ಬಂದಾಗ ರಾಸಮಣಿಯ ಹೃದಯಕ್ಕಾದ ವೇದನೆ ಅಪಾರ. ಏಕೆಂದರೆ ಮುಂದೆ ಈ ದೇವಾಲಯಕ್ಕೆ ಬಂದ ಬಂದವರಿಗೆಲ್ಲ—ಅದರಲ್ಲೂ ಮುಖ್ಯವಾಗಿ, ಸಾಧುಸಂತರಿಗೆ, ಬಡಬಗ್ಗರಿಗೆ ಹಾಗೂ ಯಾತ್ರಾರ್ಥಿಗಳಿಗೆ—ಹೊಟ್ಟೆ ತುಂಬ ಉಣಬಡಿಸಬೇಕು ಎಂಬ ಆಸೆ ಅವಳ

ಮನದಲ್ಲಿತ್ತು. ತಾನು ಅನ್ನನೈವೇದ್ಯವನ್ನೇ ಮಾಡುವಂತಿಲ್ಲ ಎಂದಾದರೆ ಬಂದವರಿಗೆ ಬಡಿಸುವುದೇನನ್ನು? ಇದನ್ನು ಭಾವಿಸಿದಂತೆಲ್ಲ ಅವಳಲ್ಲಿ ದುಃಖ ಉಕ್ಕಿತು. ತನ್ನ ನೈವೇದ್ಯವನ್ನು ದೇವಿ ಸ್ವೀಕರಿಸುವಳೋ ಇಲ್ಲವೋ ಎಂಬುದರ ಬಗ್ಗೆ ಆಕೆಗಂತೂ ಸಂದೇಹವಿರಲಿಲ್ಲ. ಅಷ್ಟೇ ಅಲ್ಲ, ತನ್ನ ಇಷ್ಟದೇವತೆಗೆ ತನ್ನಿಚ್ಛೆಯಂತೆ ಪೂಜೆ–ನೈವೇದ್ಯ ಮಾಡುವ ಆಲೋಚನೆ ಬಂದೊಡನೆ ಆಕೆಗೆ ಅವರ್ಣನೀಯ ಆನಂದ ವಾಗುತ್ತಿತ್ತು. ಅಂತರಾತ್ಮಕ್ಕೆ ಒಪ್ಪಿಗೆಯಾಗುವ ಕಾರ್ಯವನ್ನು ಶಾಸ್ತ್ರಗಳೇಕೆ ಒಪ್ಪುವುದಿಲ್ಲ? ಈ ಶಾಸ್ತ್ರಗಳನ್ನು ಬರೆದವರಾದರೂ ಯಾರು? ಶಾಸ್ತ್ರಗಳ ಕರ್ತೃವೊಬ್ಬ ಹೃದಯಹೀನನೆ? ಅಥವಾ ಸ್ವಾರ್ಥಪ್ರೇರಿತನಾಗಿ ಅವನು ಉಚ್ಚ ವರ್ಣದವರಿಗೆ ದೇವಿಯ ಮೇಲೆ ಹೆಚ್ಚಿನ ಹಕ್ಕನ್ನು ಬರೆದಿಟ್ಟನೆ? ಹಾಗಿದ್ದಲ್ಲಿ ತನಗೆ ಆ ಶಾಸ್ತ್ರಗಳಿಂದ ಏನೂ ಆಗಬೇಕಾಗಿಲ್ಲ. ಬದಲಾಗಿ, ತಾನು ತನ್ನ ಹೃದಯದ ಮಾತನ್ನೇ ಕೇಳು ವವಳು. ಆದರೆ.... ತಾನೊಂದು ವೇಳೆ ತನ್ನಿಚ್ಛೆಯಂತೆಯೇ ದೇವಿಗೆ ನೈವೇದ್ಯ ವನ್ನೇನೋ ಮಾಡಿಸಬಹುದು. ಆಗ, ಪೂಜ್ಯರಾದ ಬ್ರಾಹ್ಮಣರು–ಸಜ್ಜನರು ಮಾತ್ರ ದೇವಸ್ಥಾನಕ್ಕೂ ಬರಲಾರರು, ಪ್ರಸಾದವನ್ನೂ ತೆಗೆದುಕೊಳ್ಳಲಾರರು. ಅದು ಇನ್ನಷ್ಟು ಕೆಟ್ಟದ್ದಲ್ಲವೆ? ಆಗ ತನಗೆ ಇನ್ನಷ್ಟು ವೇದನೆಯಾಗುವುದಿಲ್ಲವೆ?

ಹೀಗೆ ಉಭಯ ಸಂಕಟಕ್ಕೆ ಸಿಲುಕಿದ ರಾಣಿ ರಾಸಮಣಿ ಮತ್ತೊಂದು ಆಲೋಚನೆ ಮಾಡಿದಳು. ಈ ವಿಷಯದಲ್ಲಿ ಪ್ರಾಜ್ಞರಾದ ಪಂಡಿತರ ಅಭಿಪ್ರಾಯ ವನ್ನೇ ಕೇಳಿದರೆ ಹೇಗೆ? ಅವರಲ್ಲಿ ಯಾರಾದರೂ ಒಬ್ಬರು ಒಂದು ದಾರಿಯನ್ನು ತೋರಬಹುದು...

ಕೂಡಲೇ ರಾಸಮಣಿ, ಕಲ್ಕತ್ತದ ಹಾಗೂ ಸುತ್ತಮುತ್ತಲಿನ ಅನೇಕ ಹೆಸರಾಂತ ಪಂಡಿತರಿಗೆ ತನ್ನ ಪ್ರಶ್ನೆಯನ್ನು ಕಳಿಸಿಕೊಟ್ಟಳು — 'ಶೂದ್ರಳಾದ ತಾನು ಪ್ರತಿಷ್ಠಾಪಿಸ ಲಿರುವ ದೇವಿಗೆ ಅನ್ನನೈವೇದ್ಯ ಮಾಡಬಹುದೆ? ಅದಕ್ಕೆ ಶಾಸ್ತ್ರಸಮ್ಮತಿಯಿದೆಯೆ? ಅಥವಾ ಯಾವುದಾದರೂ ಶಾಂತಿ–ಪರಿಹಾರ ಕಾರ್ಯ ಮಾಡಿಸಿದರೆ ಆಗ ಬಹುದೆ?' ಎಂದು. ತಮ್ಮ ಅಭಿಪ್ರಾಯವನ್ನು ಬರೆದು ಕಳಿಸುವಂತೆ ಆಕೆ ವಿನಂತಿಸಿ ಕೊಂಡಿದ್ದಳು.

ಉತ್ತರಗಳೇನೋ ಬಂದುವು. ಆದರೆ, ಅವಳೆಣಿಸಿದ್ದಂತೆಯೇ, ಒಂದಾದರೂ ಆಕೆಯ ಮನಸ್ಸಿಗೊಪ್ಪುವಂತಿರಲಿಲ್ಲ; ಆಕೆಯ ಅಭಿಲಾಷೆಯನ್ನು ಈಡೇರಿಸಿಕೊಡು ವಂತಿರಲಿಲ್ಲ. ಹಿರಿಯ–ಕಿರಿಯ ಪಂಡಿತರೆಲ್ಲರ ಅಭಿಪ್ರಾಯಗಳೂ ಆಕೆಯ ಆಶೆಗೆ ತಣ್ಣೀರೆರಚುವಂತಿದ್ದುವು. ಪ್ರತಿಷ್ಠಾಪನೆಯ ದಿನ ಹತ್ತಿರ ಹತ್ತಿರಕ್ಕೆ ಬಂದಿತು. ಇನ್ನು ತನ್ನ ಹೃದಯದ ಬಯಕೆ ಮಣ್ಣುಗೂಡಿದಂತೆಯೇ ಎಂದು ಭಾವಿಸಿ ರಾಣಿ ಹತಾಶಳಾದಳು. ಆ ವೇಳೆಗೆ ಝಾಮಾಪುಕುರದ ಒಂದು ಸಂಸ್ಕೃತಪಾಠಶಾಲೆ ಯಿಂದ ಚೀಟಿ ಬಂದಿತು. ಅದರಲ್ಲಿ ಹೀಗೆ ಬರೆದಿತ್ತು: "ರಾಣಿಯವರು ದೇವಾಲಯ ವನ್ನು ಬ್ರಾಹ್ಮಣರೊಬ್ಬರ ಹೆಸರಿಗೆ ಹಸ್ತಾಂತರಿಸಿ, ಆ ಬ್ರಾಹ್ಮಣರು ದೇವಿಯನ್ನು ಪ್ರತಿಷ್ಠಾಪನೆ ಮಾಡಿದರೆ ಮತ್ತು ಅನ್ನನೈವೇದ್ಯ ನೀಡುವ ವ್ಯವಸ್ಥೆ ಮಾಡಿಸಿದರೆ ಶಾಸ್ತ್ರವಾಕ್ಯವನ್ನು ಪರಿಪಾಲಿಸಿದಂತಾಗುತ್ತದೆ. ಆ ಬಳಿಕ ಬ್ರಾಹ್ಮಣರಾಗಲಿ ಇತರ

ಉನ್ನತ ವರ್ಗದವರಾಗಲಿ ದೇವಸ್ಥಾನದಲ್ಲಿ ಪ್ರಸಾದವನ್ನು ಸ್ವೀಕರಿಸಿದರೆ ಯಾವುದೇ ದೋಷವುಂಟಾಗುವುದಿಲ್ಲ."

ಈ ಅಭಿಪ್ರಾಯವನ್ನು ಕಳಿಸಿದವರು ಬೇರಾರೂ ಅಲ್ಲ, ನಮ್ಮ ರಾಮ ಕುಮಾರ ಚಟ್ಟೋಪಾಧ್ಯಾಯನೇ! ರಾಣಿ ಈ ಅಭಿಪ್ರಾಯವನ್ನು ಓದಿದಳು; ಮತ್ತೊಮ್ಮೆ ಆಲೋಚಿಸಿದಳು. ಇದು ಅವಳಿಗೆ ಸಂಪೂರ್ಣ ಒಪ್ಪಿಗೆಯಾಯಿತು. ಹಾಗಾದರೆ.... ತನ್ನ ಇಚ್ಛೆ ನೆರವೇರುವುದೆ! ರಾಸಮಣಿ ಆನಂದಭರಿತಳಾದಳು. ಈಗವಳು `ಕೂಡಲೇ ಒಂದು ನಿರ್ಧಾರಕ್ಕೆ ಬಂದಳು—ಮಂದಿರವನ್ನು ತನ್ನ ಕುಲಗುರುಗಳಿಗೆ ವಿಧ್ಯುಕ್ತವಾಗಿ ದಾನ ಮಾಡಿಬಿಡುವುದು, ಬಳಿಕ ಅವರ ಅನುಜ್ಞೆ ಪಡೆದು ಮಂದಿರದ ಆಸ್ತಿಯ ಹಾಗೂ ಸೇವಾಕಾರ್ಯಗಳ ಮೇಲ್ವಿಚಾರಕಿಯಾಗಿ ಅಧಿಕಾರ ಪಡೆದುಕೊಂಡು ಕಾರ್ಯ ನಿರ್ವಹಿಸುವುದು, ಎಂದು. ತನ್ನ ಈ ನಿರ್ಧಾರವನ್ನು ಆಕೆ ಇತರ ಪಂಡಿತರಿಗೂ ತಿಳಿಸಿದಳು. ಪಂಡಿತರೆಲ್ಲ ಇದನ್ನು ಕೇಳಿ ಮುಖ ಮುಖ ನೋಡಿಕೊಂಡರು. ಅವರಾರಿಗೂ ಅದು ರುಚಿಸಲಿಲ್ಲವೆಂಬುದು ಸ್ಪಷ್ಟವಾಗಿತ್ತು. ಆದರೆ ರಾಮಕುಮಾರ ಭಟ್ಟಾಚಾರ್ಯರ ವ್ಯಾಖ್ಯಾನ ತಪ್ಪು ಎನ್ನಲು ಅವರಿಗೆ ಧೈರ್ಯ ಸಾಲಲಿಲ್ಲ. ಆದ್ದರಿಂದ ಈ ರೀತಿ ಹೇಳಿದರು: "ಹಾಗೇನಾದರೂ ಮಾಡಿದರೆ ಅದು ಇಂದಿನ ಸಮಾಜದ ಸಂಪ್ರದಾಯಕ್ಕೆ, ಆಚಾರಕ್ಕೆ ವಿರುದ್ಧವಾಗು ತ್ತದೆ. ಆದ್ದರಿಂದ ಬ್ರಾಹ್ಮಣರಾಗಲಿ ಇತರ ಸಜ್ಜನರಾಗಲಿ ಇಲ್ಲಿ ಪ್ರಸಾದವನ್ನು ತೆಗೆದುಕೊಳ್ಳುವುದಿಲ್ಲ ಎಂದೇ ಹೇಳಬೇಕಾಗುತ್ತದೆ."

ರಾಸಮಣಿ ಮಾತ್ರ ತನ್ನ ನಿರ್ಧಾರವನ್ನು ಬದಲಿಸಲಿಲ್ಲ. ರಾಮಕುಮಾರನ ಅಭಿಪ್ರಾಯವನ್ನೇ ಆಕೆ ಗಟ್ಟಿಯಾಗಿ ಹಿಡಿದುಕೊಂಡಳು. ಎಲ್ಲ ಪಂಡಿತರಿಗಿಂತಲೂ ವಿಭಿನ್ನವಾದ ವ್ಯಾಖ್ಯಾನವನ್ನು ನೀಡಿದ ಆ ಮಹಾಶಯನ ಬಗ್ಗೆ ಆಕೆಯಲ್ಲಿ ಗೌರವಾದರಗಳುಂಟಾದುವು. ನಿಜಕ್ಕೂ ಆ ಬಗೆಯ ಅಭಿಪ್ರಾಯವನ್ನು ವ್ಯಕ್ತಪಡಿಸ ಬೇಕಾದರೆ ರಾಮಕುಮಾರನ ದೃಷ್ಟಿ ಎಷ್ಟು ವಿಶಾಲವಾಗಿದ್ದಿರಬೇಕು! ಆಗಿನ ಕಾಲದ ಸಾಮಾಜಿಕ ಹಿನ್ನೆಲೆಯಲ್ಲಿ ಇದೊಂದು ಅಸಾಧಾರಣ ಸಂಗತಿಯೆಂಬುದನ್ನು ನಾವು ಗಮನಿಸದಿರುವಂತಿಲ್ಲ. ಬ್ರಾಹ್ಮಣರೆನಿಸಿಕೊಂಡವರೆಲ್ಲರೂ ಸಂಪ್ರದಾಯದ ಕಟ್ಟೆ ಯೊಳಗೆ ಕೂಪಮಂಡೂಕಗಳಂತಿದ್ದ ಕಾಲ ಅದು. ಬದಲಾಗುತ್ತಿರುವ ಸಾಮಾಜಿಕ ಪರಿಸ್ಥಿತಿಗಳನ್ನು ಗಮನಿಸುವ, ಇಲ್ಲವೆ ಶಾಸ್ತ್ರವಾಕ್ಯಗಳ ಹಿಂದಿರುವ ವಿಶಾಲಭಾವ ವನ್ನು ಅರಿಯುವ ಸಾಮರ್ಥ್ಯವಿದ್ದವರು ಅತ್ಯಲ್ಪ. ಹೀಗಾಗಿ, ಬರಬರುತ್ತ ಅವರಲ್ಲಿ ಜನರು ವಿಶ್ವಾಸವನ್ನೇ ಕಳೆದುಕೊಳ್ಳತೊಡಗಿದ್ದರು. ಪುರೋಹಿತರ ಮಾತನ್ನು ಧಿಕ್ಕರಿಸಲಾರಂಭಿಸಿದ್ದರು.

ರಾಸಮಣಿಯ ಕುಲಗುರುಗಳಾದರೂ ಇದಕ್ಕೆ ಹೊರತಾಗಿರಲಿಲ್ಲ ಎಂದೇ ಹೇಳಬೇಕಾಗುತ್ತದೆ. ಆಕೆಗದು ಗೊತ್ತಿರಲಿಲ್ಲವೆಂದಲ್ಲ, ಆದರೆ ಈಗ ಅದು ಸ್ಪಷ್ಟ ವಾಯಿತು. ರಾಸಮಣಿ ತನ್ನ ಕುಲಗುರುಗಳಿಗೂ ಅವರ ಕುಟುಂಬವರ್ಗದವರಿಗೂ ಸಲ್ಲಬೇಕಾದ ಗೌರವವನ್ನೆಲ್ಲ ತಪ್ಪದೆ ಸಲ್ಲಿಸುತ್ತಿದ್ದಳು. ಆದರೆ ಶಾಸ್ತ್ರಗ್ರಂಥಗಳ ಸಾರವೇನೆಂಬುದರ ವಿಚಾರದಲ್ಲಿ ಅವರ ಅಜ್ಞಾನವನ್ನು ಈಗ ಮನಗಂಡಳು.

ಶಾಸ್ತ್ರವಾಕ್ಯಕ್ಕೆ ಅನುಸಾರವಾಗಿ ದೇವರ ಕೈಂಕರ್ಯ ಮಾಡುವಲ್ಲಿ ಅವರ ಅಯೋಗ್ಯತೆಯನ್ನು ಅರಿತುಕೊಂಡಳು. ಆದ್ದರಿಂದ, ಈಗ ನೂತನ ದೇವಾಲಯದ ಸೇವಾಕಾರ್ಯಗಳೆಲ್ಲದರ ಜವಾಬ್ದಾರಿಯನ್ನು ಯಾರಾದರೂ ಯೋಗ್ಯರಾದ, ಸತ್ಪಾತ್ರರಾದ, ಜ್ಞಾನಿಗಳಾದ ಬ್ರಾಹ್ಮಣರ ಕೈಯಲ್ಲಿ ಶಾಶ್ವತವಾಗಿ ಇರಿಸಲು ಆಕೆ ನಿರ್ಧರಿಸಿದಳು. ಆದರೆ ಇದರಿಂದಾಗಿ ತನ್ನ ಗುರುಗಳ ಮನೆಯವರಿಗೆ ಸಲ್ಲಬೇಕಾದ ಕಾಣಿಕೆ–ದಕ್ಷಿಣೆಗಳ ವಿಚಾರದಲ್ಲಿ ಯಾವ ಲೋಪವೂ ಆಗದಂತೆ ಎಚ್ಚರಿಕೆ ವಹಿಸಲೂ ಆಕೆ ಮರೆಯಲಿಲ್ಲ.

ಯೋಗ್ಯರಾದ ಬ್ರಾಹ್ಮಣರಿಗೆ ಅರ್ಚಕಸ್ಥಾನ ನೀಡಬೇಕೆಂದು ರಾಸಮಣಿ ಯೇನೋ ನಿರ್ಧರಿಸಿದಳು. ಆದರೆ ಸಂಪ್ರದಾಯ ಮತ್ತೆ ಅವಳ ಇಚ್ಛೆಗೆ ಅಡ್ಡಿ ಬಂದಿತು. ಸಂಪ್ರದಾಯ ಶರಣತೆಯ ಆ ದಿನಗಳಲ್ಲಿ ಸತ್ಕುಲಪ್ರಸೂತರು ಎನಿಸಿ ಕೊಂಡ ಬ್ರಾಹ್ಮಣರು ಯಾರೂ ಶೂದ್ರರು ಸ್ಥಾಪಿಸಿದ ದೇವದೇವಿಯರಿಗೆ ಪೂಜೆ ಮಾಡುವುದಿರಲಿ, ನಮಸ್ಕಾರವನ್ನೂ ಮಾಡುತ್ತಿರಲಿಲ್ಲ. ಹಾಗೆ ಪೂಜೆ ಮಾಡುವ ಬ್ರಾಹ್ಮಣರನ್ನು ಇತರರು ದೂರವೇ ಇಟ್ಟಿರುತ್ತಿದ್ದರು. ರಾಣಿ ರಾಸಮಣಿಯ ಕುಲಪುರೋಹಿತರಂಥವರನ್ನು ಇತರ ಬ್ರಾಹ್ಮಣರು ಶೂದ್ರರಂತೆಯೇ ಕಾಣು ತ್ತಿದ್ದರು. ಇಂತಹ ದೋರಣೆಯನ್ನು ಅನುಮೋದಿಸದಿದ್ದವರೂ ಕೂಡ ಬಹಿಷ್ಕಾರದ ಭಯದಿಂದಲಾದರೂ ಸುಮ್ಮನಿರಬೇಕಾಗುತ್ತಿತ್ತು. ಆದ್ದರಿಂದ ರಾಸಮಣಿಯಿಂದ ನಿರ್ಮಿತವಾದ ಈ ದೇವಾಲಯದಲ್ಲಿ ಅರ್ಚಕ ಸ್ಥಾನವನ್ನು ವಹಿಸಿಕೊಳ್ಳಲು ಯೋಗ್ಯರೂ ಸಮರ್ಥರೂ ಆದ ಬ್ರಾಹ್ಮಣರೊಬ್ಬರೂ ಮುಂದೆ ಬರಲಿಲ್ಲವೆಂದರೆ ಆಶ್ಚರ್ಯವೇನು? ಆದರೂ ರಾಣಿ ಹತಾಶಳಾಗಲಿಲ್ಲ. ಅರ್ಚಕರಿಗೆ ಅಧಿಕ ಸಂಬಳವನ್ನೂ ಭತ್ಯವನ್ನೂ ಕೊಡಲಾಗುವುದೆಂದು ಪ್ರಕಟಣೆ ನೀಡುತ್ತ, ಹಲವಾರು ಸ್ಥಳಗಳಲ್ಲಿ ಸೂಕ್ತ ಅರ್ಚಕನನ್ನು ಅರಸುವ ಕಾರ್ಯವನ್ನು ಮುಂದುವರಿಸಿದಳು.

ಕಾಮಾರಪುಕುರದ ಸಮೀಪದ ಗ್ರಾಮವಾದ ಸಿಹೋರಿನ ಮಹೇಶಚಂದ್ರ ಚಟರ್ಜಿ ಎಂಬವನು ರಾಸಮಣಿಯ ಎಸ್ಟೇಟಿನಲ್ಲಿ ಕೆಲಸಕ್ಕಿದ್ದ. ದೇವಾಲಯದ ಕೆಲಸಕಾರ್ಯಗಳಿಗೆ ಬೇಕಾದ ಬ್ರಾಹ್ಮಣರನ್ನು ಹೊಂದಿಸಿಕೊಳ್ಳಲು ಕಷ್ಟವಾಗಿರುವು ದನ್ನು ಇವನು ನೋಡಿದ. ತಾನೀಗ ಈ ದಿಸೆಯಲ್ಲಿ ರಾಣಿಗೆ ನೆರವಾದರೆ ತನಗೂ ನಾಲ್ಕು ಕಾಸು ಗಿಟ್ಟೀತೆಂಬ ಆಸೆಯಿಂದ ಅರ್ಚಕರನ್ನು ಒದಗಿಸಿಕೊಡುವ ಕೆಲಸ ಮಾಡಲು ಮುಂದಾದ. ಮೊದಲನೆಯದಾಗಿ, ಕಾಳೀ ದೇವಾಲಯದ ಆವರಣ ದಲ್ಲೇ ನಿರ್ಮಿತವಾಗಿದ್ದ ರಾಧಾಗೋವಿಂದ ದೇವಾಲಯಕ್ಕೆ ತನ್ನ ಅಣ್ಣ ಕ್ಷೇತ್ರನಾಥ ಚಟರ್ಜಿಯನ್ನು ಅರ್ಚಕನನ್ನಾಗಿ ನೇಮಿಸಿದ. ಇದರಲ್ಲಿ ಅವನ ಎರಡು ಉದ್ದೇಶ ಗಳಿದ್ದುವು—ಅರ್ಚಕ ಪದವಿಯಿಂದ ಹಣ ಸಂಪಾದಿಸುವುದು ಒಂದು; ತನ್ಮೂಲಕ, ರಾಸಮಣಿಯ ದೇವಾಲಯಗಳಲ್ಲಿ ಕೆಲಸಮಾಡುವುದರಲ್ಲಿ ದೋಷವಿಲ್ಲ ಎಂದು ತೋರಿಸಿಕೊಟ್ಟು ಇತರ ಬಡ ಬ್ರಾಹ್ಮಣರಿಗೂ ಮೇಲ್ಪಂಕ್ತಿ ಹಾಕಿಕೊಡುವುದು ಮತ್ತೊಂದು. ಮಹೇಶನ ಈ ಉಪಾಯ ಕೆಲಸ ಮಾಡಿತು. ದೇವಾಲಯದ ಎಷ್ಟೋ ಕೆಲಸಕಾರ್ಯಗಳಿಗೆ ಬ್ರಾಹ್ಮಣರನ್ನು ಗೊತ್ತುಪಡಿಸುವ ಕಾರ್ಯ ಬಹಳವೇ

ಸುಲಭವಾಯಿತು. ಆದರೆ ಎಷ್ಟು ಪ್ರಯತ್ನ ಪಟ್ಟರೂ ಕಾಳೀ ದೇವಾಲಯಕ್ಕೆ ಮಾತ್ರ ಯೋಗ್ಯನಾದ ಅರ್ಚಕನೊಬ್ಬ ಸಿಗದಿದ್ದಾಗ ಅವನಿಗೆ ಕಳವಳ ಪ್ರಾರಂಭವಾಯಿತು.

ಮಹೇಶನಿಗೆ ರಾಮಕುಮಾರನೂ ಪರಿಚಿತನೇ. ರಾಮಕುಮಾರನ ದೈವ ಶ್ರದ್ಧೆ-ಸಾಧನೆಗಳಾಗಲಿ, ಅವನು ಸ್ವಯಂ ದೇವಿಯಿಂದ ಶಕ್ತಿಮಂತ್ರವನ್ನು ಪಡೆದು ಕೊಂಡ ವಿಷಯವಾಗಲಿ ಮಹೇಶನಿಗೆ ತಿಳಿಯದ್ದೇನಲ್ಲ. ಇನ್ನು, ರಾಮಕುಮಾರನ ಮನೆಯ ಆರ್ಥಿಕ ಪರಿಸ್ಥಿತಿ ಅಷ್ಟಕಷ್ಟೆ ಎಂಬುದನ್ನೂ ಆತ ಬಲ್ಲ. ಆದ್ದರಿಂದ ಮೊದಲೇ ಒಮ್ಮೆ ಅವನಿಗೆ ರಾಮಕುಮಾರನ ಹೆಸರು ನೆನಪಿಗೆ ಬಂದಿತ್ತು. ಈತ ಅತ್ಯಂತ ಯೋಗ್ಯನಾದವನೆಂದು ಅವನು ಆಲೋಚಿಸಿದ್ದ. ಯೋಗ್ಯನೇನೋ ಸರಿಯೆ. ಆದರೆ ರಾಮಕುಮಾರ ಒಪ್ಪಬೇಕಲ್ಲ! ಶೂದ್ರಾದಿಗಳು ನಡೆಸಿದ ಹೋಮ-ಹವನಗಳಲ್ಲಿ ಅವನೆಂದೂ ಭಾಗವಹಿಸುತ್ತಿರಲಿಲ್ಲ. ಕಲ್ಕತ್ತದ ದಿಗಂಬರ ಮಿತ್ರನೇ ಮೊದಲಾದ ಬ್ರಾಹ್ಮಣೇತರರ ಮನೆಗಳಲ್ಲಿ ಅವನು ಪೂಜೆ-ಅರ್ಚನೆ ಗಳನ್ನು ನಡೆಸುತ್ತಿದ್ದನೇನೋ ನಿಜ. ಆದರೆ ರಾಸಮಣಿಯಂತಹ ಅಂಬಿಗರ ಕುಲಕ್ಕೆ ಸೇರಿದವಳು ಕಟ್ಟಿಸಿದ ದೇವಾಲಯದಲ್ಲಿ ಅರ್ಚಕನಾಗಿರಲು ಅವನು ಒಪ್ಪುವನೆ? ಹೀಗೆಲ್ಲ ಆಲೋಚಿಸಿ ಮಹೇಶ ಸುಮ್ಮನಾಗಿದ್ದ. ಆದರೆ ಪ್ರತಿಷ್ಠಾಪನೆಯ ದಿನ ಹತ್ತಿರ ಬಂದಂತೆ ಮಹೇಶನಿಗೆ ಬಿಸಿಯೇರಿತು. ಹೇಗಾದರಾಗಲಿ, ಅವನನ್ನೊಮ್ಮೆ ಕೇಳಿ ನೋಡುವುದರಲ್ಲಿ ನಷ್ಟವೇನು ಎಂದು ಭಾವಿಸಿದ.

ಆದರೆ ಅವನು ನೇರವಾಗಿ ರಾಮಕುಮಾರನ ಬಳಿಗೆ ಹೋಗಲಿಲ್ಲ. ಮೊದಲು ರಾಸಮಣಿಯಲ್ಲಿಗೆ ಹೋಗಿ ಎಲ್ಲವನ್ನೂ ತಿಳಿಸಿ ಒಂದು ಸಲಹೆಮಾಡಿದ: "ಅಮ್ಮ ಈಗ ನೀವೊಂದು ಉಪಾಯ ಮಾಡುವುದೊಳ್ಳೆಯದು. ನಿಮಗೆ ರಾಮಕುಮಾರ ಭಟ್ಟಾಚಾರ್ಯರ ಹೆಸರು ತಿಳಿದೇ ಇದೆಯಲ್ಲ. ಅವರು ಬಹಳ ಯೋಗ್ಯರು, ಸಮರ್ಥರು. ಅವರನ್ನು ದೇವಿಯ ಪ್ರತಿಷ್ಠಾಪನಾ ಕಾರ್ಯವನ್ನು ನಡೆಸಿಕೊಡು ವಂತೆ ಕೇಳಿಕೊಳ್ಳಿ. ಆಮೇಲೆ ಮೆಲ್ಲಗೆ ಅವರನ್ನೇ ಅರ್ಚಕ ಹುದ್ದೆಗೆ ನೇಮಿಸಿ ಕೊಳ್ಳುವ ಪ್ರಯತ್ನ ಮಾಡಬಹುದು." ರಾಮಕುಮಾರ ಭಟ್ಟಾಚಾರ್ಯರ ಹೆಸರು ಕೇಳಿಯೇ ರಾಸಮಣಿಗೆ ಬಹಳ ಸಂತೋಷವಾಯಿತು. ಅನ್ನನೈವೇದ್ಯದ ಬಗ್ಗೆ ಆತನ ಅಭಿಪ್ರಾಯದ ಚೀಟಿ ಬಂದಾಗಿನಿಂದಲೂ ರಾಣಿಗೆ ಆತನ ಸಾಮರ್ಥ್ಯ-ಜ್ಞಾನಗಳ ಬಗ್ಗೆ ಒಳ್ಳೆಯ ಅಭಿಪ್ರಾಯ ಮೂಡಿತ್ತು. ಈಗ ಅಂತಹ ಯೋಗ್ಯ ವ್ಯಕ್ತಿಯನ್ನೇ ಅರ್ಚಕನನ್ನಾಗಿ ನಿಯಮಿಸುವ ಸಾಧ್ಯತೆ ತೋರಿದಾಗ ಆಕೆ ತುಂಬ ಉತ್ಸಾಹಿತ ಳಾದಳು. ರಾಸಮಣಿ ಅತ್ಯಂತ ವಿನಯಪೂರಿತವಾದ ಭಾಷೆಯಲ್ಲಿ ಅವನಿಗೆ ಒಂದು ಪತ್ರ ಬರೆಸಿದಳು:

"....ತಮ್ಮ ನಿರ್ದೇಶನದ ಪ್ರಕಾರವೇ ಈಗ ನಾನು ಜಗನ್ಮಾತೆಯ ಪ್ರತಿಷ್ಠಾಪ ನೆಗೆ ಅನುವಾಗಿದ್ದೇನೆ. ಬರುವ ಸ್ನಾನಯಾತ್ರೆಯಂದು ಒಂದು ಶುಭ ಲಗ್ನದಲ್ಲಿ ಈ ಮಹಾಕಾರ್ಯವು ಜರುಗಲು ಸಕಲ ಸಿದ್ಧತೆಗಳೂ ನಡೆದಿವೆ. ರಾಧಾಗೋವಿಂದ ಸ್ವಾಮಿಯ ಪೂಜೆಗೈಯಲು ನಮಗೊಬ್ಬ ಅರ್ಚಕರು ದೊರಕಿದ್ದಾರೆ. ಆದರೆ ಕಾಳೀಮಾತೆಯ ಅರ್ಚನೆಯ ಹೊಣೆ ಹೊತ್ತು, ತನ್ಮೂಲಕ ಆಕೆಯ ಪ್ರತಿಷ್ಠಾಪನೆ

ಯಲ್ಲಿ ನನಗೆ ನೆರವಾಗಲು ಯೋಗ್ಯ ವಿಪ್ರರಾರೂ ಮುಂದೆ ಬರುತ್ತಿಲ್ಲ. ಆದ್ದರಿಂದ, ತಾವು ದಯವಿಟ್ಟು ತಮಗೆ ಸರಿಕಂಡ ಯಾವುದಾದರೊಂದು ವ್ಯವಸ್ಥೆ ಮಾಡಿ ನನ್ನನ್ನು ಈ ಸಂದಿಗ್ಧದಿಂದ ಪಾರು ಮಾಡಬೇಕು. ಯಾರೆಂದರೆ ಅವರನ್ನು ಅರ್ಚಕರನ್ನಾಗಿ ನಿಯಮಿಸುವುದು ಸಾಧ್ಯವೂ ಇಲ್ಲ, ಸಾಧುವೂ ಅಲ್ಲ ಎಂಬ ವಿಚಾರವನ್ನು, ವಿದ್ವಾಂಸರೂ ಶಾಸ್ತ್ರಪರಿಣತರೂ ಆದ ತಮಗೆ ನಾನು ತಿಳಿಸ ಬೇಕಾಗಿಯೇ ಇಲ್ಲ...."

ಈ ಪತ್ರವನ್ನು ಹೊತ್ತು ಮಹೇಶಚಂದ್ರ ತಾನೇ ರಾಮಕುಮಾರನಲ್ಲಿಗೆ ಬಂದ. ಈಗ ಒದಗಿರುವ ಇಕ್ಕಟ್ಟಿನ ಪರಿಸ್ಥಿತಿಯನ್ನು ಆತನಿಗೆ ಅನೇಕ ಬಗೆಯಾಗಿ ವಿವರಿಸಿದ. ರಾಣಿಯವರು ಆತನ ಬಗ್ಗೆ ವಿಶೇಷ ಅಭಿಮಾನ–ಗೌರವ ತಾಳಿರುವ ವಿಷಯವನ್ನೂ ತಿಳಿಸಿ, ಬೇರೆ ಯಾರಾದರೂ ವ್ಯಕ್ತಿ ದೊರಕುವವರೆಗಾದರೂ ಅರ್ಚಕನಾಗಿರಬೇಕೆಂದು ವಿನಂತಿಸಿಕೊಂಡ. ಹೀಗೆ, ಸಜ್ಜನಮನ್ನಿತಳಾದ ರಾಣಿ ರಾಸಮಣಿಯೇ ಪತ್ರ ಕಳುಹಿಸಿದಾಗ ಮತ್ತು ಮಹೇಶಚಂದ್ರನೂ ವೈಯಕ್ತಿಕವಾಗಿ ವಿನಂತಿಸಿಕೊಂಡಾಗ ರಾಮಕುಮಾರ ಹೇಗೆ ಒಲ್ಲೆನೆಂದಾನು ? ಅದಕ್ಕಿಂತ ಹೆಚ್ಚಾಗಿ, ತಾನಲ್ಲಿಗೆ ಹೋಗದಿರುವುದರಿಂದಾಗಿ ಜಗನ್ಮಾತೆಯ ಪ್ರತಿಷ್ಠಾಪನಾ ಕಾರ್ಯವೇ ನಿಂತುಹೋದರೆ !.... ಧರ್ಮಭೀರುವೂ ದೈವಭಕ್ತನೂ ಆದ ರಾಮಕುಮಾರ ಈ ಆಲೋಚನೆಯಿಂದಲೇ ಭಯಭರಿತನಾದ. ಆದ್ದರಿಂದ ಅವನು ರಾಸಮಣಿಯ ವಿನಂತಿಗೆ ಕೂಡಲೇ ಸಮ್ಮತಿ ನೀಡಿದ. ಈಗ ರಾಸಮಣಿಯ ಹರ್ಷಕ್ಕೆ ಪಾರವೇ ಇಲ್ಲ. ಮನಸ್ಸು ಮಾಡಿದ್ದರೆ, ರಾಮಕುಮಾರ ಈ ಸಂದರ್ಭದಲ್ಲಿ ಚೆನ್ನಾಗಿ ದುಡ್ಡು ಮಾಡಬಹುದಾಗಿತ್ತು. ಆದರೆ ಅಂತಹ ದುರ್ಬುದ್ಧಿಯಾಗಲಿ, ದುರಾಶೆಯಾಗಲಿ ಅವನಿಗೆ ಜನ್ಮತಃ ಇರಲಿಲ್ಲ, ಈಗ ಬರಲೂ ಇಲ್ಲ. ಆದರೆ ತಾತ್ಕಾಲಿಕವಾಗಿ ಮಾತ್ರ ಅರ್ಚಕಸ್ಥಾನವನ್ನು ವಹಿಸಿಕೊಳ್ಳುವುದೆಂದು ಎಣಿಸಿ ದಕ್ಷಿಣೇಶ್ವರಕ್ಕೆ ಹೋದ ರಾಮಕುಮಾರ, ತನ್ನ ಜೀವನಪರ್ಯಂತ ಅಲ್ಲಿ ಉಳಿದುಕೊಳ್ಳಬೇಕಾಯಿತು. ಮನುಷ್ಯ ಎಷ್ಟೇ ಬುದ್ಧಿವಂತನಾದರೂ ಅವನ ಸಕಲ ಕಾರ್ಯಗಳ ಹಿನ್ನೆಲೆಯಲ್ಲಿ ದೈವೇಚ್ಛೆಯೆಂಬುದೊಂದು ಇದ್ದೇ ಇದೆ. ಅದರಲ್ಲೂ ಆದ್ಯಾಶಕ್ತಿಯ ಭಕ್ತನಾದ ರಾಮಕುಮಾರನ ವಿಷಯದಲ್ಲಂತೂ ದೈವೀಶಕ್ತಿಯೇ ಕಾರ್ಯನಿರತವಾಗಿದೆ. ಅವನು ನಿಮಿತ್ತ ಮಾತ್ರ. ಈ ಸತ್ಯವನ್ನು ನಾವು ಹೆಜ್ಜೆಹೆಜ್ಜೆಗೂ ಕಾಣಲಿದ್ದೇವೆ.

# ಗಂಗಾತೀರದಿ ಗದಾಧರ

ಹೀಗೆ ಯೋಗಾಯೋಗಬಲದಿಂದ ರಾಮಕುಮಾರನೇ ದೇವಿಯ ಅರ್ಚಕನಾಗಿ ನೇಮಕಗೊಂಡ. ೧೮೫೫ರ ಮೇ ೩೧ ಗುರುವಾರ, ಸ್ನಾನಯಾತ್ರೆಯ* ಹುಣ್ಣಿಮೆಯಂದು ದೇವಿಯ ಪ್ರತಿಷ್ಠಾಪನೆ. ಹಿಂದಿನ ದಿನವೇ ರಾಮಕುಮಾರ ಗದಾಧರನೊಂದಿಗೆ ದಕ್ಷಿಣೇಶ್ವರಕ್ಕೆ ಆಗಮಿಸಿದ್ದ. ಆದಾಗಲೇ ಅಲ್ಲಿ ಜನಜಾತ್ರೆ ನೆರೆಯಲಾರಂಭಿಸಿತ್ತು. ಎಲ್ಲೆಲ್ಲೂ ಸಂಭ್ರಮ ಸಡಗರ ಕೋಲಾಹಲ. ರಾಮಕುಮಾರನ ನಿರ್ದೇಶನದಲ್ಲಿ ಶಾಸ್ತ್ರವಿಧಿಗಳೆಲ್ಲ ಸಾಂಗವಾಗಿ ನೆರವೇರಿದುವು. ತರುಣ ಗದಾಧರ ಕಾರ್ಯಕಲಾಪಗಳನ್ನೆಲ್ಲ ಭಕ್ತಿ–ಕುತೂಹಲಗಳಿಂದ ವೀಕ್ಷಿಸಿದ. ರಾಣಿ ರಾಸಮಣಿ ಹಣವನ್ನು ಬಿಚ್ಚುಗೈಯಿಂದ ದಾನ ಮಾಡಿದಳು. ಬಂದಬಂದವರೆಲ್ಲರಿಗೂ ಮೃಷ್ಟಾನ್ನ ಭೋಜನ, ಮೇಲಾಗಿ ಉಪಚಾರ. ದೂರದೂರದ ಕನ್ಯಾಕುಬ್ಜ, ವಾರಾಣಸಿ, ಭಾಟ್ಪಗ್ರಾಮ, ಒರಿಸ್ಸಾ, ನವದ್ವೀಪಗಳಿಂದಲೂ ಪಂಡಿತರು, ವಿದ್ವಾಂಸರು, ಬ್ರಾಹ್ಮಣೋತ್ತಮರು ಬಂದು ರಾಣಿಯ ಆತಿಥ್ಯ ಸ್ವೀಕರಿಸಿ ಸಂತುಷ್ಟರಾದರು. ಪ್ರತಿಯೊಬ್ಬರಿಗೂ ಒಂದೊಂದು ಚಿನ್ನದ ನಾಣ್ಯದ ಸಮೇತ ರೇಶ್ಮೆ ವಸ್ತ್ರ ಶಲ್ಯದ ಉಡುಗೊರೆ ! ಉಕ್ಕಿ ಹರಿಯಿತು ಎಲ್ಲೆಲ್ಲೂ ಆನಂದದ ಹೊಳೆ ! ಉತ್ಸವದ ಅಂಗವಾಗಿ ದೇವೀ ಪರವಾದ ಭಜನೆ, ಭಾಗವತ–ರಾಮಾಯಣಗಳ ವಾಚನವೇ ಮೊದಲಾದ ವೈವಿಧ್ಯಮಯ ಕಾರ್ಯಕ್ರಮಗಳು ಹಗಲೂ ರಾತ್ರಿ ನಿರಂತರವಾಗಿ ನಡೆದುವು. ಲಕ್ಷದೀಪೋತ್ಸವವೋ ಎಂಬಂತೆ ಎಲ್ಲೆಲ್ಲೂ ದೀಪಗಳು ಪ್ರಜ್ವಲಿಸುತ್ತಿದ್ದು, ಹಗಲಿಗೂ ಇರುಳಿಗೂ ವ್ಯತ್ಯಾಸವೇ ಇಲ್ಲದಂತಾಗಿತ್ತು! ವಿದ್ಯುದ್ದೀಪಗಳಿಲ್ಲದ ಆ ಕಾಲದಲ್ಲಿ ಈ ದೃಶ್ಯವು ಅದೆಷ್ಟು ಅದ್ಭುತವಾಗಿದ್ದಿರಬಹುದೆಂಬುದನ್ನು ಭಾವಿಸಿಯೇ ನೋಡಬೇಕು. ರಾಮಕೃಷ್ಣರೇ ಈ ದೃಶ್ಯವನ್ನು ಮುಂದೆ ಹೀಗೆ ಬಣ್ಣಿಸುತ್ತಿದ್ದರು – "ದೇವಾಲಯದ ಸುತ್ತ ಹೋಗುತ್ತಿದ್ದರೆ, ರಾಣಿಯು ರಜತಗಿರಿಯನ್ನೇ ತಂದು ನಿಲ್ಲಿರಿಸಿರುವಳೋ ಎಂಬಂತೆ ತೋರುತ್ತಿತ್ತು !"

ಪ್ರತಿಷ್ಠಾಪನೆಯ ದಿನದಂದು ಕಾಳಿಗೆ ತಾನೇ ಅನ್ನನೈವೇದ್ಯವನ್ನು ನೀಡುವುದು, ಬಳಿಕ ಯಾರಾದರೊಬ್ಬರಿಗೆ ಅದಕ್ಕೆ ಸಂಬಂಧಿಸಿದ ವಿಧಿ ನಿಯಮಗಳನ್ನೆಲ್ಲ

---

* ಜ್ಯೇಷ್ಠಮಾಸದ ಹುಣ್ಣಿಮೆಯಂದು ಪುರೀಕ್ಷೇತ್ರದಲ್ಲಿ ಶ್ರೀಜಗನ್ನಾಥ ಸ್ವಾಮಿಗೆ ಸ್ನಾನ ಮಾಡಿಸುವ ಸಂಪ್ರದಾಯವಿದೆ. ಈ ಉತ್ಸವಕ್ಕೆ 'ಸ್ನಾನಯಾತ್ರೆ' ಎಂದು ಹೆಸರಾಗಿದೆ.

ತಿಳಿಸಿಕೊಟ್ಟು ತಾನು ಝಾಮಾಪುಕುರಕ್ಕೆ ಹಿಂದಿರುಗುವುದು —ಇದು ರಾಮಕುಮಾರನ ಆಲೋಚನೆ. ಆದರೆ ರಾಣಿಯೂ ಆಕೆಯ ಅಳಿಯ ಮಥುರಾನಾಥನೂ ರಾಮಕುಮಾರನನ್ನು ಕೈಮುಗಿದು ಪ್ರಾರ್ಥಿಸಿಕೊಂಡರು — "ಸ್ವಾಮಿ, ತಾವು ನಮ್ಮ ಪಾಲಿನ ಭಾಗ್ಯದೇವತೆಯಾಗಿ ಬಂದಿರಿ. ನಾವು ಎಷ್ಟೇ ಹಣ ಸುರಿದು ದೇವಾಲಯ ಕಟ್ಟಬಹುದು. ಆದರೆ ಶಾಸ್ತ್ರಜ್ಞಾನವಿರುವವರೂ ಆಚಾರವಂತರೂ ಆದ ಶ್ರೇಷ್ಠ ಬ್ರಾಹ್ಮಣರಿಂದ ವಿಧ್ಯುಕ್ತವಾಗಿ ಪೂಜಾದಿಗಳು ನಡೆಯದಿದ್ದರೆ ಏನು ಪ್ರಯೋಜನ? ತಾವು ನಮಗೆ ಎಲ್ಲ ರೀತಿಯಿಂದಲೂ ಅನುಕೂಲವಾಗಿದ್ದೀರಿ. ತಮ್ಮನ್ನು ನಾವು ಬಹಳವಾಗಿ ಮೆಚ್ಚಿಕೊಂಡಿದ್ದೇವೆ. ತಾವು ದೊಡ್ಡ ಮನಸ್ಸು ಮಾಡಿ ಇಲ್ಲಿಯೇ ಇದ್ದು ಕಾಳಿಕಾದೇವಿಯ ಪೂಜೆಯ ಹೊಣೆಯನ್ನು ಒಪ್ಪಿಕೊಳ್ಳಬೇಕು. ಇದು ನಮ್ಮ ವಿನಮ್ರ ಪ್ರಾರ್ಥನೆ." ರಾಮಕುಮಾರ ರಾಸಮಣಿಯ ಹೃತ್ಪೂರ್ವಕ ಭಕ್ತಿಯನ್ನು ಕಂಡ, ಮರುಮಾತಿಲ್ಲದೆ ಒಪ್ಪಿಕೊಂಡ. ರಾಸಮಣಿ ಮಥುರಾನಾಥರ ಆನಂದಕ್ಕೆ ಪಾರವೇ ಇಲ್ಲ.

ರಾಮಕುಮಾರ ಕಾಳೀದೇವಾಲಯದ ಒಂದು ಕೋಣೆಯಲ್ಲಿ ಉಳಿದುಕೊಂಡ. ಊಟಕ್ಕೆ ಕಾಳಿಕಾದೇವಿಯ ಪ್ರಸಾದ ಇದ್ದೇ ಇದೆ. ಆದರೆ ಇಲ್ಲಿ ಇನ್ನೊಂದು ಸಣ್ಣ ಸಮಸ್ಯೆ ಹುಟ್ಟಿಕೊಂಡಿತು. ಗದಾಧರ ಮಾತ್ರ ಕಾಳೀ ಗುಡಿಯ ಪ್ರಸಾದವನ್ನು ತಿನ್ನಲು ಒಲ್ಲೆನೆಂದುಬಿಟ್ಟ! ಕಾರಣವೇನಿರಬಹುದು? ಯಾರಿಗೂ ತಿಳಿಯಲಿಲ್ಲ. ಅವನೂ ಬಾಯಿ ಬಿಚ್ಚಿ ಹೇಳಲಿಲ್ಲ. ಪ್ರತಿಸ್ಥಾಪನೆಯ ದಿನ ಅವನು ಒಂದಿಷ್ಟು ಪುರಿ ತಿಂದು ನೀರು ಕುಡಿದು, ಕೆಲಸದ ಕಾರಣ ಹೇಳಿ ಝಾಮಾಪುಕುರಕ್ಕೆ ಹಿಂದಿರುಗಿದ. ಮತ್ತೆ ಮರುದಿನ, ಸಮಾರಂಭಗಳನ್ನೆಲ್ಲ ವೀಕ್ಷಿಸಲು ಮತ್ತು ಅಣ್ಣನನ್ನು ಮಾತನಾಡಿಸಿಕೊಂಡು ಹೋಗಲು ಮುಂಜಾನೆಯೇ ಬಂದ. ಬಹಳ ಹೊತ್ತು ಅಲ್ಲಿದ್ದು ಬಗೆಬಗೆಯ ಉತ್ಸವಗಳನ್ನೆಲ್ಲ ನೋಡಿದ. ಆದರೆ ಅಂದೂ ತನ್ನ ಅಣ್ಣ ಹಿಂದಿರುಗುವಂತೆ ಕಾಣಲಿಲ್ಲ. ಆದ್ದರಿಂದ ಊಟದ ಸಮಯವಾದಾಗ ತಾನೊಬ್ಬನೇ ಹೊರಟುನಿಂತ. "ಗದಾಯ್, ಸುಮ್ಮನೆ ಏಕೆ ಅಷ್ಟು ದೂರ ಹೋಗುತ್ತೀ? ದೇವಸ್ಥಾನದ ಪ್ರಸಾದವನ್ನು ತೆಗೆದುಕೊಂಡು ಇವತ್ತು ಇಲ್ಲಿಯೇ ಇದ್ದುಬಿಡು" ಎಂದು ರಾಮಕುಮಾರ ಎಷ್ಟು ಹೇಳಿದರೂ ಕೇಳದೆ ಗದಾಧರ ಹಿಂದಿರುಗಿದ. ಮತ್ತೆ ಒಂದು ವಾರದವರೆಗೆ ಅವನು ದಕ್ಷಿಣೇಶ್ವರದ ಕಡೆಗೆ ಹೋಗಲಿಲ್ಲ. ಅಣ್ಣನಿಗೆ ತುಂಬ ಕೆಲಸವಿರಬೇಕು, ಆದ್ದರಿಂದ ಹಿಂದಿರುಗಲು ಇಷ್ಟುದಿನ ಹಿಡಿದಿರಬಹುದು; ಆಗಲಿ, ಇಂದೋ ನಾಳೆಯೋ ಬಂದಾನು ಎಂದು ಅಣ್ಣನ ಬರವನ್ನೇ ನಿರೀಕ್ಷಿಸುತ್ತ ಕುಳಿತ. ಆದರೆ ಅವನು ಬರುವ ಸೂಚನೆಯೇ ಕಾಣದಿದ್ದಾಗ ಗದಾಧರ ಆತಂಕಗೊಂಡು ತಾನೇ ಹೊರಟ. ದಕ್ಷಿಣೇಶ್ವರಕ್ಕೆ ಬಂದಾಗ ಗೊತ್ತಾಯಿತು —ರಾಸಮಣಿಯ ವಿನಮ್ರ ಬೇಡಿಕೆಯನ್ನು ಮನ್ನಿಸಿ ಕಾಳಿಕಾದೇವಾಲಯದಲ್ಲಿ ಅರ್ಚಕಕಾರ್ಯವನ್ನು ಮುಂದುವರಿಸಿಕೊಂಡು ಹೋಗಲು ಅಣ್ಣ ಒಪ್ಪಿದ್ದಾನೆ ಎಂದು.

ಇದನ್ನು ಕೇಳಿ ಗದಾಧರನಿಗೆ ಒಂದು ಬಗೆಯ ಆಘಾತವೇ ಆಯಿತೆನ್ನಬೇಕು. ಅವನ ಮನದಲ್ಲಿ ಏಕಕಾಲಕ್ಕೆ ಹಲವಾರು ಭಾವಗಳುದಿಸಿದುವು. ಅವನು ಅಣ್ಣನಿಗೆ

ಹೇಳಿದ, "ಅಣ್ಣ, ನೀವು ಈ ರೀತಿಯಾಗಿ ಇಲ್ಲಿ ಅರ್ಚಕರಾಗಿರಲು ಒಪ್ಪಿರುವುದು ನನಗೇಕೋ ಸರಿಕಾಣುತ್ತಿಲ್ಲ. ನಮ್ಮ ತಂದೆಯವರು ಶೂದ್ರರು ನಡೆಸಿದ ಪೂಜಾಕಾರ್ಯಗಳಲ್ಲಿ ಎಂದಿಗೂ ಅರ್ಚಕರಾಗಿರಲಿಲ್ಲ. ಮತ್ತು ಯಾರೆಂದರೆ ಅವರಿಂದ ದಾನ ದಕ್ಷಿಣೆ ಸ್ವೀಕರಿಸುತ್ತಿರಲಿಲ್ಲ. ಹಾಗಿರುವಾಗ, ನಾವೂ ಅವರಂತೆಯೇ ನಡೆಯಬೇಕಲ್ಲವೆ ?" ಆಗ ರಾಮಕುಮಾರ ಶಾಸ್ತ್ರವಾಕ್ಯಗಳ ಆಧಾರದಿಂದ ಯುಕ್ತಿ ಯುಕ್ತವಾಗಿ ಮಾತನಾಡುತ್ತ ತನ್ನ ಕಾರ್ಯವನ್ನು ಸಮರ್ಥಿಸಿದ. ಏನೆಂದರೂ ಗದಾಧರನಿಗೆ ಸಮಾಧಾನವಾಗಲಿಲ್ಲ. ಕೊನೆಗೆ ರಾಮಕುಮಾರ, "ಹಾಗಾದರೆ ಧರ್ಮಪತ್ರವನ್ನು ಎತ್ತಿ (ಚೀಟಿ ಹಾಕಿ) ನೋಡೋಣ. ಅದರಲ್ಲಿ ಹೇಗೆ ಬಂದರೆ ಹಾಗೆ ಮಾಡುವುದು" ಎಂದ. ಚೀಟಿ ಹಾಕಿ ನೋಡಿದಾಗ ಅದರಲ್ಲಿ ಬರೆದಿತ್ತು: 'ಅರ್ಚಕಸ್ಥಾನವನ್ನು ವಹಿಸಿಕೊಂಡದ್ದರಿಂದ ರಾಮಕುಮಾರನು ದೋಷಬಾಧ್ಯ ನಾಗಿಲ್ಲ. ಅದು ಸರ್ವರಿಗೂ ಶ್ರೇಯಸ್ಕರವಾಗಿಯೇ ಪರಿಣಮಿಸುವುದು.'

ಈ ನಿರ್ಣಯ ಗದಾಧರನಿಗೆ ಸಂಪೂರ್ಣ ಒಪ್ಪಿಗೆಯಾಯಿತು, ಸಮಾಧಾನ ತಂದಿತು. ಈಗ ಅಣ್ಣ ನಡೆಸುತ್ತಿದ್ದ ಪಾಠಶಾಲೆ ನಿಂತೇಹೋಗುತ್ತದೆ. ತಾನೀಗ ಏನು ಮಾಡುವುದು ? ಕಾಮಾರಪುಕುರಕ್ಕೆ ಮರಳುವುದೆ ? ಅಲ್ಲಾದರೂ ಏನು ಮಾಡು ವುದು ? ಹೀಗೆ ಆಲೋಚಿಸುತ್ತ ಕುಳಿತವನಿಗೆ ಹೊತ್ತು ಸರಿದದ್ದೇ ಗೊತ್ತಾಗಲಿಲ್ಲ. ಸಂಜೆಯಾಗಿಬಿಟ್ಟಿತು, ಝಾಮಾಪುಕುರಕ್ಕೆ ಹಿಂದಿರುಗುವುದು ಅಸಾಧ್ಯವಾಯಿತು. ಆದರೆ ಅಂದೂ ಅವನು ಅಲ್ಲಿನ ಪ್ರಸಾದ ಸ್ವೀಕರಿಸಲು ನಿರಾಕರಿಸಿದ. ರಾಮ ಕುಮಾರ ಸಲಿಗೆಯಿಂದ ಒತ್ತಾಯಮಾಡಿ ಹೇಳಿದ:

"ನೋಡು, ಇದು ಪವಿತ್ರವಾದ ದೇವಾಲಯ. ಪ್ರಸಾದವನ್ನು ಗಂಗಾಜಲ ದಿಂದ ತಯಾರಿಸಲಾಗಿದೆ. ಮೇಲಾಗಿ ಸಾಕ್ಷಾತ್ ಜಗದಂಬೆಗೆ ಅರ್ಪಿತವಾದದ್ದು. ಇದನ್ನು ತೆಗೆದುಕೊಂಡರೆ ದೋಷವೇನು, ಹೇಳು ?"

ಗದಾಧರನಿಗೆ ಇದೂ ಒಪ್ಪಿಗೆಯಾಗಲಿಲ್ಲ. ಮೌನವಾಗಿ ಕುಳಿತ. ಅದನ್ನು ಮನಗಂಡ ರಾಮಕುಮಾರ ಹೇಳಿದ:

"ಸರಿ, ನಿನಗಿಷ್ಟವಿಲ್ಲದಿದ್ದರೆ ಬಿಡು. ಬದಲಾಗಿ ಹೀಗೆ ಮಾಡು—ದೇವಾ ಲಯದ ಉಗ್ರಾಣದಿಂದ ಅಗತ್ಯವಾದ ದಿನಸಿಯನ್ನು ತೆಗೆದುಕೊ. ಗಂಗೆಯ ದಡದ ಮರದಡಿಯಲ್ಲಿ ನೀನೇ ಅದನ್ನು ಬೇಯಿಸಿ ಅಡಿಗೆಮಾಡಿ ತಿನ್ನು. ಪವಿತ್ರ ಗಂಗಾ ನದಿಯು ತನ್ನ ದಂಡೆಗಳ ಮೇಲಣ ಪ್ರತಿಯೊಂದು ವಸ್ತುವನ್ನೂ ಪಾವನಗೊಳಿಸು ತ್ತದೆ ಎಂಬುದನ್ನಾದರೂ ಒಪ್ಪುವೆಯಾ ?"

ಗದಾಧರನಿಗೆ ಇದೂ ಕೂಡ ಅಷ್ಟೇನೂ ಪ್ರಿಯವಾಗಿರಲಿಲ್ಲ. ಆದರೂ ಆಹಾರದ ವಿಷಯದಲ್ಲಿನ ಅವನ ನಿಯಮವು ಗಂಗೆಯ ಮೇಲಿನ ಭಕ್ತಿಗೆ ಸೋಲಬೇಕಾಯಿತು. ಕಡೆಗೆ ಒಪ್ಪಿಕೊಂಡ. ಮತ್ತು ದಕ್ಷಿಣೇಶ್ವರದಲ್ಲೇ ಅಣ್ಣ ನೊಂದಿಗೆ ಇರತೊಡಗಿದ. ಆದರೆ ಊಟಕ್ಕೆ ಮಾತ್ರ ಸ್ವಯಂಪಾಕ ಮಾಡಿಕೊಳ್ಳು ತ್ತಿದ್ದ. ಅಂತೂ ರಾಮಕುಮಾರನು, ತನ್ನ ಶಾಸ್ತ್ರಾಧಾರಗಳಿಂದ ಸಾಧಿಸಲಾಗದ್ದನ್ನು ತಮ್ಮನ ಗಂಗಾಭಕ್ತಿಯನ್ನು ಕೊಂಚ ಮುಟ್ಟುವಷ್ಟರಿಂದಲೇ ಸಾಧಿಸಿದ.

ದಕ್ಷಿಣೇಶ್ವರದ ಜೀವನ ಗದಾಧರನಿಗೆ ಬೇಗನೆ ರೂಢಿಯಾಯಿತು. ಪವಿತ್ರ ಭಾಗೀರಥೀ ತೀರದ ರಮಣೀಯ ಉದ್ಯಾನ, ಹಕ್ಕಿಗಳ ಕಲರವದಿಂದ ಕೂಡಿದ ಸಸ್ಯಕಾಶಿ; ನಡುವಿನ ವಿಶಾಲ–ಸುಂದರ ದೇಗುಲ; ಅಲ್ಲಿ ಜಗನ್ಮಾತೆಯ ಸೇವೆಯಲ್ಲಿ ನಿರತನಾದ ನಿಷ್ಠಾವಂತ ಸಾಧಕನೂ ತನ್ನನ್ನು ಹೆತ್ತ ತಂದೆಯಂತೆಯೇ ಪ್ರೀತಿಸುವನೂ ಆದ ಅಣ್ಣ; ದೇವ–ದ್ವಿಜರಲ್ಲಿ ಅಪಾರ ಭಕ್ತಿ ಶ್ರದ್ಧೆಯುಳ್ಳ ರಾಣಿ ರಾಸಮಣಿ ಹಾಗೂ ಮಥುರಾನಾಥರ ಸುಭದ್ರ ಆಡಳಿತ – ಇವೆಲ್ಲವೂ ಗದಾಧರನಿಗೆ ಆ ತಾಣವನ್ನು ಪ್ರಿಯವಾಗಿಸಿತು. ಅಷ್ಟೇ ಅಲ್ಲ, ಕ್ರಮೇಣ ಅವನು ದಕ್ಷಿಣೇಶ್ವರವನ್ನು ಕಾಮಾರಪುಕುರದಂತೆಯೇ ತನ್ನದನ್ನಾಗಿಸಿಕೊಂಡ. ಊಟದ ವಿಷಯದಲ್ಲಿ ಮಾತ್ರ ಎಷ್ಟೋ ದಿನಗಳವರೆಗೆ ಅವನು ತನ್ನ ಸ್ವಯಂಪಾಕವನ್ನೇ ಮುಂದುವರಿಸಿದನಾದರೂ ತನ್ನ ಮುಂದಿನ ಕರ್ತವ್ಯದ ಬಗ್ಗೆ ತಲೆಕೆಡಿಸಿಕೊಳ್ಳುವುದನ್ನು ಬಿಟ್ಟು ಆನಂದದಿಂದ ಇರತೊಡಗಿದ.

## ಹೃದಯರಾಮನ ಆಗಮನ

ಕಾಳೀ ದೇಗುಲದ ಪ್ರತಿಷ್ಠಾಪನೆಯಾಗಿ ನಾಲ್ಕಾರು ವಾರಗಳು ಕಳೆಯುವಷ್ಟರಲ್ಲಿ ಗದಾಧರ ಅಲ್ಲಿನ ಆವರಣದಲ್ಲಿ ಸ್ವಚ್ಛಂದ ಹಕ್ಕಿಯಂತೆ ಜೀವಿಸಲಾರಂಭಿಸಿದ್ದ. ಪ್ರಫುಲ್ಲವದನನಾದ, ಮೃದು ಸ್ವಭಾವದ ಗದಾಧರನ ವ್ಯಕ್ತಿತ್ವ ಬಹುಬೇಗ ಮಥುರಾನಾಥನ ಗಮನ ಸೆಳೆಯಿತು. ಯಾರಿರಬಹುದು ಈ ತೇಜಸ್ವೀ ತರುಣ ! ಗದಾಧರನ ಪ್ರಥಮ ದರ್ಶನದಲ್ಲೇ ಮಥುರಾನಾಥನ ಹೃದಯ ಆತನೆಡೆಗೆ ತೀವ್ರವಾಗಿ ಸೆಳೆಯಲ್ಪಟ್ಟಿತು. ತನ್ನ ಮನಸ್ಸನ್ನು ಇಷ್ಟು ಸಹಜವಾಗಿ ಸೆಳೆದ ಈ ತರುಣ ಯಾರಿರಬಹುದು ? ಸತ್ಯಾಂಶ ತಿಳಿಯದೆ ಮಥುರಾನಾಥನಿಗೆ ಸಮಾಧಾನವೇ ಇಲ್ಲ! ಕೊನೆಗೆ ವಿಚಾರಿಸಿ ನೋಡಿದಾಗ ತಿಳಿಯಿತು —ಇವನು ಮತ್ತಾರೂ ಅಲ್ಲ, ಪೂಜ್ಯ ರಾಮಕುಮಾರ ಭಟ್ಟಾಚಾರ್ಯರ ಸ್ವಂತ ತಮ್ಮ! 'ಮತ್ತೇಕೆ ವಿಳಂಬ ? ಈತನನ್ನೂ ನಮ್ಮ ದೇವಾಲಯದಲ್ಲೊಂದು ಒಳ್ಳೆಯ ಕೆಲಸಕ್ಕೆ ತೆಗೆದುಕೊಳ್ಳಬಹುದಲ್ಲ?' ಎಂದು ಆಲೋಚಿಸಿದ ಮಥುರ, ರಾಮಕುಮಾರನ ಬಳಿ ಆ ವಿಷಯವನ್ನು ಪ್ರಸ್ತಾಪಿಸಿದ: "ನಿಮ್ಮ ತಮ್ಮನವರನ್ನು ದೇವಿಗೆ ಅಲಂಕಾರ ಮಾಡುವ ಕೆಲಸಕ್ಕೆ ನೇಮಿಸಿದರೆ ಹೇಗೆ?" ರಾಮಕುಮಾರನಿಗೇನೋ ಇದು ಸಮ್ಮತವೇ. ಆದರೆ ತಮ್ಮನ ಪರವಾಗಿ ಅಣ್ಣ ಒಪ್ಪಿಗೆ ಕೊಡುವ ಪರಿಸ್ಥಿತಿ ಆದಾಗಿರಲಿಲ್ಲ. ರಾಮಕುಮಾರ ಇತರರ ಭವಿಷ್ಯವನ್ನು ಹೇಳಬಲ್ಲವನಾಗಿದ್ದರೂ ಸ್ವತಃ ತನ್ನ ಸೋದರನ ಅಂತರಂಗವನ್ನು ಅರಿಯಲಾರದವನಾಗಿದ್ದ. ಗದಾಧರ ಈಗಾಗಲೇ ಅದೆಷ್ಟು ಸ್ವತಂತ್ರವಾಗಿ ವರ್ತಿಸುತ್ತಿದ್ದಾನೆ ಎಂಬುದರ ನಮೂನೆಯನ್ನು ಅವನು ಕಂಡಿರಲಿಲ್ಲವೆ ? ಆದ್ದರಿಂದ ಅವನು ಮಥುರಾನಾಥನಿಗೆ ಇಷ್ಟೇ ಹೇಳಿದ, "ಇಲ್ಲ ಮಹಾಶಯ, ಅವನಿದಕ್ಕೆಲ್ಲ ಒಪ್ಪಿಯಾನೆಂದು ನನಗನಿಸುವುದಿಲ್ಲ. ಮೊದಲಿನಿಂದಲೂ ಅವನಿಗೆ ಕೆಲಸಗಿಲಸವೆಂದರೆ ಆಗುವುದೇ ಇಲ್ಲ. ಅಲ್ಲದೆ ಅವನಿಗೆ ಒಂದೊಂದು ಸಲ ಏನೋ ಭಕ್ತಿ–ಆವೇಶ ಬಂದುಬಿಡುತ್ತದೆ. ಆಗ ಅವನಿಗೆ ಬೇರೆ ಕಡೆ ಗಮನವೇ ಇರುವುದಿಲ್ಲ." ಹೀಗೆ ರಾಮಕುಮಾರ ತಮ್ಮನ ಸ್ವಭಾವವನ್ನು ವಿವರಿಸಿದ. ಮಥುರ ಅಷ್ಟು ಬೇಗ ಬಿಟ್ಟುಬಿಡುವವನಲ್ಲ. ಆದರೂ 'ಇರಲಿ, ಇನ್ನೊಮ್ಮೆ ಸಂದರ್ಭ ಬಂದೇ ಬರುತ್ತದೆ' ಎಂದುಕೊಂಡು ಸುಮ್ಮನಾದ.

ಅಣ್ಣ ರಾಮಕುಮಾರನೊಂದಿಗೆ ಕಾಳೀದೇವಾಲಯವನ್ನು ಪ್ರವೇಶಿಸಿದ ಘಟನೆ ಗದಾಧರನ ಜೀವನದ ಅತಿ ಮುಖ್ಯ ತಿರುವು. ಈ ವೇಳೆಗೆ ಅವನ

ವ್ಯಕ್ತಿತ್ವದಲ್ಲೊಂದು ದೊಡ್ಡ ಉತ್ಕ್ರಾಂತಿಯಾಗತೊಡಗಿತ್ತು. ಬಾಲ್ಯದಿಂದಲೂ ಆತನಲ್ಲಿ ವ್ಯಕ್ತವಾಗುತ್ತಿದ್ದ ದೈವೀಗುಣಗಳು ಇನ್ನು ಮುಂದೆ ಬೃಹತ್ ಪ್ರಮಾಣದಲ್ಲಿ ಬೆಳೆದು ಹೊಸ ರೂಪವನ್ನೇ ತಾಳುವುದನ್ನು ನಾವು ನೋಡಲಿದ್ದೇವೆ. ಹೀಗೆ ಕಾಮಾರಪುಕುರದ ಮುಗ್ಧಬಾಲಕನಾಗಿದ್ದ ಗದಾಧರ ತನ್ನ ನಿಜಸ್ವರೂಪವನ್ನು ಮೆರೆಸಿ ರಾಮಕೃಷ್ಣರೆಂಬ ಹೆಸರಿನಿಂದ ಪ್ರಖ್ಯಾತನಾಗುವುದನ್ನು, ಶ್ರೀರಾಮಕೃಷ್ಣ ಪರಮಹಂಸರೆಂದು ಲೋಕವಂದಿತನಾಗುವುದನ್ನು ಶೀಘ್ರದಲ್ಲೇ ನೋಡಲಿದ್ದೇವೆ.

ರಾಮಕೃಷ್ಣರ ಜೀವನದೊಂದಿಗೆ ಹಾಸುಹೊಕ್ಕಾಗಿ ಸೇರಿರುವ ಒಬ್ಬ ವ್ಯಕ್ತಿ ಇದೇ ಸಮಯದಲ್ಲಿ ದಕ್ಷಿಣೇಶ್ವರಕ್ಕೆ ಬಂದ. ಅವನೇ ಹೃದಯರಾಮ ಮುಖ್ಯೋಪಾಧ್ಯಾಯ. ಇವನು ರಾಮಕೃಷ್ಣರ ಸೋದರತ್ತೆಯ ಮಗಳಾದ ಹೇಮಾಂಗಿನಿ ದೇವಿಯ ಮಗ; ಅವರ ಸೋದರಳಿಯ ಎನ್ನಬಹುದು. ಆಗ ಅವನಿಗೆ ಹದಿನಾರು ವರ್ಷ ವಯಸ್ಸು. ಹೃದಯರಾಮ ಒಂದು ಕೆಲಸವನ್ನು ಹುಡುಕಿಕೊಂಡು ತನ್ನ ಹಳ್ಳಿಯಿಂದ ಬರ್ದ್ವಾನ್ ಪಟ್ಟಣಕ್ಕೆ ಬಂದು ಕೆಲಕಾಲವಿದ್ದ. ಆದರೆ ಅಲ್ಲೇನೂ ಪ್ರಯೋಜನವಾಗಲಿಲ್ಲ. ಈ ಹೊತ್ತಿಗೆ ಅವನಿಗೆ ಸುದ್ದಿ ಸಿಕ್ಕಿತು—ತನ್ನ ಸೋದರ ಮಾವಂದಿರಿಬ್ಬರು ರಾಣಿ ರಾಸಮಣಿಯ ನೂತನ ದೇವಾಲಯದಲ್ಲಿ ಕೆಲಸಕ್ಕೆ ಸೇರಿದ್ದಾರೆ ಎಂದು. 'ಹಾಗಾದರೆ ನನಗೂ ಅಲ್ಲೊಂದು ಉದ್ಯೋಗವೇಕೆ ಸಿಗಲಾರದು?' ಎಂಬ ಆಲೋಚನೆಯೂ ಮರುಕ್ಷಣದಲ್ಲೇ ಮಿಂಚಿತು. ಸರಿ, ಹೆಚ್ಚು ತಡಮಾಡದೆ ಹೊರಟು ಬಂದುಬಿಟ್ಟ. ಇಲ್ಲಿ ಅವನು ತನ್ನ ಸೋದರಮಾವಂದಿರೊಂದಿಗೆ ವಾಸಿಸತೊಡಗಿದ. ರಾಮಕೃಷ್ಣ-ಹೃದಯರಾಮರಿಗೆ ಬಾಲ್ಯದಿಂದಲೂ ನಿಕಟ ಪರಿಚಯ. ಇಬ್ಬರೂ ಓರಗೆಯವರು. ಈಗ ಅವರಿಬ್ಬರೂ ಆನಂದದಿಂದ ಒಟ್ಟಾಗಿರತೊಡಗಿದರು.

ಹೃದಯರಾಮ ಉದ್ದನೆಯ ಗಟ್ಟಿಮುಟ್ಟಾದ ಆಳು; ಒಳ್ಳೇ ಜಟ್ಟಿ ಶರೀರ. ಶರೀರಕ್ಕೆ ತಕ್ಕಂತೆ ಸ್ವಭಾವ. ತುಂಬ ಗಟ್ಟಿಗ, ನಿರ್ಭೀತ, ಚಪಲಚಿತ್ತ. ಎಷ್ಟು ಕಷ್ಟವನ್ನಾದರೂ ಸಹಿಸಬಲ್ಲ. ಎಂಥ ಪರಿಸ್ಥಿತಿಗಾದರೂ ಒಗ್ಗಿಕೊಳ್ಳಬಲ್ಲ. ತೀರಾ ಕಷ್ಟಕ್ಕೆ ಬಂದಿತೆಂದರೆ ರಂಗೋಲೆಯ ಕೆಳಗೂ ನುಸುಳಿ ತಪ್ಪಿಸಿಕೊಳ್ಳಬಲ್ಲ ಚಾಲಾಕಿತನ ಅವನದು. ಹೀಗಿದ್ದರೂ ಕೆಡುಕನಲ್ಲ. ತನಗಿಂತ ನಾಲ್ಕು ವರ್ಷಕ್ಕೆ ಹಿರಿಯರಾದ ರಾಮಕೃಷ್ಣರನ್ನು ಹೃತ್ಪೂರ್ವಕವಾಗಿ ಪ್ರೀತಿಸುತ್ತಿದ್ದ. ತಾನು ಅವರ ರಕ್ಷಕನೋ ಎಂಬಂತೆ ನೋಡಿಕೊಳ್ಳುತ್ತಿದ್ದ. ಮಾವನನ್ನು ಸಂತೋಷವಾಗಿಡಲು ತಾನು ಎಂತಹ ಪರಿಶ್ರಮವನ್ನಾದರೂ ಸಹಿಸಲು ಸಿದ್ಧನಿದ್ದ.

ಹಾಗೆ ನೋಡಿದರೆ ರಾಮಕೃಷ್ಣ–ಹೃದಯರಾಮರ ಸ್ವಭಾವಗಳಲ್ಲಿ ಧ್ರುವಗಳಷ್ಟು ಅಂತರ. ಹೃದಯನು ಮೂಲತಃ ಒಬ್ಬ ಪ್ರಾಪಂಚಿಕ ವ್ಯಕ್ತಿ. ಯಾವೊಂದು ಕಾರ್ಯವನ್ನು ಕೈಗೊಳ್ಳುವ ಮುಂಚೆಯೂ ಸ್ವಾರ್ಥೋದ್ದೇಶವನ್ನು ನೋಡಿಕೊಂಡೇ ಮುಂದುವರಿಯುವವನು. ಸದಾ ಒಂದಿಲ್ಲೊಂದು ಕಾರ್ಯದಲ್ಲಿ ತೊಡಗುವ, ಚಪಲಚಿತ್ತದ ಹೃದಯರಾಮನಲ್ಲಿ ಧ್ಯಾನಪರಸ್ವಭಾವ ಲವಲೇಶವಾದರೂ ಇರಲಿಲ್ಲ. ಆದರೆ ಧ್ಯಾನಪರತೆ ನಿಃಸ್ವಾರ್ಥತೆಗಳೇ ಮೂರ್ತೀಭವಿಸಿದಂತಿದ್ದ ರಾಮಕೃಷ್ಣ

ರೊಂದಿಗಿನ ನಿರಂತರ ಸಂಪರ್ಕ ಸಂಬಂಧಗಳಿಂದಾಗಿ ಅವನಲ್ಲೂ ಆಗಾಗ ಆ ಗುಣಗಳು ಮಿಂಚುವುದಿತ್ತು. ಇಂತಹ ಎರಡು ವಿಭಿನ್ನ ವ್ಯಕ್ತಿಗಳು ಒಂದೆಡೆ ಸೇರಿದ್ದುದು, ಅವರ ನಡುವೆ ಅಂತಹ ಸ್ನೇಹಬಾಂಧವ್ಯ ಬೆಳೆದದ್ದು, ಅಷ್ಟೊಂದು ವರ್ಷಗಳವರೆಗೆ ಒಟ್ಟಾಗಿದ್ದುದು—ಇವುಗಳನ್ನೆಲ್ಲ ಭಾವಿಸಿ ನೋಡಿದಂತೆಲ್ಲ, ಇದು ದೈವೇಚ್ಛೆಯಲ್ಲದೆ ಬೇರಲ್ಲ ಎಂಬುದು ವೇದ್ಯವಾಗುತ್ತದೆ. ರಾಮಕೃಷ್ಣರು ತೀವ್ರ ಸಾಧನಾಮಯ ಜೀವನವನ್ನು ಪ್ರಾರಂಭಿಸಿದ ಮೇಲಂತೂ ಅವರಿಗೆ, ತಿನ್ನುವುದು-ಕುಡಿಯುವುದರಿಂದ ಹಿಡಿದು ಯಾವುದೇ ಬಗೆಯ ದೈಹಿಕ ಕಾರ್ಯಕಲಾಪಗಳ ಕಡೆಗೆ ಗಮನ ಹರಿಸಲು ಸಾಧ್ಯವಾಗುತ್ತಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವರಿಂದ ಅಂತಹ ಕಾರ್ಯಗಳನ್ನೆಲ್ಲ ಬಲಾತ್ಕಾರವಾಗಿ ಮಾಡಿಸಬಲ್ಲ ವ್ಯಕ್ತಿಯೊಬ್ಬನಿಲ್ಲದಿದ್ದಲ್ಲಿ ಆ ಸಾಧನೆಗಳು ಪೂರ್ಣಗೊಳ್ಳುತ್ತಿದ್ದುವೋ ಇಲ್ಲವೊ ಹೇಳಲಾಗದು. ಇಂತಹ ಅಂಗ ರಕ್ಷಣೆಯ ಕಾರ್ಯಕ್ಕೆ ಹೇಳಿಮಾಡಿಸಿದಂತಿದ್ದ, ಹೃದಯ. ಅಷ್ಟೇ ಅಲ್ಲ, ಅವನಿಲ್ಲದಿದ್ದರೆ ಆ ಪ್ರಚಂಡ ಸಾಧನೆಯ ಆವೇಗದಲ್ಲಿ ರಾಮಕೃಷ್ಣರ ಶರೀರ ಉಳಿದುಕೊಳ್ಳುವುದೇ ಅಸಾಧ್ಯವಾಗುತ್ತಿತ್ತು. ಆದ್ದರಿಂದ ಹೃದಯನ ಹೆಸರು ಶ್ರೀರಾಮಕೃಷ್ಣರ ಲೀಲಾಮಯ ಜೀವನದಲ್ಲಿ ಅವಿಭಾಜ್ಯವಾಗಿ ಬೆರೆತುಕೊಂಡಿದೆ. ಅವನು ಎಂದೆಂದಿಗೂ ನಮ್ಮೆಲ್ಲರ ಹೃದಯಪೂರ್ವಕ ಭಕ್ತ್ಯಾದರಗಳಿಗೆ ಪಾತ್ರನಾಗಿದ್ದಾನೆ.

ಹೃದಯ ದಕ್ಷಿಣೇಶ್ವರಕ್ಕೆ ಬಂದಾಗ ರಾಮಕೃಷ್ಣರಿಗೆ ಇಪ್ಪತ್ತು ವರ್ಷ ನಡೆಯುತ್ತಿತ್ತು. ಅವನು ಬಂದಾಗಿನಿಂದ ಅವರ ಜೀವನ ಎಷ್ಟೋ ಸುಲಭವಾಯಿತು. ಸ್ನಾನ ಮಾಡುವುದು, ಅಡ್ಡಾಡುವುದರಿಂದ ಮೊದಲ್ಗೊಂಡು ಅವರ ಎಲ್ಲ ಕೆಲಸಗಳಲ್ಲೂ ಆತ ನೆರವಾಗುತ್ತಿದ್ದ. ಬಾಲಸ್ವಭಾವದ ರಾಮಕೃಷ್ಣರ ಎಷ್ಟೋ ವರ್ತನೆಗಳು ಸಾಮಾನ್ಯ ಜನರಿಗೆ ಅರ್ಥಹೀನವಾಗಿ ಇಲ್ಲವೆ ಹುಚ್ಚುಚ್ಚಾಗಿ ಕಾಣುತ್ತಿದ್ದುವು. ಆದರೆ ಹೃದಯ ಮಾತ್ರ ಅವರ ಇಂತಹ ವರ್ತನೆಗೆ ಆಕ್ಷೇಪಿಸುವುದಿರಲಿ, ಅದನ್ನೇ ಸರಿಯೆಂದು ಸಮರ್ಥಿಸುತ್ತಿದ್ದ. ಅವರಿಗೆ ಬೆಂಬಲವಾಗಿ ನಿಲ್ಲುತ್ತಿದ್ದ. ಇದರಿಂದ ಸಹಜವಾಗಿಯೇ ಅವನು ಅವರಿಗೆ ತುಂಬ ಪ್ರೀತಿಪಾತ್ರನಾದ.

ಹೃದಯನೇ ಮುಂದೆ ಹೇಳುತ್ತಾನೆ: "ಮೊದಲಿನಿಂದಲೂ ಶ್ರೀರಾಮಕೃಷ್ಣರ ಬಗ್ಗೆ ನನ್ನಲ್ಲಿ ಒಂದು ಬಗೆಯ ಅನಿರ್ವಚನೀಯ ಆಕರ್ಷಣೆಯುಂಟಾಗುತ್ತಿತ್ತು. ನಾನು ಅವರನ್ನು ಸದಾ ನೆರಳಿನಂತೆ ಹಿಂಬಾಲಿಸುತ್ತಿದ್ದೆ. ಅವರಿಂದ ಒಂದು ನಿಮಿಷದ ಅಗಲಿಕೆಯೂ ನನಗೆ ವೇದನೆಯುಂಟುಮಾಡುತ್ತಿತ್ತು. ನಾನು ಸ್ನಾನ ಮಾಡುತ್ತಿದ್ದುದು, ಅಡ್ಡಾಡುತ್ತಿದ್ದುದು, ಕುಳಿತುಕೊಳ್ಳುತ್ತಿದ್ದುದು, ಮಲಗಿಕೊಳ್ಳುತ್ತಿದ್ದುದು ಎಲ್ಲವೂ ಅವರೊಟ್ಟಿಗೇ. ಮಧ್ಯಾಹ್ನದ ಊಟದ ವೇಳೆಯಲ್ಲಿ ಮಾತ್ರ ನಾವು ಬೇರೆಯಾಗುತ್ತಿದ್ದೆವು."

ಇವರು ಹೀಗೆ ಬೇರೆಯಾಗುತ್ತಿದ್ದುದೇಕೆಂದರೆ ಇಬ್ಬರೂ ಊಟ ಮಾಡುತ್ತಿದ್ದುದು ಬೇರೆಬೇರೆ ಕಡೆಗಳಲ್ಲಿ. ಕಾಳೀ ದೇವಾಲಯದಿಂದ ಬರುವ ಅನ್ನಪ್ರಸಾದವನ್ನು ತೆಗೆದುಕೊಳ್ಳಲು ಹೃದಯನಿಗೇನೂ ಅಭ್ಯಂತರವಿರಲಿಲ್ಲ. ಆದರೆ ರಾಮಕೃಷ್ಣರು ಮಾತ್ರ ತಮ್ಮ ಸ್ವಯಂಪಾಕ ಪದ್ಧತಿಯನ್ನಿನ್ನೂ ಬಿಟ್ಟಿರಲಿಲ್ಲ. ಆದ್ದರಿಂದ

ಹೃದಯನು ಅವರಿಗೆ ಅಡಿಗೆ ಮಾಡಲು ಒಲೆ ಸಿದ್ಧಪಡಿಸುವುದೇ ಮೊದಲಾಗಿ ಎಲ್ಲ ಕೆಲಸಗಳನ್ನೂ ಮಾಡಿಕೊಟ್ಟು ಹೋಗುತ್ತಿದ್ದ. ರಾತ್ರಿ ವೇಳೆ ಮಾತ್ರ ರಾಮಕೃಷ್ಣರು ಬೇರೆ ದಾರಿಯಿಲ್ಲದೆ, ಕಾಳಿಗೆ ನೈವೇದ್ಯ ಮಾಡಿದ ಲೂಚಿ (ಮೈದಾ ಹಿಟ್ಟಿನಿಂದ ತಯಾರಿಸಲಾಗುವ ಒಂದು ಬಗೆಯ ಪೂರಿ)ಯನ್ನು ತಿನ್ನುತ್ತಿದ್ದರು. ಅವರ ಮನಸ್ಸಿನಲ್ಲಿ ತಾವು ಅಂಬಿಗರವಳ ಆಹಾರವನ್ನು ತೆಗೆದುಕೊಳ್ಳಬೇಕಾಯಿ ತಲ್ಲ ಎಂಬ ಚಿಂತೆ ಕೊರೆಯುತ್ತಲೇ ಇತ್ತು. ಕೆಲವೊಮ್ಮೆ ಅವರು ಜಗನ್ಮಾತೆಯಲ್ಲಿ, "ಇದೇನಮ್ಮ! ನೀನು ನನ್ನನ್ನು ಅಂಬಿಗರವಳಿಂದ ಆಹಾರ ಸ್ವೀಕರಿಸುವಂತೆ ಮಾಡುತ್ತಿದ್ದೀಯಲ್ಲ!" ಎಂದು ಅಶ್ರುನಯನರಾಗಿ ಮೊರೆಯಿಡುತ್ತಿದ್ದರು. ಅವರು ಮಾತ್ರವೇ ಅಲ್ಲ, ಎಷ್ಟೋ ಜನ ಬಡಬ್ರಾಹ್ಮಣರೂ ಕೂಡ ಆಗ ಕಾಳೀ ದೇವಾ ಲಯದಲ್ಲಿ ಪ್ರಸಾದ ಸ್ವೀಕರಿಸುತ್ತಿರಲಿಲ್ಲ. ಆದ್ದರಿಂದ, ತಯಾರಿಸಿದ ಪ್ರಸಾದದಲ್ಲಿ ಬಹುಭಾಗ ಖರ್ಚಾಗುತ್ತಿರಲಿಲ್ಲ. ಅದನ್ನು ಹಸುಗಳಿಗೆ ತಿನ್ನಿಸುತ್ತಿದ್ದರು. ಇನ್ನೂ ಉಳಿದರೆ ಗಂಗೆಗೆ ಚೆಲ್ಲುತ್ತಿದ್ದರು. ಆದರೆ ರಾಮಕೃಷ್ಣರ ಈ ಮನೋಭಾವ ಕೆಲದಿನ ಗಳಲ್ಲೇ ಬದಲಾಯಿತು. ಅವರು ದೇವಾಲಯದ ಅರ್ಚಕರಾಗಿ ನೇಮಕಗೊಳ್ಳುವ ವೇಳೆಗೆ—ಎಂದರೆ ದೇವಸ್ಥಾನ ಪ್ರತಿಷ್ಠಾಪನೆಗೊಂಡ ಎರಡು–ಮೂರು ತಿಂಗಳಿಗೆ —ಸಂಪೂರ್ಣ ಬದಲಾದರೆಂದು ತೋರುತ್ತದೆ. ಆ ತರುವಾಯ ಅವರು ದೇವಿಯ ಪ್ರಸಾದವನ್ನೇ ಸ್ವೀಕರಿಸತೊಡಗಿದರು.

೨೨

## ಅರ್ಚಕಪದವಿಯ ಅಂಗೀಕಾರ

ಶ್ರೀರಾಮಕೃಷ್ಣರು ತನ್ನನ್ನು ಬಹುವಾಗಿ ಪ್ರೀತಿಸುತ್ತಾರೆಂಬ ವಿಷಯ ಹೃದಯನಿಗೆ ತಿಳಿದದ್ದೇ. ಆದರೆ ಒಂದು ವಿಷಯ ಮಾತ್ರ ಅವನಿಗೆ ಬಹಳ ದಿನಗಳವರೆಗೆ ಅರ್ಥವಾಗಲೇ ಇಲ್ಲ. ಅವನು ತನ್ನ ದೊಡ್ಡ ಮಾವನಿಗೆ ನೆರವಾಗಲೆಂದು ಹೋದಾಗಲೋ, ಮಧ್ಯಾಹ್ನದ ಊಟವಾದ ಮೇಲೆ ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳುವಾಗಲೋ, ರಾತ್ರಿಯ ಹೊತ್ತು ದೇವಿಯ ಆರತಿ ನೋಡುತ್ತ ನಿಂತಾಗಲೋ ರಾಮಕೃಷ್ಣರು ಇದ್ದಕ್ಕಿದ್ದಂತೆ ಎಲ್ಲೋ ಮಾಯವಾಗಿಬಿಡುತ್ತಿದ್ದರು. 'ಈಗತಾನೆ ಇಲ್ಲಿದ್ದ ಮಾವ ಎಲ್ಲಿಗೆ ಹೋದ!' ಎಂದು ಹೃದಯ ಆಶ್ಚರ್ಯಪಡುತ್ತಿದ್ದ. ಒಂದೆರಡು ಗಂಟೆಗಳಾದ ಮೇಲೆ ಮತ್ತೆ ಅವರು ಕಾಣಿಸಿಕೊಂಡಾಗ, "ಅರೆ! ಇಷ್ಟು ಹೊತ್ತು ನೀನು ಅದೆಲ್ಲಿ ಮಾಯವಾಗಿದ್ದೆ?" ಎಂದು ಕೇಳಿದರೆ, "ಇಲ್ಲೇ ಆಚೆಕಡೆ ಇದ್ದೆನಲ್ಲ!" ಎಂದು ರಾಮಕೃಷ್ಣರು ಹಾರಿಕೆಯ ಉತ್ತರ ಕೊಡುತ್ತಿದ್ದರು. ಒಂದೊಂದು ಸಲ ಅವನು ತನ್ನ ಕುತೂಹಲ ತಾಳಲಾರದೆ ಹುಡುಕಲು ಹೊರಡುತ್ತಿದ್ದ. ಆಗ ರಾಮಕೃಷ್ಣರು ಪಂಚವಟಿಯ ಕಡೆಯಿಂದ ಹಿಂದಿರುಗುವುದು ಕಾಣುತ್ತಿತ್ತು. 'ಎಲ್ಲೋ ಶೌಚಕ್ಕೆ ಹೋಗಿದ್ದಿರಬೇಕು' ಎಂದುಕೊಂಡು ಸುಮ್ಮನಾಗುತ್ತಿದ್ದ.

ಒಂದು ದಿನ ರಾಮಕೃಷ್ಣರಿಗೆ ಶಿವನ ಪ್ರತಿಮೆ ತಯಾರಿಸಿ ಪೂಜಿಸಬೇಕೆಂಬ ಇಚ್ಛೆಯಾಯಿತು. ಮಣ್ಣಿನಿಂದ ವಿಗ್ರಹಗಳನ್ನು ಮಾಡುವ ಕಲೆ ಅವರಿಗೆ ಬಾಲ್ಯದಿಂದಲೂ ಬಂದದ್ದೇ ಅಲ್ಲವೆ? ಆದ್ದರಿಂದ ಆ ಇಚ್ಛೆ ಮನದಲ್ಲಿ ಮೂಡಿದ ಕೂಡಲೇ ಗಂಗಾತೀರಕ್ಕೆ ಹೋದರು. ಸ್ವಲ್ಪ ಜೇಡಿ ಮಣ್ಣು ತೆಗೆದುಕೊಂಡು ತಮ್ಮ ಕೈಯಾರೆ ತ್ರಿಶೂಲ-ಡಮರುಧಾರಿಯಾದ, ನಂದಿಯೊಡಗೂಡಿದ ಶಿವನ ಸುಂದರ ವಿಗ್ರಹವನ್ನು ರೂಪಿಸಿದರು. ಬಳಿಕ ಅದನ್ನು ತಂದಿಟ್ಟುಕೊಂಡು ಪೂಜಿಸಲಾರಂಭಿಸಿದರು. ಹೃದಯನೂ ಬಳಿಯಲ್ಲೇ ಕುಳಿತು ನೋಡುತ್ತಿದ್ದ.

ಇದೇ ವೇಳೆಗೆ ಮಥುರಬಾಬು ಸುಮ್ಮನೆ ಆ ದಾರಿಯಾಗಿ ಬಂದ; ರಾಮಕೃಷ್ಣರು ಅತ್ಯಂತ ತನ್ಮಯತೆಯಿಂದ ಪೂಜೆ ಮಾಡುತ್ತ ಕುಳಿತಿರುವುದನ್ನು ಕಂಡ. ಅದಾವ ದೇವತೆಯನ್ನು ಪೂಜಿಸುತ್ತಿರಬಹುದು ಇವರು? ಕುತೂಹಲದಿಂದ ಹತ್ತಿರ ಬಂದು ನೋಡಿದ—ಅದೊಂದು ಶಿವನ ವಿಗ್ರಹ. ಅಷ್ಟು ದೊಡ್ಡದೇನಲ್ಲ; ಆದರೆ ತುಂಬ ಮಾಟವಾಗಿದೆ, ಲಕ್ಷಣವಾಗಿದೆ. ಮಥುರನಿಗೆ ತುಂಬ ಸಂತೋಷವಾಯಿತು. ಇನ್ನಷ್ಟು ಹತ್ತಿರ ನಿಂತು ಗಮನಿಸಿದಾಗ ಅನ್ನಿಸಿತು, 'ಆಹ್! ನಿಜಕ್ಕೂ

ಇಂತಹ ದೈವೀ ಕಳೆಯಿರುವ ವಿಗ್ರಹ ಸಿಗುವುದು ಕಷ್ಟವೇ' ಎಂದು. ರಾಮಕೃಷ್ಣರಿಗೆ ಮಾತ್ರ ಮಥುರಬಾಬು ಬಂದಿರುವುದರ ಪರಿವೆಯೇ ಇಲ್ಲ. ಮಥುರ ಕುತೂಹಲ ದಿಂದ ಹೃದಯುನನ್ನು ಕೇಳಿದ:

"ಈ ವಿಗ್ರಹವನ್ನು ಎಲ್ಲಿಂದ ಕೊಂಡುತಂದಿರಿ ?"

ಹೃದಯು: "ಕೊಂಡು ತರುವುದೆ ? ಇಲ್ಲ, ಇಲ್ಲ. ರಾಮಕೃಷ್ಣರೇ ಕೈಯಾರೆ ಮಾಡಿದ್ದು ಇದನ್ನು. ಅವರಿಗೆ ದೇವದೇವಿಯರ ವಿಗ್ರಹಗಳನ್ನು ತಯಾರಿಸುವ ಕಲೆ ಬಹಳ ಚೆನ್ನಾಗಿ ಕರಗತವಾಗಿದೆ. ಬೇಕೆಂದರೆ ಮುರಿದು ಹೋದ ವಿಗ್ರಹವನ್ನು ಸರಿಪಡಿಸಲೂ ಬಲ್ಲರು."

ಮಥುರ: "ಏನು ! ಇವರೇ ತಯಾರಿಸಿದ್ದೆ ?.... ಎಷ್ಟು ಸುಂದರವಾಗಿದೆ ! ಪೂಜೆಯಾದ ಮೇಲೆ ದಯವಿಟ್ಟು ಇದನ್ನು ನನಗೆ ಕೊಡಲು ಸಾಧ್ಯವೆ ?"

ಹೃದಯು: "ಆಗಲಿ, ಅದಕ್ಕೇನಂತೆ."

ಪೂಜೆಯಾದ ಮೇಲೆ ಹೃದಯುರಾಮ ರಾಮಕೃಷ್ಣರ ಒಪ್ಪಿಗೆ ಪಡೆದು ವಿಗ್ರಹ ವನ್ನು ಮಥುರನ ಕೈಗೆ ತಲುಪಿಸಿದ. ಮಥುರ ಅದನ್ನು ಕೈಯಲ್ಲಿ ಹಿಡಿದು ಇನ್ನಷ್ಟು ಸೂಕ್ಷ್ಮವಾಗಿ ಪರಿಶೀಲಿಸಿದ. ಇಂತಹ ಸುಂದರ ವಿಗ್ರಹವನ್ನು ರಾಣಿಯವರು ನೋಡಲೇಬೇಕು ಎನ್ನಿಸಿತು, ಕಳಿಸಿಕೊಟ್ಟ. ವಿಗ್ರಹವನ್ನು ಕಂಡು ರಾಣಿಯೂ ಆನಂದಾಶ್ಚರ್ಯ ಪಡುತ್ತ ಅದರ ಕಲಾಕಾರನನ್ನು ಬಾಯ್ತುಂಬ ಕೊಂಡಾಡಿದಳು. ಆದರೆ ಅದನ್ನು ಮಾಡಿದ್ದು ಹಿರಿಯ ಅರ್ಚಕರ ಸೋದರರೇ ಎಂದು ತಿಳಿದಾಗ ಮಾತ್ರ ಅವಳ ಆಶ್ಚರ್ಯ ಇಮ್ಮಡಿಸಿತು. ಅವರನ್ನು ದೇವಾಲಯದ ಕಾರ್ಯಕ್ಕೆ ತೆಗೆದುಕೊಳ್ಳಬೇಕೆಂಬ ಮಥುರನ ಇಚ್ಛೆ ಈಗ ಇನ್ನಷ್ಟು ಬಲವಾಯಿತು.

ತನ್ನನ್ನು ಕೆಲಸಕ್ಕೆ ನೇಮಿಸಿಕೊಳ್ಳಬೇಕೆಂಬ ಮಥುರಬಾಬುವಿನ ಉದ್ದೇಶವನ್ನು ರಾಮಕೃಷ್ಣರು ಅದಾಗಲೇ ಅಣ್ಣನಿಂದ ತಿಳಿದಿದ್ದರು. ಆದರೆ ಅವರು ಅದಕ್ಕೆ ಕಿವಿಗೊಟ್ಟಿರಲಿಲ್ಲ. 'ಭಗವಂತನ ಹೊರತು ಮತ್ತಾರ ಸೇವೆಯನ್ನೂ ಮಾಡಲಾರೆ' ಎಂಬ ಭಾವ ಅವರ ಮನಸ್ಸಿನಲ್ಲಿ ದೃಢವಾಗಿ ಬೇರುಬಿಟ್ಟಿತ್ತು. ಅರ್ಚಕನ ಕೆಲಸವೂ ಕೂಡ ಭಗವಂತನ ಸೇವೆ ಎಂದು ಅವರಿಗೆ ಅನ್ನಿಸಿರಲಿಲ್ಲ. ದೇವರ ಧ್ಯಾನ ಮಾಡುವುದೇ ನಿಜವಾದ ಭಗವತ್ಸೇವೆ ಎಂದು ಅವರು ಭಾವಿಸಿದ್ದರು.

ರಾಮಕೃಷ್ಣರೇನೋ ಆಲೋಚಿಸಿದ್ದರು, ತಾವು ಅರ್ಚಕನ ಹುದ್ದೆಗೆ ಒಪ್ಪಿ ಕೊಳ್ಳುವುದಿಲ್ಲ ಎಂದು. ಆದರೂ ಮಥುರಾನಾಥನ ಅಪೇಕ್ಷೆಯನ್ನು ಅಣ್ಣನ ಮೂಲಕ ತಿಳಿದಾಗಿನಿಂದ ಸಾಧ್ಯವಾದಷ್ಟೂ ಆತನ ಕಣ್ಣಿಗೇ ಬೀಳದಂತೆ ಇರತೊಡಗಿ ದರು. ಏಕೆಂದರೆ ತಮ್ಮ ಒಳಮನಸ್ಸಿನ ಆದೇಶದಂತೆ ನಡೆಯುವಲ್ಲಿ ಅವರು ಎಷ್ಟು ಕಟ್ಟುನಿಟ್ಟಾಗಿದ್ದರೊ, ಇತರರ ಮನಸ್ಸನ್ನು ನೋಯಿಸದಿರುವ ವಿಷಯದಲ್ಲೂ ಅಷ್ಟೇ ಕಟ್ಟುನಿಟ್ಟಾಗಿದ್ದರು. ಮತ್ತು ಗೌರವಾರ್ಹರಾದ ಯಾರೇ ಆಗಲಿ, ಅವರನ್ನು ಅವರ ಸದ್ಗುಣಗಳಿಗಾಗಿ ಗೌರವಿಸುವುದು ರಾಮಕೃಷ್ಣರ ಸ್ವಭಾವ. ಆ ಬಗೆಯ ಗೌರವದ ಭಾವ ಅವರಲ್ಲಿ ತಾನೇತಾನಾಗಿ ಉಂಟಾಗುತ್ತಿತ್ತು. ಅದರಲ್ಲಿ ಕೃತ್ರಿಮತೆ ಯಾಗಲಿ ಪ್ರತಿಫಲಾಪೇಕ್ಷೆಯಾಗಲಿ ಇರಲಿಲ್ಲ. ಹೀಗಿರುವಾಗ, ತಮ್ಮ ಇಚ್ಛೆಗೆ

ವಿರುದ್ಧವಾಗಿ ಅರ್ಚಕಕಾರ್ಯಕ್ಕೆ ಒಪ್ಪಿಕೊಳ್ಳುವಂತೆ ಮಥುರಬಾಬುವೇ ಸ್ವತಃ ಬಂದು ತಮ್ಮನ್ನು ಕೇಳಿಕೊಂಡರೆ? ಮತ್ತು ತಾವು ಆ ಬಗ್ಗೆ ಮತ್ತೊಮ್ಮೆ ಚೆನ್ನಾಗಿ ಆಲೋಚಿಸಿ ನಿರ್ಧಾರಕ್ಕೆ ಬರುವ ಮುನ್ನವೇ ಅವನು ಒತ್ತಾಯ ಪಡಿಸಿದರೆ? ಆಗ ತಾವು ಆಗುವುದಿಲ್ಲವೆಂದು ಹಟ ಹಿಡಿಯಬೇಕಾಗುತ್ತದೆ; ಅವನ ಮನ ನೋಯಿಸ ಬೇಕಾಗುತ್ತದೆ. ಈ ತಾಪತ್ರಯವೆಲ್ಲ ಏಕೆ ಬೇಕು? ಇದು ರಾಮಕೃಷ್ಣರ ಆಲೋಚನೆ. ಅಲ್ಲದೆ, ಆಗ ರಾಮಕೃಷ್ಣರಾದರೋ ಕೇವಲ ಒಬ್ಬ ಅನಾಮಧೇಯ ತರುಣ. ಆದರೆ ಮಥುರಬಾಬು? ರಾಣಿ ರಾಸಮಣಿಯ ಬಲಗೈ ಬಂಟ; ಶ್ರೀಮಂತ ಜಮೀನ್ದಾರ! ಗೌರವಸ್ಥ, ಹಿರಿಯ! ಧನಬಲದೊಂದಿಗೆ ಜನಬಲವೂ ಇರುವವ! ಇಂತಹ ವ್ಯಕ್ತಿಗೆ ತಾವು ಎದುರಾಡಿ, ಆತನ ವಿನಂತಿಯನ್ನು ತಳ್ಳಿಹಾಕಿದರೆ ಆತನಿಗೆ ಮುಖಭಂಗವಾದಂತಾಗುವುದಿಲ್ಲವೆ? ಜನ ತಮ್ಮನ್ನು 'ಹುಡುಗುಬುದ್ಧಿ, ಹಟ ಮಾರಿ' ಎಂದು ಜರೆಯಬಹುದಲ್ಲವೆ?

ದಿನಗಳೆದಂತೆಲ್ಲ, ದಕ್ಷಿಣೇಶ್ವರದ ಕಾಳೀ ದೇವಾಲಯದ ಜೀವನ ರಾಮಕೃಷ್ಣ ರಿಗೆ ಹೆಚ್ಚೆಚ್ಚು ಪ್ರಿಯವಾಯಿತು. ದೇವಿಯ ಸನ್ನಿಧಾನ, ಸುತ್ತಮುತ್ತಲ ಸುಂದರ ಪರಿಸರ, ಭಾಗೀರಥಿಯ ಸಾಮೀಪ್ಯ—ಇವುಗಳನ್ನು ಅವರು ಬಿಟ್ಟಿರಲಾರದಾದರು. ಈ ಬದಲಾವಣೆ ಸ್ವತಃ ಅವರ ಗಮನಕ್ಕೂ ಬಾರದಿರಲಿಲ್ಲ. ಹುಟ್ಟೂರಾದ ಕಾಮಾರ ಪುಕುರಕ್ಕೆ ಹಿಂದಿರುಗಬೇಕೆಂಬ ಬಯಕೆ ಅವರ ಮನದಿಂದ ತಾನಾಗಿಯೇ ದೂರ ವಾಯಿತು. ಮತ್ತು, ಹೆಚ್ಚಿನ ಜವಾಬ್ದಾರಿಯೇನೂ ಇಲ್ಲದಂತಹ ಕೆಲಸವನ್ನೇನಾ ದರೂ ಮಾಡಿಕೊಂಡು ದಕ್ಷಿಣೇಶ್ವರದಲ್ಲೇ ಉಳಿದುಕೊಳ್ಳಲು ಅವರು ಮಾನಸಿಕ ವಾಗಿ ಸಿದ್ಧರಾದರು.

ಅಂತೂ ಅವರು ಏನಾಗಬಹುದೆಂದು ನಿರೀಕ್ಷಿಸಿದ್ದರೋ ಅದು ಒಂದು ದಿನ ನಡೆದೇಹೋಯಿತು. ಮಥುರಬಾಬು ಕಾಳಿಗೆ ಪ್ರಣಾಮ ಸಲ್ಲಿಸಿ ಹೋಗಲು ಬಂದಿದ್ದ. ಆ ಹೊತ್ತಿಗೆ ದೂರದಲ್ಲಿ ರಾಮಕೃಷ್ಣರು ಹೃದಯನೊಂದಿಗೆ ಹೋಗು ತ್ತಿರುವುದನ್ನು ಕಂಡು, ಅವರಿಗೆ ಕರೆ ಕಳಿಸಿದ. ರಾಮಕೃಷ್ಣರೂ ಮಥುರ ಬರುತ್ತಿದ್ದು ದನ್ನು ಮೊದಲೇ ಕಂಡಿದ್ದರು. ಈಗ ಅವನಿಗೆ ಸಿಕ್ಕಿಹಾಕಿಕೊಳ್ಳಬಾರದು ಎಂದು ಮೆಲ್ಲನೆ ಅಲ್ಲಿಂದ ಕಣ್ಮರೆಯಾಗುವ ಯತ್ನದಲ್ಲಿದ್ದರು. ಅಷ್ಟು ಹೊತ್ತಿಗೆ ಆಳು ಬಂದು, "ಬಾಬುಗಳು ಕರೆಯುತ್ತಿದ್ದಾರೆ" ಎಂದ. ರಾಮಕೃಷ್ಣರು ಹಿಂದೆಮುಂದೆ ನೋಡತೊಡಗಿದರು. ಅದನ್ನು ಕಂಡ ಹೃದಯ ಹೇಳಿದ:

"ಅದೇಕೆ ಯೋಚನೆ ಮಾಡುತ್ತಿರುವೆ? ನೋಡಿಕೊಂಡು ಬರೋಣ ಬಾ!"

ರಾಮಕೃಷ್ಣರು: "ನಾನಲ್ಲಿಗೆ ಹೋದರೆ ಅವರು ನನಗೆ ದೇವಸ್ಥಾನದ ಕೆಲಸ ಒಪ್ಪಿಸುತ್ತಾರೆ."

ಹೃದಯ: "ಆಗಲೇಳು! ಇನ್ನೂ ಒಳ್ಳೆಯದೇ ಆಯಿತಲ್ಲ? ಇಂಥಾ ಒಂದು ಕ್ಷೇತ್ರದಲ್ಲಿ, ಇಂಥಾ ಪ್ರಖ್ಯಾತ ವ್ಯಕ್ತಿಗಳ ಕೆಳಗೆ ಕೆಲಸ ಸಿಗಬೇಕಾದರೆ ಅದೃಷ್ಟವಿರ ಬೇಕು, ಅಲ್ಲವೇನಯ್ಯ! ನೀನೇಕೆ ಇಷ್ಟೊಂದು ಹಿಂಜರಿಯುತ್ತಿದ್ದೀಯೋ ನನಗರ್ಥ ವಾಗುತ್ತಿಲ್ಲ."

ರಾಮಕೃಷ್ಣರು: "ನೋಡು, ನನಗೆ ಜೀವನಪರ್ಯಂತ ಯಾವುದಾದರೊಂದು ಉದ್ಯೋಗಕ್ಕೆ ಕಟ್ಟುಬಿದ್ದು ಬದುಕು ನಡೆಸಲು ಸಾಧ್ಯವೇ ಇಲ್ಲ. ಅಲ್ಲದೆ ನಾನಿಲ್ಲಿ ಪೂಜೆ ಮಾಡಲು ಒಪ್ಪಿಕೊಂಡರೆ ದೇವಿಯ ಮೈಮೇಲಿನ ಆಭರಣಗಳಿಗೆಲ್ಲ ನಾನೇ ಹೊಣೆಗಾರನಾಗಬೇಕಾಗುತ್ತದೆ. ಅದೊಂದು ದೊಡ್ಡ ತಲೆನೋವಿನ ಕೆಲಸ. ಅದು ನನ್ನಿಂದಾಗದು. ಆದರೆ ಒಂದು ವಿಷಯ. ನೀನೇನಾದರೂ ಆ ಆಭರಣಗಳ ಜವಾಬ್ದಾರಿಯನ್ನು ಹೊತ್ತುಕೊಳ್ಳುವುದಾದರೆ, ಅರ್ಚನೆಯ ಕೆಲಸವನ್ನು ಮಾತ್ರ ಮಾಡಿಕೊಂಡಿರಲು ನನ್ನ ಅಭ್ಯಂತರವಿಲ್ಲ."

'ರೋಗಿ ಬಯಸಿದ್ದೂ ಹಾಲನ್ನ, ವೈದ್ಯ ಹೇಳಿದ್ದೂ ಹಾಲನ್ನ.' ಹೃದಯನ ಎದೆ ಪುಟಿಯಿತು ! ಹೇಳಿದ: "ಮಾವ, ನಾನಿರುವಾಗ ನಿನಗೇಕೆ ಚಿಂತೆ ? ನಿನಗಾಗಿ ಏನು ಮಾಡಲೂ ಸಿದ್ಧ ನಾನು !"

ಶ್ರೀರಾಮಕೃಷ್ಣರಿಗೆ ನಿಶ್ಚಿಂತೆಯಾಯಿತು. ಈಗವರು ಹೃದಯನೊಂದಿಗೆ ನೇರವಾಗಿ ಮಥುರನ ಬಳಿಗೆ ಹೋದರು. ಮಥುರ ಅತ್ಯಂತ ವಿನಯದಿಂದ ಹೇಳಿದ:

"ಭಟ್ಟಾಚಾರ್ಯರಿಗೆ ನಮಸ್ಕಾರ. ಬಹಳ ದಿನಗಳಿಂದಲೂ ನಿಮ್ಮನ್ನು ಭೇಟಿಯಾಗಬೇಕೆಂದಿದ್ದೆ. ಇಂದು ನೀವು ಸಿಕ್ಕಿದಿರಿ. ನಿಮ್ಮಲ್ಲಿ ಒಂದು ವಿಷಯ ಮಾತನಾಡುವುದಿತ್ತು....

"ನಿಮಗೇ ತಿಳಿದಿರುವಂತೆ, ಇಲ್ಲಿ ರಾಣಿಯವರು ಕಟ್ಟಿಸಿದ ಹಲವಾರು ದೇವಾಲಯಗಳಿವೆ. ಇವುಗಳಲ್ಲಿ ದೇವರ ಅರ್ಚನೆಗೆ, ಅಲಂಕಾರಕ್ಕೆ ಮತ್ತು ಇನ್ನಿತರ ಕೆಲಸಕಾರ್ಯಗಳಿಗೆ, ಆಚಾರವಂತರಾದ ಹಾಗೂ ಋತ್ವಿಕರಾದ ಬ್ರಾಹ್ಮಣರೇ ಆಗಬೇಕು. ದೈವಾನುಗ್ರಹದಿಂದ ಮತ್ತು ನಮ್ಮ ಭಾಗ್ಯವಿಶೇಷದಿಂದ ಜಗನ್ಮಾತೆಯ ಅರ್ಚನೆಗೆ ನಿಮ್ಮ ಅಣ್ಣಂದಿರಂತಹ ವಿಪ್ರವರೇಣ್ಯರು ದೊರಕಿದ್ದಾರೆ. ಅಂಥವರು ದೊರೆಯುವುದು ಬಹಳ ದುರ್ಲಭವೇ ಸರಿ. ಅಲ್ಲದೆ ಅವರೊಂದಿಗೆ, ಅವರಿಗೆ ತಕ್ಕ ತಮ್ಮಂದಿರಾಗಿ ನೀವೂ ಇಲ್ಲಿದ್ದೀರಿ. ನೀವೂ ಕೂಡ ಇಲ್ಲಿಯೇ ಉಳಿದುಕೊಂಡು ದೇವರ ಕಾರ್ಯದಲ್ಲಿ ನೆರವಾಗಬೇಕು ಎಂಬುದು ನಮ್ಮೆಲ್ಲರ ಅಪೇಕ್ಷೆ. ನಾನು ಈ ಹಿಂದೆಯೇ ಈ ಬಗ್ಗೆ ನಿಮ್ಮ ಅಣ್ಣಂದಿರ ಬಳಿ ಪ್ರಸ್ತಾಪಿಸಿದ್ದೆ. ನೀವು ನಮ್ಮ ಈ ಬೇಡಿಕೆಯನ್ನು ಮನ್ನಿಸಿದರೆ ನಮಗೆಲ್ಲ ಬಹಳ ಸಂತೋಷವಾಗುತ್ತದೆ...."

ರಾಮಕೃಷ್ಣರೆಂದರು: "ನೀವು ಹೇಳುವಷ್ಟು ಯೋಗ್ಯತೆ ನನ್ನಲ್ಲಿ ಇದೆಯೆ ? ಆದರೂ ನೀವು ಇಷ್ಟೆಲ್ಲ ಕೇಳಿಕೊಳ್ಳುತ್ತಿರುವಾಗ ನಾನು 'ಆಗದು' ಎನ್ನಲಾರೆ. ಆದರೆ ಒಂದು ಮಾತು — ದೇವರ ಮೈಮೇಲೆ ಬೆಲೆ ಬಾಳುವ ಆಭರಣಗಳೆಲ್ಲ ಇರುತ್ತವೆ. ಅವುಗಳ ಕಡೆಗೆ ಗಮನ ಕೊಡುವುದು, ಸದಾ ಅದರ ಬಗ್ಗೆ ಯೋಚನೆ ಮಾಡುತ್ತಿರುವುದು ಇವೆಲ್ಲ ನನ್ನ ಪ್ರಕೃತಿಗೆ ಒಗ್ಗುವುದೇ ಇಲ್ಲ. ದೇವರ ಪೂಜೆ ಅರ್ಚನೆಗಳನ್ನು ಬೇಕಾದರೆ ನಾನೂ ನನ್ನಿಂದಾದ ಮಟ್ಟಿಗೂ ಮಾಡಬಲ್ಲೆ. ಆದ್ದರಿಂದ, ಬೇರೆ ಯಾರಾದರೂ ಆಭರಣದ ಜವಾಬ್ದಾರಿ ಹೊರುವುದಾದರೆ ಪೂಜಾ ಕಾರ್ಯಗಳನ್ನು ಮಾಡಲು ನನ್ನ ಅಭ್ಯಂತರವಿಲ್ಲ. ಅಲ್ಲದೆ, ಈತ ನಮ್ಮ ಸೋದರಳಿಯ — ಹೃದಯರಾಮ ಎಂದು ಇವನ ಹೆಸರು — ಇಲ್ಲಿ ನಮ್ಮೊಂದಿಗೇ

ವಾಸವಾಗಿದ್ದಾನೆ. ಬಹಳ ಒಳ್ಳೆಯ ವ್ಯಕ್ತಿ. ಇವನು ಬೇಕಾದರೆ ಆ ಕೆಲಸ ಮಾಡಲು ಸಿದ್ಧ. ನಿಮಗೆ ಈ ವ್ಯವಸ್ಥೆ ಒಪ್ಪಿಗೆಯಾಗುವುದಾದರೆ ನನ್ನದೂ ಒಪ್ಪಿಗೆಯಿದೆ."

ಮಥುರನಿಗೆ ಬೇಕಾಗಿದ್ದುದೊಂದೇ—ರಾಮಕೃಷ್ಣರು ತಮ್ಮಲ್ಲಿಯೇ ಉಳಿದುಕೊಂಡು ದೇವರ ಕೆಲಸಗಳಲ್ಲಿ ನೆರವಾಗಬೇಕು. ಉಳಿದ ವಿಷಯವೆಲ್ಲ ಅವನಿಗೆ ಗೌಣ. ಆದ್ದರಿಂದ ಅವನು ಈ ಸಲಹೆಗೆ ಸಂತೋಷವಾಗಿ ಒಪ್ಪಿಕೊಂಡ.

ಕಾಳೀ ದೇವಾಲಯದ ಹಿರಿಯ ಅರ್ಚಕನಾದ ರಾಮಕುಮಾರನಿಗೆ ಈಗ ಇಬ್ಬರು ಸಹಾಯಕರು ಸಿಕ್ಕಿದರು— ಒಬ್ಬ ತನ್ನ ತಮ್ಮ, ಇನ್ನೊಬ್ಬ ತನ್ನ ಸೋದರಳಿಯ. ಬಾಬುಗಳ ಮಾತಿಗೆ ಬೆಲೆ ಕೊಟ್ಟಾದರೂ ತನ್ನ ತಮ್ಮ ಕೆಲಸಕ್ಕೆ ಒಪ್ಪಿಕೊಂಡದ್ದನ್ನು ಕಂಡು ರಾಮಕುಮಾರನಿಗೆ ತಲೆಯ ಮೇಲಿನ ದೊಡ್ಡ ಭಾರ ಇಳಿದಂತಾಯಿತು; ಮನಸ್ಸು ನಿರಾಳವಾಯಿತು.

ಇವಿಷ್ಟು ಘಟನೆಗಳೂ ನಡೆದದ್ದು ಕಾಳೀ ದೇವಾಲಯದ ಪ್ರತಿಷ್ಠಾಪನೆಯಾದ ಮೂರು ತಿಂಗಳೊಳಗಾಗಿ. ರಾಮಕೃಷ್ಣರು ಅತ್ಯಂತ ಭಕ್ತಿಭಾವದಿಂದ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸುತ್ತ ಬಂದರು. ಬಿಡುವಿನ ಸಮಯದಲ್ಲಿ ಹಿಂದಿನ ದಿನಚರಿಯೇ ಮುಂದುವರಿಯಿತು. ಆಗಾಗ ಭಗವದ್ಭಾವದಲ್ಲಿ ಮುಳುಗುತ್ತ ಇಲ್ಲವೆ ಹಾಡುಗಳನ್ನು ಹಾಡುತ್ತ ಭಾವಸಮಾಧಿಗೇರುವುದೂ ಇತ್ತು. ಇದನ್ನೆಲ್ಲ ಕಂಡ ಮಥುರ–ರಾಸಮಣಿಯರು ಅತ್ಯಾನಂದಿತರಾದರು.

## ಮೃಣ್ಮಯವಲ್ಲ, ಚಿನ್ಮಯ !

೧೮೫೫ರ ಆಗಸ್ಟ್ ತಿಂಗಳ ಸಮಯ. ರಾಧಾಗೋವಿಂದಸ್ವಾಮಿಯ ದೇವಾಲಯದಲ್ಲಿ ಶ್ರೀಕೃಷ್ಣ ಜನ್ಮಾಷ್ಟಮಿಯ ಸಮಾರಂಭಗಳೆಲ್ಲ ವೈಭವದಿಂದ ಜರುಗಿದುವು. ಮರುದಿನವೇ ನಂದೋತ್ಸವ. ಅಂದು ಕೂಡ ದೇವಾಲಯದಲ್ಲಿ ವಿಶೇಷ ಪೂಜಾದಿಗಳು. ಬೆಳಗಿನ ಪೂಜೆ, ಆರತಿ, ನೈವೇದ್ಯಗಳೆಲ್ಲ ಮುಗಿದುವು. ಮಧ್ಯಾಹ್ನದ ವೇಳೆಗೆ ರಾಧಾಗೋವಿಂದರನ್ನು ಶಯನಗೃಹದಲ್ಲಿ ತಂದಿರಿಸುವುದು ಸಂಪ್ರದಾಯ. ಅಂತೆಯೇ ಅರ್ಚಕ ಕ್ಷೇತ್ರನಾಥ ಚಟರ್ಜಿ ಶ್ರೀರಾಧೆಯ ವಿಗ್ರಹವನ್ನು ತೆಗೆದಿರಿಸಿ ಬಂದ. ಬಳಿಕ ಗೋವಿಂದನ ವಿಗ್ರಹವನ್ನು ತೆಗೆದುಕೊಂಡು ಹೋಗುತ್ತಿದ್ದಾನೆ— ದಾರಿಯಲ್ಲಿ ಸ್ವಲ್ಪ ನೀರು ಚೆಲ್ಲಿತ್ತು. ಮೊದಲೇ ನುಣುಪಾದ ಚಂದ್ರಕಾಂತ ಶಿಲೆಯ ನೆಲ. ಅರ್ಚಕ ಕಾಲುಜಾರಿ ಬಿದ್ದುಬಿಟ್ಟ. ವಿಗ್ರಹದ ಒಂದು ಕಾಲು ಮುರಿದು ಹೋಯಿತು! ಜನ ಬಂದು ಮುತ್ತಿಕೊಂಡರು. 'ಹೋ ಹೋ! ಅಪಚಾರವಾಯಿತು' ಎಂದು ಕೂಗಿಕೊಂಡರು. ಕ್ಷೇತ್ರನಾಥನಿಗೂ ಸ್ವಲ್ಪ ಪೆಟ್ಟಾಗಿತ್ತು. ಹೆದರಿಕೆಯಿಂದ ಆತ ನಡುಗುತ್ತಿದ್ದ. ಮೇಲ್ವಿಚಾರಕರಿಗೆ ಸುದ್ದಿ ಮುಟ್ಟಿತು. ತುಂಬ ಗಂಭೀರವಾದ ವಿಷಯ. ಈಗೇನು ಮಾಡುವುದು? ಈ ವಿಷಯದಲ್ಲಿ ಶಾಸ್ತ್ರ ಪಾರಂಗತರ ಸಲಹೆಯಂತೆ ನಡೆಯುವುದೆಂದು ರಾಸಮಣಿ–ಮಥುರಾನಾಥರು ಮಾತನಾಡಿಕೊಂಡರು.

ಅಂತೆಯೇ ಕಲ್ಕತ್ತದ ಪ್ರಸಿದ್ಧ ಪಂಡಿತರ ಸಭೆ ಸೇರಿಸಲಾಯಿತು. ಕಾರಣಾಂತರಗಳಿಂದ ಸಭೆಗೆ ಬರಲಾಗದಿದ್ದವರ ಅಭಿಪ್ರಾಯಗಳನ್ನು ಲಿಖಿತರೂಪದಲ್ಲಿ ಸಂಗ್ರಹಿಸಲಾಯಿತು. ಅಂತಹ ಹೆಸರಾಂತ ಪಂಡಿತರನ್ನು ಕರೆಸುವುದೆಂದರೆ ಹುಡುಗಾಟವೆ? ಅವರಿಗೆ ತಕ್ಕ ದಕ್ಷಿಣೆ ತೆರಬೇಕಲ್ಲವೇ? ಆದರೆ ರಾಣಿಗೆ ಅದೆಲ್ಲ ಲೆಕ್ಕವಿಲ್ಲ. ಎಲ್ಲಕ್ಕೂ ವ್ಯವಸ್ಥೆಯಾಯಿತು. ಪಂಡಿತರೆಲ್ಲ ಬಂದರು. ತಮ್ಮ ಪುಸ್ತಕಗಳನ್ನೂ ಓಲೆಗರಿಗಳನ್ನೂ ತೆರೆದರು. ಬಾರಿ ಬಾರಿಗೂ 'ಜ್ಞಾನಚೂರ್ಣ'ವನ್ನು ಮೂಗಿಗೇರಿಸಿದರು. ಕೊನೆಗೆ ತಮ್ಮ ಆಜ್ಞೆಯನ್ನು ಹೊರಡಿಸಿದರು—"ಭಗ್ನವಾದ ವಿಗ್ರಹವನ್ನು ಗಂಗೆಯಲ್ಲಿ ವಿಸರ್ಜಿಸಬೇಕು. ಮತ್ತು ಅದರ ಸ್ಥಾನದಲ್ಲಿ ಹೊಸದೊಂದು ವಿಗ್ರಹವನ್ನು ಪ್ರತಿಷ್ಠಾಪಿಸಬೇಕು." ಹೊಸ ವಿಗ್ರಹವನ್ನು ನಿರ್ಮಿಸಲು ಆದೇಶವೂ ಹೋಯಿತು.

ಸಭೆ ಮುಕ್ತಾಯವಾಯಿತು. ಪಂಡಿತರೆಲ್ಲ ದಕ್ಷಿಣೆಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಹೊರಟುಹೋದರು. ಆದರೆ ರಾಣಿಗೇಕೋ ಸಮಾಧಾನವಿಲ್ಲ. ಒಮ್ಮೆ

ಪ್ರತಿಷ್ಠಾಪನೆ ಮಾಡಿ, ಇಷ್ಟುದಿನ ಪೂಜಿಸಿದ ವಿಗ್ರಹವನ್ನು ವಿಸರ್ಜನೆ ಮಾಡುವುದೆ? ಪಂಡಿತರೇನೋ ಸುಲಭವಾಗಿ ಹೇಳಿಬಿಟ್ಟರು. ಆದರೆ ಅಷ್ಟೇ ಸುಲಭವಾಗಿ ತನ್ನ ಪ್ರೇಮದ ಪುತ್ಥಳಿಯನ್ನು ತಳ್ಳಿಬಿಡಲಾದೀತೆ? ರಾಸಮಣಿಗೆ ಚಿಂತೆಯಾಯಿತು. ಆ ವೇಳೆಗೆ ಸರಿಯಾಗಿ ಮಥುರ ಒಂದು ಸಲಹೆ ಮಾಡಿದ—"ಅಲ್ಲಾ, ನಾವು ಈ ವಿಷಯದಲ್ಲಿ ಕಿರಿಯ ಪೂಜಾರಿಗಳ ಮಾತನ್ನೇ ಕೇಳಲಿಲ್ಲವಲ್ಲ! ಪಂಡಿತರ ಶಾಸ್ತ್ರಕ್ಕಿಂತ ಅವರ ಭಕ್ತಿ ಬಹಳ ದೊಡ್ಡದು. ಈ ವಿಷಯದಲ್ಲಿ ಅವರೇನೆನ್ನುತ್ತಾರೋ ಕೇಳಲೇಬೇಕು." ರಾಣಿಗಿದು ಒಪ್ಪಿಗೆಯಾಯಿತು. ಮಥುರ ಕೂಡಲೇ ರಾಮಕೃಷ್ಣರ ಬಳಿಗೆ ಬಂದು ಪಂಡಿತರ ನಿರ್ಣಯವನ್ನು ತಿಳಿಸಿ ಅವರ ಅಭಿಪ್ರಾಯ ಕೇಳಿದ.

ಮಥುರನ ಮಾತನ್ನು ಆಲಿಸಿದ ರಾಮಕೃಷ್ಣರು ಕೂಡಲೇ ಏನೂ ಉತ್ತರಿಸಲಿಲ್ಲ. ಒಂದು ಘಳಿಗೆ ಮೌನವಾಗಿ ಕುಳಿತು ಆ ಕುರಿತಾಗಿಯೇ ಧ್ಯಾನಿಸಿದರು; ಮೆಲ್ಲನೆ ಭಾವಸಮಾಧಿಗೇರಿದರು. ಬಳಿಕ ಕ್ರಮೇಣ ಪ್ರಕೃತಿಸ್ಥರಾಗಿ ನುಡಿದರು:

"ಒಂದು ವೇಳೆ ರಾಣಿಯವರ ಅಳಿಯಂದಿರಲ್ಲೇ ಯಾರಾದರೂ ಬಿದ್ದು ಕಾಲು ಮುರಿದುಕೊಂಡರೆನ್ನಿ. ಆಗ ಅವರ ಚಿಕಿತ್ಸೆಗೆ ಏರ್ಪಾಟು ಮಾಡುತ್ತಾರೋ, ಅಥವಾ ಅವರನ್ನು ಬಿಟ್ಟು ಹೊಸ ಅಳಿಯನನ್ನೇ ಕರೆತರುತ್ತಾರೋ? ಆಗ ಯಾವ ಉಪಾಯವನ್ನು ಅನುಸರಿಸುತ್ತಾರೋ ಅದನ್ನೇ ಈಗಲೂ ಅನುಸರಿಸಲಿ!"

ಹೀಗೆಂದ ಅವರು ಈಗ ಸ್ಪಷ್ಟವಾಗಿ ನುಡಿದರು:

"ವಿಗ್ರಹದ ಕಾಲನ್ನು ಜೋಡಿಸಿ ಸರಿಪಡಿಸಿ ಅದನ್ನೇ ಪೂಜಿಸಬೇಕು. ಅದೊಂದೇ ಸರಿಯಾದ ಮಾರ್ಗ."

ಆಹಾ! ಎಂಥಾ ಸಲಹೆ! ಒಬ್ಬರಿಗಾದರೂ ಇಂತಹ ಸರಳವಾದ ಉಪಾಯ ಹೊಳೆದಿರಬೇಕಲ್ಲ! ಇದನ್ನು ಕೇಳಿ ಎಲ್ಲರಿಗೂ ಆಶ್ಚರ್ಯ, 'ಇದೇನು! ಹೀಗೂ ಉಂಟೆ' ಎಂದು. ಆದರೆ ಇದು ಕೇವಲ ಬುದ್ಧಿವಂತಿಕೆಯ ಪ್ರಶ್ನೆಯಲ್ಲ. 'ಭಗವಂತನು ಆ ವಿಗ್ರಹದಲ್ಲಿ ಸಾಕ್ಷಾತ್ತಾಗಿ ನೆಲಸಿದ್ದಾನೆ; ಮತ್ತು ಆ ವಿಗ್ರಹವು ಚಿನ್ಮಯವಾದುದು, ಜೀವಂತವಾದುದು' ಎಂಬ ಶ್ರದ್ಧೆ, ಪ್ರೀತಿ ಹೃದಯದಲ್ಲಿ ನೆಲೆಗೊಂಡಿದ್ದವರು ಮಾತ್ರ ಈ ಬಗೆಯ ಸಲಹೆ ಮಾಡಬಲ್ಲರು. ಆ ವಿಗ್ರಹದ ಒಂದು ಭಾಗ ಭಗ್ನವಾಯಿತೆಂದಾಕ್ಷಣ ಅದನ್ನು ಪೂಜಿಸಿ ಬಾಗಿದವರ ವಿಶ್ವಾಸವೂ ಭಗ್ನವಾಗಬಲ್ಲುದೆ? ಅರ್ಚಕನಿಗೇ ಏನಾದರೂ ಪೆಟ್ಟಾದರೆ ಅದನ್ನು ಅವನು ಗುಣಪಡಿಸಿಕೊಳ್ಳಲೆತ್ನಿಸುವುದಿಲ್ಲವೆ? ಈ ದೃಷ್ಟಿಯಿಂದ ನೋಡಿದಾಗಲೂ ವಿಗ್ರಹವನ್ನು ತ್ಯಜಿಸುವುದು ಸಾಧುವೆನಿಸುವುದಿಲ್ಲ. ಆದರೆ ಭಗ್ನವಾದ ವಿಗ್ರಹಗಳನ್ನು ಪೂಜಿಸಬಾರದೆಂದು ಸ್ಮೃತಿಗಳು ಸಾರುತ್ತವಲ್ಲ? ಎನ್ನಬಹುದು. ಆದರೆ ಆ ಮಾತು ಭಕ್ತಿಯಿನ್ನೂ ಪೂರ್ಣವಾಗಿ ಬೆಳೆಯದ, ಇನ್ನೂ ಸಾಧನೆಯ ಪ್ರಥಮ ಹಂತದಲ್ಲಿರುವ ಬಹುಸಂಖ್ಯೆಯ ಜನರಿಗೆ ಅನ್ವಯಿಸುತ್ತದೆಯೇ ಹೊರತು ಭಕ್ತಿ ಶ್ರದ್ಧೆಗಳು ಸಾಕಷ್ಟು ಅಭಿವೃದ್ಧಿಗೊಂಡಿರುವ ಸಾಧಕರಿಗಲ್ಲ.

ರಾಮಕೃಷ್ಣರ ಸಲಹೆಯನ್ನು ಕೇಳಿದೊಡನೆಯೇ ಮಥುರ ರಾಸಮಣಿಯರಿಬ್ಬರಿಗೂ ಬಹಳ ಸಂತೋಷವಾಯಿತು. ಆ ಸಲಹೆಯಂತೆಯೇ ತಾವು ನಡೆಯುವುದಾಗಿ

ತೀರ್ಮಾನಿಸಿಬಿಟ್ಟರು. ಅಂತೂ ನಗರದ ಪಂಡಿತರು ಶಾಸ್ತ್ರವೇತ್ತರೆಲ್ಲ ಸೇರಿ ಹೊರಡಿಸಿದ ಠರಾವು, ಕಿರಿಯ ಪೂಜಾರಿಗಳ ಒಂದು ಮಾತಿನಿಂದ ಬಿದ್ದುಹೋಯಿತು. ಆದರೆ ಇದೇನೂ ಹೊಸದಲ್ಲವಲ್ಲ! ಏಕೆಂದರೆ, ಹಿಂದೆ ದೇವಿಗೆ ಅನ್ನನೈವೇದ್ಯ ನೀಡಬಹುದೆ, ಬಾರದೆ ಎಂಬ ವಿಷಯವಾಗಿ ಎಷ್ಟೆಲ್ಲ ಚರ್ಚೆಯಾಗಿ, ಕೊನೆಗೆ ಬಲ್ಲವರೆಲ್ಲ ಒಂದೇ ಅಭಿಪ್ರಾಯ ಕೊಟ್ಟರೂ ರಾಮಕುಮಾರನು ಅದನ್ನು ಮೀರಿ ನಿಂತಿರಲಿಲ್ಲವೆ? ಶಾಸ್ತ್ರವನ್ನೂ ಮೀರಿದ, ಭಕ್ತಿಯಿಂದ ಕೂಡಿದ ಅಂತರಂಗದ ಅಭಿಪ್ರಾಯವೇ ಅಂತಿಮ ಎಂದು ಈಗ ಮತ್ತೊಮ್ಮೆ ಸಾಬೀತಾಯಿತು.

ರಾಣಿಯ ನಿರ್ಧಾರ ಕೇಳಿದಾಗ ಸಹಜವಾಗಿಯೇ ಕೆಲವು ಪಂಡಿತರು ಅದನ್ನು ಅನುಮೋದಿಸಲಿಲ್ಲ. ಆದರೆ ಹೆಚ್ಚಿನವರು ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಮಾತನಾಡಿದರು; ಇಲ್ಲವೆ ಸುಮ್ಮನಿದ್ದುಬಿಟ್ಟರು. ಏಕೆಂದರೆ ಮತ್ತೆ ರಾಣಿಯನ್ನು ವಿರೋಧಿಸಿ ತಮಗೆ ಸಲೀಸಾಗಿ ಬರುತ್ತಿದ್ದ ದಾನ–ದಕ್ಷಿಣೆಗೇ ಸಂಚಕಾರ ತಂದುಕೊಳ್ಳುವುದೆ? ಅಲ್ಪಸ್ವಲ್ಪ ನಿಜವಾದ ಜ್ಞಾನ–ಭಕ್ತಿಗಳನ್ನು ಪಡೆದುಕೊಂಡಿದ್ದ ಬ್ರಾಹ್ಮಣರು ಮಾತ್ರ ಮತ್ತೊಮ್ಮೆ ಆಲೋಚಿಸಿ ನೋಡಿದರು. ರಾಣಿಯ ನಿರ್ಧಾರ ಸರಿಯಾದುದೆಂದು ಮನವರಿಕೆಯಾಯಿತು. ರಾಮಕೃಷ್ಣರ ಸಲಹೆಯನ್ನು ಅವರು ಹಾರ್ದಿಕವಾಗಿ ಕೊಂಡಾಡಿದರು.

ಆದರೀಗ ಆ ವಿಗ್ರಹದ ಕಾಲನ್ನು ಜೋಡಿಸಬಲ್ಲ ಜಾಣರು ಎಲ್ಲಿದ್ದಾರೆ? ಜೋಡಿಸುವುದು ಹೆಚ್ಚುಕಡಮೆಯಾದರೆ ಅದನ್ನು ನೋಡಿದಾಗಲೆಲ್ಲ ಭಕ್ತರಿಗೆ ಸಂಕಟವಾಗುತ್ತದೆ. ರಾಸಮಣಿಯೂ ಮಥುರನೂ ಮತ್ತೆ ಸಮಾಲೋಚಿಸಿದರು. ರಾಮಕೃಷ್ಣರು ವಿಗ್ರಹ ತಯಾರಿಸುವುದರಲ್ಲೂ ಮುರಿದುದನ್ನು ಸರಿಮಾಡುವುದರಲ್ಲೂ ನಿಷ್ಣಾತರಲ್ಲವೆ? ಮತ್ತಿನ್ನೇನು? ಮಥುರನ ವಿನಂತಿಯ ಮೇರೆಗೆ ಆ ಕೆಲಸ ಅವರ ಪಾಲಿಗೇ ಬಂದಿತು. ಪ್ರತಿಭೆಯಿರುವಲ್ಲಿಗೆ ಅವಕಾಶಗಳು ತಾವಾಗಿಯೇ ಹುಡುಕಿಕೊಂಡು ಬರುತ್ತವೆ. ರಾಮಕೃಷ್ಣರ ಕೈಚಳಕ ಬೆಳಕಿಗೆ ಬರಲು ಇದೊಂದು ದಾರಿಯಾಯಿತು.

ರಾಮಕೃಷ್ಣರು ವಿಗ್ರಹವನ್ನು ತಮ್ಮ ಕೋಣೆಯೊಳಗೆ ಒಯ್ದು ಬಾಗಿಲು ಹಾಕಿಕೊಂಡರು. ಒಳಗೆ ಅವರು ಅದಾವ ಜಾದೂ ಮಾಡಿದರೋ, ಅದಾವ ಅಂಟು ಹಾಕಿದರೋ, ರಾಧಾಮಾಧವರೇ ಬಲ್ಲರು! ಕೆಲಸಮುಯಿದ ಬಳಿಕ ಅವರು ಹೊರಬಂದಾಗ ವಿಗ್ರಹ ಹಿಂದಿನಂತೆಯೇ ಕಂಗೊಳಿಸುತ್ತಿತ್ತು. ಕಣ್ಣಲ್ಲಿ ಕಣ್ಣಿಟ್ಟು ನೋಡಿದರೂ, ಅದು ಭಿನ್ನವಾಗಿತ್ತೆಂಬುದರ ಕುರುಹೇ ಕಾಣುತ್ತಿರಲಿಲ್ಲ! ಈಗ ಅದನ್ನು ಯಾವ ಶಂಕೆಯೂ ಇಲ್ಲದೆ ಪುನಃ ಪ್ರತಿಷ್ಠಾಪಿಸಿ ಪೂಜಿಸಲಾರಂಭಿಸಿದರು.

ಆದರೆ ವಿಗ್ರಹ ಭಿನ್ನವಾದದ್ದರ ಬಗ್ಗೆ, ಮತ್ತು ಅದನ್ನೇ ಪುನಃ ಪ್ರತಿಷ್ಠಾಪಿಸಿದ್ದರ ಬಗ್ಗೆ ಜನ ತಲಾ ಒಂದೊಂದು ಬಗೆಯಾಗಿ ಮಾತನಾಡಿಕೊಂಡರು. ಇಂತಹ ಮಾತುಗಳು ರಾಸಮಣಿ–ಮಥುರಾನಾಥರ ಕಿವಿಗೂ ಬೀಳಲಿಲ್ಲವೆಂದಲ್ಲ. ಆದರೆ ಒಮ್ಮೆ ರಾಮಕೃಷ್ಣರ ಯುಕ್ತಿಯುಕ್ತವಾದ ಸೂಚನೆಯಲ್ಲಿ ದೃಢವಿಶ್ವಾಸವಿಟ್ಟು ಅದರಂತೆ ನಡೆದುಕೊಂಡ ಅವರು ಇದಕ್ಕೆಲ್ಲ ಸ್ವಲ್ಪವೂ ಲಕ್ಷ್ಯ ಕೊಡಲಿಲ್ಲ. ಆದರೆ

ಅರ್ಚಕ ಕ್ಷೇತ್ರನಾಥ ಚಟರ್ಜಿ ತನ್ನ ಎಚ್ಚರಗೇಡಿತನಕ್ಕಾಗಿ ಕೆಲಸ ಕಳೆದುಕೊಳ್ಳಬೇಕಾಯಿತು. ಅಂದಿನಿಂದ ರಾಮಕೃಷ್ಣರನ್ನು ರಾಧಾಗೋವಿಂದರ ಅರ್ಚಕರನ್ನಾಗಿ ನೇಮಿಸಲಾಯಿತು. ಕಾಳೀಮಾತೆಗೆ ಅಲಂಕರಿಸುವ ಹಾಗೂ ರಾಮಕುಮಾರನಿಗೆ ಪೂಜಾದಿಗಳಲ್ಲಿ ನೆರವಾಗುವ ಕಾರ್ಯವನ್ನು ಹೃದಯರಾಮ ಮುಂದುವರಿಸಿಕೊಂಡುಬಂದ.

ರಾಮಕೃಷ್ಣರನ್ನು ಸನಿಹದಿಂದ ಕಂಡಂತೆಲ್ಲ, ಅವರನ್ನು ಚೆನ್ನಾಗಿ ಅರಿತುಕೊಂಡಂತೆಲ್ಲ ಮಥುರಾನಾಥನಿಗೆ ಅವರಲ್ಲಿ ಭಕ್ತಿ ಗೌರವ ಅಗಾಧವಾಗಿ ಬೆಳೆಯುತ್ತ ಬಂದಿತು. ಅವರನ್ನು ಆತ ಆಗಾಗ ಯಾವುದಾದರೂ ದೇವಾಲಯಕ್ಕೋ ಇನ್ನೆಲ್ಲಿಗೋ ಕರೆದೊಯ್ಯುವುದಿತ್ತು. ಹೀಗೆ ಅವರು ಸಂದರ್ಶಿಸುತ್ತಿದ್ದ ಒಂದು ಸ್ಥಳವೆಂದರೆ ದಕ್ಷಿಣೇಶ್ವರದ ಸಮೀಪದ ಬಾರಾ ನಾಗೋರಿನ ಒಂದು ದೇವಾಲಯ. ನದಿಯ ತಟದಲ್ಲಿರುವ ಈ ದೇವಾಲಯದಲ್ಲಿ ದಶಮಹಾವಿದ್ಯೆಯರ ವಿಗ್ರಹಗಳು ಪ್ರತಿಷ್ಠಾಪಿತವಾಗಿದೆ. ಒಂದಾನೊಂದು ಕಾಲದಲ್ಲಿ ಇಲ್ಲಿ ಪೂಜೆ ಪುರಸ್ಕಾರಗಳು ಚೆನ್ನಾಗಿ ನಡೆಯುತ್ತಿತ್ತಾದರೂ ಈಗ ಅದಾವುದೂ ಇಲ್ಲದೆ ದೇವಾಲಯ ಜೀರ್ಣಾವಸ್ಥೆಯಲ್ಲಿತ್ತು. ಇದನ್ನು ಕಂಡು ರಾಮಕೃಷ್ಣರಿಗೆ ಸುಮ್ಮನಿರಲು ಸಾಧ್ಯವಾಗಲಿಲ್ಲ. "ಈ ದೇವಾಲಯಕ್ಕೆ ತಿಂಗಳಿಗೆರಡು ಮಣ ಅಕ್ಕಿಯನ್ನೂ ಎರಡು ರೂಪಾಯಿಯನ್ನೂ ಕೊಡಿಸುವ ವ್ಯವಸ್ಥೆ ಮಾಡು" ಎಂದು ಮಥುರನಿಗೆ ಹೇಳಿದರು. ಮಥುರ ಸಂತೋಷದಿಂದ ಒಪ್ಪಿಕೊಂಡು ಅದರಂತೆಯೇ ಏರ್ಪಾಟು ಮಾಡಿದ.

ರಾಮಕೃಷ್ಣರು ಆಗಿನ್ನೂ ಸುಮಾರು ಇಪ್ಪತ್ತೊಂದು ವಯಸ್ಸಿನ ತರುಣ; ಜೊತೆಗೆ ಹಳ್ಳಿಯಿಂದ ಬಂದವರು. ರಾಸಮಣಿ–ಮಥುರರೋ ನಗರದ ಸಿರಿವಂತರು, ಹೆಚ್ಚುಕಡಮೆ ಆ ಊರಿನ ರಾಜರೇ! ಹೀಗಿದ್ದೂ ಕೂಡ ರಾಮಕೃಷ್ಣರು ಅವರ ಮೇಲೆ ಬೀರಿದ್ದ ವರ್ಚಸ್ಸು ನಿಜಕ್ಕೂ ಆಶ್ಚರ್ಯಕರ! ಇಂದು ಆ ದೇವಾಲಯದ ಜೀರ್ಣೋದ್ಧಾರಕ್ಕೆ ಮಥುರನ ಮನವೊಲಿಸಿದರೆ, ಅಂದು ಆ ಭಗ್ನ ವಿಗ್ರಹವನ್ನು ಸರಿಪಡಿಸಿ ಪುನಃ ಪ್ರತಿಷ್ಠಾಪನೆ ಮಾಡಿಸಿದರು. ಶ್ರೀರಾಮಕೃಷ್ಣರ ಸ್ಥಾನದಲ್ಲಿ ಬೇರೆ ಯಾರಾದರೂ ಇರುತ್ತಿದ್ದರೆ ಇದನ್ನೆಲ್ಲ ಹೇಳಿಕೊಂಡು ಜಂಬ ಕೊಚ್ಚಿಕೊಳ್ಳಬಹುದಿತ್ತು —"ಎಲ್ಲವೂ ನನ್ನ ಮಾತಿನಂತೆ ಹೇಗೆ ನಡೆಯುತ್ತಿದೆ ನೋಡಿದಿರಾ?" ಎಂದು. ಆದರೆ ರಾಮಕೃಷ್ಣರ ಪರಮ ಪರಿಶುದ್ಧ ಮನದಲ್ಲಿ ಇಂತಹ ಕ್ಷುಲ್ಲಕ ಭಾವನೆಗೆ ಅವಕಾಶವೇ ಇಲ್ಲ.

ಒಂದು ದಿನ ರಾಮಕೃಷ್ಣರು ಮಥುರನೊಂದಿಗೆ ಬಾರಾನಾಗೋರಿನ ದೇವಸ್ಥಾನಕ್ಕೆ ಬಂದು ಪ್ರಣಾಮ ಸಲ್ಲಿಸಿ ಹಿಂದಿರುಗುತ್ತಿದ್ದರು. ಅಲ್ಲೇ ಪಕ್ಕದ ಸ್ನಾನಘಟ್ಟದಲ್ಲಿ ಜಯನಾರಾಯಣ ಬ್ಯಾನರ್ಜಿ ಎಂಬವನು ಇನ್ನು ಕೆಲವರೊಂದಿಗೆ ಮಾತನಾಡುತ್ತ ನಿಂತಿದ್ದ. ಇವನು ಅಲ್ಲಿನ ಹೆಸರಾಂತ ಜಮೀನ್ದಾರ, ಸಜ್ಜನ. ರಾಮಕೃಷ್ಣರಿಗೆ ಈತನ ಪರಿಚಯವಿದ್ದಿತಾದ್ದರಿಂದ ತಾವೇ ಅವನ ಬಳಿಗೆ ಹೋದರು. ಜಯನಾರಾಯಣಬಾಬು ಗೌರವದಿಂದ ನಮಸ್ಕರಿಸಿ ಸ್ವಾಗತಿಸಿದ; ಅಲ್ಲಿದ್ದ ತನ್ನ ಜೊತೆಗಾರರಿಗೆ ಅವರ ಪರಿಚಯ ಮಾಡಿಕೊಟ್ಟ. ಬಳಿಕ ಮಾತಿನ ಸಂದರ್ಭದಲ್ಲಿ ಕಾಳೀ ದೇವಾಲಯದ ವಿಷಯ ಬಂದಿತು. ಆಗ ಜಯನಾರಾಯಣ ಕೇಳಿದ:

"ಸ್ವಾಮಿ, ರಾಧಾಗೋವಿಂದಸ್ವಾಮಿಯ ಕಾಲು ಮುರಿದು ಹೋಯಿತು ಎಂದೇನೋ ಕೇಳಿದೆ. ಅದರ ವಿಷಯ...."

ರಾಮಕೃಷ್ಣರು ಅಷ್ಟಕ್ಕೇ ತಡೆದು ಹೇಳಿದರು:

"ಆಹಾ, ಏನು ಬುದ್ಧಿ ಸ್ವಾಮಿ ನಿಮ್ಮದು ! ಅಖಂಡನಾದ ಭಗವಂತನು ತುಂಡಾಗುವುದುಂಟೆ ?"

ಹೀಗೆಂದ ರಾಮಕೃಷ್ಣರು ಮತ್ತೆ ಪ್ರಶ್ನೆ–ಉಪಪ್ರಶ್ನೆಗಳು ಏಳುವ ಮೊದಲೇ ವಿಷಯವನ್ನು ಬದಲಾಯಿಸಿದರು. ಅಲ್ಲದೆ ನಾವು ಪ್ರತಿಯೊಂದು ವಿಷಯದಲ್ಲೂ ಹಂಸ–ಕ್ಷೀರ ನ್ಯಾಯದಂತೆ ಶ್ರೇಷ್ಠ ಉದಾತ್ತ ಅಂಶಗಳನ್ನು ಮಾತ್ರ ಗಮನಿಸಬೇಕೇ ಹೊರತು ಕೆಲಸಕ್ಕೆ ಬಾರದ ಕೆಸರನ್ನಲ್ಲ ಎಂದು ತಿಳಿ ಹೇಳಿದರು. ಜಯನಾರಾಯಣ ಬಾಬು ಬುದ್ಧಿವಂತ. ಅವರು ಹೀಗೇಕೆ ಹೇಳಿದರೆಂದು ಅರ್ಥಮಾಡಿಕೊಂಡ. ಮತ್ತವನು ಆ ಬಗ್ಗೆ ಪ್ರಸ್ತಾಪಿಸಲಿಲ್ಲ.

## ಶಕ್ತಿಮಂತ್ರದೀಕ್ಷೆ

ಶ್ರೀರಾಧಾಗೋವಿಂದ ದೇವಾಲಯದಲ್ಲಿ ಅರ್ಚಕರಾಗಿ ಕಾರ್ಯ ನಿರ್ವಹಿಸಲು ರಾಮಕೃಷ್ಣರು ಸಮ್ಮತಿಸಿದ್ದು ರಾಮಕುಮಾರನಿಗೆ ಬಹಳ ಸಂತೋಷವನ್ನುಂಟುಮಾಡಿತು. ಅವನು ತನ್ನ ತಮ್ಮನಿಗೆ ಪೂಜಾ ವಿಧಾನವನ್ನು ವಿವರವಾಗಿ ಕಲಿಸಿದ. ಅದರಂತೆ ರಾಮಕೃಷ್ಣರು ತಮ್ಮ ಪೂಜೆಯನ್ನು ಪ್ರಾರಂಭಿಸಿದರು. ಆಹ್! ಅದೆಂತಹ ಅಲೌಕಿಕ ದೃಶ್ಯ! ಅದೊಂದು ಅತ್ಯಂತ ವಿಶಿಷ್ಟವಾದ ಪೂಜೆ. ಪೂಜಕನ ಮನಸ್ಸಿನಲ್ಲಿ ಅಂತಹ ಭಕ್ತಿ–ಶ್ರದ್ಧೆ ಇದ್ದರೆ ಮಾತ್ರ ಅದು ಪೂಜೆಯಲ್ಲಿ ವ್ಯಕ್ತವಾದೀತು. ಆಚಮನ ಮಾಡುವುದರಿಂದ ಹಿಡಿದು ಅಲಂಕಾರ, ಆರತಿ, ನೈವೇದ್ಯ – ಹೀಗೆ ಪೂಜೆಯ ಪ್ರತಿಯೊಂದು ಅಂಗವನ್ನೂ ಅವರು ಆಯಾ ಭಾವದಿಂದ ಮಾಡುತ್ತಿದ್ದರು. ಪ್ರತಿಯೊಂದು ಮಂತ್ರವನ್ನೂ ಪ್ರತಿಯೊಂದು ಶ್ಲೋಕವನ್ನೂ ಅರ್ಥವರಿತು ಉಚ್ಚರಿಸುತ್ತಿದ್ದರು. ಈ ಪೂಜೆಯನ್ನು ನೋಡುತ್ತಿರುವವರೂ ಅದರಲ್ಲೇ ತನ್ಮಯರಾಗಿಬಿಡುತ್ತಿದ್ದರು.

ಕೆಲವೊಮ್ಮೆ ರಾಮಕೃಷ್ಣರು ತಮ್ಮ ಸುಮಧುರ ಕಂಠದಿಂದ ಮೈಮರೆತು ಹಾಡತೊಡಗುತ್ತಿದ್ದರು. ಆ ಹಾಡಿನ ಭಾವ ಅವರ ಸ್ವರದಲ್ಲಿ ತುಂಬಿ ತುಳುಕುತ್ತಿತ್ತು. ಒಮ್ಮೆ ಆ ಹಾಡುಗಳನ್ನು ಕೇಳಿದವರು ಅದನ್ನೆಂದೂ ಮರೆಯಲಾರರು! ಅದರಲ್ಲಿ ಅದೆಂಥದೋ ಮೋಡಿ! ಸಂಗೀತವನ್ನು ಶಾಸ್ತ್ರೀಯವಾಗಿ ಕಲಿತು ವರ್ಷಗಟ್ಟಲೆ ಅಭ್ಯಾಸ ಮಾಡಿದವರು, ಒಳ್ಳೆಯ ಧ್ವನಿಯೂ ಇರುವವರು ಬೇಕಾದಷ್ಟು ಜನ ಸಿಗುತ್ತಾರೆ. ಆದರೆ ಭಾವಪೂರ್ಣವಾಗಿ ಹಾಡಬಲ್ಲವರು? ಶ್ರೀರಾಮಕೃಷ್ಣರು ತಮ್ಮ ಹಾಡಿನ ಭಾವದಲ್ಲೇ ಸಂಪೂರ್ಣ ಪರವಶರಾಗಿಬಿಡುತ್ತಿದ್ದರು. ಮತ್ತು ಆ ಭಾವವು ಹೃದಯವನ್ನು ಸ್ಪರ್ಶಿಸುವಂತೆ ಮಾಡುವ ಶಕ್ತಿ ಅವರ ಕಂಠಸ್ವರದಲ್ಲಿತ್ತು. ಅದನ್ನಾಲಿಸಿದವರಿಗೆ, ಭಾವವೇ ಸಂಗೀತದ ಜೀವಾಳವೆಂಬುದು ಸ್ಪಷ್ಟವಾಗಿ ಅರಿವಾಗುತ್ತಿತ್ತು. ಆದರೆ ಸಂಗೀತದ ಇತರ ಅಂಶಗಳಾದ ತಾಳ–ಲಯಗಳನ್ನು ಅವರು ಕಡೆಗಣಿಸಿದರೆಂದಲ್ಲ. ಬದಲಾಗಿ ಶ್ರುತಿ ತಾಳ ಲಯಗಳು ಆ ಹಾಡುಗಳ ಅವಿಭಾಜ್ಯ ಅಂಶಗಳಾಗಿದ್ದುವು. ಎಂದರೆ ಹಾಡಿನ ಅರ್ಥದೊಂದಿಗೆ ಹೃದಯದ ಭಾವವು ಸಹಜವಾಗಿ ಸಮ್ಮಿಶ್ರಗೊಂಡು ಸಂಗೀತವನ್ನು ಮತ್ತಷ್ಟು ಆನಂದಕರವಾಗಿಸುತ್ತಿದ್ದುವು.

ರಾಮಕೃಷ್ಣರ ಹಾಡುಗಳು ಅಷ್ಟೊಂದು ಕರ್ಣಾನಂದಕರವಾಗಿರಲು

ಮತ್ತೊಂದು ಕಾರಣವಿತ್ತು. ಅದೇನೆಂದರೆ, ಹಾಡುತ್ತ ಹಾಡುತ್ತ ಅವರೇ ಅದರಲ್ಲಿ ಆಳವಾಗಿ ಮುಳುಗಿಬಿಡುತ್ತಿದ್ದರು. ಆಗ, ಇತರರು ಅದನ್ನು ಆಲಿಸುತ್ತಿದ್ದಾರೆಂಬ ಪರಿವೆಯೇ ಅವರಿಗಿರುತ್ತಿರಲಿಲ್ಲ. ಅವರು ಹಾಡುತ್ತಿದ್ದುದು ಭಗವಂತನಿಗಾಗಿ, ಆತ್ಮಾನಂದಕ್ಕಾಗಿ ಮಾತ್ರ. ತಮ್ಮ ಹಾಡಿನಿಂದ ಇತರರನ್ನು ಖುಷಿಪಡಿಸುವ ಆಲೋಚನೆ ಅವರಿಗೆ ಬರುತ್ತಲೇ ಇರಲಿಲ್ಲ. ಹಾಡುಗಾರರು ಎಷ್ಟೇ ಭಕ್ತಿಯಿಂದ ಹಾಡಿದರೂ ಶ್ರೋತೃಗಳ ಮೆಚ್ಚುಗೆಯ ನಿರೀಕ್ಷೆ ಅವರ ಮನದಲ್ಲಿ ಕಿಂಚಿತ್ತಾದರೂ ಇರುತ್ತದೆ. ಶ್ರೀರಾಮಕೃಷ್ಣರು ತಮ್ಮ ಹಾಡನ್ನು ಕೇಳಿ ಯಾರಾದರೂ ಅದನ್ನು ಶ್ಲಾಘಿಸಿದರೂ ಅದು ಹಾಡಿನ ಭಾವಕ್ಕೆ, ಅರ್ಥಕ್ಕೆ ಸಂದ ಶ್ಲಾಘನೆಯೆಂದು ಭಾವಿಸುತ್ತಿದ್ದರೇ ಹೊರತು ತಮ್ಮ ಹಾಡುಗಾರಿಕೆಗೆ ಸಂದದ್ದೆಂದು ಎಂದಿಗೂ ತಿಳಿಯುತ್ತಿರಲಿಲ್ಲ. ಅವರು ಹಾಡುವುದನ್ನು ಕಣ್ಣಾರೆ ಕಂಡವರಿಗೆ ಅದೊಂದು ಅಪೂರ್ವ ಅನುಭವವೇ ಆಗಿರುತ್ತಿತ್ತು. ರಾಸಮಣಿ ಕಲ್ಕತ್ತದಿಂದ ದಕ್ಷಿಣೇಶ್ವರಕ್ಕೆ ಬಂದಾಗಲೆಲ್ಲ ಅವರಿಂದ ಹಾಡಿಸಿ ಆನಂದದಲ್ಲಿ ಮಿಂದು ಹಿಂದಿರುಗುತ್ತಿದ್ದಳು.

ರಾಮಕೃಷ್ಣರ ಪೂಜೆಯೂ ಅಷ್ಟೇ ಅದ್ಭುತವಾಗಿತ್ತು. ಒಮ್ಮೆ ಪೂಜೆಗೆ ಕುಳಿತುಬಿಟ್ಟರೆಂದರೆ ಯಾರಾದರೂ ಹತ್ತಿರ ಬಂದರೂ ಗೊತ್ತಾಗುತ್ತಿರಲಿಲ್ಲ. ಮಾತ ನಾಡಿಸಿದರೂ ಕೇಳಿಸುತ್ತಿರಲಿಲ್ಲ. ಪೂಜಾವೇಳೆಯಲ್ಲಿ ಅಂಗನ್ಯಾಸ–ಕರನ್ಯಾಸಗಳನ್ನು ಮಾಡುವಾಗ ಉಜ್ವಲ ವರ್ಣಗಳಿಂದ ಶೋಭಿಸುವ ಮಂತ್ರಾಕ್ಷರಗಳು ತಮ್ಮ ದೇಹದಲ್ಲಿ ಆವಿರ್ಭಾವವಾಗುವುದನ್ನು ಅವರು ಕಣ್ಣಾರೆ ಕಾಣುತ್ತಿದ್ದರು. ಸುರುಳಿ ಸುತ್ತಿದ ಹಾವಿನ ರೂಪದಲ್ಲಿರುವ ಕುಂಡಲಿನೀ ಶಕ್ತಿಯು ಜಾಗ್ರತವಾಗಿ ಮೂಲಾ ಧಾರದಿಂದ ಸಹಸ್ರಾರದೆಡೆಗೆ ಸಾಗುವುದನ್ನು ಕಾಣುತ್ತಿದ್ದರು. ಆ ಶಕ್ತಿಯು ತಮ್ಮ ದೇಹದ ಯಾವಯಾವ ಭಾಗದ ಮೂಲಕ ಹಾದುಹೋಗುವುದೊ ಅವೆಲ್ಲ ನಿರ್ಜೀವವಾದಂತೆ ಜಡವಾಗುವುದನ್ನು ಅನುಭವಿಸುತ್ತಿದ್ದರು. ಪೂಜಾಪದ್ಧತಿಗೆ ಅನುಸಾರವಾಗಿ 'ರಂ ಇತಿ ಜಲಧಾರಯಾ ವಹ್ನಿಪ್ರಾಕಾರಂ ವಿಚಿಂತ್ಯ....' ಎಂದು ಹೇಳುತ್ತ ಸುತ್ತಲೂ ಜಲಪ್ರೋಕ್ಷಣೆ ಮಾಡುತ್ತಿದ್ದಂತೆಯೇ* ತಮ್ಮ ಸುತ್ತಲೂ ಅಗ್ನಿಯು ನೂರಾರು ಕೆನ್ನಾಲಿಗೆಗಳನ್ನು ಚಾಚಿ ಅಭೇದ್ಯಕೋಟೆಯಂತೆ ನಿಂತು ವಿಘ್ನಗಳಿಗೆ ತಡೆಯೊಡ್ಡುವುದನ್ನು ಕಾಣುತ್ತಿದ್ದರು. ಅವರ ಶರೀರ ದಿವ್ಯಕಾಂತಿಯಿಂದ ಶೋಭಿಸುತ್ತಿತ್ತು. ಅವರು ಪೂಜಾ ವೇಳೆಯಲ್ಲಿ ನಿಶ್ಚಲರಾಗಿ ಕುಳಿತಿದ್ದರೆ ಅದನ್ನು ಕಂಡ ಬ್ರಾಹ್ಮಣರು ಪಿಸುಗುಟ್ಟಿಕೊಳ್ಳುತ್ತಿದ್ದರು—"ನೋಡಿ ಅಲ್ಲಿ! ಸಾಕ್ಷಾತ್ ಮಹಾವಿಷ್ಣುವೇ ಮಾನವಶರೀರಧಾರಿಯಾಗಿ ಬಂದು ಪೂಜೆಗೆ ಕುಳಿತಂತಿದೆ!" ಎಂದು.

ರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಬಂದಾಗಿನಿಂದಲೂ ರಾಮಕುಮಾರ ಸೋದರನ ವರ್ತನೆಯನ್ನು ಗಮನಿಸುತ್ತಲೇ ಇದ್ದ. ಅವನ ಏಕಾಂತ ಪ್ರಿಯತೆಯನ್ನು,

* ಪೂಜಕನು 'ರಂ' ಮಂತ್ರವನ್ನುಚ್ಚರಿಸಿ ತನ್ನ ಸುತ್ತಲೂ ನೀರನ್ನು ಚಿಮುಕಿಸುತ್ತಾನೆ. ಪೂಜಾಸ್ಥಾನವು ಅಗ್ನಿಯಿಂದ ಆವೃತವಾಗಿರುವುದರಿಂದ ಯಾವ ವಿಘ್ನವೂ ಅದರೊಳಗೆ ಪ್ರವೇಶಿಸಲಾರದೆಂಬುದು ಮಂತ್ರಾರ್ಥ.

ಲೌಕಿಕ ವ್ಯವಹಾರಗಳಲ್ಲಿನ ಅನಾಸಕ್ತಿಯನ್ನು ಗುರುತಿಸಿದ. ಸಾಧಾರಣ ಜನಗಳಿಗೆ ಪ್ರಿಯವಾದ ಯಾವ ವಿಷಯವೂ ಅವನಿಗೆ ಹಿಡಿಸುವುದಿಲ್ಲವೆಂಬುದನ್ನು ಕಂಡು ಕೊಂಡ. ಇದೆಲ್ಲ ರಾಮಕುಮಾರನಿಗೆ ಕಳವಳ ತಂದಿತು. ಮೊದಮೊದಲು ಅವನು 'ಬಹುಶಃ ಇವನು ಅಮ್ಮನ ಬಗ್ಗೆಯೇ ಚಿಂತಿಸುತ್ತಿರಬೇಕು. ಎಷ್ಟಾದರೂ ಅಮ್ಮನ ಮುದ್ದಿನ ಮಗನಲ್ಲವೆ? ಊರಿಗೊಮ್ಮೆ ಹೋಗಿಬರುವ ಆಸೆಯಿರಬಹುದು' ಎಂದು ಭಾವಿಸಿದ. ರಾಮಕೃಷ್ಣರು ಪಂಚವಟಿಯಲ್ಲಿ ಮೌನವಾಗಿ ಕುಳಿತಿರುವು ದನ್ನು, ಸಮಯ ಸಿಕ್ಕಾಗಲೆಲ್ಲ ಗಂಗೆಯ ದಡದ ಮೇಲೆ ಅತ್ತಿಂದಿತ್ತ ಇತ್ತಿಂದತ್ತ ಒಬ್ಬರೇ ಅಡ್ಡಾಡುವುದನ್ನು, ಇಲ್ಲವೆ ಪಂಚವಟಿಯ ಸುತ್ತಲಿನ ಅರಣ್ಯದಲ್ಲಿ ಗಂಟೆಗಟ್ಟಲೆ ಇರುವುದನ್ನು ನೋಡಿದ. ಆದರೆ ರಾಮಕೃಷ್ಣರೇನೂ ಊರಿಗೆ ಹಿಂದಿರುಗುವ ಬಗ್ಗೆ ಪ್ರಸ್ತಾಪಿಸಲಿಲ್ಲ. ರಾಮಕುಮಾರ ತಾನಾಗಿಯೇ ಆ ವಿಷಯ ವನ್ನೆತ್ತಿದರೂ ಅವರು ಅದರಲ್ಲಿ ಆಸಕ್ತಿ ತೋರಿಸಲಿಲ್ಲ. ಆಗ ರಾಮಕುಮಾರ ತಮ್ಮನನ್ನು ಊರಿಗೆ ಕಳುಹಿಸುವ ಆಲೋಚನೆಯನ್ನು ಬಿಟ್ಟುಬಿಟ್ಟ. ಆದರೆ ಅವನಿಗನಿಸಿತು, 'ಈಗಾಗಲೇ ನನಗೆ ಸಾಕಷ್ಟು ವಯಸ್ಸಾಗುತ್ತಾ ಬಂದಿತು. ದಿನೇ ದಿನೇ ದೇಹ ಶಿಥಿಲವಾಗುತ್ತಿದೆ. ಇನ್ನು ಇದರ ಆಯುಸ್ಸು ಇನ್ನೆಷ್ಟು ದಿನವೋ ಏನೋ. ಅದು ಮುಗಿಯುವುದರೊಳಗಾಗಿ ನಾನು ನನ್ನ ಕರ್ತವ್ಯಗಳನ್ನೆಲ್ಲ ಮಾಡಿ ಮುಗಿಸಿ ಬಿಟ್ಟರೆ ಆಮೇಲೆ ನಿಶ್ಚಿಂತೆಯಾಗಿ ಹೊರಡಬಹುದು. ಇನ್ನು ಗದಾಧರನನ್ನು ತನ್ನ ಕಾಲಮೇಲೆ ನಿಂತುಕೊಳ್ಳುವಂತೆ ಮಾಡಿಬಿಟ್ಟರೆ ನಾನು ಗೆದ್ದೆ.' ಆ ವೇಳೆಗೆ ರಾಮಕೃಷ್ಣರು ಮಥುರಾನಾಥನ ಮಾತಿಗೊಪ್ಪಿ ದೇವಾಲಯದಲ್ಲಿ ಕೆಲಸ ಮಾಡಲು ಸಮ್ಮತಿಸಿದ್ದರಿಂದ ಅವನಿಗೆ ಅತೀವ ಸಮಾಧಾನವಾಯಿತು. ತಮ್ಮ ಪಾಲಿನ ಕರ್ತವ್ಯವನ್ನು ರಾಮಕೃಷ್ಣರು ಸರಿಯಾದ ರೀತಿಯಲ್ಲಿ ನಿರ್ವಹಿಸುವುದನ್ನು ಕಂಡು ನಿಶ್ಚಿಂತನಾದ. 'ಇನ್ನು ಇವನಿಗೆ ಎಲ್ಲ ಪೂಜಾ ವಿಧಾನಗಳನ್ನು ಕಲಿಸಿಕೊಟ್ಟು ನಿಷ್ಣಾತನನ್ನಾಗಿ ಮಾಡಿದರೆ ಮತ್ತಾವ ಯೋಚನೆಯೂ ಇಲ್ಲ' ಎಂದು ಭಾವಿಸಿದ.

ಈಗ ರಾಮಕುಮಾರ ತನ್ನ ಸೋದರನಿಗೆ ಚಂಡೀಪಠಣವನ್ನೂ ಕಾಳಿಕಾ ದೇವಿಯ ಪೂಜಾವಿಧಾನವನ್ನೂ ಬೋಧಿಸಿದ. ತಾನು ಎಂದಾದರೂ ಪೂಜೆ ಮಾಡಲು ಸಾಧ್ಯವಾಗದಿದ್ದರೆ ತಮ್ಮನಿಗೆ ಅದನ್ನು ಒಪ್ಪಿಸಬಹುದೆಂಬ ಆಲೋಚನೆ ಅವನದು. ರಾಮಕೃಷ್ಣರು ಶೀಘ್ರದಲ್ಲೇ ಅದನ್ನೆಲ್ಲ ಕಲಿತು ಮುಗಿಸಿದರು. ದೇವಿಯ ಪೂಜೆ ಮಾಡುವವರು ಶಕ್ತಿಮಂತ್ರವನ್ನು ಪಡೆದಿರಬೇಕೆಂಬುದು ನಿಯಮ. ಆದ್ದ ರಿಂದ ರಾಮಕೃಷ್ಣರು ಶಕ್ತಿ ಮಂತ್ರೋಪದೇಶ ಪಡೆದುಕೊಳ್ಳಲು ನಿರ್ಧರಿಸಿದರು.

ಶ್ರೀ ಕೇನಾರಾಮ ಭಟ್ಟಾಚಾರ್ಯ ಎಂಬೊಬ್ಬ ನಿಷ್ಣಾತ ಶಕ್ತಿಸಾಧಕರು ಕಲ್ಕತ್ತದ ಬೈಠಕ್ ಖಾನಾ ಬಜಾರಿನಲ್ಲಿ ವಾಸವಾಗಿದ್ದರು. ಇವರು ಆಗಾಗ ದಕ್ಷಿಣೇಶ್ವರದ ದೇವಾಲಯಕ್ಕೆ ಬರುವುದಿತ್ತು. ಇವರಿಗೆ ರಾಸಮಣಿಯ ಕುಟುಂಬ ವರ್ಗದವರ ಪರಿಚಯವೂ ಇತ್ತು. ಬಹಳ ನಿಷ್ಠಾವಂತ ಸಾಧಕ ಎಂದು ಜನರ ಗೌರವ ಗಳಿಸಿದ್ದರು. ದೇವಸ್ಥಾನಕ್ಕೆ ಬಂದು ಹೋಗುತ್ತಿದ್ದುದರಿಂದ ರಾಮಕುಮಾರ ನಿಗೂ ಇವರಿಗೂ ಪರಿಚಯ ಬೆಳೆಯಿತು. ಕೇನಾರಾಮ ಭಟ್ಟಾಚಾರ್ಯರನ್ನು ಕಂಡು

ರಾಮಕೃಷ್ಣರಿಗೆ, ಇವರಿಂದ ತಾವು ಶಕ್ತಿಮಂತ್ರೋಪದೇಶ ಪಡೆದುಕೊಳ್ಳಬಹುದು ಎಂದು ತೋರಿತು. ರಾಮಕುಮಾರನಿಗೂ ಇದು ಸಮ್ಮತವಾಯಿತು.

ಅವನು ತನ್ನ ತಮ್ಮನ ಪರವಾಗಿ ಭಟ್ಟಾಚಾರ್ಯರನ್ನು ವಿನಂತಿಸಿಕೊಂಡ: "ಕೃಪೆಮಾಡಿ ತಾವು ಈತನಿಗೆ ಶಕ್ತಿಮಂತ್ರವನ್ನು ಉಪದೇಶಿಸಿ ಭಗವತಿಯ ಪೂಜೆಯನ್ನು ಕಲಿತುಕೊಳ್ಳಲು ಅನುಕೂಲವಾಗುವಂತೆ ಅನುಗ್ರಹಿಸಬೇಕು" ಎಂದು. ಕೇನಾರಾಮರು ರಾಮಕೃಷ್ಣರನ್ನು ನೋಡಿದರು. ಇಂಥವನಿಗೆ ದೀಕ್ಷೆ ನೀಡುವುದೇ ತಮ್ಮ ಪಾಲಿನ ಒಂದು ಮಹಾಭಾಗ್ಯ ಎಂದುಕೊಂಡು ಸಂತೋಷ ದಿಂದ ಸಮ್ಮತಿಸಿದರು.

ಒಂದು ಶುಭದಿನ ಮಂತ್ರದೀಕ್ಷೆ ನೀಡಲು ವ್ಯವಸ್ಥೆಯಾಯಿತು. ರಾಮ ಕೃಷ್ಣರು ತಮ್ಮ ಸಂಧ್ಯಾದಿಗಳನ್ನು ಮುಗಿಸಿ ಬಂದು, ದೇವಾಲಯದ ಕೋಣೆ ಯೊಂದರ ಏಕಾಂತದಲ್ಲಿ ಸಿದ್ಧರಾಗಿ ಕುಳಿತರು. ಭಕ್ತಿಭಾವರಂಜಿತರಾಗಿ ಕುಳಿತ ಅವ ರನ್ನು ಕಂಡೊಡನೆ ಕೇನಾರಾಮರು ರೋಮಾಂಚಿತರಾದರು. ವಿಧಿಪ್ರಕಾರವಾಗಿ ಶಿಷ್ಯ ನಿಗೆ ಪರಮಪವಿತ್ರವಾದ ದೇವೀ ಮಂತ್ರವನ್ನು ಉಪದೇಶಿಸಿದರು. ಆ ಮಂತ್ರವನ್ನು ಉಚ್ಚರಿಸುತ್ತಲೇ ರಾಮಕೃಷ್ಣರು ಭಾವಸಮಾಧಿಸ್ಥರಾಗಿ, ಬಾಹ್ಯಪ್ರಜ್ಞಾಶೂನ್ಯ ರಾದರು. ಇದನ್ನು ಕಂಡ ಕೇನಾರಾಮರ ವಿಸ್ಮಯಾನಂದಗಳಿಗೆ ಪಾರವೇ ಇಲ್ಲ!

ರಾಮಕೃಷ್ಣರು ಈಗಾಗಲೇ ಕಾಳೀಪೂಜೆಯ ವಿಧಿವಿಧಾನಗಳನ್ನು ಸಂಪೂರ್ಣ ವಾಗಿ ಕಲಿತಿದ್ದರು; ಈಗ ಅದಕ್ಕೆ ಬೇಕಾದ ಶಾಸ್ತ್ರೋಕ್ತ ಅರ್ಹತೆಯನ್ನು ಪಡೆದು ಕೊಂಡಂತಾಯಿತು. ಆದರೆ ಕಾಳಿಯ ಪೂಜೆಯು ರಾಧಾಗೋವಿಂದರ ಪೂಜೆಗಿಂತ ಜಟಿಲವಾದದ್ದು, ಮತ್ತು ಶ್ರಮಸಾಧ್ಯವಾದದ್ದು. ರಾಮಕುಮಾರನಿಗೂ ವಯ ಸ್ಸಾಗುತ್ತ ಬಂದಿತಲ್ಲವೆ? ಆದ್ದರಿಂದ ಆಗಾಗ ಅವನಿಗೆ ಕಷ್ಟವೆನಿಸುತ್ತಿತ್ತು. 'ಈಗ ನನ್ನ ತಮ್ಮನಿಗೆ ಕಾಳೀ ಪೂಜೆಯನ್ನು ಬಿಟ್ಟುಕೊಟ್ಟರೆ ಅವನೂ ಅದರಲ್ಲಿ ಪಳಗಿ ದಂತಾಗುತ್ತದೆ, ನನಗೂ ಸ್ವಲ್ಪ ವಿಶ್ರಾಂತಿ ಸಿಗುತ್ತದೆ' ಎಂದು ಆತ ಆಲೋಚಿಸಿದ. ಅದರಂತೆ ಅವನು ಕೆಲದಿನಗಳ ಮಟ್ಟಿಗೆ ರಾಮಕೃಷ್ಣರಿಗೆ ಕಾಳೀ ಪೂಜೆಯ ಜವಾಬ್ದಾರಿಯನ್ನು ಒಪ್ಪಿಸಿ ತಾನು ರಾಧಾಗೋವಿಂದರ ಪೂಜೆಯನ್ನು ನಿರ್ವಹಿಸ ತೊಡಗಿದ. ಮಥುರನಿಗೆ ಈ ವಿಷಯ ತಿಳಿಯಿತು. 'ನನ್ನನ್ನು ಕೇಳದೆ ಏಕೆ ಹೀಗೆ ಮಾಡಿಬಿಟ್ಟರು ಈ ಭಟ್ಟಾಚಾರ್ಯರು?' ಎಂದು ಅವನೇನೂ ಸಿಟ್ಟಾಗಲಿಲ್ಲ. ಬದಲಾಗಿ, 'ಹಿರಿಯ ಭಟ್ಟಾಚಾರ್ಯರಿಗೆ ಈಗ ಮೊದಲಿನಷ್ಟು ತ್ರಾಣವಿಲ್ಲ. ಪಾಪ, ಅವರಿಗೂ ವಯಸ್ಸಾಯಿತು. ಅವರಿಗೆ ಸ್ವಲ್ಪ ವಿಶ್ರಾಂತಿ ಸಿಗಬೇಕಾದ್ದು ನ್ಯಾಯವೇ. ಅಲ್ಲದೆ ಕಿರಿಯ ಭಟ್ಟಾಚಾರ್ಯರಾದರೂ ಯಾವುದರಲ್ಲಿ ಕಡಿಮೆ?' ಎಂದು ಭಾವಿಸಿದ. ರಾಣಿಯ ಬಳಿಯಲ್ಲೂ ಅದನ್ನು ಹೇಳಿ ಆಕೆಯ ಸಮ್ಮತಿ ಪಡೆದು ಕೊಂಡ. ಬಳಿಕ ರಾಮಕುಮಾರನ ಬಳಿಗೆ ಬಂದು ಅವರ ಆ ವ್ಯವಸ್ಥೆಯನ್ನೇ ಮುಂದುವರಿಸಿಕೊಂಡು ಬರುವಂತೆ ಕೇಳಿಕೊಂಡ. ತಮ್ಮ ಈ ವ್ಯವಸ್ಥೆಗೆ ಮಥುರನೂ ಸಮ್ಮತಿಸಿದ್ದರಿಂದ ರಾಮಕುಮಾರನಿಗೆ ಸಂತೋಷವಾಯಿತು.

ರಾಮಕುಮಾರನೀಗ ಚಿಂತೆಯಿಂದ ಸಂಪೂರ್ಣ ಮುಕ್ತನಾದ. ಅವನಿಗಿನ್ನು

ಯಾವ ಯೋಚನೆಯೂ ಇಲ್ಲದಂತಾಯಿತು. ಈಗ ಅವನಿಗೆ ಕೆಲದಿನಗಳ ಮಟ್ಟಿಗೆ ಊರಿಗೆ ಹೋಗಿಬರುವ ಇಚ್ಛೆಯಾಯಿತು. ಆದ್ದರಿಂದ ಮಥುರನಿಗೆ ಹೇಳಿ ಹೃದಯನನ್ನು ರಾಧಾಗೋವಿಂದರ ಅರ್ಚಕನನ್ನಾಗಿ ನೇಮಿಸಿ ತಾನು ರಜದ ಮೇಲೆ ಹೊರಟ. ಆದರೆ ಅವನಿಗೆ ತನ್ನ ಮನೆಯವರನ್ನು ನೋಡುವ ಭಾಗ್ಯ ಇರಲಿಲ್ಲ. ಇಹಲೋಕದಲ್ಲಿನ ಅವನ 'ಕರ್ತವ್ಯ' ಮುಗಿದಿತ್ತೆಂದು ತೋರುತ್ತದೆ. ಯಾವುದೋ ಕೆಲಸದ ಪ್ರಯುಕ್ತ ಕಲ್ಕತ್ತದ ಉತ್ತರಕ್ಕಿರುವ ಶ್ಯಾಮನಗರ ಎಂಬಲ್ಲಿಗೆ ಕೆಲದಿನಗಳ ಮಟ್ಟಿಗೆ ಹೋಗಿದ್ದವನು ಹಠಾತ್ತಾಗಿ ಅಲ್ಲೇ ಕೊನೆಯುಸಿರೆಳೆದ. ದಕ್ಷಿಣೇಶ್ವರದ ಕಾಳೀದೇವಾಲಯದ ಪ್ರತಿಷ್ಠಾಪನೆಯಾದ ಮೇಲೆ ಸುಮಾರು ಒಂದು ವರ್ಷ ದೇವಿಯ ಅರ್ಚಕನಾಗಿ ಸೇವೆ ಸಲ್ಲಿಸಿದ ರಾಮಕುಮಾರ ೧೮೫೬ರ ಮಧ್ಯಭಾಗದಲ್ಲಿ ಜೀವನಯಾತ್ರೆ ಮುಗಿಸಿದ. ಭಗವಂತನ ದಿವ್ಯ ಲೀಲಾನಾಟಕದಲ್ಲಿ ಅವನು ನಟಿಸಬೇಕಾಗಿದ್ದ ಪಾತ್ರ ಅಲ್ಲಿಯವರೆಗೆ ಮಾತ್ರ. ಅದರಿಂದಾಚೆಗೆ ಒಂದು ಕ್ಷಣವೂ ಹೆಚ್ಚಿಗೆ ಇರಲು ಅವನು ಸ್ವತಂತ್ರನಲ್ಲ. ಅವನಿಗೆ ಆಗ ಐವತ್ತು ವರ್ಷ ವಯಸ್ಸು. ಸಾಯುವ ವಯಸ್ಸೇನಲ್ಲ ಅದು. ಆದರೆ ಅಭಿನಯದ ಅವಧಿ ಮುಗಿದಿತ್ತಲ್ಲ!

ರಾಮಕುಮಾರನ ಅಕಾಲ ಮರಣದ ವಾರ್ತೆ ಕಾಮಾರಪುಕುರಕ್ಕೆ ತಲುಪಿದಾಗ ಮನೆಮಂದಿಯ ಮನಸ್ಥಿತಿ ಹೇಗಾಗಿದ್ದಿರಬಹುದೆಂದು ಭಾವಿಸಿಯೇ ನೋಡಬೇಕು. ನಾಲ್ಕು ಕಾಸು ಹೆಚ್ಚು ಸಂಪಾದಿಸಿ, ಮನೆವಾರ್ತೆಯ ಸ್ಥಿತಿಯನ್ನು ಸುಧಾರಿಸಲೆಂದು ಮನೆಯಿಂದ ಹೊರಟ ಮಗನ ವಿಷಯವಾಗಿ ಇಂತಹ ವಾರ್ತೆ! ವೃದ್ಧೆ ಚಂದ್ರಮಣಿಯ ಮೇಲೆ ಹಿರಿಯ ಮಗನ ಮರಣ ದೊಡ್ಡ ಆಘಾತವನ್ನೇ ಉಂಟುಮಾಡಿತು. ತಾಯಿಯನ್ನು ಕಳೆದುಕೊಂಡೇ ಹುಟ್ಟಿದ ಅಕ್ಷಯರಾಮ ಈಗ ತಂದೆಯನ್ನೂ ಕಳೆದುಕೊಂಡು ತಬ್ಬಲಿಯಾದ, ಅವನಿಗಿನ್ನು ಚಿಕ್ಕಪ್ಪ ರಾಮೇಶ್ವರನೇ ದಿಕ್ಕು.

ಮುದುಕಿ ಚಂದ್ರಮಣಿ ದುಃಖಿಸಿದಳು—ವೃದ್ಧಾಪ್ಯದಲ್ಲಿ ಮಗನ ಸಾವು ಕಾಣಬೇಕಾದ ಸಂಕಟ ಒಂದು ಕಡೆಯಾದರೆ, ಆ ಮಗ ಕಣ್ಣು ಕಾಣದ ಊರಲ್ಲಿ ದಿಕ್ಕಿಲ್ಲದವರಂತೆ ದೇಹ ಬಿಡುವಂತಾಯಿತಲ್ಲ ಎಂಬ ದುಃಖ ಇನ್ನೊಂದು ಕಡೆ. ದುಃಖಿಸುವಷ್ಟು ದುಃಖಿಸಿದಳು ಚಂದ್ರಮಣಿ. ಬಳಿಕ ಮೆಲ್ಲನೆ ತನ್ನ ಮನಸ್ಸನ್ನು ದೂರದ ಊರಿನಲ್ಲಿರುವ ಪ್ರಿಯ ಪುತ್ರ ಗದಾಧರನ ಕಡೆಗೆ ಹರಿಸಿ ಸಮಾಧಾನ ತಂದುಕೊಳ್ಳಲೆತ್ನಿಸಿದಳು. ಮತ್ತು ಮೊದಲಿಗಿಂತ ಹೆಚ್ಚಾಗಿ ಭಗವನ್ನಾಮ ಜಪದಲ್ಲಿ ನಿರತಳಾದಳು. ಜೀವನದಲ್ಲಿ ಅನಿವಾರ್ಯವಾದ ದುಃಖಪರಂಪರೆಗಳ ಆಘಾತವನ್ನು ಸಹಿಸಲು ಭಗವನ್ನಾಮ ಜಪ ಭಗವಚ್ಚಿಂತನೆ ಭಗವತ್ಸೇವೆಗಳೇ ಸುಲಭ ಸಾಧನಗಳು.

# ವ್ಯಾಕುಲತೆಗೊಲಿದ ಜಗನ್ಮಾತೆ

ಬಾಲ್ಯದಿಂದಲೂ ತನ್ನನ್ನು ಸ್ವಂತ ತಂದೆಯಂತೆ ಪ್ರೀತಿಸಿದ, ಸಾಕಿ ಸಲಹಿದ ಹಿರಿಯಣ್ಣ ರಾಮಕುಮಾರ ಇದ್ದಕ್ಕಿದ್ದಂತೆ ತೀರಿಕೊಂಡಾಗ ರಾಮಕೃಷ್ಣರಿಗಾದ ದುಃಖವೇನೂ ಕಡಮೆಯದಲ್ಲ. ಅಣ್ಣನ ಸಾನ್ನಿಧ್ಯವೇ ಅವರಿಗೊಂದು ಬೆಂಬಲ ವಾಗಿತ್ತು. ಹಿಂದೆ ತಂದೆಯ ಮರಣ ಬಾಲಕ ಗದಾಧರನ ಎಳೆಯ ಮನಸ್ಸಿನ ಮೇಲೆ ಗಾಢವಾದ ಪ್ರಭಾವ ಬೀರಿತ್ತು; ಹುಟ್ಟು ಸಾವುಗಳ ಪ್ರಶ್ನೆಯನ್ನು ಮೂಡಿಸಿತ್ತು. ಆದರೆ ತಾಯಿಯ ಹಾಗೂ ಅಣ್ಣನ ಪ್ರೀತಿಯೆಂಬುದು ಆ ದುಃಖವನ್ನು ಬಹುಮಟ್ಟಿಗೆ ಅಳಿಸಿತ್ತು. ಈಗ ಅಣ್ಣನೂ ತೀರಿಕೊಂಡಾಗ ಜಗತ್ತಿನ ನಶ್ವರತೆ ಮತ್ತಷ್ಟು ಸ್ಪಷ್ಟವಾಗಿ ಮನಮುಟ್ಟಿತು. ಭಗವಾನ್ ಬುದ್ಧನಲ್ಲಿ ವೃದ್ಧಾಪ್ಯ ರೋಗ ಮರಣಗಳ ದೃಶ್ಯಗಳು ಹೇಗೆ ತ್ಯಾಗ ವೈರಾಗ್ಯದ ಅಗ್ನಿಯನ್ನು ಭುಗಿಲೆಬ್ಬಿ ಸಿದುವೋ, ಅಣ್ಣನ ಮರಣವೂ ರಾಮಕೃಷ್ಣರಲ್ಲಿ ಅಂಥದೇ ಭಾವವನ್ನು ಪ್ರಚೋದಿಸಿತು.

ದಿನ ಕಳೆದಂತೆಲ್ಲ ರಾಮಕೃಷ್ಣರ ಬುದ್ಧಿ ಮನಸ್ಸುಗಳು ಜಗನ್ಮಾತೆಯ ಪೂಜೆಯಲ್ಲಿ ಹೆಚ್ಚೆಚ್ಚು ಆಳವಾಗಿ ನೆಟ್ಟು ಅದರಲ್ಲೇ ಓತಪ್ರೋತವಾಗಿ ಬೆರೆತು ಕೊಂಡುವು. ಮನಸ್ಸಿನ ಮೂಲೆಯಲ್ಲೊಂದು ಪ್ರಶ್ನೆ ಮೂಡಿ ಭೂತಾಕಾರವಾಗಿ ಬೆಳೆದು ನಿಂತಿತು: 'ಈ ಕಾಳಿ ಎಂಬವಳು ನಿಜವಾಗಿಯೂ ಇರುವಳೆ? ಇರುವು ದಾದರೆ ಎಲ್ಲಿ? ಆಕೆ ಹೇಗಿದ್ದಾಳೆ? ಆಕೆಯನ್ನು ಕಾಣಬಯಸುವ ಸಾಧಕರಿಗೆ ದರ್ಶನ ಕೊಟ್ಟಾಳೆಯೇ?' ಹೀಗೆ ಜಗನ್ಮಾತೆಯ ಬಗ್ಗೆಯೇ ಚಿಂತಿಸುತ್ತ ಪೂಜಾದಿ ಗಳೆಲ್ಲ ಮುಗಿದ ಮೇಲೆಯೂ ಕುಳಿತಲ್ಲೇ ಕುಳಿತಿರುತ್ತಿದ್ದರು. ಬಂಗಾಳದ ಸಂತ ಕವಿಗಳಾದ ರಾಮಪ್ರಸಾದ ಹಾಗೂ ಕಮಲಾಕಾಂತರ ಹಾಡುಗಳನ್ನು ಹಾಡುತ್ತ ಆಕೆಯ ಮೇಲಿನ ಭಕ್ತಿಯಿಂದ ಉನ್ಮತ್ತರಾಗಿಬಿಡುತ್ತಿದ್ದರು. ಹಗಲಿರುಳೆನ್ನದೆ ಸದಾ ದೇವಿಯ ಭಾವ! ಯಾರೊಡನೆಯಾದರೂ ಸುಮ್ಮನೆ ಹರಟುತ್ತ ಒಂದು ಅರೆ ಕ್ಷಣವೂ ನಿಲ್ಲುತ್ತಿರಲಿಲ್ಲ. ತಾವಾಯಿತು, ತಮ್ಮ ಆಲೋಚನೆಯಾಯಿತು. ಮಧ್ಯಾಹ್ನವೂ ರಾತ್ರಿಯೂ ನೈವೇದ್ಯವಾದ ಮೇಲೆ ದೇವಸ್ಥಾನದ ಬಾಗಿಲು ಹಾಕಿದೊಡನೆಯೇ ತಾವೊಬ್ಬರೇ ಪಂಚವಟಿಯ ಕಡೆಗೆ ಹೋಗಿಬಿಡುತ್ತಿದ್ದರು. ಅಲ್ಲಿ ಜಗನ್ಮಾತೆಯ ಧ್ಯಾನ–ಚಿಂತನೆ–ಶೋಧನೆಗಳಲ್ಲಿ ನಿಮಗ್ನರಾಗಿಬಿಡುತ್ತಿದ್ದರು.

ರಾಮಕೃಷ್ಣರು ಹೀಗೆಲ್ಲ ವರ್ತಿಸಿದರೆ ಹೃದಯನಿಗೆ ಸಹ್ಯವಾದೀತೆ? ಅವನೂ

ನೋಡುವಷ್ಟು ನೋಡಿದ. ಬಹಳ ಕಿರಿಕಿರಿಯಾಯಿತವನಿಗೆ. ಚಡಪಡಿಸಿದ. ಹೋಗಲಿ, ತಾನೇನಾದರೂ ಹೇಳಿದರೆ ಕೇಳಿಯಾರೆ ? ಕಿವಿಯ ಮೇಲೆ ಹಾಕಿಕೊಳ್ಳು ವುದೇ ಇಲ್ಲ! ಚಿಕ್ಕಂದಿನಿಂದಲೂ ಅಷ್ಟೆ. ತಮಗೇನನ್ನಾದರೂ ಮಾಡಬೇಕೆಂಬ ಮನಸ್ಸಾದರೆ ಅದನ್ನು ಸಾಧಿಸಿಯೇ ತೀರುವವರು ಅವರು. ಆದ್ದರಿಂದ ಅವರಿಗೆ ತಡೆಯೊಡ್ಡುವುದರಿಂದಾಗಲಿ, ವಿರೋಧಿಸುವುದರಿಂದಾಗಲಿ ಪ್ರಯೋಜನವಿಲ್ಲ. ಇದು ಹೃದಯುನಿಗೆ ಚೆನ್ನಾಗಿ ಗೊತ್ತು. ಆದರೆ ಅವರ ಈ ವಿಚಿತ್ರ ಸ್ವಭಾವ ದಿನದಿನವೂ ಹೆಚ್ಚಾಗುತ್ತ ವಿಕೋಪಕ್ಕೆ ಹೋಗುವುದನ್ನು ಕಂಡಾಗ ಮಾತ್ರ ಅವನಿಗೆ ಆತಂಕ ಹೆಚ್ಚಿತು.

ಒಂದು ರಾತ್ರಿ ಹೃದಯುನಿಗೆ ಅದೇಕೋ ಎಚ್ಚರವಾಯಿತು. ಪಕ್ಕಕ್ಕೆ ಹೊರಳಿ ನೋಡಿದ —ರಾಮಕೃಷ್ಣರು ಕಾಣಲಿಲ್ಲ! ಇಷ್ಟು ಹೊತ್ತಿನಲ್ಲಿ ಎಲ್ಲಿಗೆ ಹೋಗಿರ ಬಹುದು ? ಅವನಿಗೆ ಅರ್ಥವಾಗಲಿಲ್ಲ. ಎಷ್ಟು ಹೊತ್ತಾದರೂ ಅವರು ಬರಲೇ ಇಲ್ಲ! ಮರುದಿನ ಎಚ್ಚರವಾಗಿದ್ದು ಮೆಲ್ಲನೆ ಹಿಂಬಾಲಿಸಿ ಹೋದ. ರಾಮಕೃಷ್ಣರು ಪಂಚವಟಿಯ ಕಡೆಗೆ ಹೋದದ್ದನ್ನು ನೋಡಿ, ಸುಮ್ಮನೆ ಹಿಂದಿರುಗಿದ. ಆಮೇಲೆ ನೋಡಿದರೆ ಪ್ರತಿರಾತ್ರಿಯೂ ಇದೇ ಕತೆ ! ಹೃದಯುನಿಗೆ ಬಹಳ ಚಿಂತೆಯಾಯಿತು. ಹೀಗೆ ರಾತ್ರಿಯೆಲ್ಲ ನಿದ್ದೆಗೆಟ್ಟರೆ ಗತಿಯೇನು ? ದೇವಾಲಯದ ಕೆಲಸವೋ ಸಾಕಷ್ಟು ಶ್ರಮದ್ದು. ಇದೆಲ್ಲ ಸಾಲದೆಂಬಂತೆ ಈಚೆಗೆ ಅವರು ಊಟ ಮಾಡುವುದೂ ತೀರಾ ಮಿತವೆಂದರೆ ಮಿತ ! ಹೀಗೆ ದೇಹವನ್ನು ದಂಡಿಸಿದರೆ ಅದು ಹೇಗೆತಾನೆ ತಡೆದು ಕೊಂಡೀತು ? ಇನ್ನು ತಾನು ಸುಮ್ಮನಿದ್ದರೆ ಪರಿಸ್ಥಿತಿ ಕೈಮೀರಿ ಹೋಗುವುದೇ ಖಂಡಿತ ಎನ್ನಿಸಿತು ಹೃದಯುನಿಗೆ. ಆದ್ದರಿಂದ ತನ್ನಿಂದಾದ ಪ್ರಯತ್ನವನ್ನೆಲ್ಲ ಮಾಡುವುದೆಂದು ನಿರ್ಧರಿಸಿದ.

ಪಂಚವಟಿಯ ಬಳಿಯ ಪ್ರದೇಶವೆಲ್ಲ ಆಗ ಹಳ್ಳದಿಣ್ಣೆಗಳಿಂದ, ದಟ್ಟವಾದ ಮರಗಳಿಂದ ಕೂಡಿತ್ತು. ಸುತ್ತಮುತ್ತಲ ಜನರಿಗೆ ಅದು ಸ್ಮಶಾನವೂ ಕೂಡ. ಜನರು ಅಲ್ಲಿಗೆ ಹೋಗುತ್ತಿದ್ದುದೇ ಅಪರೂಪ. ಸ್ಮಶಾನವೆಂದ ಮೇಲೆ ಭೂತ ಪಿಶಾಚಿಗಳ ಭಯ ಬೇರೆ. ಇಂತಹ ಸ್ಥಳಕ್ಕೆ ಇನ್ನು ರಾತ್ರಿ ಹೊತ್ತು ಯಾರು ಹೋದಾರು ! ಆದರೆ ರಾಮಕೃಷ್ಣರಿಗೆ ಆ ಸ್ಥಳವೇ ಪ್ರಿಯವಾಗಿತ್ತು. ಪ್ರಪಂಚದ ನಶ್ವರತೆಯನ್ನು ಶಾಶ್ವತ ವಾಗಿ ನೆನಪಿಸಿ ಕೊಡುವ ಸ್ಥಳ ಅದು ಎಂಬ ಕಾರಣದಿಂದ ಅವರಿಗದು ಪ್ರಿಯ. ಪ್ರಪಂಚದ ಮೇಲೆ ಮತ್ತೊಮ್ಮೆ ಮೋಹ ಕೆರಳದಂತೆ ಮಾಡಬಲ್ಲ ತಾಣ ಅದು ಎಂಬ ಕಾರಣದಿಂದ ಅವರಿಗದು ಪ್ರಿಯ. ಇವೆಲ್ಲಕ್ಕಿಂತ ಮಿಗಿಲಾಗಿ ತಮ್ಮ ಧ್ಯಾನಕ್ಕೆ ಭಂಗ ತರಲೆತ್ನಿಸುವವರು ಬರಲಾಗದ ಪ್ರದೇಶ ಅದು ಎಂಬ ಕಾರಣದಿಂದ ಅವರಿಗದು ಪ್ರಿಯ.

ಒಂದು ರಾತ್ರಿ ರಾಮಕೃಷ್ಣರು ಎದ್ದು ಹೊರಟಾಗ ಹೃದಯುನೂ ಅವರಿಗರಿ ವಿಲ್ಲದಂತೆ ಹಿಂಬಾಲಿಸಿ ಹೋದ. ಅವರು ಅರಣ್ಯವನ್ನು ಪ್ರವೇಶಿಸಿದರು. ಅಲ್ಲಿನ ಒಂದು ತಗ್ಗು ಪ್ರದೇಶದಲ್ಲಿ ನೆಲ್ಲಿಕಾಯಿ ಮರವೊಂದು ಬೆಳೆದುಕೊಂಡಿತ್ತು. ಅದರ ಕೆಳಗೆ ಕುಳಿತವರು ಯಾರ ಕಣ್ಣಿಗೂ ಸುಲಭವಾಗಿ ಕಾಣುತ್ತಿರಲಿಲ್ಲ. ಅವರು ಆ

ಮರದ ಕೆಳಗೆ ಕುಳಿತು ಧ್ಯಾನಸ್ಥರಾದರು. ಹೃದಯು ದೂರದಲ್ಲೇ ನಿಂತು, ಅವರನ್ನು ಹೆದರಿಸಲು ಅವರ ಬಳಿಯಲ್ಲಿ ಬೀಳುವಂತೆ ಒಂದೆರಡು ಕಲ್ಲೆಸೆದ. ಬಳಿಕ ಮರಳನ್ನೆರಚಿದ. ಆದರೆ ಇದೆಲ್ಲ ಅವರ ಮೇಲೆ ಯಾವ ಪರಿಣಾಮವನ್ನೂ ಬೀರಲಿಲ್ಲ. ಬೇರೇನು ಮಾಡಲು ತೋರದೆ ಹೃದಯು ಕೋಣೆಗೆ ಹಿಂದಿರುಗಿದ.

ಮರುದಿನ ಸಮಯು ಸಿಕ್ಕಾಗ ಹೃದಯು ಕೇಳಿದ:

"ಮಾವ, ನೀನು ಆ ಅಪರಾತ್ರಿಯು ಹೊತ್ತಿನಲ್ಲಿ ಎದ್ದು ಎಲ್ಲಿಗೆ ಹೋಗುತ್ತಿ? ಅದೇನು ಮಾಡುತ್ತಿ ನೀನು?"

ರಾಮಕೃಷ್ಣರು ನಿಜ ಸಂಗತಿಯನ್ನು ಮುಚ್ಚಿಡಲಿಲ್ಲ:

"ನೋಡು, ಪಂಚವಟಿಯು ಬಳಿಯು ಕಾಡಿನಲ್ಲಿ ಒಂದು ನೆಲ್ಲಿಕಾಯಿ ಮರವಿದೆ. ನಾನು ಅದರ ಕೆಳಗೆ ಕುಳಿತು ಧ್ಯಾನಾಭ್ಯಾಸ ಮಾಡುತ್ತೇನೆ. ಮನದಲ್ಲಿ ಯಾವುದಾದರೂ ಅಭಿಲಾಷೆಯನ್ನಿಟ್ಟುಕೊಂಡು ನೆಲ್ಲೀಮರದ ಕೆಳಗೆ ಧ್ಯಾನ ಮಾಡಿದರೆ ಅದು ನೆರವೇರುತ್ತದೆ ಎಂದು ಶಾಸ್ತ್ರಗಳಲ್ಲಿದೆ."

ಹೃದಯು ಒಂದು ಮಾತನ್ನೂ ಆಡಲಿಲ್ಲ. ಆದರೆ ಅಂದಿನಿಂದ ರಾಮಕೃಷ್ಣರು ಅಲ್ಲಿ ಹೋಗಿ ಧ್ಯಾನಕ್ಕೆ ಕುಳಿತರೆ ಏನೇನೋ ವಿಚಿತ್ರಗಳೆಲ್ಲ ಸಂಭವಿಸತೊಡಗಿತು. ಸುತ್ತಲೂ ದಪ್ಪನೆ ಕಲ್ಲುಗಳು ಬೀಳುವುದು, ಯಾರೋ ಚರಪರ ನಡೆದಾಡುವ ಸದ್ದು ಹಾಗೂ ಇನ್ನೂ ಏನೇನೋ ವಿಕಾರವಾದ ಶಬ್ದಗಳು! ಬೇರೆ ಯಾರಾದರೂ ಆಗಿದ್ದರೆ ಎದೆ ನಡುಗಿ ಎದ್ದು ಓಡಿಬರಬೇಕು. ಆದರೆ ರಾಮಕೃಷ್ಣರು ಮಿಸುಕಾಡಿದರೆ ತಾನೆ! ಇದೆಲ್ಲ ಹೃದಯುನ ಕಿತಾಪತಿಯೇ ಎಂದು ಅವರಿಗೆ ಚೆನ್ನಾಗಿ ಗೊತ್ತು. ಆದರೆ ಅವರೇನೂ ಮಾತನಾಡಲಿಲ್ಲ. ಈ ಉಪಾಯದಿಂದಲೂ ಅವರ ಮನಸ್ಸನ್ನು ಬದಲಾಯಿಸಲು ಸಾಧ್ಯವಾಗದಿದ್ದಾಗ ಹೃದಯುನಿಗೆ ಇನ್ನಷ್ಟು ಕಸಿವಿಸಿಯಾಯಿತು.

ಒಂದು ದಿನ ರಾಮಕೃಷ್ಣರು ಹೋಗಿ ಧ್ಯಾನಕ್ಕೆ ಕುಳಿತಾಗ ಹೃದಯು ಮೆಲ್ಲನೆ ಸದ್ದಾಗದಂತೆ ಅವರ ಹತ್ತಿರಕ್ಕೇ ಹೋದ. ನೋಡುತ್ತಾನೆ—ರಾಮಕೃಷ್ಣರು ತಮ್ಮ ಮೈಮೇಲಿನ ಬಟ್ಟೆಯನ್ನೆಲ್ಲ ಕಳಚಿಟ್ಟು ಬತ್ತಲೆಯಾಗಿ ಧ್ಯಾನಕ್ಕೆ ಕುಳಿತಿದ್ದಾರೆ! ಅಷ್ಟೇ ಅಲ್ಲ, ಪವಿತ್ರವಾದ ಯಜ್ಞೋಪವೀತವೂ ಕಾಣುತ್ತಿಲ್ಲ! ಅಯ್ಯಯ್ಯೋ! ಇದೇನಿದು! ಮಾವನಿಗೆ ಹುಚ್ಚು ಹಿಡಿಯಿತೆ? ಏನೋ, ಧ್ಯಾನ ಮಾಡಬೇಕು ಎನಿಸಿದರೆ ಮಾಡಿಕೊಳ್ಳಲಿ. ಆದರೆ ಹೀಗೆ ಮೈಮೇಲಿನ ವಸ್ತ್ರವನ್ನೆಲ್ಲ ತೆಗೆದುಹಾಕಿ ಕುಳಿತುಕೊಳ್ಳಬೇಕೆ? ಹೃದಯುನಿಗೆ ತಲೆಯೆಲ್ಲ ಬಿಸಿಯಾಯಿತು. ಹತ್ತಿರಕ್ಕೆ ಹೋಗಿನಿಂತು ಕಿರುಚಿದ:

"ಮಾವಾ! ಇದೇನು ಬಂದಿದೆ ನಿನಗೆ! ಏಕೆ ಹೀಗೆ ಜನಿವಾರ ಬಟ್ಟೆಬರೆ ಎಲ್ಲ ತೆಗೆದಿಟ್ಟು ಬೋಳು ಬತ್ತಲೆಯಾಗಿ ಕುಳಿತಿದ್ದೀಯೆ!"

ರಾಮಕೃಷ್ಣರಿಗೆ ಇವನ ಕೂಗು ಕೇಳಿಸಲೇ ಇಲ್ಲ. ಹೃದಯು ಇನ್ನೂ ನಾಲ್ಕೈದು ಬಾರಿ ಕೂಗಿದ ಮೇಲೆ ಮೆಲ್ಲನೆ ಪ್ರಜ್ಞಾಸ್ಥಿತಿಗೆ ಮರಳಿದರು. ಕಣ್ತೆರೆದು ನೋಡಿದರು. ಹೃದಯು ನಿಂತಿದ್ದಾನೆ! ಅವನು ಮತ್ತೆ ಅದೇ ಪ್ರಶ್ನೆಯನ್ನು ಕೇಳಿದ—"ಮಾವ, ಇದೆಲ್ಲ ಏನು ನಿನ್ನ ಕತೆ?"

ರಾಮಕೃಷ್ಣರು ಸಮಾಧಾನದಿಂದಲೇ ಹೇಳಿದರು:

"ಹೃದೂ, ಇದೆಲ್ಲ ನಿನಗೇನು ಗೊತ್ತಾಗುತ್ತದೆ? ಹೀಗೆ ಎಲ್ಲ ಬಗೆಯ ಬಂಧನಗಳಿಂದ ಮುಕ್ತರಾಗಿಯೇ ಧ್ಯಾನ ಮಾಡಬೇಕು. ಹುಟ್ಟಿನಿಂದಲೇ ಮನುಷ್ಯ, ದ್ವೇಷ ಭಯ ಲಜ್ಜೆ ಕುಲ ಶೀಲ ಮಾನ ಜಾತಿ ಮತ್ತು ಅಭಿಮಾನವೆಂಬ ಅಷ್ಟಪಾಶಗಳಿಂದ ಬದ್ಧನಾಗಿರುತ್ತಾನೆ. ಈ ಜನಿವಾರವೂ ಒಂದು ಪಾಶವೇ. 'ನಾನು ಬ್ರಾಹ್ಮಣ, ನಾನು ಎಲ್ಲರಿಗಿಂತ ಶ್ರೇಷ್ಠನಾದವನು' ಎಂದು ಅದು ನೆನಪಿಸಿಕೊಡುತ್ತಿರುತ್ತದೆ. ಹೀಗೆ ಅದೊಂದು ಅಹಂಕಾರದ ಮೂಲ. ಜಗನ್ಮಾತೆಯನ್ನು ಕರೆಯಬೇಕೆಂಬವನು ಈ ಪಾಶಗಳನ್ನೆಲ್ಲ ಕಡಿದುಕೊಂಡು, ಆಕೆಯನ್ನು ಏಕಾಗ್ರಚಿತ್ತದಿಂದ ಕರೆಯಬೇಕು. ಆದ್ದರಿಂದಲೇ ನಾನು ಹೀಗೆ ಕುಳಿತಿರುವುದು. ಆದರೆ ಧ್ಯಾನ ಮುಗಿಸಿಕೊಂಡು ಹಿಂದಿರುಗುವಾಗ ಮತ್ತೆ ಇವನ್ನೆಲ್ಲ ಧರಿಸುತ್ತೇನೆ."

ಇದನ್ನು ಕೇಳಿ ಹೃದಯರಾಮ ಸ್ತಂಭಿತನಾಗಿ ನಿಂತ—ಹೀಗೂ ಉಂಟೆ?! ಇಂಥದೊಂದನ್ನು ಅವನೆಂದೂ ಕೇಳಿರಲೇ ಇಲ್ಲ. ಮಾವನ ತರ್ಕ ಅವನ ತಲೆಗೇ ಹೋಗಲಿಲ್ಲ. ತಾನು ಮಾವನಿಗೆ ಬೈದು ಬುದ್ಧಿ ಹೇಳುತ್ತೇನೆ; ಅವನು ಮಾಡುತ್ತಿರುವ ತಪ್ಪನ್ನು ಅವನಿಗೆ ತೋರಿಸಿ ಕೊಡುತ್ತೇನೆ ಎಂದು ಏನೇನೋ ಲೆಕ್ಕಾಚಾರ ಹಾಕಿಕೊಂಡು ಬಂದಿದ್ದ. ಆದರೆ ಈಗ ಅವನಿಗೆ ಏನು ಹೇಳಲೂ ತೋಚಲಿಲ್ಲ. "ಏನೋಽಪ್ಪ, ಒಟ್ಟಿನಲ್ಲಿ ನೀನು ಮಾಡುತ್ತಿರುವುದು ನನಗರ್ಥವಾಗುವುದಿಲ್ಲ" ಎಂದು ಗೊಣಗಿಕೊಂಡು ಹಿಂದಿರುಗಿದ.

ಹೀಗೆ ನಡುರಾತ್ರಿಯಲ್ಲೆದ್ದು ಅರಣ್ಯಮಧ್ಯದಲ್ಲಿ ಧ್ಯಾನಸ್ಥರಾಗುವುದು ಮಾತ್ರವಲ್ಲ, ರಾಮಕೃಷ್ಣರ ಪ್ರತಿಯೊಂದು ನಡೆನುಡಿಯೂ ಒಂದೇ ಉದ್ದೇಶದೆಡೆಗೆ ಕೇಂದ್ರಿತವಾಗಿತ್ತು. ಜಗನ್ಮಾತೆಯ ದರ್ಶನಲಾಭ ಪಡೆಯಲು ಯಾವ ಯಾವ ಕೃತ್ಯಗಳು ಸಹಾಯಕವೆಂದು ಅವರ ಹೃದಯಕ್ಕೆ ಅನ್ನಿಸಿದುವೋ ಅವೆಲ್ಲವನ್ನೂ ಅವರು ಅತ್ಯಂತ ಉತ್ಸಾಹದಿಂದ ಮಾಡತೊಡಗಿದರು. ದೇವಾಲಯದಲ್ಲಿ ಮಾಡುವ ಪೂಜೆಯಂತೂ ಅವರ ಪಾಲಿಗೆ ಎಂದೂ ಕೇವಲ 'ಕರ್ತವ್ಯ'ವಾಗಿರಲಿಲ್ಲ. ಅವರು ಅರ್ಚನೆ, ಆರತಿ, ನೈವೇದ್ಯ—ಹೀಗೆ ಏನೇನು ಮಾಡುತ್ತಿದ್ದರೋ ಅವೆಲ್ಲ ಸ್ವಯಂಪ್ರೀತಿಯಿಂದಲೇ. ಪೂಜಾದಿಗಳು ಮುಗಿದ ಮೇಲೆ ರಾಮಪ್ರಸಾದನೇ ಮೊದಲಾದ ಸಂತಶ್ರೇಷ್ಠರ ಹಾಡುಗಳನ್ನು ಹಾಡುವುದು ಅವರ ದಿನಚರಿಯ ಅವಿಭಾಜ್ಯ ಅಂಗವಾಗಿತ್ತು. ಹಾಡುತ್ತ ಹಾಡುತ್ತ ಅವರ ಹೃದಯದಲ್ಲಿ ಭಾವ ಸಮುದ್ರ ಉಕ್ಕೇರುತ್ತಿತ್ತು.

ಇದರೊಂದಿಗೆ, ಪೂಜಾದಿಗಳಿಗೆ ಬೇಕಾದ ಸಮಯ ದಿನದಿನಕ್ಕೂ ಹೆಚ್ಚುತ್ತ ಹೋಯಿತು. ಪೂಜಾವಿಧಿಯಂತೆ ತಲೆಯ ಮೇಲೊಂದು ಹೂವಿರಿಸಿಕೊಂಡು ಧ್ಯಾನಸ್ಥರಾಗಿ ಕುಳಿತುಕೊಳ್ಳುತ್ತಾರೆ—ಇದು ಐದು ನಿಮಿಷದಲ್ಲಿ ಮುಗಿಯಬೇಕಾದ ಧ್ಯಾನ, ಏಕೆಂದರೆ ಇದು ಪೂಜೆಯ ಒಂದು ಅಂಗ. ಆದರೆ ಎರಡು ಗಂಟೆ ಕಳೆದರೂ ಅವರ ಶರೀರ ಮರದ ಕೊರಡಿನಂತೆ ಅದೇ ಸ್ಥಿತಿಯಲ್ಲಿರುತ್ತದೆ! ಜಗನ್ಮಾತೆಗೆ ನೈವೇದ್ಯಕ್ಕೆಂದು ಆಹಾರ ಪದಾರ್ಥಗಳನ್ನೆಲ್ಲ ತಂದಿರಿಸಿಕೊಳ್ಳುತ್ತಾರೆ. ಈ ನೈವೇದ್ಯಕ್ಕೆ

ಹೆಚ್ಚೆಂದರೆ ಅರ್ಧಗಂಟೆ ಸಾಕು. ಆದರೆ ಜಗನ್ಮಾತೆ ಅದನ್ನೆಲ್ಲ ಸಾಕ್ಷಾತ್ತಾಗಿ ತಿನ್ನುತ್ತಿದ್ದಾಳೆ ಎಂದು ಭಾವಿಸಿ ಬಹಳ ಹೊತ್ತು ಸುಮ್ಮನೆ ಕುಳಿತೇ ಇರುತ್ತಾರೆ. ಇಲ್ಲವೆ, ಮುಂಜಾನೆ ತಾವೇ ಕಿತ್ತ ಹೂಗಳಿಂದ ಮಾಲೆ ಕಟ್ಟಿ, ದೇವಿಯನ್ನು ಅಲಂಕರಿಸುತ್ತ ಮೈಮರೆತುಬಿಡುತ್ತಾರೆ. ಪ್ರೇಮ–ಭಕ್ತಿಗಳಿಂದ ಕೂಡಿದ ಹೃದಯ ದಿಂದ, ಸಂಜೆ ಜಗನ್ಮಾತೆಗೆ ಆರತಿ ಮಾಡುತ್ತ ತನ್ಮಯರಾಗುತ್ತಾರೆ. ಮಧ್ಯಾಹ್ನ ಮತ್ತು ಸಂಜೆಯ ಆರತಿಯ ಬಳಿಕ, ದೇವಿಯ ಗುಣಗಾನ ಮಾಡುವ ಹಾಡುಗಳನ್ನು ಹಾಡುತ್ತ ಆಧ್ಯಾತ್ಮಿಕ ಭಾವದಲ್ಲಿ ತೇಲಾಡುತ್ತಿರುತ್ತಾರೆ. ಹೃದಯನೋ, ದೇವಾ ಲಯಕ್ಕೆ ಬಂದ ಯಾರಾದರೂ ಭಕ್ತರೋ 'ಮುಂದಿನ ಪೂಜೆಗೆ ಹೊತ್ತು ಮೀರಿ ಹೋಗುತ್ತಿದೆ' ಎಂದು ಮತ್ತೆ ಮತ್ತೆ ನೆನಪಿಸಿದ ಹೊರತು ಎಚ್ಚರವಾಗುವುದಿಲ್ಲ. ಅವರ ಈ ಬಗೆಯ ಪೂಜೆ ಕೆಲವು ದಿನ ನಡೆಯಿತು.

ಈಗೀಗ ದೇವಿಯ ವಿಗ್ರಹದ ಮುಂದೆ ಕುಳಿತು ರಾಮಕೃಷ್ಣರು ಮಾತನಾಡು ತ್ತಾರೆ—"ಅಮ್ಮಾ, ನೀನಿರುವುದು ನಿಜವೆ? ಅಥವಾ ನೀನು ಕೇವಲ ಕವಿಕಲ್ಪ ನೆಯೆ? ನೀನು ನಿಜಕ್ಕೂ ಇರುವುದಾದರೆ ನಾನಿಷ್ಟು ಕೂಗಿ ಕರೆದರೂ ಓಗೊಡ ದಿರುವೆಯೇಕೆ? ನೀನಷ್ಟು ನಿರ್ದಯಿಯೆ? ನೀನು ನನಗೆ ಕಾಣಿಸಿಕೊಳ್ಳದಿದ್ದರೆ ನೀನಿಲ್ಲವೆಂಬುದೇ ನಿಶ್ಚಿತ." ಆದರೆ ಮರುಕ್ಷಣವೇ, ರಾಮಪ್ರಸಾದನಂತಹ ಅನೇಕ ಮಹಾಭಕ್ತರು ದೇವಿಯ ದರ್ಶನ ಪಡೆದುಕೊಂಡದ್ದನ್ನು ನೆನಪಿಸಿಕೊಂಡು ಹೇಳು ತ್ತಾರೆ, "ಇಲ್ಲ, ಇಲ್ಲ! ಅಮ್ಮಾ ನೀನಿರುವೆಯೆಂದು ನಾ ಬಲ್ಲೆ. ನಿನ್ನನ್ನು ಕಣ್ಣಾರೆ ಕಂಡವರಿದ್ದಾರೆ ಎಂದಮೇಲೆ ನಾನೂ ನಿನ್ನನ್ನು ಕಾಣಲೇಬೇಕು. ಅಮ್ಮಾ! ಜಗ ನ್ಮಾತೆ! ನನಗೆ ಧನಕನಕ, ಆಸ್ತಿಪಾಸ್ತಿ, ಬಂಧುಬಳಗ, ಭೋಗಭಾಗ್ಯಗಳೊಂದೂ ಬೇಡ. ನಿನ್ನ ದರ್ಶನವೊಂದೇ ನನಗೆ ಸಾಕು."

ಹೀಗೆ ರಾಮಕೃಷ್ಣರು ಕಣ್ಣೀರ ಕೋಡಿ ಹರಿಸುತ್ತ ಪ್ರಾರ್ಥಿಸುತ್ತಿದ್ದರು. ಕಣ್ಣೀರು ಕಪೋಲದಿಂದಿಳಿದು ಎದೆಯನ್ನೆಲ್ಲ ತೋಯಿಸುತ್ತಿತ್ತು. ಆಗ ಹೃದಯ ಸ್ವಲ್ಪ ಹಗುರಾಗುತ್ತಿತ್ತು. ಮನದಲ್ಲಿ ಮತ್ತೊಮ್ಮೆ ಹೊಸ ಭರವಸೆ ಮೂಡುತ್ತಿತ್ತು. ಸಮಾಧಾನಗೊಂಡ ಹಸುಳೆಯಂತೆ ಮತ್ತೊಂದು ಹಾಡಿನಿಂದ ತಾಯಿಯನ್ನು ಸಂಪ್ರೀತಳನ್ನಾಗಿಸಲು ಸನ್ನದ್ಧರಾಗುತ್ತಿದ್ದರು.

ಆದರೆ ಸಂಜೆಯಾಗುತ್ತಿದ್ದಂತೆ ಹೃದಯದ ಬೇಗೆ ಮತ್ತೊಮ್ಮೆ ಕೆರಳುತ್ತಿತ್ತು. ಸೂರ್ಯ ತನ್ನ ಸುಂದರ ಹೊಂಗಿರಣಗಳನ್ನು ಬೀರುತ್ತ ಅಸ್ತಂಗತನಾಗಲೆಳಸುವಾಗ ದೇವಾಲಯಗಳಿಂದ ಪೂಜೆಯ ಘಂಟಾನಾದ ಕೇಳಿಬರುತ್ತಿತ್ತು. ಆಗ ಅವರು ಗಂಗಾತೀರದಲ್ಲಿ ಕುಳಿತು ಕಣ್ಣೀರು ಸುರಿಸುತ್ತ ಗೋಳಾಡುತ್ತಿದ್ದರು—"ಅಯ್ಯೋ, ಮತ್ತೂ ಒಂದು ದಿವಸ ಕಳೆದುಹೋಯಿತು! ತಾಯಿ, ನಶ್ವರವಾದ ಜೀವನದಲ್ಲಿ ನಿನ್ನನ್ನು ಕಾಣದೆ ಇನ್ನೊಂದು ದಿನ ವ್ಯರ್ಥವಾಗಿ ಹೋಯಿತಲ್ಲ! ನೀನೇಕೆ ನನ್ನ ಮೇಲೆ ಕೃಪೆ ಮಾಡದಿರುವೆ?"

ಅವರ ಈ ಬಗೆಯ ಅಪೂರ್ವ ಭಕ್ತಿ, ಉತ್ಕಟತೆ ಜನರ ಗಮನ ಸೆಳೆಯಲು ಹೆಚ್ಚು ಸಮಯ ಬೇಕಾಗಲಿಲ್ಲ. ಅವರ ವ್ಯಕ್ತಿತ್ವವೇ ಅಷ್ಟು ಆಕರ್ಷಕ. ಅವರ

ಮುಖದ ತೇಜಸ್ಸು, ನಡೆನುಡಿಯ ಮಾಧುರ್ಯ—ಇಷ್ಟೇ ಸಾಕಾಗಿತ್ತು ಜನರ ಗಮನ ಸೆಳೆಯಲು. ಇದರೊಂದಿಗೆ ಅವರ ಅಸಾಧಾರಣ ಭಕ್ತಿಯೂ ಸೇರಿಕೊಂಡಾಗ ಕೇಳಬೇಕೆ ? ಆದರೆ ಇದನ್ನೆಲ್ಲ ಕಂಡು ಪ್ರತಿಯೊಬ್ಬರೂ ಸಂತೋಷಪಟ್ಟರೆಂದಲ್ಲ. ಒಬ್ಬ ಮನುಷ್ಯ ಇತರರಿಗಿಂತ ಭಿನ್ನವಾಗಿ ನಡೆದುಕೊಂಡರೆ, ಯಾವುದನ್ನಾದರೂ ಚೆನ್ನಾಗಿ ಮಾಡಲು ಪ್ರಯತ್ನಿಸಿದರೆ, ಸವೆದ ಹಾದಿಯನ್ನು ಬಿಟ್ಟು ನಡೆದರೆ ಈ ಜನ ಎನ್ನುವವರು ಮಾಡುವ ಮೊದಲ ಕೆಲಸವೇ ಟೀಕೆ ! ಇದು ಜನದ ಸ್ವಭಾವ. ಆದರೆ ಆ ಮನುಷ್ಯ ಜನದ ಮಾತನ್ನು ಲಕ್ಷಿಸದೆ ತನ್ನಷ್ಟಕ್ಕೆ ತಾನು ಮುಂದುವರಿದರೆ ಆಗ ಜನ ಸ್ವಲ್ಪ ಮೆತ್ತಗಾಗುತ್ತಾರೆ. ಬರಬರುತ್ತ ಅವನು ಮಾಡಿದ ಕೆಲಸವೇ ಸರಿ ಎನ್ನಿಸಿಕೊಳ್ಳುತ್ತದೆ. ಆಗ ಜನ ಅವನಿಗೆ ಗೌರವ ತೋರಿಸುತ್ತಾರೆ. ರಾಮಕೃಷ್ಣರ ವಿಷಯದಲ್ಲೂ ಈ ಮಾತು ಸುಳ್ಳಾಗಲಿಲ್ಲ. ಅವರ ವಿಚಿತ್ರ ವರ್ತನೆಯನ್ನು ಕಂಡು ಜನ ಮಾತನಾಡಿಕೊಳ್ಳುತ್ತಿದ್ದರು: "ಲೋ, ಆ ಚಿಕ್ಕ ಪೂಜಾರಿಯ ಪೂಜೆಯನ್ನು ನೋಡಿದೆಯೇನೋ ! ಯಾರು ಬಂದರೂ ಸರಿಯೇ, ಯಾರು ಹೋದರೂ ಸರಿಯೇ. ಅವನಿಗೆ ಗಮನವೇ ಇಲ್ಲ ! ಎಷ್ಟು ಹೊತ್ತಾದರೂ ಎದ್ದು ಬರುವುದೂ ಇಲ್ಲ. ಕಣ್ಣುಮುಚ್ಚಿ ಕುಳಿತುಬಿಟ್ಟರೆ ಕುಳಿತೇಬಿಟ್ಟ, ಮಹಾರಾಯ !" ಎಂದು ಒಬ್ಬನೆಂದರೆ, "ಅಯ್ಯೋ, ಅದೇನು ಹೇಳುತ್ತಿ ಬಿಡು. ಹೊಸದಾಗಿ ಬಂದ ಅಗಸ ಗೋಣಿ ಎತ್ತೆತ್ತಿ ಒಗೆದನಂತಲ್ಲ, ಹಾಗೆ ಅವನ ಕತೆ !" ಎನ್ನುವವನು ಇನ್ನೊಬ್ಬ. "ಅಲ್ರೀ ! ಎಲ್ಲಾ ನಾಟಕ ! ನೋಡಿದರೇ ಗೊತ್ತಾಗುವುದಿಲ್ಲವೆ ? ಇಂಥಾ ಎಷ್ಟು ಜನರನ್ನು ನೋಡಿಬಿಟ್ಟಿದ್ದೇವೋ ನಾವು !" ಇದು ಮೂರನೆಯವನ ತೀರ್ಪು. ಆದರೆ ಈ ಮಾತುಗಳೆಲ್ಲ ರಾಮಕೃಷ್ಣರ ಕಿವಿಗೇ ಬಿದ್ದಿರಲಾರದು. ಏಕೆಂದರೆ ಅವರಿಗೆ, ಯಾರು ಏನು ಹೇಳುತ್ತಾರೆ ಎಂಬುದರ ಕಡೆಗೆ ಗಮನವಿದ್ದರೆ ತಾನೆ ! ತಮ್ಮ ಮಾತುಗಳಿಂದ ಏನೂ ಪರಿಣಾಮವಾಗದ್ದನ್ನು ಕಂಡು ಆ ಜನರೇ ಸುಮ್ಮನಾಗ ಬೇಕಾಯಿತು.

ಈ ದಿನಗಳಲ್ಲಿ ರಾಮಕೃಷ್ಣರ ಪೂಜಾದಿಗಳನ್ನು, ಹಾಡುವಿಕೆಯನ್ನು ಕಣ್ಣಾರೆ ಕಂಡು ಕಿವಿಯಾರೆ ಕೇಳಿದ ಮಥುರಬಾಬುವಿಗಂತೂ ಹಿಡಿಸಲಾರದಷ್ಟು ಸಂತೋಷ. ತನ್ನ ಆಯ್ಕೆ ಇಷ್ಟು ಸಾರ್ಥಕವಾದದ್ದನ್ನು ಕಂಡು ಹೆಮ್ಮೆ ಸಂತೃಪ್ತಿ. ಮಥುರ ಕೃತಾರ್ಥಭಾವದಿಂದ ರಾಣಿಯ ಬಳಿ ಹೇಳಿದ, "ನಮಗೊಬ್ಬ ಅದ್ಭುತ ವ್ಯಕ್ತಿಯೇ ಅರ್ಚಕರಾಗಿ ಸಿಕ್ಕಿದ್ದಾರೆ. ಇನ್ನು ದೇವಿ ಜಗನ್ಮಾತೆ ಶೀಘ್ರದಲ್ಲೇ ಜಾಗೃತಳಾಗುವುದು ಖಂಡಿತ !" ಈ ಮಾತು ಕೇಳಿ ರಾಸಮಣಿ 'ಧನ್ಯಳಾದೆ' ಎಂದುಕೊಂಡಳು; ಹೃದಯ ತುಂಬಿ ಬಂತು.

ಆದರೆ ರಾಮಕೃಷ್ಣರು ಮಾತ್ರ ಮಥುರನ ಹೊಗಳಿಕೆಯಿಂದಾಗಲಿ ಜನರ ತೆಗಳಿಕೆಯಿಂದಾಗಲಿ ಹಿಗ್ಗಿದವರೂ ಅಲ್ಲ, ಕುಗ್ಗಿದವರೂ ಅಲ್ಲ. ಅವರ ಗಮನವೆಲ್ಲ ಜಗನ್ಮಾತೆಯ ಸಾಕ್ಷಾತ್ಕಾರದ ಕಡೆಗೆ. ಹರಿಯುವ ನದಿಯು ಸಮುದ್ರದತ್ತ ಏಕ ಪ್ರಕಾರವಾಗಿ ಸಾಗುವಂತೆ ಅವರ ಮನಸ್ಸು ಜಗನ್ಮಾತೆಯ ಪದಕಮಲದತ್ತ ರಭಸದಿಂದ ಧಾವಿಸುತ್ತಿತ್ತು.

ಈಗೀಗ ರಾಮಕೃಷ್ಣರ ಶರೀರದಲ್ಲಿ ಅವರ ಏಕಾಗ್ರಭಕ್ತಿಯ ಪರಿಣಾಮ ಹಲವು ವಿಧವಾಗಿ ಪ್ರಕಟವಾಗತೊಡಗಿತು. ಶರೀರದ ಊರ್ಧ್ವಭಾಗದಲ್ಲಿ, ಎಂದರೆ ಎದೆ–ಮಿದಿಳುಗಳಲ್ಲಿ ರಕ್ತಸಂಚಾರ ಅಧಿಕವಾದ್ದರಿಂದ ಎದೆಯೂ ಕಣ್ಣುಗಳೂ ಯಾವಾಗಲೂ ಕೆಂಪಡರಿಕೊಂಡಿರುತ್ತಿದ್ದುವು. ಕಣ್ಣಿನಲ್ಲಿ ಇದ್ದಕ್ಕಿದ್ದಂತೆ ಅಕಾರಣ ವಾಗಿ ಅಶ್ರುಜಲ ತುಂಬಿಕೊಳ್ಳುತ್ತಿತ್ತು. ಆಹಾರ ನಿದ್ರೆಗಳಂತೂ ತೀರ ಮಿತವಾದುವು. ಹೃದಯರಾಮನ ಬಲವಂತದಿಂದಾಗಿ ಅಷ್ಟೋ ಇಷ್ಟೋ ಆಹಾರ ಹೊಟ್ಟೆಗೆ ಹೋಗುತ್ತಿತ್ತು. ದೇವಿಯನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ಒಂದೇ ಒಂದು ಹಂಬಲ ಅವರ ಹೃನ್ಮನವನ್ನೆಲ್ಲ ಆವರಿಸಿಕೊಂಡಿತ್ತು. 'ಜಗನ್ಮಾತೆಯನ್ನು ಈ ಕಣ್ಣಿಂದ ಕಾಣಲು ನಾನೇನು ಮಾಡಲಿ? ಇನ್ನೇನು ಮಾಡಿದರೆ ಆಕೆ ಒಲಿದಾಳು?' ಎಂಬ ಕಾತರ ಮನದಲ್ಲಿ ಸದಾ ತುಡಿಯುತ್ತಿತ್ತು. ಪೂಜೆ–ಧ್ಯಾನಗಳನ್ನು ಮಾಡುವ ಸಮಯ ಬಿಟ್ಟರೆ ಉಳಿದ ಹೊತ್ತಿನಲ್ಲೆಲ್ಲ ಏನೋ ಒಂದು ಚಡಪಡಿಕೆ, ಏನೋ ಒಂದು ಕಳವಳ, ಏನೋ ಒಂದು ಕಾತರತೆ ಅವರಲ್ಲಿ ಎದ್ದುಕಾಣುತ್ತಿತ್ತು.

ಒಮ್ಮೆ ಅವರು ಜಗನ್ಮಾತೆಯನ್ನು ಸಂತೋಷಪಡಿಸುವುದಕ್ಕಾಗಿ ಒಂದು ಹಾಡು ಹೇಳಿ, ಬಳಿಕ ಪ್ರಾರ್ಥಿಸಿಕೊಂಡರು: "ಅಮ್ಮಾ ನಾನು ಅದೆಷ್ಟು ಸಲ ನಿನ್ನನ್ನು ಕರೆದೆ! ಆದರೆ ನನ್ನ ಒಂದು ಕರೆಯೂ ನಿನಗೆ ಕೇಳಿಸದೆಹೋಯಿತೆ? ನೀನು ರಾಮಪ್ರಸಾದನಿಗೆ ದರ್ಶನ ಕೊಡಲಿಲ್ಲವೇನಮ್ಮ? ನನಗೆ ಮಾತ್ರ ಆದೇಕೆ ದರ್ಶನ ನೀಡಲೊಲ್ಲೆ?"

ತಾವು ವಿಧವಿಧವಾಗಿ ಕರೆದರೂ ತಾಯಿ ದರ್ಶನ ಕೊಡದಿರುವುದನ್ನು ಕಂಡು ಏನೋ ಒಂದು ಸಂದೇಹ, ಏನೋ ಅನುಮಾನ. ಅದನ್ನೂ ಅವರು ಆಕೆಯ ಮುಂದೆಯೇ ನಿವೇದಿಸಿಕೊಂಡರು:

"ಅಮ್ಮಾ ಈಗ ಗೊತ್ತಾಯಿತು! ನಾನೊಬ್ಬ ಏನೂ ಅರಿಯದ ಮೂರ್ಖ ಎಂದಲ್ಲವೆ? ಹೌದು ನನಗೆ ಗೊತ್ತು. ಈ ಮೂರ್ಖನಿಗೇಕೆ ದರ್ಶನ ಕೊಡಬೇಕು ಎಂದು ಭಾವಿಸಿದೆಯಲ್ಲವೆ? ಆದರೆ ನಾನೇನು ಮಾಡಲಮ್ಮ? ನನಗಿರುವವಳು ನೀನೊಬ್ಬಳೇ. ನೀನಿಲ್ಲದೆ ನನಗೆ ದಾರಿತೋರುವವರು ಇನ್ನಾರಿದ್ದಾರೆ. ನೀನೇ ಕೈಬಿಟ್ಟರೆ ನನಗಾರು ಗತಿ?"

ಹೀಗೆ ಬಗೆಬಗೆಯಾಗಿ, ತಮಗೆ ತೋಚಿದ ರೀತಿಯಲ್ಲೆಲ್ಲ ಪ್ರಾರ್ಥನೆ ಮಾಡಿದರು. ಒಂದು ದಿನ ಹೀಗೆಯೇ ಬಹಳ ಹೊತ್ತು ಆಕೆಯನ್ನು ಕಾಡಿ ಬೇಡಿ ಅತ್ತು ಕರೆದರು. ತಾಯಿ ದರ್ಶನ ಕೊಟ್ಟಳೆ? ಉಹುಂ, ಇಲ್ಲ! 'ಅವ ಕೊಡ, ಇವ ಬಿಡ' ಎಂಬಂತೆ ಈ ತಾಯಿ ಮಕ್ಕಳ ಕಲಹ. ಒಮ್ಮೆಯಂತೂ ರಾಮಕೃಷ್ಣರಿಗೆ ಜಗನ್ಮಾತೆಯ ಮೇಲೆ ಸಿಟ್ಟೇರಿತು. ತಮ್ಮ ಆ ಸ್ಥಿತಿಯನ್ನು ನೆನಪಿಸಿಕೊಂಡು ಅವರೇ ಹೇಳುತ್ತಾರೆ:

"ಏನೇನವಸ್ಥೆ ಬಂದು ಹೋಯಿತು! ಸ್ವರ್ಗ ಪಾತಾಳ ಮುಟ್ಟುವ ಹಾಗೆ ಬಾಯಿ ತೆರೆದು 'ತಾಯೀ!' ಎಂದು ಕೂಗುತ್ತಿದ್ದೆ. ಬೆಸ್ತ ಬಲೆ ಬೀಸಿ ಮೀನನ್ನು 'ಉಸ್ ಉಸ್' ಎಂದು ಎಳೆದು ತರುವಂತೆ, ನಾನು ತಾಯಿಯನ್ನು ಬಾಯಿಗೆ

ಸಿಕ್ಕಿಸಿಕೊಂಡು ಎಳೆದು ತರುತ್ತಿರುವೆನೋ ಎಂಬಂತೆ ಭಾವಿಸುತ್ತಿದ್ದೆ. ಈ ಅವಸ್ಥೆಯ ಸಂಬಂಧವಾಗಿ ಒಂದು ಹಾಡಿದೆ:

**ಗಂಡಯೋಗದಲ್ಲಿ ಜನಿಸಿದಂಥ ಶಿಶು ತಿನುವುದಂತೆ ತಾಯ !**
**ನಾನು ಅಂಥ ಶಿಶು; ನಿನ್ನ ನುಂಗುವೆನು ತೆರೆದು ನನ್ನ ಬಾಯ !**
**ನೀನೆ ನುಂಗುವೆಯೊ ನಾನೆ ನುಂಗಲೋ ಹೇಳು ಹೇಳು ಬೇಗ**
**ಎರಡರೊಳಗೆ ಒಂದಾಗಿಬಿಡಲಿ ನೀ ಹೇಳು ಕಾಳಿ ಈಗ !"**

ಮತ್ತೊಂದು ಸಂದರ್ಭದಲ್ಲಿ ರಾಮಕೃಷ್ಣರು ಆ ದಿನಗಳ ತಮ್ಮ ಉತ್ಕಂಠಿತ ಸ್ಥಿತಿಯನ್ನು ಹೀಗೆ ಬಣ್ಣಿಸುತ್ತಾರೆ—"ಆಹಾ, ನಾನಾಗ ಎಷ್ಟು ದಿವ್ಯೋನ್ಮತ್ತನಾಗಿದ್ದೆ! ನನ್ನಲ್ಲುಂಟಾಗಿದ್ದ ಮಾತೃವಿಯೋಗದ ಆ ದುಃಖವನ್ನು ನೀವು ಊಹಿಸಲೂ ಆರಿರಿ. ಆದರೆ ನನ್ನ ಪಾಲಿಗೆ ಅದೇ ಸಹಜಸ್ಥಿತಿಯಾಗಿತ್ತು. ಒಂದು ಕೋಣೆಯಲ್ಲಿ ಒಬ್ಬ ಕಳ್ಳನಿದ್ದಾನೆಂದುಕೊಳ್ಳಿ. ಪಕ್ಕದ ಕೋಣೆಯಲ್ಲೇ ಒಂದು ಚಿನ್ನದ ನಿಧಿ ಇದೆ. ಕಳ್ಳನಿಗೆ ಆ ನಿಧಿಯ ವಿಷಯ ಗೊತ್ತು. ಈಗ, ಆತನಿಗೆ ನಿದ್ರೆ ಬರುವುದುಂಟೆ ? 'ಎಂದಿಗೆ ಆ ಗೋಡೆ ಒಡೆದೇನು, ಎಂದಿಗೆ ಚಿನ್ನವನ್ನು ದೋಚಿಯೇನು' ಎಂದು ಅವನು ಹುಚ್ಚಾಗುವುದಿಲ್ಲವೆ ? ನನ್ನ ಅವಸ್ಥೆಯೂ ಹಾಗೆಯೇ ಆಗಿತ್ತು. ಜಗನ್ಮಾತೆ ನನಗೆ ಅತಿ ಸನಿಹದಲ್ಲಿದ್ದಾಳೆ, ಆದರೆ ಕಾಣಲೊಲ್ಲಳು ! ಆನಂದಸ್ವರೂಪಿಣಿಯಾದ ಆಕೆಯ ಮುಂದೆ ಸಮಸ್ತ ಐಹಿಕ ಸುಖಭೋಗಗಳೂ ಕ್ಷುದ್ರವಾದುದೆಂಬುದು ಗೊತ್ತಿರುವಾಗ ಆಕೆಯನ್ನು ಕಾಣದೆ ನಾನು ಹೇಗೆತಾನೆ ಸುಮ್ಮನಿರಲಿ ?"

ಒಂದು ದಿನವಂತೂ ರಾಮಕೃಷ್ಣರ ವಿರಹಯಾತನೆ ಅಸಹನೀಯವಾಯಿತು. ಒದ್ದೆ ಬಟ್ಟೆಯನ್ನು ಹಿಂಡುವ ರೀತಿಯಲ್ಲಿ ತಮ್ಮ ಜೀವವನ್ನೇ ಯಾರೋ ಹಿಂಡುತ್ತಿರುವಂತೆ ವೇದನೆಯಾಯಿತು. ಜಗನ್ಮಾತೆಯನ್ನು ತಾವು ಇಷ್ಟು ಕೂಗಿ ಕರೆದರೂ ದರ್ಶನ ಕೊಡದಿದ್ದ ಮೇಲೆ ಇನ್ನು ಆಕೆ ದರ್ಶನ ಕೊಟ್ಟಾಳೆಯೆ ? ಆಕೆಯನ್ನು ಕಾಣಲಾಗದಿದ್ದ ಮೇಲೆ ಈ ಜೀವದಿಂದ, ಈ ದೇಹದಿಂದ ತಾನೆ ಏನು ಪ್ರಯೋಜನ ? ಹೀಗೇ ಚಿಂತಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಅವರ ದೃಷ್ಟಿಗೆ ಗೋಡೆಯಲ್ಲಿ ತೂಗುಹಾಕಿದ್ದ ಖಡ್ಗ ಗೋಚರಿಸಿತು. ಅದು ಪ್ರಾಣಗಳನ್ನು ಬಲಿಕೊಡಲು ಉಪಯೋಗಿಸುವ ಖಡ್ಗ. ಆಗ ಮಿಂಚಿನಂತೆ ಮನದಲ್ಲೊಂದು ಆಲೋಚನೆ ಹೊಳೆಯಿತು—'ಆಹ್ ! ಇದೇ ಸರಿಯಾದ ಉಪಾಯ. ಈ ಕ್ಷಣವೇ ಈ ನಿರರ್ಥಕ ಜೀವನವನ್ನು ಕೊನೆಗಾಣಿಸಿಬಿಡುತ್ತೇನೆ.'

ರಾಮಕೃಷ್ಣರು ಹುಚ್ಚನಂತೆ ಒಂದೇ ನೆಗೆತಕ್ಕೆ ಹಾರಿ ಖಡ್ಗವನ್ನು ಕೈಗೆ ತೆಗೆದುಕೊಂಡರು. ಇನ್ನೇನು ಅವರ ರುಂಡ ಕಾಳಿಗೆ ಆಹುತಿಯಾಗಿ ಉರುಳಬೇಕು, ಆ ಕ್ಷಣ....

ಆ ಕ್ಷಣದಲ್ಲಿ ಕಾಳೀಮಾತೆ ದಿವ್ಯಜ್ಯೋತಿಸ್ಸ್ವರೂಪಿಣಿಯಾಗಿ ಗೋಚರಳಾದಳು ! ರಾಮಕೃಷ್ಣರಿಗೆ ಬಾಹ್ಯಪ್ರಜ್ಞೆ ತಪ್ಪಿಹೋಯಿತು. ಆದರೆ ಅವರ ಅಂತರಂಗ ಸಂಪೂರ್ಣ ಜಾಗೃತವಾಗಿತ್ತು. ತಮಗಾದ ಅಲೌಕಿಕ ದಿವ್ಯಾನುಭವವನ್ನು ಅವರೇ ಬಣ್ಣಿಸಲಿ:

"ಖಡ್ಗವನ್ನು ಕೈಗೆ ತೆಗೆದುಕೊಂಡೆನೊ ಇಲ್ಲವೋ, ಎದುರಿಗಿದ್ದ ಪ್ರಪಂಚವೇ ಮಾಯವಾಯಿತು. ಸುತ್ತಲಿನ ಮನೆಗಳು, ಬಾಗಿಲುಗಳು, ದೇವಸ್ಥಾನಗಳು, ಮತ್ತೇನೇನಿದೆಯೋ ಎಲ್ಲವೂ ಶೂನ್ಯದಲ್ಲಿ ಲಯಗೊಂಡುವು. ಎಲ್ಲೂ ಏನೂ ಇಲ್ಲದಂತೆ ತೋರಿತು. ಎತ್ತ ನೋಡಿದರೂ ಎಲ್ಲೆಲ್ಲಿಯೂ ಚಿದ್ಘನ ಜ್ಯೋತಿಸ್ಸಾಗರ! ಎಲ್ಲೆಡೆಗಳಿಂದಲೂ ಆ ಸಾಗರದ ಮೇಲಿಂದ ಬೆಳಕಿನ ಅಲೆಗಳು ಭೋರ್ಗರೆಯುತ್ತ ನನ್ನೆಡೆಗೆ ನುಗ್ಗಿ ಬಂದುವು. ಇದೇನು ವಿಚಿತ್ರ! ಇದೆಂಥ ಮಾಯೆ! ನಾನು ಕಂಡುಕೇಳರಿಯದ ಭಾವ—ಅನುಭಾವ! ಕೋಟಿಸೂರ್ಯಸಮವಾದ ಆ ಬೆಳಕಿನ ಮಧ್ಯದಲ್ಲಿ ವರಾಭಯಕರಹಸ್ತೆಯಾದ ಜಗನ್ಮಾತೆ! ಅಲೆಗಳ ತಾಡನಕ್ಕೆ ಸಿಲುಕಿದ ನಾನು ಆ ಸಾಗರದೊಳಗೆ ಮುಳುಗಿಯೇ ಹೋದೆ. ನನ್ನ ಉಸಿರು ಕಟ್ಟಿತು, ತಳಮಳಿಸಿದೆ, ಚಡಪಡಿಸಿದೆ, ಕಡೆಗೆ ಬಾಹ್ಯಪ್ರಜ್ಞೆ ತಪ್ಪಿ ಬಿದ್ದುಹೋದೆ. ಆ ದಿನವೂ ಮರುದಿನವೂ ಹೇಗೆ ಕಳೆಯಿತೋ ನಾನರಿಯೆ. ಆದರೆ ನನ್ನಂತರಂಗದಲ್ಲಿ ಮಾತ್ರ ಅನಿರ್ವಚನೀಯ ಆನಂದದ ನಿರಂತರ ಪ್ರವಾಹ ಹರಿಯುತ್ತಿತ್ತು!"

ಕಡೆಗೆ ಬಾಹ್ಯಪ್ರಜ್ಞೆ ಮರಳಿ ಮೈತಿಳಿದೆದ್ದಾಗ ಮೊಟ್ಟಮೊದಲನೆಯದಾಗಿ ಅವರ ಬಾಯಿಂದ ಹೊರಟ ಶಬ್ದವೇ "ಅಮ್ಮಾ ಅಮ್ಮಾ" ಎಂಬುದು. ಆನಂದ ಮಯಿಯಾದ ಜಗನ್ಮಾತೆಯನ್ನು ಹೃದಯದ ತುಂಬ ಅನುಭವಿಸಿ ಆನಂದಭರಿತ ರಾಗಿ ಕರೆಯುತ್ತಾರೆ, "ಅಮ್ಮಾ!" ಅಂತೂ ಅವರ ಬಹುದಿನಗಳ ವ್ಯಾಕುಲತೆಗೆ ಜಗನ್ಮಾತೆ ಒಗೊಟ್ಟಳು!

**ನಂಬಿ ಕರೆದರೆ ತಾಯಿ ಓ ಎನ್ನದಿಹಳೇನೊ**
**ನಿನ್ನ ಕೊರೆದವಲೆಂತು ಇರಬಲ್ಲಳೊ?**

೨೭

# ಅಸಾಧಾರಣ ಸಾಧನೆ, ಅಭೂತಪೂರ್ವ ಅನುಭವ

ಜಗನ್ಮಾತೆ ದರ್ಶನವಿತ್ತಳು ನಿಜ—ಬಾಹ್ಯಪ್ರಜ್ಞೆಯನ್ನೇ ಹೋಗಲಾಡಿಸಿ ಅಂತ ರಂಗದಾಳಕ್ಕಿಳಿದು ದರ್ಶನ ಕೊಟ್ಟಳು ನಿಜ. ಆದರೆ... ಬಾಹ್ಯಪ್ರಜ್ಞೆ ಮರಳಿ ಹೊರ ಬಂದು ನೋಡಿದರೆ, ಆ ತಾಯಿ ಎಲ್ಲಿ? ಅನಂತಪ್ರಜ್ಞೆ, ಅಮಿತ ಆನಂದಗಳಿಂದ ದಿವ್ಯದರ್ಶನವಿತ್ತ ಆ ತಾಯಿ ಈಗೆಲ್ಲಿ?... ರಾಮಕೃಷ್ಣರ ಹೃದಯದಲ್ಲಿ ಮತ್ತೊಮ್ಮೆ ಬಿರುಗಾಳಿ ಎದ್ದಿತು. ಬಹುದಿನಗಳಿಂದ ಉಪವಾಸವಿರುವ ತಿರುಕನಿಗೆ ಷಡ್ರಸೋ ಪೇತ ಭೋಜನವನ್ನು ಸುಮ್ಮನೆ ಒಮ್ಮೆ ತೋರಿಸಿ ಹಿಂದೆಗೆದುಕೊಂಡರೆ! ಹಾಗಾ ಯಿತು ಅವರ ಸ್ಥಿತಿ. ತಾವು ಅನುಭವಿಸಿದ ದಿವ್ಯಾನಂದದ ನೆನಪಾದೊಡನೆ ಮೊದಲಿ ಗಿಂತ ಮಿಗಿಲಾಗಿ ಒತ್ತರಿಸಿ ಬಂದಿತು ದರ್ಶನಾಕಾಂಕ್ಷೆ. ಜಗನ್ಮಾತೆಯ ನಿರಂತರ ದರ್ಶನಲಾಭಕ್ಕಾಗಿ, ಸಾನ್ನಿಧ್ಯ ಸುಖಕ್ಕಾಗಿ ಅವರ ಹೃನ್ಮನಗಳು ಚಡಪಡಿಸಿದುವು. ಈ ಉನ್ಮತ್ತಭಾವ ಶಾಂತವಾಗುವುದರ ಬದಲಿಗೆ ದಿನದಿನಕ್ಕೂ ಕ್ಷಣಕ್ಷಣಕ್ಕೂ ಹೆಚ್ಚುತ್ತಲೇ ಹೋಯಿತು.

ರಾಮಕೃಷ್ಣರ ಆ ಅಶಾಂತತೆ ಈಗ ಹಲವು ವಿಧದಲ್ಲಿ ವ್ಯಕ್ತವಾಗತೊಡಗಿತು. ಅವರು ಸುಮ್ಮನೆ ಶಾಂತವಾಗಿ ಕುಳಿತು ಧ್ಯಾನಮಗ್ನರಾಗಿರುವಂತೆ ತೋರಿದರೂ ಒಳಗೇ ಅದು ಬಡಬಾಗ್ನಿಯಂತೆ ಉರಿಯುತ್ತಿತ್ತು. ಇನ್ನು ಕೆಲವೊಮ್ಮೆ ಅದು ಎಷ್ಟು ಹೆಚ್ಚಾಗಿಬಿಡುತ್ತಿತ್ತೆಂದರೆ ಅವರು ಅತೀವ ಯಾತನೆಯಿಂದ ನೆಲದ ಮೇಲೆ ಬಿದ್ದು ಹೊರಳಾಡುತ್ತಿದ್ದರು. 'ಅಮ್ಮಾ ಅಮ್ಮಾ' ಎಂದು ಕೂಗುತ್ತ ರೋದಿಸುತ್ತಿದ್ದರು. ಅದನ್ನು ಕಂಡವರು, "ಏನಾಗಿದೆ ಈ ತರುಣನಿಗೆ? ಹೊಟ್ಟೆ ನೋವೆ?" ಎನ್ನು ತ್ತಿದ್ದರು. ಇನ್ನು ಕೆಲವರು, "ಪಾಪ, ಈತನ ತಾಯಿ ತೀರಿಕೊಂಡಿರಬೇಕು. ತಾಯಿಯ ಮೇಲೆ ಎಂಥಾ ಪ್ರೀತಿ ನೋಡಿ ಇವನಿಗೆ!" ಎಂದರೆ ಮತ್ತೆ ಕೆಲವರು, "ಇವನಿಗೇನು ಬಂತಯ್ಯ, ಇಷ್ಟು ದೊಡ್ಡವನಾಗಿ?" ಎನ್ನುತ್ತಿದ್ದರು. ಶ್ರೀರಾಮ ಕೃಷ್ಣರ ಮನಸ್ಸಿನಲ್ಲಿ ಮಾತ್ರ ತಮ್ಮ ಈ ಅವಸ್ಥೆಯನ್ನು ಕಂಡು ಯಾರೇನೆಂದಾರೋ ಎಂಬ ಆಲೋಚನೆ ಬರಲೇ ಇಲ್ಲ. ತಮ್ಮ ಸುತ್ತಲೂ ಜನ ನಿಂತಿರುವುದು, ಏನೋ ಮಾತನಾಡುತ್ತಿರುವುದು ಗೊತ್ತಾಗುತ್ತಿತ್ತು; ಆದರೆ ಯಾರು ನಿಂತಿದ್ದಾರೆ, ಏನು ಮಾತನಾಡುತ್ತಿದ್ದಾರೆ ಎನ್ನುವುದು ಮಾತ್ರ ತಿಳಿಯುತ್ತಿರಲಿಲ್ಲ. ಅವರಿಗೆ ಜನರೆಲ್ಲ ಕೇವಲ ನೆರಳುಗಳಂತೆಯೋ ಚಿತ್ರಪಟಗಳಂತೆಯೋ ಕಾಣುತ್ತಿದ್ದರು. ಇಡೀ ಲೋಕವೇ ಕನಸಿನಂತೆ ಕಾಣುತ್ತಿರುವಾಗ ನಾಚಿಕೆಯೆಲ್ಲಿ? ಅಂಜಿಕೆಯೆಲ್ಲಿ? ಆದರೆ

ಆ ಅಸಹನೀಯ ಅನುಭವವಾದ ಮರುಕ್ಷಣವೇ ಅವರಿಗೆ ಬಾಹ್ಯಪ್ರಜ್ಞೆ ತಪ್ಪಿ ಹೋಗುತ್ತಿತ್ತು. ಆಗ ಮತ್ತೆ ಚಿನ್ಮಯ ರೂಪಿಣಿ ವರಾಭಯಕರಿ ಜಗನ್ಮಾತೆ ಗೋಚರಳಾಗುತ್ತಿದ್ದಳು! ಆಕೆ ಮುಗುಳ್ನಗುತ್ತಿದ್ದಳು, ಮಾತನಾಡುತ್ತಿದ್ದಳು, ಸಮಾಧಾನ ಮಾಡುತ್ತಿದ್ದಳು, ಹಾಗೂ ಬಗೆಬಗೆಯಾಗಿ ಬೋಧನೆ ಮಾಡುತ್ತಿದ್ದಳು.

ಹೀಗೆ ಶ್ರೀರಾಮಕೃಷ್ಣರು ಅದ್ಭುತ ದರ್ಶನಗಳನ್ನು ಕಾಣುತ್ತ, ಅಪೂರ್ವ ಆನಂದವನ್ನು ಅನುಭವಿಸುತ್ತ ತಾವೇತಾವಾಗಿದ್ದು ಬಿಟ್ಟರು. ಆದರೆ ಇತ್ತ ದೇವಾಲಯದ ಕಾರ್ಯವನ್ನು ಮಾಡುವವರಾರು? ಅರ್ಚನೆ ನೈವೇದ್ಯಾದಿ ಕರ್ತವ್ಯಗಳನ್ನು ನಿರ್ವಹಿಸುವವರಾರು? ಸುತ್ತಣ ಪ್ರಪಂಚದ ಪರಿವೆಯೇ ಇಲ್ಲದೆ ದಿವ್ಯಾನಂದದಲ್ಲಿ ಮೈಮರೆತವರು ಅದಕ್ಕೆಲ್ಲ ಗಮನ ಹರಿಯಿಸುವುದುಂಟೆ? ಆದರೆ ಅವರ ನೂತನ ನಡೆವಳಿಕೆಗಳನ್ನೆಲ್ಲ ನೋಡುತ್ತಿದ್ದ ಹೃದಯರಾಮ ಕಂಗಾಲಾದ. ಇದೇನು? ಮಾವನಿಗೆ ಪೂರ್ತಿ ಹುಚ್ಚು ಹಿಡಿದುಬಿಟ್ಟಿತೆ? ಅಥವಾ ವಾತಗೀತ ಕೆರಳಿದೆಯೋ? ಇಲ್ಲವೆ ಭಕ್ತ್ಯಾಧಿಕ್ಯದ ಪರಿಣಾಮವೆ? ಅಲ್ಲದೆ ಇದರ ಬಗ್ಗೆ ದೊಡ್ಡವರಿಗೆ ದೂರು ಹೋದರೇನು ಗತಿ? ಆದ್ದರಿಂದ ಅವನು ಮಾವನನ್ನು ಯಥಾಸ್ಥಿತಿಗೆ ತರಲು ತನ್ನ ಬುದ್ಧಿಗೆ ತೋಚಿದ್ದನ್ನೆಲ್ಲ ಮಾಡಿದ. ಆದರೇನು? ದೇವಿಯ ಪ್ರಥಮ ದರ್ಶನವಾದ ಮೇಲೆ ಕೆಲದಿನಗಳಂತೂ ಅವರು ಯಾವ ಕಾರ್ಯವನ್ನೂ ಮಾಡಲು ಅಸಮರ್ಥರಾದರು. ಆಗ ಹೃದಯ ಯಾರೋ ಒಬ್ಬ ಬ್ರಾಹ್ಮಣನ ನೆರವಿನಿಂದ ಅವರ ಪಾಲಿನ ಪೂಜಾದಿ ಕರ್ತವ್ಯಗಳನ್ನೆಲ್ಲ ತಾನೇ ಹೇಗೋ ನಿಭಾಯಿಸಿದ. ಈ ವೇಳೆಗೆ ಅವನಿಗೆ ಅಲ್ಲಿನ ಶ್ರೀಮಂತರೊಬ್ಬರ ಮನೆಯ ವೈದ್ಯನ ಪರಿಚಯವಾಗಿತ್ತು. ಅವನು ಆ ವೈದ್ಯನನ್ನು ಕರೆತಂದು ಮಾವನ ಚಿಕಿತ್ಸೆಗೆ ಏರ್ಪಾಡು ಮಾಡಿದ. ತಮಗೇನೂ ಕಾಯಿಲೆಯಿಲ್ಲವೆಂಬುದು ರಾಮಕೃಷ್ಣರಿಗೆ ತಿಳಿದಿದ್ದರೂ ಹೃದಯನ ಪ್ರಯತ್ನವನ್ನು ವಿರೋಧಿಸಲಿಲ್ಲ. ಅವನು ಬುದ್ಧಿ ಉಪಯೋಗಿಸಿ ಇನ್ನೂ ಒಂದು ಕೆಲಸ ಮಾಡಿದ—ಈ 'ಕಾಯಿಲೆ' ಸದ್ಯದಲ್ಲೇ ವಾಸಿಯಾಗುವ ಲಕ್ಷಣಗಳು ಕಾಣದ್ದರಿಂದ 'ನಿಮ್ಮ ಮಗನಿಗೆ ಹೀಗಾಗಿದೆ' ಎಂದು ಚಂದ್ರಮಣಿಗೆ ಸುದ್ದಿ ಕಳಿಸಿದ. ಎಷ್ಟೇ ಚಿಕಿತ್ಸೆ ಮಾಡಿದರೂ ಪ್ರಯೋಜನವೇನೂ ಕಾಣಲಿಲ್ಲ. ಆದರೆ ಚಿಕಿತ್ಸೆಗೆ ಬಗ್ಗುವ ಕಾಯಿಲೆ ಅದಲ್ಲವೆಂದು ಅವನಿಗೆ ಹೇಗೆ ತಿಳಿಯಬೇಕು!

ರಾಮಕೃಷ್ಣರು ತಮ್ಮ ಮನಸ್ಸನ್ನು ಕೆಳಗೆಳೆದು ತರಲು ಸಮರ್ಥರಾದಾಗ, ಮತ್ತು ಪೂಜಾದಿಗಳ ಕಡೆಗೆ ಗಮನ ಕೊಡಲು ತಮ್ಮಿಂದ ಸಾಧ್ಯ ಎನ್ನಿಸಿದಾಗ ದೇವಾಲಯದ ಕರ್ತವ್ಯವನ್ನು ತಾವೇ ನಿರ್ವಹಿಸುತ್ತಿದ್ದರು. ಈ ಸಮಯದಲ್ಲಿ ಅವರಿಗೆ ಅನೇಕ ಚಿತ್ರವಿಚಿತ್ರ ಅನುಭವಗಳಾಗುತ್ತಿದ್ದುವು. ಈ ಸಂಬಂಧವಾಗಿ ಅವರ ಮಾತಿನಲ್ಲೇ ಕೇಳೋಣ:

"ನಾನು ನನ್ನ ಮನಸ್ಸಿಗೆ ನಾಟ್ಯಮಂದಿರದ ಗೋಡೆಯ ಮೇಲೆ ಧ್ಯಾನಭಂಗಿಯಲ್ಲಿ ಕುಳಿತಿರುವ ಭೈರವ ವಿಗ್ರಹವನ್ನು ತೋರಿಸಿ ಹೇಳುತ್ತಿದ್ದೆ—'ಅಗೋ ನೋಡು, ನೀನು ಅದರಂತೆಯೇ ಅಚಲವಾಗಿದ್ದುಕೊಂಡು ತಾಯಿಯ ಪಾದಪದ್ಮ

ಗಳನ್ನು ಧ್ಯಾನಿಸಬೇಕು, ತಿಳಿಯಿತೆ?' ಎಂದು. ಹಾಗೆ ಹೇಳಿಕೊಂಡು ಕುಳಿತುಬಿಟ್ಟೆನೆಂದರೆ, ನನ್ನ ಶರೀರದ ಮೂಳೆ ಸಂದುಗಳಲ್ಲೆಲ್ಲ ಕಣಲ್ ಕಣಲ್ ಎಂಬ ಸದ್ದು ಕೇಳಿಬರುತ್ತಿತ್ತು. ಯಾರೋ ಆ ಭಾಗಗಳಿಗೆಲ್ಲ ಬೀಗ ಹಾಕುತ್ತಿದ್ದಾರೋ ಎಂಬಂತಹ ಸದ್ದು! ಅದು ಕಾಲಿನ ಕಡೆಯಿಂದ ಮೇಲ್ಮುಖವಾಗಿ ಚಲಿಸಿ ತಲೆಯವರೆಗೂ ಬಂದಂತಹ ಅನುಭವ! ಬಳಿಕ, ಧ್ಯಾನ ಪೂರ್ತಿ ಮುಗಿಯುವವರೆಗೆ ನನ್ನ ಶರೀರವನ್ನು ಅಲುಗಾಡಿಸಲು ನನಗೇ ಸಾಧ್ಯವಾಗುತ್ತಿರಲಿಲ್ಲ. ಕಾಲು ನೋಯುತ್ತಿದೆಯೆಂದು ಆಸನ ಬದಲಾಯಿಸಲೂ ಸ್ವಾತಂತ್ರ್ಯವಿರಲಿಲ್ಲ. ಇನ್ನು, ಮಧ್ಯದಲ್ಲೇ ಧ್ಯಾನವನ್ನು ನಿಲ್ಲಿಸಿ ಎದ್ದುಹೋಗುವ ಮಾತಂತೂ ಇಲ್ಲವೇ ಇಲ್ಲ. ನನ್ನನ್ನು ಆ ಸ್ಥಿತಿಯಲ್ಲಿ ಬಲವಂತವಾಗಿ ಒತ್ತಿ ಕುಳ್ಳಿರಿಸಿರುವಂತೆ ಭಾಸವಾಗುತ್ತಿತ್ತು. ಧ್ಯಾನ ಮುಗಿದ ಮೇಲೆ ಮತ್ತೆ ಕಣಲ್ ಕಣಲ್ ಶಬ್ದದೊಂದಿಗೆ ಬೀಗಗಳೆಲ್ಲ ತೆರೆದುಕೊಳ್ಳುತ್ತಿದ್ದುವು. ಈಗ ತಲೆಯ ಕಡೆಯಿಂದ ಕಾಲಿನ ಕಡೆಗೆ ಆ ಸದ್ದು. ಹೀಗೆ ಬೀಗ ತೆರೆದ ಮೇಲೆಯೇ ನಾನು ಮೇಲೇಳಲು ಸಾಧ್ಯವಾಗುತ್ತಿದ್ದುದು. ನಾನು ಧ್ಯಾನಕ್ಕೆ ಕುಳಿತಾಗ ಮೊದಮೊದಲು ಮಿಂಚುಹುಳುಗಳ ಗುಂಪಿನಂತೆ ಬೆಳಕಿನ ಕಣಗಳು ಚದರಿಕೊಂಡಿರುವ ದೃಶ್ಯವನ್ನು ಕಾಣುತ್ತಿದ್ದೆ. ಇನ್ನು ಕೆಲವೊಮ್ಮೆ ಮಂಜು ಮುಸುಕಿದಂತೆ ಎಲ್ಲೆಲ್ಲೂ ಬೆಳಕಿನ ಮುದ್ದೆಗಳು ಕಂಡುಬರುತ್ತಿದ್ದುವು. ಮತ್ತೆ ಕೆಲವು ಸಲ ಪ್ರತಿಯೊಂದು ವಸ್ತುವೂ ಕರಗಿದ ಬೆಳ್ಳಿಯಂತಹ ತೇಜೋಮಯ ತರಂಗಗಳಿಂದ ಆವೃತವಾಗಿರುವುದನ್ನು ಕಾಣುತ್ತಿದ್ದೆ. ಈ ದೃಶ್ಯಗಳು ಕಣ್ಣುತೆರೆದಿರುವಾಗಲೂ ಮುಚ್ಚಿರುವಾಗಲೂ ಗೋಚರಿಸುತ್ತಿದ್ದವು. ನನಗೆ ಇದೊಂದೂ ಅರ್ಥವಾಗಲಿಲ್ಲ. ಇದೆಲ್ಲ ಏನು? ಇವುಗಳಿಂದ ನನಗೆ ಒಳ್ಳೆಯದಾಗುವುದೋ ಅಥವಾ ಕೆಡುಕಾಗುವುದೋ—ಏನೂ ತಿಳಿಯುತ್ತಿರಲಿಲ್ಲ. ನಾನು ತಳಮಳಗೊಂಡು ತಾಯಿಯನ್ನೇ ಪ್ರಾರ್ಥಿಸಿದೆ, 'ಅಮ್ಮಾ ನನಗೇನಾಗುತ್ತಿದೆಯೆಂದು ನನಗೇ ಅರ್ಥವಾಗುತ್ತಿಲ್ಲ. ನಿನ್ನನ್ನು ಯಾವ ಮಂತ್ರದಿಂದ ಕರೆದರೆ ಸರಿ ಎಂಬುದೂ ನನಗೆ ಗೊತ್ತಿಲ್ಲ. ನಿನ್ನನ್ನು ಹೇಗೆ ಸಾಕ್ಷಾತ್ಕರಿಸಿಕೊಳ್ಳಬಹುದೆಂಬುದನ್ನು ನೀನೇ ನನಗೆ ಕೃಪೆಮಾಡಿ ಕಲಿಸು. ಅಮ್ಮಾ! ನೀನೇ ನನಗೆ ತಿಳಿಸಿಕೊಡದಿದ್ದರೆ ನನಗೆ ಬೇರೆ ಇನ್ನಾರಿದ್ದಾರಮ್ಮ? ನೀನಲ್ಲದೆ ನನಗೆ ಬೇರಾರೂ ಗತಿಯಿಲ್ಲ.' ಹೀಗೆ ನಾನು ಅತ್ಯಂತ ಕಳಕಳಿಯಿಂದ ಕರುಣಾಜನಕವಾಗಿ ಏಕಾಗ್ರಮನಸ್ಸಿನಿಂದ ಪ್ರಾರ್ಥಿಸಿಕೊಳ್ಳುತ್ತಿದ್ದೆ."

ಜಗನ್ಮಾತೆಯ ಪ್ರಥಮ ದರ್ಶನವಾದ ಮೇಲೆ ರಾಮಕೃಷ್ಣರ ಮನೋಭೂಮಿಕೆಯಲ್ಲಿ ಮಹತ್ತರ ಬದಲಾವಣೆಯುಂಟಾಯಿತು. ಅವರ ಪೂಜೆ ಧ್ಯಾನಗಳ ರೀತಿಯೂ ಬದಲಾಯಿತು. ಆ ಬಗೆಯ ಮನಸ್ಥಿತಿಯನ್ನು ಶಬ್ದಗಳಿಂದ ವಿವರಿಸಲಾಗದು. ಒಬ್ಬ ನಿಷ್ಠಾವಂತ ಸಾಧಕನಲ್ಲಿ ಕಾಣಬಹುದಾದ ಗಂಭೀರತೆಯಾಗಲಿ, ಸಮಯಾಸಮಯ ವಿವೇಚನೆಯಾಗಲಿ, ಸಭ್ಯತೆ–ಲೋಕರೂಢಿಗಳಿಗೆ ಅನುಸಾರವಾಗಿ ನಡೆದುಕೊಳ್ಳಬೇಕೆಂಬ ಪ್ರಜ್ಞೆಯಾಗಲಿ, ಅಥವಾ ಪ್ರಯತ್ನಪೂರ್ವಕವಾಗಿ ಮುಂದುವರಿಯಬೇಕೆಂಬ ಇಚ್ಛೆಯಾಗಲಿ—ಇಂಥದೊಂದೂ ಅವರಲ್ಲಿ ಕಾಣುತ್ತಿರಲಿಲ್ಲ. ಮುಗ್ಧ ಬಾಲಕನಲ್ಲಿ ಕಾಣಬಹುದಾದ ಸರಳತೆ, ಶ್ರದ್ಧೆ, ಮಾಧುರ್ಯ,

ಅಸಹಾಯಕತೆಯು ಭಾವ ಮಾತ್ರ ಅವರಲ್ಲಿ ಗೋಚರವಾಗುತ್ತಿದ್ದುವು. ಬಡವನೊಬ್ಬ ತನ್ನ ಚೂರುಪಾರು ಆಸ್ತಿಯನ್ನೆಲ್ಲ ಚಕ್ರವರ್ತಿಗೆ ಬಿಟ್ಟುಕೊಟ್ಟು ಬಳಿಕ ಆತನ ಸ್ನೇಹರಕ್ಷೆಯ ಆಶ್ರಯದಲ್ಲಿ ನಿಶ್ಚಿಂತನಾಗಿ ಆನಂದದಿಂದ ಜೀವಿಸುವಂತಾದರೆ? ಅದೇ ರೀತಿಯಲ್ಲಿ ರಾಮಕೃಷ್ಣರು ತಮ್ಮ ಅಲ್ಪ ಅಹಮಿಕೆ–ಸ್ವಂತಿಕೆ ಏನೇನಿದೆಯೋ ಅದೆಲ್ಲವನ್ನೂ ಜಗನ್ಮಾತೆಗೆ ಬಲಿಯಾಗಿಸಿಬಿಟ್ಟರು. "ಅಮ್ಮಾ ನನಗೆ ನೀನೊಬ್ಬಳೇ ದಿಕ್ಕು. ನಾನೇನು ಆಡಬೇಕೋ, ನಾನೇನು ಮಾಡಬೇಕೋ ಅದನ್ನು ನೀನೇ ನನ್ನಿಂದ ನಡೆಸು" ಎಂದು ಹೃತ್ಪೂರ್ವಕವಾಗಿ ಮತ್ತೆಮತ್ತೆ ಪ್ರಾರ್ಥಿಸಿಕೊಂಡರು. ಹೀಗೆ ನಿರಂತರ ಪ್ರಾರ್ಥನೆಯಿಂದ ಅವರು ತಮ್ಮತನವನ್ನೇ ಅಳಿಸಿಕೊಂಡುಬಿಟ್ಟರು.

ಯಾವಾಗ ರಾಮಕೃಷ್ಣರು ತಮ್ಮ ಸ್ವಂತ ಇಚ್ಛಾಶಕ್ತಿಯನ್ನು ಸರ್ವ ಶಕ್ತಿಸ್ವರೂಪಿಣಿಯಾದ ಜಗನ್ಮಾತೆಯ ಇಚ್ಛೆಯೊಂದಿಗೆ ಲಯಗೊಳಿಸಿಬಿಟ್ಟರೋ, ಆಗಿನಿಂದ ಅವರ ಪ್ರತಿಯೊಂದು ಕೃತಿಯೂ ಮೊದಲಿಗಿಂತ ಭಿನ್ನವಾಯಿತು. ಸಹಜವಾಗಿಯೇ, ಅವರ ವರ್ತನೆ ಇತರ ಎಲ್ಲರಿಗಿಂತಲೂ ಬೇರೆಯೇ ರೀತಿಯದಾಯಿತು. ಇದನ್ನು ಕಂಡ ಸುತ್ತಮುತ್ತಲ ಜನ ತಲಾ ಒಂದೊಂದು ಬಗೆಯಾಗಿ ಮಾತನಾಡಿಕೊಂಡರು. ಮೊದಲು ಅದು ಪಿಸುದನಿಯ ಗುಸುಗುಸುವಾಗಿದ್ದುದು, ಕಡೆಗೆ ನಿರ್ಭಯವಾಗಿ ಚರ್ಚಿಸಬಹುದಾದ ವಿಷಯವಾಯಿತು. ರಾಮಕೃಷ್ಣರಿಗೆ ಇದನ್ನು ಕೇಳಿ ಏನೂ ಅನ್ನಿಸಲೇ ಇಲ್ಲ. ಈ ಇಡೀ ಜಗತ್ತೇ ಅವರಿಗೆ ಮಕ್ಕಳಾಟದಂತೆ ತೋರುತ್ತಿರುವಾಗ ಏನನ್ನು ಕಂಡು ಅಳುವುದು? ಏನನ್ನು ಕಂಡು ನಗುವುದು? ಎಷ್ಟೇ ಕಣ್ಣರಳಿಸಿಕೊಂಡು ನೋಡಿದರೂ ಈ ಜಗತ್ತು 'ನಿಜವಾದದ್ದು' ಎಂಬಂತೆ ಕಾಣಲೇ ಇಲ್ಲ!

ದಿನಕಳೆದಂತೆ ಅವರಿಗಾಗುತ್ತಿದ್ದ ಅನುಭವಗಳ ರೀತಿಯೂ ಬದಲಾಯಿತು. ಹಿಂದೆ ಕೆಲವೊಮ್ಮೆ ಪೂಜೆ–ಧ್ಯಾನಗಳ ಸಂದರ್ಭದಲ್ಲಿ ಅವರಿಗೆ ಜಗನ್ಮಾತೆಯ ಯಾವುದಾದರೊಂದು ಅಂಶದ ದರ್ಶನವಾಗುತ್ತಿತ್ತು. ಉದಾಹರಣೆಗೆ, ಉಜ್ವಲವಾದ ಸುಕೋಮಲವಾದ ಆಕೆಯ ಹಸ್ತಗಳು ಅಥವಾ ಪಾದಗಳು, ಇಲ್ಲವೆ ಮೃದುಮಧುರ ಮಂದಹಾಸಪೂರಿತ ಅಲೌಕಿಕ ಸೌಂದರ್ಯದಿಂದ ಕೂಡಿದ, ವಾತ್ಸಲ್ಯಪೂರ್ಣವಾದ ಆಕೆಯ ವದನಾರವಿಂದ – ಹೀಗೆ. ಈಗಲಾದರೋ, ಅವರು ಪೂಜೆಗೋ ಧ್ಯಾನಕ್ಕೋ ಕುಳಿತಾಗ ಮಾತ್ರವಲ್ಲದೆ, ಯಾವಾಗೆಂದರೆ ಆವಾಗ ಜಗನ್ಮಾತೆ ತೇಜೋಮಯವಾದ ಪೂರ್ಣರೂಪದಲ್ಲಿ ಅವರಿಗೆ ದರ್ಶನವೀಯುತ್ತಾಳೆ, ಮುಗುಳ್ನಗುತ್ತಾಳೆ, ಮಾತನಾಡುತ್ತಾಳೆ! ಅಷ್ಟೇ ಅಲ್ಲ, ಆಕೆ ಅವರೊಂದಿಗೆ ಓಡಾಡುತ್ತಾಳೆ, ಬುದ್ಧಿ ಹೇಳುತ್ತಾಳೆ. 'ಹೀಗೆ ಮಾಡು, ಹಾಗೆ ಮಾಡಬೇಡ' ಎಂದು ಮಾರ್ಗದರ್ಶನ ಮಾಡುತ್ತಾಳೆ.

ತಾವು ಜಗನ್ಮಾತೆಗೆ ನೈವೇದ್ಯ ನೀಡಿದಾಗ ಆಕೆ ಅದನ್ನು ಪರಿಗ್ರಹಿಸುವುದನ್ನು ರಾಮಕೃಷ್ಣರು ಕಣ್ಣಾರೆ ಕಾಣುತ್ತಿದ್ದರು. ಹಿಂದೆ, ಆಕೆಯ ಮುಂದೆ ನೈವೇದ್ಯವನ್ನಿರಿಸಿದಾಗ ಆಕೆಯ ನಯನಗಳಿಂದ ಪ್ರಖರ ಜ್ಯೋತಿಕಿರಣವೊಂದು ಹೊರಟುಬಂದು ನೈವೇದ್ಯವನ್ನು ಸ್ಪರ್ಶಿಸಿ, ಬಳಿಕ ಆ ನಯನಗಳಿಗೇ ಹಿಂದಿರುಗಿ ಮಾಯವಾಗುತ್ತಿತ್ತು.

ಆದರೆ ಈಗ ಅವರು ನೈವೇದ್ಯವನ್ನು ಮುಂದಿಡುವುದೇ ತಡ, ಅದನ್ನು ಅರ್ಪಣೆ ಮಾಡುವಷ್ಟರಲ್ಲೇ ಆಕೆ ಸಶರೀರಿಯಾಗಿ ಪ್ರತ್ಯಕ್ಷಳಾಗುತ್ತಾಳೆ. ಆಕೆಯ ತೇಜಸ್ಸಿನ ಪ್ರಕಾಶದಿಂದ ದೇವಾಲಯವೆಲ್ಲ ಝಗಮಗಿಸುತ್ತದೆ! ತನಗಿರಿಸಿದ ನೈವೇದ್ಯದ ಮುಂದೆ ಕುಳಿತು ಆಕೆ ಅದನ್ನು ನಗುನಗುತ್ತ ಆನಂದದಿಂದ ಭುಜಿಸುತ್ತಾಳೆ!

ಒಂದು ದಿನ ರಾಮಕೃಷ್ಣರು ಕೈಯಲ್ಲಿ ದಾಸವಾಳದ ಹೂವನ್ನೂ ಬಿಲ್ವ ಪತ್ರೆಗಳನ್ನೂ ಹಿಡಿದು, ಜಗದಂಬೆಗೆ ಅರ್ಘ್ಯನೀಡಲು ಸಿದ್ಧರಾಗಿದ್ದಾರೆ; ಆಕೆಯ ಮೇಲೆಯೇ ಧ್ಯಾನಿಸುತ್ತ ನಿಶ್ಚಲಮನಸ್ಕರಾಗಿ ಕುಳಿತಿದ್ದಾರೆ. ಆ ವೇಳೆಗೆ ಹೃದಯ ರಾಮ ಅಲ್ಲಿಗೆ ಬಂದು ನಿಂತ. ರಾಮಕೃಷ್ಣರು ಇದ್ದಕ್ಕಿದ್ದಂತೆ ಯಾರನ್ನೋ ಉದ್ದೇಶಿಸಿ ಕೂಗಿಕೊಂಡರು: "ತಾಳು ತಾಳು, ಮೊದಲು ಮಂತ್ರ ಹೇಳಿಬಿಡುತ್ತೇನೆ. ಆಮೇಲೆ ತೆಗೆದುಕೊಳ್ಳುವೆಯಂತೆ!" ಪೂಜೆ ಇನ್ನೂ ಮುಗಿದೇ ಇಲ್ಲ; ಅಷ್ಟರಲ್ಲೇ ಅವರು ನೈವೇದ್ಯವನ್ನು ಮುಗಿಸಿ ಪೂಜೆಯನ್ನು ಮುಂದುವರಿಸಿದರು! ಹೃದಯ ಎಲ್ಲ ವನ್ನೂ ನೋಡುತ್ತಲೇ ಇದ್ದಾನೆ. ಅವನಿಗೆ ದಿಗ್ಭ್ರಾಂತಿಯಾಗಿಬಿಟ್ಟಿದೆ! 'ಇದೇನಿದು! ಮಾವ ಯಾರೊಡನೆ ಮಾತನಾಡಿದ್ದು! ದೇವಿಯೊಡನೆಯೇ? ನನಗಾರೂ ಕಾಣಲೇ ಇಲ್ಲವಲ್ಲ! ಮಾವ ಹೀಗೇಕೆ ಮಾಡಿದ! ಪೂಜೆ ಮುಗಿಯುವ ಮೊದಲೇ ನೈವೇದ್ಯ ಮಾಡಿಬಿಟ್ಟನಲ್ಲ! ಬಾಬುಗಳಿಗೆ ಈ ವಿಷಯವೆಲ್ಲ ತಿಳಿದರೇನು ಗತಿ?....'

ಮೊದಮೊದಲು ರಾಮಕೃಷ್ಣರು ದೇವಿಯ ಎದುರಿಗೆ ಕುಳಿತಾಗ ವಿಗ್ರಹದಲ್ಲಿ ಆಕೆ ಸ್ಪಷ್ಟವಾಗಿ ಆವಿರ್ಭಾವವಾಗಿರುವುದನ್ನು ಕಾಣುತ್ತಿದ್ದರು, ಆಕೆಯ ದಿವ್ಯ-ಜೀವಂತ ಸಾನ್ನಿಧ್ಯವನ್ನು ಅನುಭವಿಸುತ್ತಿದ್ದರು. ಆದರೆ ಈಚೆಗೆ ಅವರು ಗರ್ಭಗುಡಿ ಯನ್ನು ಪ್ರವೇಶಿಸಿದರೆ ಆ ವಿಗ್ರಹವೇ ಕಾಣುವುದಿಲ್ಲ! ನಿಜ, ಸಂಪೂರ್ಣ ಜಾಗೃತಳಾದ ಜಗನ್ಮಾತೆಯೇ ವರಾಭಯಗಳನ್ನು ನೀಡುತ್ತ ಅಲ್ಲಿ ಸಾಕ್ಷಾತ್ತಾಗಿ ನಿಂತಿರುವಾಗ ವಿಗ್ರಹವಿನ್ನೇಕೆ? ಆದರೂ ಅವರಿಗೇಕೋ ಅನುಮಾನ. ತಾವು ಕಾಣುತ್ತಿರುವ ಈ ದೃಶ್ಯ ನಿಜವೆ? ಅಥವಾ ಕೇವಲ ಚಿತ್ತಭ್ರಮೆಯೇ? ಏಕೆ ಒಮ್ಮೆ ಪರೀಕ್ಷಿಸಿ ನೋಡಿಬಿಡಬಾರದು?

ಪರೀಕ್ಷಿಸಲು ತಾವೇನು ಮಾಡಿದೆವೆಂದು ಅವರೇ ಹೇಳುತ್ತಾರೆ:

"ನಾನು ನನ್ನ ಹಸ್ತವನ್ನು ಆಕೆಯ ಮೂಗಿನ ಹೊಳ್ಳೆಯ ಮುಂದಿರಿಸಿ ನೋಡಿದೆ, ಅವಳ ಉಸಿರು ಕೈಗೆ ತಾಗಿತು! ವಿಗ್ರಹವೆಂದಮೇಲೆ ಅದರ ನೆರಳು ಬೀಳಲೇಬೇಕಲ್ಲವೆ? ಗರ್ಭಗುಡಿಯಲ್ಲಿ ರಾತ್ರಿಯ ವೇಳೆ ದೀಪದ ಬೆಳಕಿನಿಂದಾಗಿ ವಿಗ್ರಹದ ನೆರಳು ಬಿದ್ದಿದೆಯೇ ಎಂದು ತುಂಬ ಸೂಕ್ಷ್ಮವಾಗಿ ಗಮನಿಸಿದೆ. ಇಲ್ಲ, ನೆರಳೇ ಇಲ್ಲ!"

ನಿಜ, ಸ್ವತಃ ಜ್ಯೋತಿರ್ಮಯಿಯಾದ ಜಗನ್ಮಾತೆಯ ಮೇಲೆ ಇನ್ನಾವ ಬೆಳಕು ಬೀಳಬಲ್ಲದು? ಎಂದಮೇಲೆ ಇನ್ನೆಲ್ಲಿಯ ನೆರಳು?

ಮತ್ತೊಂದು ದಿನ ರಾಮಕೃಷ್ಣರು ರಾತ್ರಿಯ ಆರತಿ ನೈವೇದ್ಯಗಳನ್ನು ಮುಗಿಸಿ ಎಂದಿನಂತೆ ದೇವಿಯನ್ನು ಶಯನಗೃಹದಲ್ಲಿ ಮಲಗಿಸಿ ತಾವೂ ಕೋಣೆಗೆ ಹೋಗಿ

ಮಲಗಿದ್ದಾರೆ. ಇದ್ದಕ್ಕಿದ್ದಂತೆ ಕಾಲಗೆಜ್ಜೆಯ ಝಣಕ್ ಝಣಕ್ ನಿನಾದ! ಪುಟ್ಟ ಹುಡುಗಿಯೊಬ್ಬಳು ಆಟವಾಡಿಕೊಂಡು ಮೆಟ್ಟಲೇರುತ್ತ ಹೋದಂಥ ಶಬ್ದ! ಯಾರೆಂದು ನೋಡಿಯೇ ಬಿಡೋಣ ಎಂಬ ತವಕ ರಾಮಕೃಷ್ಣರಿಗೆ. ಓಡಿಬಂದು ನೋಡುತ್ತಾರೆ – ಅವಳೇ! ಜಗನ್ಮಾತೆಯೇ! ಕೆದರಿದ ತಲೆಗೂದಲು; ಮಹಡಿಯ ಮೇಲಿನ ವರಾಂಡದಲ್ಲಿ ನಿಂತಿದ್ದಾಳೆ! ಒಮ್ಮೆ ಗಂಗೆಯ ಕಡೆ ನೋಡುತ್ತಾಳೆ, ಇನ್ನೊಮ್ಮೆ ಕಲ್ಕತ್ತದ ಕಡೆ ನೋಡುತ್ತಾಳೆ!...

ಪರಮಾದ್ಭುತ! ದಿವ್ಯಾದ್ಭುತ! ಶ್ರೀರಾಮಕೃಷ್ಣರಿಗಾದ ಈ ಅನುಭವಗಳೆಲ್ಲ ನಿಜಕ್ಕೂ ಅಪೂರ್ವವಾದವುಗಳೇ ಸರಿ. ಆದರೂ ನಮ್ಮ ಮನದಲ್ಲಿ ಸಂದೇಹವೇಳು ತ್ತದೆ–ಇವೆಲ್ಲ ನಿಜವೇ? ನಿಜವಾಗಿಯೂ ಹೀಗಾಗಲು ಸಾಧ್ಯವೆ? ಅವರನ್ನು ಕಣ್ಣಾರೆ ಕಾಣದ ನಮ್ಮ ಮನದಲ್ಲಿ ಈ ಪ್ರಶ್ನೆ ಎದ್ದರೆ ಆಶ್ಚರ್ಯವೇನಿಲ್ಲ. ಆದರೆ ರಾಮಕೃಷ್ಣರೊಂದಿಗೆ ನೆರಳಿನಂತೆ ಓಡಾಡಿಕೊಂಡಿದ್ದ ಹೃದಯನಿಗೂ ಆಗಾಗ ಸಂದೇಹವೇಳುತ್ತಿತ್ತಂತೆ – 'ಇದು ನಿಜವೆ? ನಿಜವಾಗಿಯೂ ಹೀಗಾಗಲು ಸಾಧ್ಯವೆ?' ಎಂದು. ಅವನು ಹೇಳುತ್ತಾನೆ:

"ಆ ದಿನಗಳಲ್ಲಿ ಕಾಳಿಯ ದೇವಾಲಯದೊಳಗೆ ಯಾರೇ ಬರಲಿ, ಅವರಿಗೆ ಏನೋ ಒಂದು ಬಗೆಯ ಪುಳಕವಾಗುತ್ತಿತ್ತು, ರೋಮಾಂಚನವಾಗುತ್ತಿತ್ತು. ರಾಮ ಕೃಷ್ಣರು ಅಲ್ಲಿರದಿರುವಾಗಲೇ ಹೀಗಾಗುತ್ತಿತ್ತೆಂದರೆ, ಅವರಿರುವಾಗ ಇನ್ನೂ ಹೆಚ್ಚು! ಅವರ ಸ್ವಭಾವ ನನಗೆ ಚೆನ್ನಾಗಿ ಗೊತ್ತಿದ್ದರೂ ಪೂಜೆ ಮಾಡುವಾಗ ಅವರು ಹೇಗೆ ಹೇಗೆ ವರ್ತಿಸುತ್ತಾರೋ ನೋಡಬೇಕೆಂಬ ಕುತೂಹಲ ನನ್ನಲ್ಲಿ ಅದಮ್ಯವಾಗಿತ್ತು. ಆಕಸ್ಮಾತ್ತಾಗಿ ನಾನಲ್ಲಿಗೆ ಹೋದಾಗಲೆಲ್ಲ ಅಲ್ಲಿನ ವಿಚಿತ್ರ ದೃಶ್ಯಗಳನ್ನು ಕಂಡು ನನ್ನ ಹೃದಯ ಭಯ-ವಿಸ್ಮಯಗಳಿಂದ ತುಂಬಿಹೋಗುತ್ತಿತ್ತು. ಆದರೆ ಈಚೆ ಬಂದೊಡನೆ ಮನದಲ್ಲಿ ಮತ್ತೆ ಸಂಶಯವೇಳುತ್ತಿತ್ತು. 'ಮಾವನಿಗೆ ನಿಜಕ್ಕೂ ಹುಚ್ಚು ಹಿಡಿದಿರ ಬಹುದೆ? ಇಲ್ಲದಿದ್ದರೆ ಪೂಜೆ ಮಾಡುವಾಗ ಅಂತಹ ನಿಷಿದ್ಧ ಕಾರ್ಯಗಳನ್ನೆಲ್ಲ ಏಕೆ ಮಾಡುತ್ತಾನೆ?' ಎಂದು ಆಲೋಚಿಸುತ್ತಿದ್ದೆ. 'ಇವೆಲ್ಲ ರಾಣಿಯವರ ಮತ್ತು ಬಾಬುಗಳ ಕಿವಿಗೆ ಬಿದ್ದರೆ ಅವರೇನೆಂದಾರೋ?' ಎನ್ನಿಸುತ್ತಿತ್ತು. ಆದರೆ ಇಂತಹ ಯೋಚನೆಗಳೆಲ್ಲ ಮಾವನ ತಲೆಯಲ್ಲಿ ಎಂದೂ ಬರುತ್ತಿರಲಿಲ್ಲ. ಅಥವಾ ನಾನು ಅವರ ಮುಂದೆ ಇದನ್ನೆಲ್ಲ ಹೇಳಿದರೂ ಅವರು ಅದಕ್ಕೆ ಕಿವಿಗೊಡುತ್ತಲೇ ಇರಲಿಲ್ಲ. ಅಷ್ಟೇ ಅಲ್ಲ, ನನಗಾದರೂ ಅವರೊಂದಿಗೆ ಹೆಚ್ಚಾಗಿ ಮಾತನಾಡಲು ಧೈರ್ಯ ಸಾಲುತ್ತಿರಲಿಲ್ಲ. ಅದೇನೋ ಒಂದು ರೀತಿಯ ಹೆದರಿಕೆಯಿಂದ ನನ್ನ ಬಾಯಿ ಕಟ್ಟಿಹೋಗುತ್ತಿತ್ತು. ನನಗೇಕೋ, ನನಗೂ ಮಾವನಿಗೂ ನಡುವೆ ದೊಡ್ಡದೊಂದು ಅಂತರವಿರುವಂತೆ ಅನ್ನಿಸುತ್ತಿತ್ತು. ಆದ್ದರಿಂದ ಬೇರೇನೂ ಉಪಾಯಗಾಣದೆ ಮೌನ ವಾಗಿದ್ದು ನನ್ನಿಂದಾದಷ್ಟು ಅವರ ಸೇವೆ ಮಾಡುತ್ತ ಬಂದೆ. ಆದರೆ ಎಂದಾದ ರೊಂದು ದಿನ ಇದರಿಂದೆಲ್ಲ ಏನೋ ಅನಾಹುತವಾಗುವುದೆಂಬ ಭಯ ಮನದಲ್ಲಿದ್ದೇ ಇತ್ತು."

ಒಮ್ಮೆ ತಾನು ಅಕಸ್ಮಾತ್ತಾಗಿ ದೇವಾಲಯದ ಒಳಹೊಕ್ಕಾಗ ತನ್ನನ್ನು

ವಿಸ್ಮಯಮೂಕನನ್ನಾಗಿಸಿದ ದೃಶ್ಯವನ್ನು ಹೃದಯರಾಮ ಬಣ್ಣಿಸುತ್ತಾನೆ:

"...ನಾನು ದೇವಾಲಯವನ್ನು ಪ್ರವೇಶಿಸಿದೆ. ರಾಮಕೃಷ್ಣರು ದಾಸವಾಳ ಬಿಲ್ವ ಪತ್ರೆಗಳಿಂದ ಅರ್ಘ್ಯ ತಯಾರಿಸಿದರು. ಅದನ್ನವರು ಅರ್ಪಿಸಬೇಕಾದ್ದು ದೇವಿಗೆ. ಆದರೆ ಅದನ್ನು ಅವರು ತಮ್ಮ ತಲೆಗೆ, ಎದೆಗೆ, ಅಂಗಾಂಗಗಳಿಗೆ, ಕೊನೆಗೆ ತಮ್ಮ ಪಾದಕ್ಕೂ ಕೂಡ ಮುಟ್ಟಿಸಿಕೊಂಡು ಬಿಟ್ಟರು! ಆ ಬಳಿಕ ಅದನ್ನೇ ಜಗನ್ಮಾತೆಯ ಪಾದಗಳಿಗೆ ಅರ್ಪಿಸಿದರು!

"ಯಾವಾಗಲೂ ಅವರ ಕಣ್ಣುಗಳೂ ಎದೆಯೂ ಹೆಂಡಕುಡುಕನ ರೀತಿಯಲ್ಲಿ ಕೆಂಪೇರಿಕೊಂಡೇ ಇರುತ್ತಿದ್ದುವು, ಅಂದೂ ಹಾಗೇ ಕೆಂಪೇರಿದ್ದುವು. ಆ ಅವಸ್ಥೆಯಲ್ಲಿ ಅವರು ಆಸನದಿಂದೆದ್ದರು. ತೂರಾಡುತ್ತ ಮುಂದೆ ಹೋಗಿ ದೇವಿಯ ಪಕ್ಕದಲ್ಲಿ ನಿಂತರು. ಜಗನ್ಮಾತೆಯ ಗಲ್ಲವನ್ನು ಪ್ರೀತಿಯಿಂದ ನೇವರಿಸಿ ಮುದ್ದಿಸಿದರು. ಆಕೆಯೊಡನೆ ಮಾತನಾಡುತ್ತ, ಹಾಸ್ಯ ಮಾಡುತ್ತ, ನಗುತ್ತ ಹಾಡತೊಡಗಿದರು. ಕೆಲವೊಮ್ಮೆ ಆಕೆಯ ಕೈಹಿಡಿದು ನರ್ತಿಸಿದರು..."

ಮತ್ತೊಂದು ದಿನ ಶ್ರೀರಾಮಕೃಷ್ಣರು ಜಗನ್ಮಾತೆಗೆ ಅನ್ನನೈವೇದ್ಯ ಮಾಡುವ ಪರಿಯನ್ನು ನೋಡುತ್ತ ನಿಂತಿದ್ದ ಹೃದಯರಾಮ. ಅವರು ಜಗನ್ಮಾತೆಯ ಇದಿರಲ್ಲಿ ನೈವೇದ್ಯದ ತಟ್ಟೆಯನ್ನಿರಿಸಿ ಕುಳಿತಿದ್ದರು. ಇದ್ದಕ್ಕಿದ್ದಂತೆ ಏನೆನ್ನಿಸಿತೋ, ದಿಗ್ಗನೆ ಮೇಲೆದ್ದರು. ಒಂದು ಹಿಡಿ ಅನ್ನವನ್ನೂ ತೊವ್ವೆಯನ್ನೂ ಕಲಸಿ ಕೈಯಲ್ಲಿ ಹಿಡಿದು "ಅಮ್ಮಾ ತಿನ್ನು ಇದನ್ನು, ತಿನ್ನಮ್ಮಾ" ಎನ್ನುತ್ತ ಅದನ್ನು ವಿಗ್ರಹದ ಬಾಯಿಗೇ ಇಟ್ಟರು; ಅರೆಕ್ಷಣ ಆಕೆಯನ್ನೇ ನಿಟ್ಟಿಸಿದರು. ಬಳಿಕ ನುಡಿದರು, "ಏನೆಂದೆ, ನಾನೇ ಮೊದಲು ತಿನ್ನಬೇಕೆಂದೆಯಾ? ನೀನು ಆಮೇಲೆ ತಿನ್ನುವೆಯಾ? ಸರಿ, ಹಾಗೇ ಆಗಲಿ. ನೋಡು, ನಾನು ತಿನ್ನುತ್ತಿದ್ದೇನೆ." ಹೀಗೆನ್ನುತ್ತ ಅದನ್ನು ಬಾಯೊಳಗೆ ಹಾಕಿಕೊಂಡೇ ಬಿಟ್ಟರು! ಬಳಿಕ "ನಾನು ತಿಂದದ್ದಾಯಿತು. ಎಲ್ಲಿ, ಈಗ ನೀನು ತಿನ್ನು" ಎನ್ನುತ್ತ ಪುನಃ ಆಕೆಯ ಬಾಯಿಗಿಟ್ಟರು.

ಇನ್ನೊಂದು ದಿನ; ನೈವೇದ್ಯಕ್ಕೆ ಸಿದ್ಧವಾಗಿದೆ; ಆಗ ಅಲ್ಲಿಗೊಂದು ಬೆಕ್ಕು ಬಂದು ಮಿಯಾಂವ್ ಎಂದಿತು. ರಾಮಕೃಷ್ಣರು ಅತ್ತ ನೋಡಿದರು. ಒಡನೆಯೇ ಪ್ರೀತಿ ತುಂಬಿದ ದನಿಯಲ್ಲಿ, "ಬಾರಮ್ಮ ಬಾ" ಎಂದು ಕರೆದರು. ನೈವೇದ್ಯವನ್ನು ಅದಕ್ಕೆ ತಮ್ಮ ಕೈಯಾರೆ ತಿನ್ನಿಸುತ್ತ ಹೇಳಿದರು, "ತೆಗೆದುಕೋ ಅಮ್ಮಾ ತಿನ್ನಿದನ್ನು."

ರಾಮಕೃಷ್ಣರು ಜಗನ್ಮಾತೆಯನ್ನು ಶಯನಗೃಹದಲ್ಲಿ ಮಲಗಿಸುವ ಪರಿಯನ್ನು ಹೃದಯ ವೀಕ್ಷಿಸುತ್ತಿದ್ದ. ಜಗನ್ಮಾತೆಯನ್ನು ಮಲಗಿಸಿದ ಬಳಿಕ ಅವಳು ತಮಗೇನೋ ಹೇಳಿದಳೋ ಎಂಬಂತೆ ಅವರು ಉತ್ತರಿಸುವುದು ಕೇಳಿತು: "ಏನು, ನಾನೂ ಸ್ವಲ್ಪ ಮಲಗಿಕೊಳ್ಳಬೇಕೆನ್ನುವೆಯಾ? ಆಯಿತು, ಹಾಗೆಯೇ ಮಾಡುವೆ." ಬಳಿಕ ತಾವು ಆಕೆಯ ಬೆಳ್ಳಿಯ ಮಂಚದ ಮೇಲೆ ಸ್ವಲ್ಪ ಹೊತ್ತು ಮಲಗಿದರು!

ಜಗದಂಬೆಗಾಗಿ ಹಾರ ತಯಾರಿಸಲು ಬೇಕಾದ ಹೂಗಳನ್ನು ಸಂಗ್ರಹಿಸಲು ರಾಮಕೃಷ್ಣರು ನಸುಕಿಗಿಂತ ಬಹಳ ಮುಂಚೆಯೇ ಎದ್ದುಬಿಡುತ್ತಿದ್ದರು. ಅವರು ಹೂ ಕೀಳುವುದನ್ನು ಹೃದಯ ದೂರದಿಂದಲೇ ಗಮನಿಸುತ್ತಿದ್ದ. ಆಗಲೂ ಅವ

ರೊಂದಿಗೆ ಯಾರೋ ಇದ್ದಂತಿರುತ್ತಿತ್ತು ಅವರ ವರ್ತನೆ. ಹಸುಳೆಯಂತೆ ವರ್ತಿಸುತ್ತ ಯಾರೊಂದಿಗೋ ಮಾತನಾಡುತ್ತಾರೆ, ನಗುತ್ತಾರೆ, ತಮಾಷೆ ಮಾಡುತ್ತಾರೆ! ಇಡೀ ಜಗತ್ತಿನಲ್ಲಿ ಇರುವುದೆಲ್ಲ ತಾವಿಬ್ಬರೇ ಏನೋ ಎಂಬಂತೆ ಅವರ ವರ್ತನೆ!

ಇನ್ನು ಇರುಳು ಕೂಡ ಅವರ ಪಾಲಿಗೆ ಹಗಲಿಗಿಂತ ಭಿನ್ನವಾಗಿರಲಿಲ್ಲ. ಹೃದಯ ಹೇಳುತ್ತಾನೆ: "ರಾಮಕೃಷ್ಣರು ರಾತ್ರಿಯಿಡೀ ಕಣ್ಣೆವೆಯನ್ನು ಮುಚ್ಚಿದಂತೆಯೇ ತೋರಲಿಲ್ಲ. ನಾನು ಯಾವಾಗ ಎಚ್ಚರಗೊಂಡು ನೋಡಿದರೂ ಅವರು ಎದ್ದೇ ಇರುತ್ತಿದ್ದರು. ಆಧ್ಯಾತ್ಮಿಕ ಭಾವಭರಿತರಾಗಿ ಏನೋ ಮಾತನಾಡುತ್ತಿದ್ದರು, ಹಾಡುತ್ತಿದ್ದರು, ಇಲ್ಲವೆ ಪಂಚವಟಿಗೆ ಹೋಗಿ ಧ್ಯಾನಲೀನರಾಗಿರುತ್ತಿದ್ದರು."

೨೭

## 'ಹುಚ್ಚು ಪೂಜಾರಿ'

ಶ್ರೀರಾಮಕೃಷ್ಣರ ವಿಚಿತ್ರ ವರ್ತನೆಯನ್ನೆಲ್ಲ ನೋಡುತ್ತಿದ್ದ ಹೃದಯರಾಮನ ಮನಸ್ಸಿನಲ್ಲಿ ಏನೋ ಕಳವಳ, ಶಂಕೆ. ಆದರವನು ಅದನ್ನು ಯಾರ ಮುಂದೆಯೂ ತೋಡಿಕೊಳ್ಳಲಾರ. ಆ ಬಗ್ಗೆ ಯಾರೊಂದಿಗೂ ಚರ್ಚಿಸಲಾರ. ಏಕೆಂದರೆ ಬಳಿಕ ಆ ವಿಷಯ ಒಬ್ಬರ ಕಿವಿಯಿಂದ ಮತ್ತೊಬ್ಬರ ಕಿವಿಗೆ ವಾಯುವೇಗದಿಂದ ಹರಡಿಬಿಡುತ್ತದೆ. ಕೊನೆಗೆ ಯಾರಾದರೂ ಮೇಲಧಿಕಾರಿಗಳ ಕಿವಿಯೂದಿ ರಾಮಕೃಷ್ಣರಿಗೆ ತೊಂದರೆ ತಂದಿಡಲು ಸಾಧ್ಯವಿದೆ. ಆದರೆ ಪ್ರತಿದಿನ ಪ್ರತಿಕ್ಷಣ ಇಂತಹ ವಿಚಿತ್ರಗಳು ಕಣ್ಣೆದುರಿಗೇ ನಡೆಯುತ್ತಿರುವಾಗ ಎಷ್ಟು ದಿನವೆಂದು ಮುಚ್ಚಿಡಲಾದೀತು ? ಆದರೆ ಹೃದಯನ ಅದೃಷ್ಟವೋ ಏನೋ, ಅವನು ಆ ಬಗ್ಗೆ ಯಾರಿಗೂ ಹೇಳಬೇಕಾಗಿ ಬರಲಿಲ್ಲ. ಪೂಜಾ ವೇಳೆಯಲ್ಲಿ ದೇವಾಲಯಕ್ಕೆ ಬಂದ ಜನರೇ ಅಲ್ಲಿನ ವಿಚಿತ್ರ ವ್ಯವಹಾರವನ್ನು ಕಂಡರು, ಕಂಡು ದಿಗ್ಭ್ರಾಂತರಾದರು. ತರುವಾಯ ಖಜಾಂಚಿಗೂ ಪಾರುಪತ್ತೇದಾರರಿಗೂ ವಿಷಯವನ್ನು ಮುಟ್ಟಿಸಿದರು. ಆಗ ಅಧಿಕಾರಿಗಳು ತಾವೇ ಬಂದು ರಾಮಕೃಷ್ಣರ ಹುಚ್ಚುಪೂಜೆಯನ್ನು ಕಣ್ಣಾರೆ ಕಂಡರು. ಬುದ್ಧಿ ಸರಿಯಾಗಿರುವ ಯಾರಾದರೂ ಹೀಗೆಲ್ಲ ಮಾಡಲು ಸಾಧ್ಯವೆ? ಆದರೆ ರಾಮಕೃಷ್ಣರ ಆವೇಶಭರಿತ ಮುಖಭಾವವನ್ನು, ಮೈಮೇಲೆ ಏನೋ ಬಂದಂತೆ ವರ್ತಿಸುವುದನ್ನು, ನಿರ್ಲಕ್ಷ್ಯಬುದ್ಧಿಯನ್ನು, ನಿಸ್ಸಂಕೋಚ–ನಿರ್ಭಯ ಮನೋಭಾವವನ್ನು ಕಂಡು ಅವರಿಗೆ ದಿಗಿಲಾಯಿತು. ಬರೀ ಹುಚ್ಚಾದರೆ ಯಾರಾದರೂ ಹೀಗಾಡುತ್ತಾರೆಯೆ ? ಆದರೆ ಈ ಅಧಿಕಾರಿಗಳು ರಾಮಕೃಷ್ಣರಿಗೇ ನೇರವಾಗಿ ಏನನ್ನೂ ಹೇಳಲಾರದೆ ಹೋದರು. ಆದ್ದರಿಂದ ಸುಮ್ಮನೆ ತಮ್ಮತಮ್ಮೊಳಗೆ ಪಿಸುಗುಟ್ಟಿಕೊಂಡು ಹಿಂದಿರುಗಿದರು. ಬಳಿಕ ಪಾರುಪತ್ಯದಾರರು, ಇನ್ನಿತರರು ಎಲ್ಲ ಸೇರಿ ಚರ್ಚೆ ಮಾಡಿ ಕೊನೆಗೊಂದು ತೀರ್ಮಾನಕ್ಕೆ ಬಂದರು — 'ಭಟ್ಟಾಚಾರ್ಯರಿಗೆ ಒಂದೋ ಹುಚ್ಚು ಹಿಡಿದಿರಬೇಕು, ಇಲ್ಲವೆ ಯಾವುದೋ ದೆವ್ವದ ಆವಾಹನೆಯಾಗಿರಬೇಕು. ಇಲ್ಲದಿದ್ದರೆ ಅರ್ಚನೆಯ ಸಮಯದಲ್ಲಿ ಯಾರೂ ಹೀಗೆ ಶಾಸ್ತ್ರವಿಹಿತವಲ್ಲದ ರೀತಿಯಲ್ಲಿ ನಡೆದುಕೊಳ್ಳುವುದು ಅಸಂಭವ. ಅದೇನೇ ಇರಲಿ, ಭಟ್ಟಾಚಾರ್ಯರಂತೂ ಈ ಬಗೆಯ ಹುಚ್ಚಾಟದಿಂದ ದೇವಾಲಯದ ಆಚಾರವನ್ನೆಲ್ಲ ಕೆಡಿಸಿಬಿಟ್ಟಿದ್ದಾರೆ. ಆದ್ದರಿಂದ ದೇವಿಗೆ ಸಲ್ಲಬೇಕಾದ ಅರ್ಚನೆ–ನೈವೇದ್ಯಾದಿಗಳೊಂದೂ ನಡೆಯುತ್ತಿಲ್ಲವೆಂದೇ ಹೇಳಬಹುದು. ಪರಿಸ್ಥಿತಿ ಇಷ್ಟು ಗಂಭೀರ

ವಾದದ್ದಾದ್ದರಿಂದ ಯಜಮಾನರಿಗೆ ಇದನ್ನು ತಿಳಿಸದೆ ಬೇರೆ ವಿಧಿಯಿಲ್ಲ.'

ಕಲ್ಕತ್ತದ ಜಾನ್‌ಬಜಾರಿನಲ್ಲಿದ್ದ ಮಥುರಬಾಬುವಿಗೆ ಕೂಡಲೇ ಸುದ್ದಿ ಹೋಯಿತು. 'ಕಾಳೀ ದೇವಾಲಯದ ಭಟ್ಟಾಚಾರ್ಯರು ತೀರಾ ಹುಚ್ಚುಚ್ಚಾಗಿ ಆಡುತ್ತಿದ್ದಾರೆ, ನೇಮ ನೀತಿಗಳೊಂದನ್ನೂ ಪಾಲಿಸದೆ ಅನಾಚಾರವೆಸಗುತ್ತಿದ್ದಾರೆ. ಈ ಕೂಡಲೇ ಅವರನ್ನು ಕೆಲಸದಿಂದ ವಜಾಮಾಡುವುದೇ ವಿಹಿತವಾದದ್ದು; ಇನ್ನು ತಡ ಮಾಡಿದರೆ ಕೆಟ್ಟ ಹೆಸರು ಬರುತ್ತದೆ' ಎಂದು ತಿಳಿಸಿ ಪರಿಸ್ಥಿತಿಯ ತೀವ್ರತೆಯನ್ನು ಮನಗಾಣಿಸಲಾಯಿತು. ಆದರೆ ಮಥುರಾನಾಥ ಉದ್ರೇಕಗೊಳ್ಳಲಿಲ್ಲ. ಅಧಿಕಾರಿಗಳಿಗೊಂದು ಪತ್ರ ಬರೆದು ಕಳಿಸಿದ — "ನಾವೇ ಖುದ್ದಾಗಿ ಬಂದು ಅಲ್ಲಿನ ವಿಷಯವೇನೆಂದು ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳಲಿದ್ದೇವೆ; ಅಲ್ಲಿಯವರೆಗೆ ಭಟ್ಟಾಚಾರ್ಯರು ತಮಗಿಷ್ಟ ಬಂದ ರೀತಿಯಲ್ಲೇ ಪೂಜಾದಿಗಳನ್ನು ಮಾಡಿಕೊಂಡು ಹೋಗಲಿ. ಅವರಿಗೆ ಯಾರೂ ಏನನ್ನೂ ಹೇಳಲು ಹೋಗುವುದು ಬೇಡ" ಎಂದು. ಅಧಿಕಾರಿಗಳ ಮಾತು ಕೇಳಿ ಕ್ರಮ ತೆಗೆದುಕೊಳ್ಳಲು ಮಥುರನೇನೂ ಹಿತ್ತಾಳೆ ಕಿವಿಯ ರಾಜನಾಗಿರಲಿಲ್ಲ. ಅಲ್ಲದೆ ರಾಮಕೃಷ್ಣರ ಪರಮ ಪವಿತ್ರ ವ್ಯಕ್ತಿತ್ವವನ್ನು ಕಣ್ಣಾರೆ ಕಂಡವನಲ್ಲವೆ? ಪತ್ರ ಅಧಿಕಾರಿಗಳ ಕೈಸೇರಿತು. ಓದಿ ಒಳ್ಳೆಯದೇ ಆಯಿತೆಂದುಕೊಂಡರು. "ಈ ಅರ್ಚಕನ ಹುಚ್ಚಾಟವನ್ನು ಕಂಡು ನಮಗೇ ಇಷ್ಟು ಸಂಕಟವಾಗಬೇಕಾದರೆ, ಇನ್ನು ಬಾಬುಗಳಿಗೆ ಕೋಪ ಬರದಿದ್ದೀತೆ? ಈ ಸಲ ಮಾತ್ರ ಹುಚ್ಚು ಪೂಜಾರಿಗೆ ಅರ್ಧಚಂದ್ರ ಪ್ರಯೋಗವೇ ಕಟ್ಟಿಟ್ಟದ್ದು. ಅಬ್ಬ! ಅದೇನನಾಚಾರ! ಅದೇನು ದುರ್ವರ್ತನೆ! ದೇವಿ ತಾನೆ ಎಷ್ಟು ದಿನ ಅಂತ ಸುಮ್ಮನಿದ್ದಾಳು!" ಎಂದು ಮಾತನಾಡಿಕೊಳ್ಳುತ್ತ, ಮಥುರಬಾಬುವಿನ ಆಗಮನವನ್ನೇ ನಿರೀಕ್ಷಿಸುತ್ತ ಕುಳಿತರು ಅಧಿಕಾರಿಗಳು.

ಒಂದು ದಿನ ಪೂಜೆಯ ಸಮಯದಲ್ಲಿ ಯಾರಿಗೂ ತಿಳಿಯದಂತೆ ಮಥುರಬಾಬು ಇದ್ದಕ್ಕಿದ್ದಂತೆ ದಕ್ಷಿಣೇಶ್ವರಕ್ಕೆ ಬಂದ. ಸೀದಾ ಕಾಳೀ ದೇವಾಲಯಕ್ಕೆ ಹೋಗಿ ನಮಸ್ಕರಿಸಿದ. ದೂರದಲ್ಲೇ ನಿಂತು ರಾಮಕೃಷ್ಣರ ವಿಶಿಷ್ಟ ಪೂಜಾ ವಿಧಾನವನ್ನು ಬಹಳ ಹೊತ್ತು ಗಮನಿಸಿದ. ಎಂದಿನಂತೆ ಅವರು ತಮ್ಮದೇ ಆದ ರೀತಿಯಲ್ಲಿ ಪೂಜೆ ಮಾಡಿದರು, ನೈವೇದ್ಯ ಮಾಡಿದರು. ಅತಿ ವಿಸ್ಮಯದಿಂದ ಮಥುರ ಕಣ್ಣರಳಿಸಿಕೊಂಡು ನೋಡುತ್ತಿದ್ದಾನೆ — ನೋಡನೋಡುತ್ತಿದ್ದಂತೆ ಅವನ ಎದೆಯಲ್ಲಿ ಭಕ್ತಿ–ಆನಂದದ ಭಾವವುಕ್ಕಿ ಹರಿಯಲಾರಂಭಿಸಿದೆ! ಶ್ರೀರಾಮಕೃಷ್ಣರಿಗೆ ಮಾತ್ರ ಯಾರು ಬಂದರೋ ಯಾರು ಹೋದರೋ ಒಂದೂ ತಿಳಿಯದು. ಎದುರಿಗಿರುವ ಜಗಜ್ಜನನಿಯೊಬ್ಬಳನ್ನುಳಿದು ಬೇರಾವುದೂ ಕಾಣುತ್ತಿಲ್ಲ! ಮಥುರನಿಗೆ ಮೊಟ್ಟ ಮೊದಲು ಗೋಚರವಾದ ಅಂಶವೆಂದರೆ ಅವರ ಏಕಾಗ್ರಚಿತ್ತತೆ, ಏಕನಿಷ್ಠೆ. ಹಿಂದೆ ಅವನು ಆಲೋಚಿಸಿದ್ದ — 'ರಾಮಕೃಷ್ಣರಿಗೆ ಇಂತಹ ಉನ್ನತ ಸ್ಥಿತಿ ಹೇಗೆ ಲಭ್ಯವಾಗಿರಬಹುದು?' ಎಂದು. ಈಗ ಅವರ ಬಾಲಸಹಜ ವರ್ತನೆಯನ್ನು ಕಂಡಾಗ ಅವನಿಗರ್ಥವಾಯಿತು. ಆಹಾ! ಈ ಬಗೆಯ ಸಹಜ ಪ್ರಾಮಾಣಿಕ ಭಕ್ತಿ-ಪ್ರೇಮಗಳಿಗಲ್ಲದೆ ಮತ್ತಾವುದಕ್ಕೆ ಒಲಿದಾಳು ಜಗನ್ಮಾತೆ? ಮತ್ತಾವುದರಿಂದ ಲಭಿಸೀತು

ಆಕೆಯ ಸಾಕ್ಷಾತ್ಕಾರ! ಅವರನ್ನೇ ದಿಟ್ಟಿಸಿ ನೋಡಿದ ಮಥುರಬಾಬು. ಅರೆ ಇದೇನು! ಪೂಜೆ ಮಾಡುತ್ತಮಾಡುತ್ತ ಇದ್ದಕ್ಕಿದ್ದಂತೆ ಅವರ ಕಣ್ಣಿಂದ ಪ್ರೇಮಾಶ್ರು ಧಾರೆ ಉಕ್ಕಿ ಹರಿಯುತ್ತಿದೆ! ಇಂಥದೊಂದು ಸಂಗತಿ ಜಗತ್ತಿನಲ್ಲುಂಟೆ? ಮತ್ತೆ ನೋಡಿದ ಮಥುರ. ರಾಮಕೃಷ್ಣರು ಬಾಹ್ಯಪ್ರಜ್ಞೆಯನ್ನೇ ಕಳೆದುಕೊಂಡಂತೆ ತೋರು ತ್ತಿದೆ! ಅಪ್ರಯತ್ನವಾಗಿ ಅವನ ಕಣ್ಣಿನಿಂದಲೂ ಧನ್ಯತೆಯ ಅಶ್ರುಬಿಂದುವೊಂದು ಉರುಳಿತು. ಇಂತಹ ಅಲೌಕಿಕ ದೃಶ್ಯವನ್ನು ಕಂಡ ತಾನೇ ಧನ್ಯ ಎಂದುಕೊಂಡ. ಇಡೀ ದೇವಾಲಯವೇ ಜಗನ್ಮಾತೆಯ ಜೀವಂತ ಸಾನ್ನಿಧ್ಯದಿಂದ ತುಂಬಿರುವಂತೆ ಭಾಸವಾಯಿತು. ಭಟ್ಟಾಚಾರ್ಯರು ಜಗನ್ಮಾತೆಯ ಪೂರ್ಣಕೃಪೆಗೆ ಪಾತ್ರರಾಗಿರುವ ರೆಂಬುದರಲ್ಲಿ ಅವನಿಗಿನ್ನು ಸಂದೇಹವೇ ಉಳಿಯಲಿಲ್ಲ. ಹನಿಗೂಡಿದ ಕಂಗಳಿಂದ ದೂರದಿಂದಲೇ ಜಗನ್ಮಾತೆಯನ್ನೂ ಆಕೆಯ ದಿವ್ಯ ಅರ್ಚಕನನ್ನೂ ಕಂಡು ಮತ್ತೆ ಮತ್ತೆ ನಮಸ್ಕರಿಸುತ್ತ ತನ್ನೊಳಗೇ ಹೇಳಿಕೊಂಡ— 'ಅಂತೂ ಈ ದೇವಾಲಯದ ನಿರ್ಮಾಣ ಸಾರ್ಥಕವಾಯಿತು. ಇದೀಗ ಆಕೆ ನಿಜವಾಗಿ ಪ್ರತಿಷ್ಠಿತಳಾಗಿದ್ದಾಳೆ. ಇದೀಗ ಆಕೆಯ ನಿಜವಾದ ಪೂಜೆ ನಡೆಯುತ್ತಿದೆ. ಮತ್ತಿನ್ನೇನಾಗಬೇಕು?' ಭಕ್ತಿಜಲಸೇಚನೆಯಿಂದ ಅವನ ಹೃದಯ ಶುದ್ಧಗೊಂಡಿತ್ತು. 'ಅಮ್ಮಾ ಹೋಗಿಬರು ತ್ತೇನೆ' ಎಂದು ಹೇಳಿಕೊಂಡು ಅಲ್ಲಿಂದ ಹೊರಟ. ಅಧಿಕಾರಿಗಳಿಗೆ ಏನೂ ಹೇಳದೆ ಕಲ್ಕತ್ತಕ್ಕೆ ಮರಳಿದ.

ಮರುದಿನ ಮುಖ್ಯ ಪಾರುಪತ್ಯದಾರರಿಗೆ ಮಥುರನಿಂದ ಒಂದು ಚೀಟಿ ಬಂದಿತು —"ಭಟ್ಟಾಚಾರ್ಯರು ತಮಗಿಷ್ಟ ಬಂದ ರೀತಿಯಲ್ಲಿ ಪೂಜೆ ಮಾಡ ಬಹುದು. ಅವರೇನು ಮಾಡಿದರೂ ಯಾರೂ ಅವರನ್ನು ತಡೆಯಬಾರದು. ಮತ್ತು ಅಲ್ಲಿ ಏನೇ ನಡೆದರೂ ನಮಗೆ ವಿಷಯವನ್ನು ತಿಳಿಸಿ ಬಳಿಕ ನಮ್ಮ ಸೂಚನೆಯಂತೆ ನಡೆದುಕೊಳ್ಳಬೇಕು. ಇದನ್ನು ಎಲ್ಲರೂ ತಿಳಿದಿರತಕ್ಕದ್ದು."

ಬಾಬುಗಳ ಆಜ್ಞೆಯನ್ನು ಕೇಳಿ ಅಧಿಕಾರಿಗಳೆಲ್ಲ ಹೌಹಾರಿದರು. ಇದೇನಿದು! ಏನೋ ಹೆಚ್ಚುಕಡಿಮೆಯಾದಂತಿದೆ! ಪೂಜಾರಿಗಳು ಯಜಮಾನರೆದುರಿಗೆ ಬೇರೇ ನಾದರೂ ನಾಟಕ ಆಡಿದರೋ ಹೇಗೆ? ಇಲ್ಲವೆ ಯಜಮಾನರಿಗೆ ಮಂಕುಬೂದಿ ಎರಚಿದರೆ? ಅಥವಾ ಧಣಿಗಳಿಗೆ ಏನೂ ತೋಚಲೇ ಇಲ್ಲವೊ! — ಹೀಗೆ ಬಗೆಬಗೆಯಾಗಿ ಮಾತನಾಡಿಕೊಂಡರು. ಆದರೆ ಏನೂ ಇತ್ಯರ್ಥವಾಗಲಿಲ್ಲ. ಕೊನೆಗೆ 'ಏನೋ ದೊಡ್ಡವರ ಸಮಾಚಾರ. ಇನ್ನೂ ನಾವೇನಾದರೂ ತಲೆಹಾಕಿದರೆ ನಮಗೇ ಕಷ್ಟ. ಸರಿ ಬಿಡಿ, ಅವರಿಗೇ ಇಲ್ಲದ ಉಸಾಬರಿ ನಮಗೇಕೆ?' ಎಂದುಕೊಂಡು ತೆಪ್ಪಗಾದರು. ಆದರೆ ರಾಣಿ ರಾಸಮಣಿಯೂ ಮಥುರಬಾಬುವೂ ರಾಮಕೃಷ್ಣರ ಮೇಲಿಟ್ಟಿದ್ದ ಭಕ್ತ್ಯಾದರಗಳನ್ನು ಕಂಡು ಅಧಿಕಾರಿಗಳು ಮನದಲ್ಲೇ ಲೆಕ್ಕ ಹಾಕಿದ್ದರು: 'ಈ ಪೂಜಾರಿಗೆ ಬುದ್ಧಿ ನೆಟ್ಟಗಿಲ್ಲವೆಂಬುದು ಮಾತ್ರ ಖಂಡಿತ. ಸಾಹುಕಾರರಿಗೇನೋ ಇವನ ಮೇಲೆ ಖಯಾಲಿ ಬೆಳೆದಿದೆ. ಆದ್ದರಿಂದಲೇ ಇವನ ಕೆಲಸ ಇನ್ನೂ ಉಳಿದುಕೊಂಡಿದೆ. ಆದರೆ ಈ ಬಗೆಯ ವಿಶ್ವಾಸವನ್ನು ಎಷ್ಟು ದಿನ ತಾನೆ ಉಳಿಸಿಕೊಳ್ಳಲು ಸಾಧ್ಯ? ಯಾವತ್ತೋ ಒಂದು ದಿನ ಏನೋ ಹೆಚ್ಚುಕಡಿಮೆ

ಯಾಗುತ್ತದೆ, ಆಗ ಸಾಹುಕಾರರು ಒದ್ದೋಡಿಸುತ್ತಾರೆ. ದೊಡ್ಡಮನುಷ್ಯರ ಸಹವಾಸ ಹೇಗೆಯೋ ಎಂದು ಹೇಳಲು ಬರುವುದೆ ? ಇರಲಿ ಇರಲಿ, ನೋಡೋಣ....'

ದೇವಾಲಯದ ಪಾರುಪತ್ಯದಾರರಿಗೆ ಶ್ರೀರಾಮಕೃಷ್ಣರ ಬುದ್ಧಿ ಸ್ವಾಸ್ಥ್ಯದ ಬಗ್ಗೆ ಅನುಮಾನವುಂಟಾಗಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ ಆ ಬಗೆಯ ವರ್ತನೆಯನ್ನೆಲ್ಲ ಯಾರು ಕಂಡಿದ್ದಾರು ? ಯಾರು ಕೇಳಿದ್ದಾರು ? ಆದರೆ ಹಿಂದೂ ಧರ್ಮದ ಆಧ್ಯಾತ್ಮಿಕ ಪರಂಪರೆಗೆ ಈ ಬಗೆಯ ಅವಸ್ಥೆ ಹೊಸದೇನಲ್ಲ. ಹಿಂದೂ ಶಾಸ್ತ್ರಗಳಲ್ಲಿ ಇದರ ಪ್ರಸ್ತಾಪವಿದೆ; ಇದರ ಲಕ್ಷಣಗಳನ್ನು, ವೈಶಿಷ್ಟ್ಯಗಳನ್ನು ಸ್ಪಷ್ಟವಾಗಿ ವಿವರಿಸಲಾಗಿದೆ. ಉದಾಹರಣೆಗೆ –

ಭಕ್ತಿಯಲ್ಲಿ ಎರಡು ವಿಧ. ಒಂದನೆಯ ವರ್ಗಕ್ಕೆ ಸೇರಿದ ಭಕ್ತ ದೇವರನ್ನು ಶಾಸ್ತ್ರೋಕ್ತ ರೀತಿಯಲ್ಲಿ ಪೂಜಿಸುತ್ತಾನೆ. ದಿನಕ್ಕೆ ಎಷ್ಟು ಬಾರಿ ಸ್ನಾನ ಮಾಡಬೇಕೆಂದಿದೆಯೋ ಅಷ್ಟು ಬಾರಿ ಸ್ನಾನ ಮಾಡುತ್ತಾನೆ; ವ್ರತ ನಿಯಮ ಉಪವಾಸ ಪಥ್ಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾನೆ; ನಿರ್ದಿಷ್ಟವಾದ ಮಂತ್ರಗಳನ್ನೇ ಹೇಳುತ್ತಾನೆ. ಇದು ಒಂದು ಬಗೆಯ ಭಕ್ತಿ.

ಇನ್ನೊಂದು ವರ್ಗದ ಭಕ್ತನಿಗೆ ಇಂತಹ ವಿಧಿ–ನಿಯಮಗಳೊಂದೂ ಇಲ್ಲ. ಅವನು ಭಗವಂತನೊಂದಿಗೆ ಒಂದು ರೀತಿಯ ಆತ್ಮೀಯ ಸಂಬಂಧ ಬೆಳೆಸಿಕೊಳ್ಳುತ್ತಾನೆ. ಆ ಸಂಬಂಧ ಎಷ್ಟು ಗಾಢವಾದುದೆಂದರೆ ಭಕ್ತನು ಕಟ್ಟುಕಟ್ಟಳೆಗಳನ್ನೆಲ್ಲ ಮರೆತುಬಿಡುತ್ತಾನೆ. ಬದಲಾಗಿ ತನ್ನ ಅಂತರಂಗದ ಪ್ರೇರಣೆಯಂತೆ ನಡೆದುಕೊಳ್ಳುತ್ತಾನೆ.

ಮೊದಲನೆಯ ವಿಧದ ಭಕ್ತಿಗೆ 'ವೈಧೀ ಭಕ್ತಿ' ಎಂದು ಹೆಸರು, ಎರಡನೆಯದಕ್ಕೆ 'ಪ್ರೇಮಾಭಕ್ತಿ' ಎಂದು ಹೆಸರು. ಮೊದಲನೆಯದು ಎರಡನೆಯದಕ್ಕೆ ಮೆಟ್ಟಿಲು. ಎಂದರೆ ಒಬ್ಬನ ಭಕ್ತಿಯು ಪೂರ್ಣವಾಗಿ ಬೆಳೆದು ಮಾಗಿದ ಮೇಲೆ ಮಾತ್ರ ಅವನಲ್ಲಿ ಪ್ರೇಮಾಭಕ್ತಿಯ ದಿವ್ಯ ಭಾವ ಉದಿಸಲು ಸಾಧ್ಯ. ಶ್ರೀರಾಮಕೃಷ್ಣರಲ್ಲಿ ಉಂಟಾಗಿದ್ದುದು ಈ ರೀತಿಯ ಪ್ರೇಮಾಭಕ್ತಿಯ ಉತ್ಕಟಾವಸ್ಥೆ ಎಂಬುದು ಸುಸ್ಪಷ್ಟ. ಆದರೆ ಅವರಲ್ಲಿ ಈ ಬಗೆಯ ವಿಕಾಸ ಎಷ್ಟು ವೇಗವಾಗಿ ಮತ್ತು ಎಷ್ಟು ಸಹಜವಾಗಿ ಆಯಿತೆಂದರೆ ಸ್ವತಃ ಅವರಿಗೂ ಅದು ಅರಿವಾಗಲಿಲ್ಲ! ತಾನು ಯಾವುದೋ ಪ್ರಬಲ ಶಕ್ತಿಯೊಂದರ ಆಜ್ಞಾಧಾರಕನಾಗಿದ್ದೇನೆ ಎಂದಷ್ಟೇ ಅವರಿಗೆ ಗೊತ್ತಾಗಿತ್ತು. ಎಷ್ಟೋ ಸಲ ತಮ್ಮ ವರ್ತನೆಯನ್ನು ಕಂಡು, ತಮ್ಮ ಮನೋಭಾವವನ್ನು ಕಂಡು, 'ಇದೇನು ! ನಾನು ಮಾಡುತ್ತಿರುವುದು ಸರಿಯಾಗಿದೆಯೆ ?' ಎಂದು ತಮ್ಮನ್ನು ತಾವೇ ಕೇಳಿಕೊಳ್ಳುತ್ತಿದ್ದರು. ಬಳಿಕ ದಾರಿಗಾಣದೆ, ಮತ್ತೆ ಜಗನ್ಮಾತೆಯ ಬಳಿಗೇ ಓಡಿಹೋಗಿ ಆಕೆಯ ಮುಂದೆ ಅಳುತ್ತಿದ್ದರು. "ಅಮ್ಮಾ ಈಗ ನೀನೇ ದಾರಿ ತೋರಬೇಕು. ಅಮ್ಮಾ ಇಲ್ಲಿಯವರೆಗೆ ನೀನು ಹೇಗೆ ನನ್ನ ಕೈಹಿಡಿದು ನಡೆಸಿದೆಯೋ ಮುಂದೆಯೂ ಹಾಗೆಯೇ ನಡೆಸಬೇಕಮ್ಮ!" ಎಂದು ಆಕೆಯನ್ನು ಅಂಗಲಾಚಿ ಬೇಡುತ್ತಿದ್ದರು.

ರಾಮಕೃಷ್ಣರು ದೇವಿಯ ದರ್ಶನಕ್ಕಾಗಿ ಹಂಬಲಿಸುತ್ತ ಹುಚ್ಚರಂತಾಗಿದ್ದ ಆ

ಸಮಯದಲ್ಲಿ ಅವರ ಶರೀರ ಎಂತಹ ಆಘಾತಗಳಿಗೆ ಒಳಗಾಯಿತು ಎಂಬುದನ್ನು ನೋಡಿದ್ದೇವೆ. ಆಹಾರ ವಿಶ್ರಾಂತಿ ನಿದ್ರೆಗಳಿಲ್ಲದೆ, ಹಗಲಿರುಳೆನ್ನದೆ ಮಾಡಿದ ಕಠಿಣತಮ ವ್ರತನಿಯಮಗಳಿಂದಾದ ಶ್ರಮ ಒಂದೆಡೆಯಾದರೆ, ಅದಕ್ಕಿಂತಲೂ ದುರ್ಭರವಾದುದು—ಮನಸ್ಸಿನ ಪ್ರಚಂಡ ಭಾವೋದ್ವೇಗದ ಅಲೆಗಳಿಂದ ಶರೀರದ ಮೇಲಾದ ಪರಿಣಾಮ. ಆಧ್ಯಾತ್ಮಿಕ ಭಾವಲಹರಿಗಳು ಮನಸ್ಸಿನಲ್ಲಿ ಇದ್ದಕ್ಕಿದ್ದಂತೆ ಮಹಾಪೂರದಂತೆ ನುಗ್ಗಿಬಂದಾಗ ಎಂಥವರಿಗಾದರೂ ಅದನ್ನು ತಡೆಹಿಡಿಯುವುದಾಗಲಿ, ಮುಚ್ಚಿಟ್ಟುಕೊಳ್ಳುವುದಾಗಲಿ ದುಸ್ಸಾಧ್ಯ. ಅಷ್ಟೇ ಅಲ್ಲ, ಮಾನವನ ಜಡದೇಹವು ಈ ಆಘಾತವನ್ನು ತಾಳಲಾರದೆ ಹೋಗಬಹುದು. ಎಷ್ಟೋ ಜನ ಸಾಧಕರು ಈ ಅವಸ್ಥೆಯಲ್ಲಿ ಮರಣಕ್ಕೀಡಾಗುವುದೂ ಇದೆ. ಆದ್ದರಿಂದ ಪರಿಪೂರ್ಣ ಭಕ್ತಿಯಿಂದಾಗಲಿ ಪರಿಪೂರ್ಣ ಜ್ಞಾನದಿಂದಾಗಲಿ ಉದಿಸುವ ಭಾವದಲೆಗಳನ್ನು ತಡೆದುಕೊಳ್ಳಬೇಕಾದರೆ ಶರೀರ ತುಂಬ ದೃಢವಾಗಿರಬೇಕಾಗುತ್ತದೆ. ಆದರೆ ನಾವು ಯಾರನ್ನು ಅವತಾರಪುರುಷರೆಂದು ಕರೆಯುವೆವೋ ಅವರು ಮಾತ್ರವೇ ಈ ಬಗೆಯ ಆಧ್ಯಾತ್ಮಿಕ ಭಾವಗಳ ರಭಸವನ್ನು ಸಹಿಸಲು ಸಮರ್ಥರಾಗಿರುತ್ತಾರೆ. ಭಕ್ತಿಶಾಸ್ತ್ರಗಳು ಮತ್ತೆಮತ್ತೆ ಹೇಳುತ್ತವೆ—ಅವತಾರಪುರುಷರ ಶರೀರಗಳು ಶುದ್ಧ ಸಾತ್ವಿಕ ಅಂಶದಿಂದ ತಯಾರಾದವುಗಳು ಎಂದು. ಆ ಶರೀರಗಳಿಗೆ ಯಾತನೆಯೇ ಉಂಟಾಗುವುದಿಲ್ಲ ಎಂದರ್ಥವಲ್ಲ; ಆದರೆ ಸಾತ್ವಿಕಶರೀರಿಗಳಾದ ಅವತಾರ ಪುರುಷರು ಆಧ್ಯಾತ್ಮಿಕ ಭಾವಾವೇಗಗಳ ರಭಸವನ್ನು ತಡೆದುಕೊಳ್ಳಬಲ್ಲರು ಎಂಬುದು ನಾವಿಲ್ಲಿ ಗಮನಿಸಬೇಕಾದ ಮುಖ್ಯಾಂಶ.

ರಾಮಕೃಷ್ಣರಲ್ಲಿ ಭಕ್ತಿಯ ರಭಸ ಹೆಚ್ಚಿದಾಗಿನಿಂದ ಅವರ ದೇಹದಲ್ಲಿ ಹಲವಾರು ಅಸಾಧಾರಣ ಬದಲಾವಣೆಗಳು ಉಂಟಾಗತೊಡಗಿದವು. ಮತ್ತು ಅನೇಕ ವಿಚಿತ್ರ ಲಕ್ಷಣಗಳು ಕಾಣಿಸಿಕೊಂಡವು. ಹೀಗೆ ಕಾಣಿಸಿಕೊಂಡ ಒಂದು ಲಕ್ಷಣವೆಂದರೆ ಮೈಯೆಲ್ಲ ಉರಿಯುವ ಅನುಭವ. ಈ ಉರಿತದ ಅನುಭವ ಅವರಿಗೆ ಸಾಧನೆಯ ಅವಧಿಯಲ್ಲಿ ಅನೇಕ ಬಾರಿ ಮರುಕಳಿಸಿತು. ಉರಿತಕ್ಕೆ ಕಾರಣ ಮತ್ತು ಅದರ ನಿವಾರಣೋಪಾಯ ಎರಡೂ ಅತಿ ವಿಚಿತ್ರ. ಅವರೇ ಮುಂದೆ ತಮ್ಮ ಶಿಷ್ಯರಿಗೆ ಆ ಅನುಭವವನ್ನು ತಿಳಿಸುತ್ತಾರೆ:

"ನಾನು ಸಾಧನೆಗಳನ್ನು ಪ್ರಾರಂಭಿಸಿದಾಗಿನಿಂದ ನನ್ನ ಶರೀರದಲ್ಲೆಲ್ಲ ಒಂದು ಬಗೆಯ ಉರಿಯ ಅನುಭವವಾಗತೊಡಗಿತು. ಇದೆಂಥ ಕಾಯಿಲೆ ಎಂದು ನನಗೆ ಚಿಂತೆ ಹುಟ್ಟಿಕೊಂಡಿತು. ನೋಡನೋಡುತ್ತಿದ್ದಂತೆಯೇ ಉರಿತ ಅಸಹನೀಯವಾಗುವಷ್ಟು ಹೆಚ್ಚಾಯಿತು. ವೈದ್ಯರು ಯಾವ ಯಾವ ತೈಲವನ್ನು ಹೇಳಿದರೋ ಅವೆಲ್ಲವನ್ನೂ ತಂದು ತಿಕ್ಕಿಕೊಂಡದ್ದಾಯಿತು. ಆದರೆ ಏನೇನೂ ಪ್ರಯೋಜನವಾಗಲಿಲ್ಲ. ಹೀಗೆಯೇ ಸುಮಾರು ಆರು ತಿಂಗಳು ಕಳೆಯಿತು.

"ಹಿಂದೆ ನಾನು ಸಂಧ್ಯಾದಿಗಳನ್ನೂ ಪೂಜೆಯನ್ನೂ ಮಾಡುವ ಸಂದರ್ಭದಲ್ಲಿ ಪೂಜಾವಿಧಿಯಂತೆ 'ನನ್ನೊಳಗಿನ ಪಾಪಪುರುಷನು ನಾಶಹೊಂದಿದ್ದಾನೆ' ಎಂದು ಭಾವಿಸುತ್ತಿದ್ದೆ. ಆದರೆ 'ಪಾಪಪುರುಷ' ಎಂಬಾತನು ನಿಜಕ್ಕೂ ನಮ್ಮೊಳಗಿದ್ದಾನೆ

ಎಂಬುದಾಗಲಿ, ನಿಜಕ್ಕೂ ಅವನನ್ನು ಸುಟ್ಟು ನಾಶಗೊಳಿಸಬಹುದು ಎಂಬುದಾಗಲಿ ಆಗ ನನಗಾದರೂ ಎಲ್ಲಿ ಗೊತ್ತಿತ್ತು?

"ಒಂದು ದಿನ ನಾನು ಪಂಚವಟಿಯಲ್ಲಿ ಕುಳಿತಿದ್ದೆ. ಆಗ ಕಾಡಿಗೆಯಂತೆ ಕರ್‍ರಗಿನ ವ್ಯಕ್ತಿಯೊಬ್ಬ ನನ್ನ ಶರೀರದಿಂದ ಹೊರಬಂದ. ಅವನ ಕಣ್ಣುಗಳು ಕೆಂಪಾಗಿದ್ದುವು. ನೋಡುವುದಕ್ಕೆ ಬೀಭತ್ಸಕರವಾಗಿದ್ದ. ಕುಡಿದು ಮತ್ತೇರಿದವರಂತೆ ಅವನು ತೂರಾಡಿಕೊಂಡು ಹೊರಟ. ಇವನೇ ನನ್ನೊಳಗಿದ್ದ ಪಾಪಪುರುಷ ಎಂದು ನನಗೆ ಆಗ ಹೊಳೆಯಿತು. ಅಷ್ಟರಲ್ಲಿ ನನ್ನ ದೇಹದಿಂದ ಇನ್ನೊಬ್ಬ ವ್ಯಕ್ತಿ ಹೊರ ಬಂದ. ಈತ ಕಾಷಾಯವಸ್ತ್ರ ಧರಿಸಿದ್ದ, ಸೌಮ್ಯರೂಪಿಯಾಗಿದ್ದ. ತ್ರಿಶೂಲಧಾರಿ ಯಾಗಿದ್ದ ಈತ, ಎದುರಿಗಿದ್ದ ಪಾಪಪುರುಷನನ್ನು ಅಟ್ಟಿಸಿಕೊಂಡು ಹೋಗಿ ಇರಿದು ಕೊಂದುಹಾಕಿದ. ಆದಾದ ಮೇಲೆ ಕೆಲಕಾಲ ಉರಿತ ನಿಂತುಹೋಯಿತು." ಆದರೆ ರಾಮಕೃಷ್ಣರಿಗೆ ಈ ರೀತಿಯ ಉರಿತದ ಅನುಭವವು ಸಾಧನಾ ಕಾಲದಲ್ಲಿ ಮತ್ತೆರಡು ಸಲ ಮರುಕಳಿಸುವುದನ್ನು ನಾವು ನೋಡಲಿದ್ದೇವೆ.

ಈ ನಡುವೆ ಜಗನ್ಮಾತೆಯ ನಿರಂತರ ಸಾನ್ನಿಧ್ಯದ ಸುಖವನ್ನನುಭವಿಸುತ್ತ ರಾಮಕೃಷ್ಣರ ಭಕ್ತಿಯ ಉನ್ಮಾದ ದಿನದಿನಕ್ಕೂ ಅಧಿಕವಾಗುತ್ತ ಬಂದಿತು. ಅಂತಹ ಭಾವಪೂರ್ಣ ಸ್ಥಿತಿಯಲ್ಲಿ ಅವರು ದೇವಿಯ ಪೂಜೆಯನ್ನು ಹೇಗೆತಾನೆ ನಿರ್ವಹಿಸಿ ಯಾರು? ಅವರಿಗೀಗ ಬಾಹ್ಯಕರ್ಮಗಳ ಕಡೆಗೆ ಮನಸ್ಸು ಕೊಡುವುದು ಅಸಾಧ್ಯ ವಾಯಿತು. ಪೂಜೆ–ನೈವೇದ್ಯಗಳಿಗೆ ಸಂಬಂಧಿಸಿದಂತೆ ಸಮಯಪ್ರಜ್ಞೆಯೇ ಅವರಿ ಗಿರಲಿಲ್ಲ. ಯಾವಾಗಲೋ ನೈವೇದ್ಯ, ಯಾವಾಗಲೋ ಆರತಿ, ಮತ್ತಾವಾಗಲೋ ಪೂಜೆ! ಕೆಲವೊಮ್ಮೆ ಗಾಢಧ್ಯಾನದಲ್ಲಿ ಮಗ್ನರಾಗಿದ್ದಾಗ ತಮಗೂ ದೇವಿಗೂ ಭೇದವೇ ಕಾಣುತ್ತಿರಲಿಲ್ಲ. ಆಗ ಆಕೆಯ ಪೂಜೆಗೆಂದು ಇರಿಸಿದ್ದ ಹೂವು–ಗಂಧ ಗಳಿಂದ ತಮ್ಮನ್ನೇ ಅಲಂಕರಿಸಿಕೊಳ್ಳುತ್ತಾರೆ! 'ಅಮ್ಮಾ ಅಮ್ಮಾ' ಎನ್ನುತ್ತ ನೆಲದ ಮೇಲೆ ಬಿದ್ದು ಹೊರಳಾಡುತ್ತಾರೆ; ಮುಖವನ್ನು ನೆಲಕ್ಕೆ ಉಜ್ಜುತ್ತಾರೆ! ಮೈಯೆಲ್ಲ ತರಚಿ ರಕ್ತ ಹರಿಯುತ್ತಿದ್ದರೂ ಅದರ ಪರಿವೆಯೇ ಇಲ್ಲ. ನೀರಿನಿಂದಾಚೆ ತೆಗೆದ ಮೀನಿನಂತೆ ಮಾತೆಯ ದರ್ಶನಕ್ಕಾಗಿ ಚಡಪಡಿಸುತ್ತಾರೆ! ಉಸಿರಾಟ ಕಠಿಣವಾಗು ತ್ತದೆ! ಆ ಸ್ಥಿತಿಯಲ್ಲಿದ್ದಾಗ ಅವರಿಗೆ ನೀರಿನ ಮೇಲೆ ಕಾಲಿಟ್ಟರೂ ಗೊತ್ತಾಗುವುದಿಲ್ಲ, ಬೆಂಕಿ ತುಳಿದರೂ ಗೊತ್ತಾಗುವುದಿಲ್ಲ! ಆದರೆ ಮತ್ತೆ ದೇವಿಯ ದರ್ಶನವಾಗು ವುದೇ ತಡ, ಅವರ ಮನಸ್ಥಿತಿ ಸಂಪೂರ್ಣ ಬದಲಾಗಿಬಿಡುತ್ತಿತ್ತು. ಮುಖ ಆನಂದ ದಿಂದ ಬೆಳಗುತ್ತಿತ್ತು. ಅವರು ಬೇರೆಯೇ ವ್ಯಕ್ತಿಯಾಗಿ ಬಿಡುತ್ತಿದ್ದರು.

ರಾಮಕೃಷ್ಣರು ಜನರ ಕಣ್ಣಿಗೆ ಹೇಗೇ ಕಾಣಲಿ, ಮಥುರಾನಾಥನಿಗಂತೂ ಅವರ ಮೇಲೆ ಭಕ್ತಿವಿಶ್ವಾಸ ಬೆಳೆಯುತ್ತ ಹೋಯಿತೇ ಹೊರತು ಕಡಿಮೆಯಾಗ ಲಿಲ್ಲ. ಅಂದು ಅವರು ದೇವಿಗೆ ಪೂಜೆ ಮಾಡುವ ಪರಿಯನ್ನು ಕಂಡಮೇಲಂತೂ ಅವನ ಭಕ್ತಿ ಇಮ್ಮಡಿಯಾಯಿತು. ಮನೆಗೆ ಹಿಂದಿರುಗಿದ ಮಥುರ, ರಾಣಿ ರಾಸಮಣಿಯ ಮುಂದೆ ತಾನು ಕಂಡ ದೃಶ್ಯವನ್ನು ಉತ್ಸಾಹದಿಂದ ಬಣ್ಣಿಸಿದ. ರಾಸಮಣಿಗಂತೂ ಅದನ್ನು ಕೇಳಿ ಅತ್ಯಾನಂದ. ಈಗಾಗಲೇ ಅವಳಿಗೆ ಈ ಕಿರಿಯ

ಭಟ್ಟಾಚಾರ್ಯರ ಮೇಲೆ ಅಪಾರ ಅಭಿಮಾನವಿತ್ತು. ಮೊದಲನೆಯದಾಗಿ ಅವರು ರಾಮಕುಮಾರ ಭಟ್ಟಾಚಾರ್ಯರ ತಮ್ಮ ಎಂಬ ಕಾರಣಕ್ಕಾಗಿ; ಎರಡನೆಯದಾಗಿ, ರಾಧಾಗೋವಿಂದನ ವಿಗ್ರಹ ಭಿನ್ನಗೊಂಡಾಗ ಅವರು ನೀಡಿದ್ದ ತೀರ್ಪು ಮತ್ತು ವಿಗ್ರಹವನ್ನು ಜೋಡಿಸಿಕೊಟ್ಟ ಅವರ ಸಾಮರ್ಥ್ಯಕ್ಕಾಗಿ. ಅಲ್ಲದೆ ದಕ್ಷಿಣೇಶ್ವರಕ್ಕೆ ಬಂದಾಗಲೆಲ್ಲ ಆಕೆ ರಾಮಕೃಷ್ಣರಿಂದ ಹಾಡುಗಳನ್ನು ಹೇಳಿಸಿ ಸಂತೋಷಪಡುತ್ತಿದ್ದಳು. ಅವರು ದೇವಿಯ ವಿಶೇಷ ಕೃಪೆಗೆ ಪಾತ್ರರಾಗಿರುವುದರಲ್ಲಿ ಆಕೆಗೆ ಸಂದೇಹವೇ ಇರಲಿಲ್ಲ. ಹೀಗಿರುವಾಗ ಮಥುರ–ರಾಸಮಣಿಯರ ಈ ಭಕ್ತ್ಯಾದರ ಭಾವವನ್ನು ಕೆಡಿಸಿಬಿಡಬಹುದಾದಂತಹ ಒಂದು ಘಟನೆ ನಡೆಯಿತು.

ಅಂದು ರಾಸಮಣಿ ದಕ್ಷಿಣೇಶ್ವರಕ್ಕೆ ಬಂದಿದ್ದಾಳೆ. ಕೆಲಸಗಾರರು ಎಂದಿಗಿಂತ ಹೆಚ್ಚು ಚುರುಕಾಗಿದ್ದಾರೆ. ಪ್ರತಿದಿನ ಕೆಲಸ ತಪ್ಪಿಸುತ್ತಿದ್ದವರೂ ಅಂದು ಎಲ್ಲಿಲ್ಲದ ನಿಯತ್ತಿನಿಂದ ಕೆಲಸ ಮಾಡುತ್ತಿದ್ದಾರೆ. ರಾಸಮಣಿ ಗಂಗಾನದಿಯಲ್ಲಿ ಮಿಂದಳು; ಬಳಿಕ ನೇರವಾಗಿ ಭವತಾರಿಣಿಯ ದೇವಾಲಯಕ್ಕೆ ಬಂದಳು. ದೇವಿಯ ಅಲಂಕಾರ ಅರ್ಚನೆಗಳು ಮುಗಿದಿದ್ದುವು. ರಾಸಮಣಿ ಗರ್ಭಗುಡಿಯ ಸನಿಹಕ್ಕೆ ಬಂದು ಜಗನ್ಮಾತೆಗೆ ಪ್ರಣಾಮ ಸಲ್ಲಿಸಿದಳು. ಅಲ್ಲಿಯೇ ಇದ್ದ ರಾಮಕೃಷ್ಣರಿಗೂ ಶಿರಬಾಗಿ ನಮಿಸಿ ದೇವಿಯ ಮುಂದೆ ಕುಳಿತಳು. ತನ್ನ ನಿತ್ಯದ ಪೂಜೆಯನ್ನು ಅಂದು ಆಕೆ ಅಲ್ಲೇ ನೆರವೇರಿಸಲಿದ್ದಳು. ದಕ್ಷಿಣೇಶ್ವರಕ್ಕೆ ಬಂದಾಗಲೆಲ್ಲ ಅದೇ ಅವಳ ಕಾರ್ಯಕ್ರಮ —ದೇವಿಗೆ ತನ್ನ ಯತ್ಕಿಂಚಿತ್ ಪೂಜೆಯನ್ನು ಸಲ್ಲಿಸುವುದು; ಮತ್ತು 'ಕಿರಿಯ ಭಟ್ಟಾಚಾರ್ಯ'ರ ಗಂಧರ್ವಕಂಠದಿಂದ ಹೊಮ್ಮುವ ಹಾಡುಗಳನ್ನು ಕೇಳಿ ಮೈಮರೆಯುವುದು. ಆ ಗಾನಗಂಗೆಯಲ್ಲಿ ಮಿಂದು ಕಲ್ಕತ್ತಕ್ಕೆ ಮರಳಿದರೆ, ಮತ್ತೊಮ್ಮೆ ಬರುವವರೆಗೂ ಮನಸ್ಸು ತಂಪಾಗಿರುತ್ತದೆ. ದಿನವೆಲ್ಲ ಉದ್ಯೋಗ–ವ್ಯವಹಾರಗಳ ಗೋಜಲಿನಲ್ಲೇ ಮುಳುಗಿರಬೇಕಾದ ಅವಳ ಪಾಲಿಗೆ ಇದೊಂದು ಅಮೃತ ಘಳಿಗೆ.

ಎಂದಿನಂತೆ ರಾಸಮಣಿ, ದೇವೀಪರವಾದ ಹಾಡುಗಳನ್ನು ಹಾಡುವಂತೆ ರಾಮಕೃಷ್ಣರನ್ನು ವಿನಂತಿಸಿಕೊಂಡಳು. ಅವರು ಅದಕ್ಕೆ ಕೂಡಲೇ ಒಪ್ಪಿ ಹಾಡಲಾರಂಭಿಸಿದರು —ಆದರೆ ಆಕೆ ತನಗೆ ಅನ್ನ ಕೊಟ್ಟ ಧಣಿ ಎಂಬ ಕಾರಣಕ್ಕಲ್ಲ, ಆತ್ಮತೃಪ್ತಿಗಾಗಿ. ಮತ್ತು ತಮ್ಮ ಸರ್ವಸ್ವವೇ ಆದ ಆ ಕಾಳೀಮಾತೆಯ ಸಂತೋಷಕ್ಕಾಗಿ.

ಶ್ರೀರಾಮಕೃಷ್ಣರು ತಮ್ಮ ಮಧುರತಮ ಕಂಠಶ್ರೀಯಿಂದ ಕಮಲಾಕಾಂತ, ರಾಮಪ್ರಸಾದನೇ ಮೊದಲಾದವರ ಕೀರ್ತನೆಗಳನ್ನು ಭಾವಭರಿತರಾಗಿ ಹಾಡುತ್ತಿದ್ದಾರೆ. ರಾಸಮಣಿ ಅವುಗಳನ್ನು ಆಲಿಸುತ್ತ, ದೇವಿಗಾಗಿ ಹೂಗಳನ್ನು ಪೋಣಿಸಿ ಮಾಲೆ ತಯಾರಿಸುತ್ತ ಕುಳಿತಿದ್ದಾಳೆ. ಕಿವಿಗಳೇನೋ ಆಲಿಸುತ್ತಿವೆ; ಆದರೆ ಮನಸ್ಸು? ಅದು ಆಗಲೇ ಕಲ್ಕತ್ತಕ್ಕೆ ಓಡಿಹೋಗಿದೆ! ಏಕೆಂದರೆ ಅವಳದ್ದೊಂದು ಮೊಕದ್ದಮೆ ಕೋರ್ಟಿನಲ್ಲಿದೆ. ಅದರ ತೀರ್ಪು ಯಾವ ಕಡೆಗೆ ಆಗಬಹುದು? ಎಂಬ ಚಿಂತೆಯಲ್ಲಿ ಅವಳ ಮನಸ್ಸು ಮುಳುಗಿದೆ.... ಇದ್ದಕ್ಕಿದ್ದಂತೆ ಹಾಡು ನಿಂತು ಹೋಯಿತು. "ಛೆ! ಇಲ್ಲಿಯೂ ಅದೇ ಯೋಚನೆಯೇ?" ಎಂದು ಯಾರೋ ಗುಡುಗಿದಂತಾಯಿತು. ಮರುಕ್ಷಣದಲ್ಲೇ ಆಕೆಯ ಕೋಮಲ ಕಪೋಲದ ಮೇಲೆ

ಛಟೀರೆಂದು ಎರಡೇಟು ಬಿತ್ತು. ರಾಸಮಣಿ ನಡುಗಿ ತನ್ನ ಸ್ವಪ್ನಲೋಕದಿಂದ ಹೊರಬಂದಳು. ಏನಾಯಿತು...!? ಮತ್ತೇನಿಲ್ಲ, ಭಗವತಿಯ ಸನ್ನಿಧಿಯಲ್ಲೂ ಆಕೆ ತನ್ನ ಎಂದಿನ ಲೌಕಿಕ ಚಿಂತೆಯಲ್ಲೇ ತೊಡಗಿರುವುದನ್ನು ಕಂಡ ರಾಮಕೃಷ್ಣರು, ಆಕೆಯ ಗಮನವನ್ನು ಇತ್ತ ಸೆಳೆಯಲು ಸ್ವಲ್ಪ ಚುರುಕು ಮುಟ್ಟಿಸಿದ್ದರಷ್ಟೇ! ಪೆಟ್ಟು ತಿಂದ ರಾಸಮಣಿ ಮಾತೊಂದನ್ನೂ ಆಡದೆ ಲಜ್ಜೆಯಿಂದ ತಲೆತಗ್ಗಿಸಿ ಕುಳಿತಳು.

ಆದರೆ ಸುತ್ತಲಿದ್ದವರಿಗೆ ಇದೆಲ್ಲ ಏನು ಗೊತ್ತು? ಚಿಕ್ಕಪೂಜಾರಿಗಳು ರಾಸಮಣಿಯವರಿಗೆ ಕೆನ್ನೆಯ ಮೇಲೆ ಬಾರಿಸಿದ್ದೊಂದೇ ಗೊತ್ತು. ರಾಸಮಣಿಯ ಪರಿಚಾರಿಕೆಯರು, ದೇವಸ್ಥಾನದ ಕೆಲಸಗಾರರು ಎಲ್ಲರೂಒಟ್ಟಿಗೆ ಕಿರುಚಿಕೊಂಡರು –

"ಅಯ್ಯಯ್ಯೋ ಏನಾಯಿತು ಈ ಹುಚ್ಚುಪೂಜಾರಿಗೆ?"

"ಏನಿಲ್ಲ, ಸ್ವಲ್ಪ ಹುಚ್ಚು ಕೆರಳಿದೆ ಅಷ್ಟೆ!"

"ಏಕೆ ಸುಮ್ಮನೆ ನೋಡುತ್ತಿದ್ದೀರಿ? ಹಿಡಿದುಕೊಳ್ಳಿ ಅವರನ್ನು!"

ಈ ಗಲಾಟೆ ಕೇಳಿ ದೂರದಲ್ಲಿದ್ದ ದ್ವಾರಪಾಲಕನೂ ಓಡಿಬಂದ. ಆಚೆಕಡೆ ಇದ್ದ ಪಾರುಪತ್ಯಗಾರರೂ 'ಏನಿದು ಇದ್ದಕ್ಕಿದ್ದಂತೆ!' ಎಂದು ಕೂತೂಹಲದಿಂದ ಬಂದರು. ಎಲ್ಲರೂ ಒಂದೊಂದು ಮಾತಾಡಿದರು. ಗಲಭೆ ಮತ್ತಷ್ಟು ಹೆಚ್ಚಾಯಿತು. ಪೆಟ್ಟುಕೊಟ್ಟವರು, ಪೆಟ್ಟುತಿಂದವರು ಮಾತ್ರ ಶಾಂತವಾಗಿ ಕುಳಿತಿದ್ದರು.

ರಾಸಮಣಿ ಯೋಚಿಸುತ್ತಿದ್ದಳು: 'ಹೌದು. ನಾನು ಮಾಡಿದ್ದು ಅಪಚಾರವೇ ಸರಿ. ಇಂಥ ಪವಿತ್ರವಾದ ಸನ್ನಿಧಿಯಲ್ಲಿ ಕುಳಿತಿರುವಾಗ, ಅದರಲ್ಲೂ ದೇವಿಯ ಅರ್ಚಕರು ಎದುರಿಗೇ ಕುಳಿತು ಭಕ್ತಿಪರವಶರಾಗಿ ಹಾಡುತ್ತಿರುವಾಗ, ನಾನು ಯಾವುದೋ ಯಃಕಶ್ಚಿತ್ ವಿಚಾರದ ಕಡೆಗೆ ಗಮನ ಹರಿಸಿದ್ದೆನಲ್ಲ! ನನಗೆ ತಕ್ಕ ಶಿಕ್ಷೆಯೇ ಆಯಿತು.... ಆದರೆ ಎಲ್ಲರೆದುರಿಗೆ ಹೀಗಾಯಿತಲ್ಲ!' ನಾಚಿಕೆ, ಪಶ್ಚಾತ್ತಾಪಗಳಿಂದ ರಾಣಿ ಕುಗ್ಗಿಹೋದಳು. ಮರು ಘಳಿಗೆಯೇ ಇನ್ನೊಂದು ಯೋಚನೆ: 'ಶಿಕ್ಷೆಯಾದದ್ದೇನೋ ಸರಿಯೆ. ಆದರೆ ಭಟ್ಟಾಚಾರ್ಯರಿಗೆ ನನ್ನ ಮನದ ಗುಟ್ಟು ಹೇಗೆ ತಿಳಿಯಿತು? 'ಇಲ್ಲೂ ಅದೇ ಚಿಂತೆಯೇ?' ಎಂದುಬಿಟ್ಟರಲ್ಲ! ಸಾಮಾನ್ಯರಿಗೆ ಇದು ಸಾಧ್ಯವೆ? ಅದೂ ಅಲ್ಲದೆ, ಇವರೊಬ್ಬ ಸಾಧಾರಣ ವ್ಯಕ್ತಿಯಾಗಿದ್ದರೆ ನನ್ನ ಮೇಲೆ ಕೈಮಾಡುವ ಧಾರ್ಷ್ಟ್ಯ ತೋರುತ್ತಿದ್ದರೆ? ಇಲ್ಲ, ಇಲ್ಲ! ಖಂಡಿತವಾಗಿಯೂ ಜಗನ್ಮಾತೆಯೇ ಇವರ ಮೂಲಕ ನನ್ನನ್ನು ಶಿಕ್ಷಿಸಿದ್ದಾಳೆ. ಅದರಲ್ಲಿ ಸಂಶಯವಿಲ್ಲ.' ಅತ್ತ ರಾಮಕೃಷ್ಣರು ಇವಳ ಮನಸ್ಸಿನಲ್ಲಿ ನಡೆಯುತ್ತಿರುವುದನ್ನೆಲ್ಲ ಕಾಣುತ್ತಿದ್ದಾರೋ ಎಂಬಂತೆ ತಮ್ಮಷ್ಟಕ್ಕೆ ಕಣ್ಣುಮುಚ್ಚಿ ಕುಳಿತಿದ್ದಾರೆ; ಮುಖದಲ್ಲೊಂದು ಕಿರುನಗು.

ಅಷ್ಟು ಹೊತ್ತಿಗೆ ರಾಣಿ ಸುತ್ತಲಿನ ಗಲಭೆಯನ್ನು ಕೇಳಿ ಎಚ್ಚರಗೊಂಡಳು. ಎಲ್ಲರೂ ಸೇರಿ ಚಿಕ್ಕಪೂಜಾರಿಯನ್ನು ಹಿಡಿಯಲು ಸನ್ನದ್ಧರಾಗಿದ್ದಾರೆ; ಆದರೆ ರಾಣಿಯವರೇ ಶಾಂತವಾಗಿ ಕುಳಿತಿರುವುದನ್ನು ಕಂಡು ಏನು ಮಾಡಲೂ ತೋಚದೆ ನಿಂತಿದ್ದಾರೆ. ರಾಸಮಣಿಗೆ ಪರಿಸ್ಥಿತಿ ಅರ್ಥವಾಯಿತು. ತಾನಿನ್ನು ಸುಮ್ಮನಿದ್ದರೆ ಈ ಜನ ರಾಮಕೃಷ್ಣರಿಗೆ ಏನು ಮಾಡಿದರೂ ಆಶ್ಚರ್ಯವಿಲ್ಲ. ಕೂಡಲೇ ಗಂಭೀರಧ್ವನಿಯಲ್ಲಿ ನುಡಿದಳು:

"ಇಲ್ಲಿ ನೋಡಿ, ಭಟ್ಟಾಚಾರ್ಯರದು ಏನೂ ತಪ್ಪಿಲ್ಲ. ಯಾರೂ ಅವರ ತಂಟೆಗೆ ಹೋಗಬಾರದು, ತಿಳಿಯಿತೆ ? ನಿಮ್ಮ ನಿಮ್ಮ ಕೆಲಸಕ್ಕೆ ನೀವಿನ್ನು ಹೊರಟು ಬಿಡಿ."

ಕೂಡಲೇ ಅಧಿಕಾರಿಗಳು, ಕೆಲಸಗಾರರು ಎಲ್ಲ ಹಿಮ್ಮೆಟ್ಟಿದರು. ರಾಸಮಣಿ ಜಗನ್ಮಾತೆಗೆ ನಮಸ್ಕರಿಸಿ ಅಲ್ಲಿಂದ ಹೊರಟಳು. ಬಳಿಕ ಅವಳಿಂದ ಮಥುರನಾಥನಿಗೆ ಇಡೀ ವೃತ್ತಾಂತ ತಿಳಿಯಿತು. ರಾಣಿಯವರ ತೀರ್ಮಾನ ಸರಿಯೆಂದೇ ಅವನಿಗೂ ತೋರಿತು. "ನೀವು ಹಾಗೆ ಮಾಡಿದ್ದು ಬಹಳ ಒಳ್ಳೆಯದಾಯಿತು" ಎಂದು ಅವಳನ್ನು ಬೆಂಬಲಿಸಿದ. ಆದರೆ ಬಾಬುಗಳು ಅರ್ಚಕರ ಮೇಲೆ ಯಾವ ಕ್ರಮ ವನ್ನೂ ಕೈಗೊಳ್ಳದ್ದನ್ನು ಕಂಡು ಕೆಲವರಿಗೆ ವ್ಯೆಯುರಿಯಿತು. 'ಮನಸ್ಸಿಗೆ ಬಂದಂತೆ ಮಾಡಿಯೂ ತಪ್ಪಿಸಿಕೊಳ್ಳುತ್ತಾನಲ್ಲ ಈ ಪೂಜಾರಿ!' ಎಂದು ಅವುಡುಗಚ್ಚಿದರು. ಕಡೆಗೆ, 'ಹೇಗಾದರೂ ಹಾಳಾಗಿ ಹೋಗಲಿ. ಈ ದೊಡ್ಡವರ ಮಧ್ಯೆ ತಲೆ ಹಾಕಿದರೆ ನಮ್ಮ ತಲೆಯೇ ಉರುಳೀತು' ಎಂದುಕೊಂಡು ಸುಮ್ಮನಾದರು.

ಕೆಲಕಾಲ ರಾಮಕೃಷ್ಣರ ಪೂಜೆ ಹೀಗೇ ನಡೆಯಿತು. ಆದರೆ ಬರಬರುತ್ತ ಅವರು ಭಕ್ತ್ಯಾಧಿಕ್ಯದಿಂದಾಗಿ ಯಾವ ಬಗೆಯ ಕೆಲಸಕಾರ್ಯಗಳ ಕಡೆಗೂ ಗಮನ ಕೊಡಲು ಅಸಮರ್ಥರಾದರು. ಅವರಿಗೂ ಈ ಬಗ್ಗೆ ಅರಿವಿದ್ದೇ ಇತ್ತು. ಅವರ ಈ ಸ್ಥಿತಿಯನ್ನು ಗಮನಿಸಿ ಮಥುರ ಚಿಂತೆಗೀಡಾಗಿದ್ದ. ಇದು ಯಾವುದೋ ದೈಹಿಕ ಬೇನೆಯ ಲಕ್ಷಣವಿರಬಹುದೆ ? ಅಥವಾ, ಅತಿಯಾದ ಸಾಧನೆಯಿಂದಾಗಿ ಬುದ್ಧಿ ಪಲ್ಲಟವಾಗಿದ್ದರೂ ಇರಬಹುದೆ ? ಆದರೆ ಮಥುರ ಅವರ ಆಧ್ಯಾತ್ಮಿಕ ಶಕ್ತಿಯನ್ನೂ ಚೆನ್ನಾಗಿ ಅರಿತಿದ್ದ. ಆದ್ದರಿಂದ ಅವರ ವಿಚಿತ್ರ ವರ್ತನೆಗೆ ಸರಿಯಾದ ಕಾರಣವನ್ನು ಊಹಿಸಲಾರದವನಾದ. ಅವನು ಸ್ವಯಂ ರಾಮಕೃಷ್ಣರೊಂದಿಗೇ ಆಗಾಗ ಈ ಕುರಿತಾಗಿ ಚರ್ಚಿಸುತ್ತಿದ್ದ. ಮಥುರನಾದರೂ ಸಾಮಾನ್ಯನೇನಲ್ಲ. ಅವನು ಸಾಕಷ್ಟು ಬುದ್ಧಿವಂತ. ಆದರೆ ಅವನು ರಾಮಕೃಷ್ಣರನ್ನು ಅರಿಯಲು ಪ್ರಯತ್ನಿಸಿದಷ್ಟೂ ಅವರು ಇನ್ನಷ್ಟು ನಿಗೂಢರಾದರು. ದಿನದಿನಕ್ಕೂ ಅವರ ವರ್ತನೆ ಮತ್ತಷ್ಟು ವಿಚಿತ್ರವಾಯಿತು. ಒಂದು ದಿನ ಅವರು ತಮ್ಮೊಳಗೇ ಜಗನ್ಮಾತೆಯನ್ನು ಕಂಡು ತಾವೇ ಆಕೆಯ ಪೀಠದ ಮೇಲೆ ಕುಳಿತುಬಿಟ್ಟರು; ಪೂಜಾ ಸಾಮಗ್ರಿಗಳನ್ನೆಲ್ಲ ಬಳಸಿಕೊಂಡು ತಮಗೆ ತಾವೇ ಪೂಜೆ ಆರತಿ ನೈವೇದ್ಯಗಳನ್ನು ಸಲ್ಲಿಸಿಕೊಂಡರು ! ಹಿಂದಿನ ದಿನವಷ್ಟೇ ಜಗನ್ಮಾತೆಗೆ ಮೂರು ಗಂಟೆಕಾಲ ನಿರಂತರವಾಗಿ ಆರತಿ ಮಾಡಿ, ಅಧಿಕಾರಿಗಳಿಗೆಲ್ಲ ಭಾರೀ ತಲೆನೋವು ತರಿಸಿದ್ದರು ! ಮತ್ತು ಅದಕ್ಕೆ ಎರಡು ದಿನಗಳ ಹಿಂದೆ, ತಮಗೆ ದೇವಿಯ ನಿರಂತರ ದರ್ಶನವಾಗುತ್ತಿಲ್ಲವಲ್ಲ ಎಂಬ ದುಃಖದಿಂದ ಮುಖವನ್ನು ನೆಲಕ್ಕೆ ತಿಕ್ಕುತ್ತ ಹೃದಯವಿದ್ರಾವಕವಾಗಿ ಅತ್ತು ಜನ ನೆರೆಯುವಂತೆ ಮಾಡಿದ್ದರು ! ಇಂತಹ ಘಟನೆಗಳು ಇನ್ನೆಷ್ಟೋ ! ರಾಸಮಣಿಗೆ ಅವರು 'ಶಿಕ್ಷೆ' ನೀಡಿದ ಘಟನೆಯಾದ ಮೇಲೆ ಇಂಥವು ಇನ್ನೂ ಹೆಚ್ಚಾದುವು. ಇದನ್ನೆಲ್ಲ ಪ್ರತಿದಿನವೂ ನೋಡುತ್ತ ಮಥುರನಿಗೆ ಅನ್ನಿಸಿತ್ತು —ಬಹುಶಃ ಅತಿಯಾದ ಸಾಧನೆಯಿಂದ ಇವರ ನರಮಂಡಲದಲ್ಲಿ ಅಥವಾ ಇಡೀ ಶರೀರದಲ್ಲಿ ಏನೋ

ಹೆಚ್ಚುಕಡಿಮೆಯಾಗಿದೆ ಎಂದು. ಆದರೆ ಇಷ್ಟಾದರೂ ಅವರ ಬಗ್ಗೆ ಅವನ ಪ್ರೀತಿ, ಗೌರವ, ಭಕ್ತಿ ಮಾತ್ರ ಒಂದಿನಿತೂ ಕಡಿಮೆಯಾಗಲಿಲ್ಲ. ಅವರಿಗೇನೇನು ಬೇಕಾಗುತ್ತಿತ್ತೋ ಅದನ್ನೆಲ್ಲ ತಕ್ಷಣವೇ ಒದಗಿಸಿಕೊಡುತ್ತಿದ್ದ. ಅಲ್ಲದೆ, ಅವರಿಗೇನು ಬೇಕಾಗಬಹುದೆಂದು ತನಗೆ ಅನ್ನಿಸುತ್ತಿತ್ತೋ ಅದನ್ನೂ ತಂದೊದಗಿಸುತ್ತಿದ್ದ. ಉದಾಹರಣೆಗೆ ಅವರ ಶರೀರವು 'ವಾತ' ಪ್ರಧಾನವಾದದ್ದು ಎಂದು ಅರಿತು, ಅವರಿಗೆ ಪ್ರತಿ ದಿನವೂ ಕಲ್ಲುಸಕ್ಕರೆ ಪಾನಕ ಕೊಡಿಸುವ ವ್ಯವಸ್ಥೆ ಮಾಡಿಸಿದ. ಕಲ್ಕತ್ತದ ಪ್ರಸಿದ್ಧ ವೈದ್ಯನಾದ ಗಂಗಾಪ್ರಸಾದ ಸೇನನ ಕೈಯಲ್ಲಿ ಅವರಿಗೆ ಚಿಕಿತ್ಸೆ ಪ್ರಾರಂಭಿಸಿದ. ಅಲ್ಲದೆ ಅವರು ಭಕ್ತಿಯ ಆವೇಶದಲ್ಲಿರುವಾಗ ಅವರಿಗೆ ತೊಂದರೆಯಾಗಬಹುದೆಂದು ಬಾವಿಸಿ, ಅಂತಹ ಸನ್ನಿವೇಶದಿಂದಲೂ ಅವರನ್ನು ರಕ್ಷಿಸಲು ತಾನೇ ಸನ್ನದ್ಧನಾಗಿರುತ್ತಿದ್ದ. ಇದಕ್ಕೊಂದು ಉದಾಹರಣೆಯೂ ಇದೆ.

ಒಂದು ದಿನ ಶ್ರೀರಾಮಕೃಷ್ಣರು ಕಾಳೀ ದೇವಾಲಯದ ಪ್ರಾಕಾರದಲ್ಲಿರುವ ಒಂದು ಶಿವದೇವಾಲಯದಲ್ಲಿ ಶಿವಭಾವರಂಜಿತರಾಗಿ 'ಶಿವಮಹಿಮ್ನ ಸ್ತೋತ್ರ'ವನ್ನು ಹಾಡುತ್ತಿದ್ದರು. ಶಿವನ ಮಹಿಮೆಯನ್ನು ನಾನಾ ಪರಿಯಾಗಿ ಬಣ್ಣಿಸಿ ಕಡೆಗೆ ಈ ಶ್ಲೋಕಕ್ಕೆ ಬಂದರು —

**ಅಸಿತಗಿರಿಸಮಂ ಸ್ಯಾತ್ ಕಜ್ಜಲಂ ಸಿಂಧುಪಾತ್ರೇ**
**ಸುರತರುವರಶಾಖಾ ಲೇಖನೀ ಪತ್ರಮುರ್ವೀ ।**
**ಲಿಖತಿ ಯದಿ ಗೃಹೀತ್ವಾ ಶಾರದಾ ಸರ್ವಕಾಲಂ**
**ತದಪಿ ತವ ಗುಣಾನಾಮೀಶ ಪಾರಂ ನ ಯಾತಿ ।।**

"ಓ ಶಿವನೇ, ಮಹತ್ತಾದ ನೀಲಪರ್ವತವೇ ಮಸಿಯಾಗಿ, ಸಾಗರವೇ ಮಸಿ ಕುಡಿಕೆಯಾಗಿ, ಕಲ್ಪವೃಕ್ಷದ ಕೊಂಬೆಯೇ ಲೇಖನಿಯಾಗಿ, ಈ ಭೂಮಿಯೇ ಓಲೆಗರಿಯಾಗಿ, ಈ ಎಲ್ಲ ಸಲಕರಣೆಗಳ ನೆರವಿನಿಂದ ಸಾಕ್ಷಾತ್ ಸರಸ್ವತೀ ದೇವಿಯೇ ಅನಂತ ಕಾಲದವರೆಗೆ ಬರೆದರೂ ನಿನ್ನ ಗುಣಮಹಿಮೆಯನ್ನು ಪೂರ್ಣವಾಗಿ ಬಣ್ಣಿಸಲು ಅಸಾಧ್ಯ."

ಅತ್ಯಂತ ಅರ್ಥವತ್ತಾದ ಈ ಶ್ಲೋಕವನ್ನು ಪಠಿಸುವಷ್ಟರಲ್ಲಿ ರಾಮಕೃಷ್ಣರು ಸಂಪೂರ್ಣ ಭಾವಾವಿಷ್ಟರಾಗಿಬಿಟ್ಟರು. ಭಗವಂತನ ಗುಣ ಮಹಿಮೆಯನ್ನು ಭಾವಿಸುತ್ತ ಅವರಿಗೆ ಬೇರೆಲ್ಲವೂ ಮರೆತುಹೋಯಿತು. ಈಗ ಅವರಿಗೆ ತಾವು ಹೇಳುತ್ತಿದ್ದ ಶ್ಲೋಕ, ಅದರ ಅರ್ಥ, ತಾವು ನಿಂತಿರುವ ಸ್ಥಳ ಒಂದೂ ನೆನಪಿನಲ್ಲುಳಿಯಲಿಲ್ಲ. "ಓ ಮಹಾಮಹಿಮ, ನಾನು ನಿನ್ನ ಮಹಿಮೆಯನ್ನೆಂತು ಬಣ್ಣಿಸಲಿ!" ಎಂದು ಮತ್ತೆಮತ್ತೆ ಗಟ್ಟಿಯಾಗಿ ಕೂಗತೊಡಗಿದರು. ಕಂಗಳಿಂದ ನೀರು ಧಾರಾಕಾರವಾಗಿ ಹರಿದು ಎದೆ ಬಟ್ಟೆಗಳು ತೊಯ್ದು, ಕಡೆಗೆ ನೆಲವೂ ಒದ್ದೆಯಾಯಿತು! ಗದ್ಗದ ಕಂಠದಿಂದ ಆಡಿದ ಆ ಮಾತುಗಳು, ಅಳುವ ಶಬ್ದ — ಇದನ್ನೆಲ್ಲ ಕೇಳಿ ದೇವಾಲಯದ ಕೆಲಸಗಾರರೂ ಅಧಿಕಾರಿಗಳೂ ಎಲ್ಲ ಕಡೆಗಳಿಂದ ಓಡಿಬಂದರು. ಬಂದು ನೋಡಿದರೆ... ರಾಮಕೃಷ್ಣರು ಭಕ್ತ್ಯಾವೇಶಭರದಿಂದ ಶಿವನ ಮುಂದೆ ಕೈಮುಗಿದು ನಿಂತು ಗಟ್ಟಿಯಾಗಿ ಏನೋ ಉದ್ಗರಿಸುತ್ತಿದ್ದಾರೆ! 'ಇದೇನಿದು ವಿಚಿತ್ರ' ಎಂದು ಕೆಲವರು

ಆಶ್ಚರ್ಯಪಟ್ಟು ಮುಂದೇನಾಗುವುದೋ ನೋಡೋಣವೆಂದು ನಿಂತರು. "ಅಯ್ಯೋ ! ಏನಾಯಿತೋ ಎಂದುಕೊಂಡು ಓಡಿಬಂದೆ. ಇಷ್ಟೇನೆ!" ಎಂದು ಒಬ್ಬನೆಂದರೆ, "ಅಷ್ಟೆ ಅಷ್ಟೆ; ಯಾವಾಗಲೂ ಈ ಪೂಜಾರಿಗೆ ಹುಚ್ಚು, ಇಂದು ಸ್ವಲ್ಪ ಹೆಚ್ಚು. ಮತ್ತೇನಿಲ್ಲ" ಎಂದ ಮತ್ತೊಬ್ಬ. ಅದಕ್ಕೆ ಇನ್ನೊಬ್ಬನೆಂದ, "ಅರೇ, ಸ್ವಲ್ಪ ಕಾದು ನೋಡಿ! ಇನ್ನೂ ತುಂಬಾ ತಮಾಷೆ ಇದೆ. ಅಗೋ, ಈಗವನು ಶಿವನ ಹೆಗಲ ಮೇಲೆಯೇ ಹತ್ತಿಬಿಡುವಂತೆ ಕಾಣುತ್ತಿದೆ!" ಇದನ್ನು ಕೇಳಿ ಎಲ್ಲರೂ ಜೋರಾಗಿ ನಕ್ಕರು.

ಹೀಗೆ ಸುತ್ತಲೂ ನೆರೆದಿದ್ದ ಜನ ಮನಸ್ಸಿಗೆ ಬಂದಂತೆ ಮಾತನಾಡುತ್ತ ಕೇಕೆ ಹಾಕಿಕೊಂಡು ನಗುತ್ತಿದ್ದರೆ ಶ್ರೀರಾಮಕೃಷ್ಣರಿಗೆ ಮಾತ್ರ ಅದೊಂದೂ ಕೇಳಿಸುತ್ತಲೇ ಇಲ್ಲ. ಶಿವನಮಹಿಮೆಯನ್ನು ಭಾವಿಸಿ ಬಣ್ಣಿಸುತ್ತ ಅವರ ಮನಸ್ಸು ಇಹಲೋಕ ದಿಂದಾಚೆಗೆ ಹೊರಟುಹೋಗಿತ್ತು. ಇಂಥ ಕ್ಷುಲ್ಲಕವಾದ ಮಾತುಗಳು ಅಲ್ಲಿಯವರೆಗೆ ಹೇಗೆ ಹೋದಾವು ?

ಆ ಸಮಯದಲ್ಲಿ ಮಥುರನಾಥ ಕಾಳೀದೇವಾಲಯಕ್ಕೇ ಬಂದಿದ್ದ. ಭಟ್ಟಾ ಚಾರ್ಯರ ಸಂಬಂಧವಾಗಿ ಏನೋ ಗಲಾಟೆ ನಡೆಯುತ್ತಿದೆ ಎಂದು ಗೊತ್ತಾಯಿತು. ಮರುಕ್ಷಣವೇ ಆ ಸ್ಥಳಕ್ಕೆ ನುಗ್ಗಿದ. ಕೂಡಲೆ ಸದ್ದೆಲ್ಲ ಅಡಗಿಹೋಯಿತು. ಅಧಿಕಾರಿಗಳು ಗೌರವದಿಂದ ಬದಿಗೆ ಸರಿದು ದಾರಿಮಾಡಿಕೊಟ್ಟರು. ಮಥುರ ಮುಂದೆ ಬಂದು ನಿಂತ. ರಾಮಕೃಷ್ಣರ ಆ ದಿವ್ಯಭಾವವನ್ನು ಕಂಡು ರೋಮಾಂಚನ ಗೊಂಡ. ಮಥುರಬಾಬು ಮಾತಿಲ್ಲದೆ ಅವರನ್ನೇ ದಿಟ್ಟಿಸುವುದನ್ನು ಕಂಡು ಒಬ್ಬ ನುಡಿದ:

"ಬಾಬುಗಳೇ, ಭಟ್ಟಾಚಾರ್ಯರನ್ನು ಬಲವಂತವಾಗಿ ಎಳೆದು ತರುವು ದೊಂದೇ ಉಪಾಯವೆಂದು ಕಾಣುತ್ತದೆ."

ಹಾಗೆಂದವನತ್ತ ನೋಡದೆಯೇ ಮಥುರ ಗಂಭೀರವಾಗಿ ಗುಡುಗಿದ:

"ಯಾವನಿಗೆ ಜೀವದ ಮೇಲೆ ಆಸೆ ಉಳಿದಿಲ್ಲವೋ ಅವನು ಮಾತ್ರ ಈಗ ಭಟ್ಟಾಚಾರ್ಯರನ್ನು ಮುಟ್ಟಲಿ!"

ಎಲ್ಲರ ಉಸಿರೂ ಅಡಗಿಹೋಯಿತು. ಜನ ಕಣ್ಸನ್ನೆಯಲ್ಲೇ ಮಾತನಾಡಿ ಕೊಂಡರು. ಬಳಿಕ ಸ್ವಲ್ಪ ಹೊತ್ತಿನಲ್ಲೇ ರಾಮಕೃಷ್ಣರು ಬಹಿರ್ಮುಖರಾದರು. ಅಧಿಕಾರಿಗಳೊಂದಿಗೆ ಮಥುರಾನಾಥ ಅಲ್ಲಿ ಮೌನವಾಗಿ ನಿಂತಿರುವುದನ್ನು ಕಂಡರು. ಅವರೆಲ್ಲ ನೋಡುತ್ತಿರುವುದು ತಮ್ಮನ್ನೇ ಎಂಬ ಅರಿವಾಯಿತು. ಬಾಲಕನಂತೆ ಬೆದರಿ, "ನಾನು ಬಾಹ್ಯಪ್ರಜ್ಞೆಯಿಲ್ಲದೆ ನಿಂತಿದ್ದಾಗ ಏನಾದರೂ ತಪ್ಪು ಮಾಡಿ ದೆನೆ ?" ಎಂದು ಕೇಳಿದರು. ಮಥುರ ಅವರಿಗೆ ನಮಸ್ಕರಿಸಿ ನುಡಿದ, "ಇಲ್ಲ ಇಲ್ಲ. ನೀವೊಂದು ಸ್ತೋತ್ರ ಹೇಳುತ್ತಿದ್ದಿರಿ. ಯಾರಾದರೂ ತಿಳಿಯದೆ ನಿಮಗೆ ತೊಂದರೆ ಕೊಟ್ಟಾರು ಎಂದು ನಾನಿಲ್ಲೇ ನಿಂತಿದ್ದೆ, ಅಷ್ಟೆ." ಹೀಗೆ ಅವನ ದೆಸೆಯಿಂದಾಗಿ ಅಂದು ಶ್ರೀರಾಮಕೃಷ್ಣರಿಗೆ ತೊಂದರೆಯಾಗುವುದು ತಪ್ಪಿತು. ಮಥುರಬಾಬು ಅಲ್ಲಿಂದ ಹೊರಟ ಮೇಲೆಯೇ ನೆರೆದಿದ್ದ ಜನರೆಲ್ಲ ಉಸಿರು ಬಿಟ್ಟಿದ್ದು.

# ಸೀತಾದರ್ಶನಯೋಗ

ಶ್ರೀರಾಮಕೃಷ್ಣರು ದಿವ್ಯೋನ್ಮತ್ತ ಸ್ಥಿತಿಯನ್ನು ತಲುಪಿ, ಪೂಜಾದಿಗಳನ್ನು ನಿರ್ವಹಿಸಲು ಅಸಮರ್ಥರಾದಾಗ ಮಥುರಾನಾಥ ತಾತ್ಕಾಲಿಕವಾಗಿಯಾದರೂ ಅವರ ಬದಲಾಗಿ ಯಾರನ್ನಾದರೂ ನೇಮಿಸಬೇಕಾಗಿ ಬಂದಿತು. ಇದೇ ವೇಳೆಗೆ (೧೮೫೮) ರಾಮಕೃಷ್ಣರ ಚಿಕ್ಕಪ್ಪನ ಮಗನಾದ ರಾಮತಾರಕ ಎಂಬವನು ಕೆಲಸ ಹುಡುಕಿಕೊಂಡು ದಕ್ಷಿಣೇಶ್ವರಕ್ಕೆ ಬಂದ. ಇವನು ವಯಸ್ಸಿನಲ್ಲಿ ಅವರಿಗಿಂತಲೂ ಹಿರಿಯ. ಅವರು ಇವನನ್ನು ಹಲಧಾರಿ ಎಂದು ಕರೆಯುತ್ತಿದ್ದರು. ಈತ ಒಳ್ಳೇ ಪಂಡಿತ, ಸಾಧಕ. ಶಾಸ್ತ್ರೋಕ್ತ ವಿಧಿನಿಯಮಗಳಲ್ಲಿ ನಿಷ್ಠೆಯುಳ್ಳವನು. ಶ್ರೀಮದ್ಭಾಗವತ, ಅಧ್ಯಾತ್ಮರಾಮಾಯಣ ಮೊದಲಾದ ಗ್ರಂಥಗಳಲ್ಲಿ ಪಾರಂಗತ. ಅಲ್ಲದೆ ಆ ಗ್ರಂಥಗಳನ್ನು ನಿತ್ಯವೂ ಪಾರಾಯಣ ಮಾಡುತ್ತಿದ್ದ. ಮಥುರನಿಗೆ ಈ ಹಲಧಾರಿ ಒಪ್ಪಿಗೆಯಾದ. ಆದ್ದರಿಂದ ರಾಮಕೃಷ್ಣರಿಗೆ ಬದಲಾಗಿ ಹಲಧಾರಿಯನ್ನು ಕಾಳೀ ದೇವಾಲಯದ ಅರ್ಚಕನನ್ನಾಗಿ ನೇಮಿಸಲು ಉದ್ಯುಕ್ತನಾದ. ಹಲಧಾರಿ ಮೂಲತಃ ವಿಷ್ಣುಭಕ್ತ. ಆದರೆ ಅವನಿಗೆ ದೇವಿಯ ಮೇಲೆ ದ್ವೇಷವೇನಿರಲಿಲ್ಲ. ಮಥುರನ ಕೋರಿಕೆಗೆ ಸಂತೋಷದಿಂದ ಒಪ್ಪಿದ.

ಹಲಧಾರಿ ತನ್ನ ಆಹಾರಾದಿಗಳ ವಿಷಯದಲ್ಲಿ ತುಂಬ ಕಟ್ಟುನಿಟ್ಟು. ಅವನು ಸ್ವಪಾಕವನ್ನಲ್ಲದೆ ಬೇರೇನನ್ನೂ ಉಣ್ಣುತ್ತಿರಲಿಲ್ಲ. ಈಗ ಅವನು ಕಾಳೀದೇವಾಲಯದ ಅರ್ಚಕನಾಗಿ ನೇಮಕಗೊಳ್ಳುವಾಗಲೂ ತನ್ನ ಬೇಡಿಕೆಯನ್ನು ಮುಂದಿಟ್ಟ —ತನಗೆ ಸ್ವಂತ ಅಡಿಗೆ ಮಾಡಿಕೊಳ್ಳಲು ಪಡಿ ಒದಗಿಸಿಕೊಡಬೇಕು ಎಂದು. ಮಥುರ ಮೊದಲು ಅದಕ್ಕೆ ಒಪ್ಪಲಿಲ್ಲ. ಹೇಳಿದ:

"ಏಕೆ, ನಿಮ್ಮ ಸೋದರ ರಾಮಕೃಷ್ಣರೂ ಅಳಿಯ ಹೃದಯರಾಮರೂ ದೇವಸ್ಥಾನದಲ್ಲೇ ಪ್ರಸಾದ ತೆಗೆದುಕೊಳ್ಳುತ್ತಾರೆ. ಹಾಗಿರುವಾಗ ನೀವೂ ಅಲ್ಲೇ ತೆಗೆದುಕೊಳ್ಳಲು ಅಭ್ಯಂತರವೇನು ?"

ಇದಕ್ಕೆ ಬುದ್ಧಿವಂತನಾದ ಹಲಧಾರಿ ಕೊಟ್ಟ ಉತ್ತರ ಸ್ವಾರಸ್ಯಕರವಾಗಿದೆ. ಅವನೆಂದ:

"ಇಲ್ಲ, ಇಲ್ಲ; ನನ್ನ ವಿಷಯವೇ ಬೇರೆ, ಅವರ ವಿಷಯವೇ ಬೇರೆ. ಹೃದಯರಾಮನೋ ಈ ನೀತಿನಿಯಮಗಳನ್ನೆಲ್ಲ ಇಟ್ಟುಕೊಂಡವನೇ ಅಲ್ಲ. ಆದ್ದರಿಂದ ಅವನು ಎಂತಹ ಪರಿಸ್ಥಿತಿಗೂ ಒಗ್ಗಿಕೊಳ್ಳಬಲ್ಲ. ಇನ್ನು ರಾಮಕೃಷ್ಣನಾದರೋ

ಅತ್ಯುನ್ನತ ಆಧ್ಯಾತ್ಮಿಕ ಸ್ಥಿತಿಯಲ್ಲಿರುವವನು. ಅವನಿಗಂತೂ ಯಾವ ದೋಷವೂ ತಗಲಲಾರದು. ಆದರೆ ನನ್ನ ವಿಷಯದಲ್ಲಿ ಹಾಗಾಗುವುದಿಲ್ಲ. ನಾನು ಆಹಾರದ ವಿಷಯದಲ್ಲಿ ವ್ರತಭಂಗ ಮಾಡಿದರೆ ತಪ್ಪಾಗುತ್ತದೆ.''

ಹಲಧಾರಿಯ ನಿಷ್ಠೆ ಮಥುರನಿಗೆ ಮೆಚ್ಚುಗೆಯಾಯಿತು. ಅಂದಿನಿಂದ ಅವನು ಕಾಳೀದೇವಾಲಯದ ಅರ್ಚಕನಾಗಿ ನೇಮಕಗೊಂಡ. ಅವನು ದೇವಾಲಯದ ಉಗ್ರಾಣದಿಂದ ತನಗೆ ಬೇಕಾದ ದವಸ ಧಾನ್ಯಗಳನ್ನು ಪಡೆದುಕೊಳ್ಳುತ್ತಿದ್ದ. ಬಳಿಕ ಪಂಚವಟಿಯ ಬಳಿಯಲ್ಲಿ ತಾನೇ ಬೇಯಿಸಿಕೊಂಡು ಊಟ ಮಾಡುತ್ತಿದ್ದ.

ಹಲಧಾರಿ ದೇವಿಯ ಪೂಜೆಯನ್ನೇನೋ ಮಾಡಿಕೊಂಡು ಬಂದ. ಆದರೆ ಅವನಿಗೆ ಪಶುಬಲಿಯೆಂದರೆ ಆಗುತ್ತಿರಲಿಲ್ಲ. ಉತ್ಸವದ ದಿನಗಳಲ್ಲಿ ಕಾಳಿಗೆ ಪಶುಬಲಿ ನೀಡುವುದು ವಾಡಿಕೆ. ಅಂತಹ ಸಂದರ್ಭಗಳಲ್ಲಿ ಅವನು ತನ್ನ ಇಚ್ಛೆಗೆ ವಿರುದ್ಧವಾಗಿ ನಡೆದುಕೊಳ್ಳಬೇಕಾಯಿತು. ಈ ರೀತಿ ಅರೆಮನಸ್ಸಿನಿಂದ ಒಂದು ತಿಂಗಳ ಕಾಲ ಅವನು ಪೂಜೆಯನ್ನು ನಿರ್ವಹಿಸಿದ. ಈ ಬಗೆಯ ಪೂಜೆಯಿಂದ ಕಾಳಿಗೆ ಸಂತೋಷವಾದೀತೆ ? ಒಂದು ದಿನ ಅವನು ಸಂಧ್ಯಾವಂದನೆಗೆ ಕುಳಿತಿದ್ದಾಗ ರೌದ್ರಾಕಾರ ತಾಳಿದ ದೇವಿಯನ್ನು ಕಂಡ. ''ಮೊದಲು ಇಲ್ಲಿಂದ ಎದ್ದು ತೊಲಗು ! ನೀನು ನನ್ನ ಪೂಜೆಯನ್ನು ಮಾಡಬೇಡ. ಹಾಗೇನಾದರೂ ಮಾಡಿದೆಯೋ ನಿನ್ನ ಮಗ ಸತ್ತುಹೋಗುತ್ತಾನೆ, ಎಚ್ಚರಿಕೆ !'' ಎಂದು ಆಕೆ ಗುಡುಗಿದಂತಾಯಿತು. ಹಲಧಾರಿ ಮೊದಲು ಸ್ವಲ್ಪ ಭಯಪಟ್ಟ. ಆದರೆ ಆಮೇಲೆ ಇದು ತನ್ನ ಚಿತ್ತಭ್ರಮೆಯಷ್ಟೇ ಎಂದುಕೊಂಡು ಪೂಜೆಯ ಕಾರ್ಯವನ್ನು ಮಾಡುತ್ತಲೇ ಬಂದ. ಕೆಲದಿನಗಳಲ್ಲೇ ಅವನಿಗೆ ಸುದ್ದಿ ಬಂತು—ಊರಿನಲ್ಲಿದ್ದ ತನ್ನ ಮಗ ಆಕಸ್ಮಿಕವಾಗಿ ಮರಣ ಹೊಂದಿದ ಎಂದು. ಹಲಧಾರಿ ತನ್ನ ದೌರ್ಭಾಗ್ಯಕ್ಕಾಗಿ ಬಹಳ ದುಃಖಿಸಿದ. ರಾಮಕೃಷ್ಣರ ಬಳಿಗೆ ಹೋಗಿ ಎಲ್ಲವನ್ನೂ ಹೇಳಿಕೊಂಡ. ಕಡೆಗೆ ಹೃದಯನೂ ಹಲಧಾರಿಯೂ ತಮ್ಮ ಕೆಲಸಗಳನ್ನು ಅದಲುಬದಲು ಮಾಡಿಕೊಳ್ಳುವುದೆಂದು ತೀರ್ಮಾನವಾಯಿತು. ಹೃದಯನು ಶ್ರೀಕಾಳೀಮಾತೆಯನ್ನೂ ಹಲಧಾರಿಯು ರಾಧಾಗೋವಿಂದರನ್ನೂ ಅರ್ಚಿಸತೊಡಗಿದರು.

ರಾಮಕೃಷ್ಣರೀಗ ಕಾಳೀದೇವಿಯ 'ಅರ್ಚಕ'ರಲ್ಲ, 'ಆರಾಧಕ'ರು ! ದಿವ್ಯ ಸಾಧಕರು ! ಹಾಗಾದರೆ ಅವರ ಅರ್ಚಕವೃತ್ತಿಯು ನಿವೃತ್ತಿಯಾಯಿತೆಂದಮೇಲೆ ಉದರಂಭರಣಕ್ಕೆ ಮಾರ್ಗ ? ಆ ಪ್ರಶ್ನೆಯೇಳುವ ಸಂಭವವೇ ಇರಲಿಲ್ಲ. ಅವರು ದಕ್ಷಿಣೇಶ್ವರದಲ್ಲೇ ಉಳಿದುಕೊಂಡು ತನ್ನ ಕಣ್ಣೆದುರಿಗಿದ್ದರೆ ಮಥುರನಿಗೆ ಅದೇ ಮಹದಾನಂದ. ಹೊಚ್ಚಹೊಸ ದೇವಾಲಯದಲ್ಲಿ ಪ್ರತಿಷ್ಠಾಪಿತಳಾದ ಮಹಾಕಾಳಿಯನ್ನು ಜಾಗೃತಗೊಳಿಸಿದ ಮಹಾತ್ಮರಲ್ಲವೆ ಅವರು ! ಆದ್ದರಿಂದ ಅವರನ್ನು ಸಂತೋಷವಾಗಿಟ್ಟಿರಲು ಮಥುರ ಏನು ಮಾಡಲೂ ಸಿದ್ಧ, ಎಷ್ಟು ಖರ್ಚು ಮಾಡಲೂ ಸಿದ್ಧ. ಅವನ ಸಂಪತ್ತೆಲ್ಲ ಅವರ ಸೇವೆಗೇ ಮೀಸಲು. ಆದರೆ ರಾಮಕೃಷ್ಣರಿಗೆ ಏನು ತಾನೆ ಬೇಕಾಗಿದೆ ? ಊಟಕ್ಕೆ ದೇವಾಲಯದ ಪ್ರಸಾದವೇ

ಸಾಕು.* ಅಲ್ಲದೆ ಸದಾ ದೈವೀಭಾವದಲ್ಲೇ ಉನ್ಮತ್ತರಾಗಿರುವವರಿಗೆ ಬಾಹ್ಯ ಪ್ರಪಂಚದ ಕಡೆಗೆ ಗಮನವಾದರೂ ಎಲ್ಲಿ? ಆದ್ದರಿಂದ ಅರ್ಚಕ ಪದವಿಯಿಂದ ಬಿಡುಗಡೆ ಯಾದ ಮೇಲೆ ಅವರು ನಿಶ್ಚಿಂತೆಯಿಂದ ತಮ್ಮ ಸಾಧನೆಗಳಲ್ಲಿ ತೊಡಗಲು ಅನುಕೂಲವಾಯಿತು.

ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಸಾಧನೆಗಳು ಹನ್ನೆರಡು ವರ್ಷಗಳ ಸುದೀರ್ಘ ವ್ಯಾಪ್ತಿಯಲ್ಲಿ ಒಳಗೊಂಡಿವೆ. ಈ ಅವಧಿಯನ್ನು ನಾಲ್ಕು ನಾಲ್ಕು ವರ್ಷಗಳ ಮೂರು ಭಾಗಗಳಾಗಿ ವಿಂಗಡಿಸಬಹುದು. ಏಕೆಂದರೆ ಈ ವಿವಿಧ ಸಮಯಗಳಲ್ಲಿ ಅವರು ಕೈಗೊಂಡ ಸಾಧನೆಗಳ ಸ್ವರೂಪ ಭಿನ್ನವಾದದ್ದು. ಇವುಗಳಲ್ಲಿ ಮೊದಲ ನಾಲ್ಕು ವರ್ಷಗಳ ಸಾಧನೆಯ ಕೆಲವಂಶಗಳನ್ನು ಈ ವರೆಗೆ ನೋಡಿದ್ದೇವೆ.

ಈ ಅವಧಿಯಲ್ಲಿ ಶ್ರೀರಾಮಕೃಷ್ಣರು ಸಾಧನೆಗೆ ಸಂಬಂಧಿಸಿದಂತೆ ಪಡೆದು ಕೊಂಡ ಏಕಮಾತ್ರ ಸಹಾಯವೆಂದರೆ ಕೇನಾರಾಮ ಭಟ್ಟಾಚಾರ್ಯರಿಂದ ಶಕ್ತಿ ಮಂತ್ರವನ್ನು ಸ್ವೀಕರಿಸಿದ್ದು. ಅದೊಂದರ ಆಧಾರದ ಮೇಲೆಯೇ ಅವರು ನೇರವಾಗಿ ಸಾಧನೆಯಲ್ಲಿ ತೊಡಗಿದರು, ಆಳವಾಗಿ ಮುಳುಗಿದರು. ಭಗವತಿಯ ಸಾಕ್ಷಾತ್ಕಾರ ಮಾಡಿಕೊಳ್ಳಲೇಬೇಕೆಂಬ ಉತ್ಕಟ ವ್ಯಾಕುಲತೆಯೊಂದೇ ಅವರಿಗಿದ್ದ ಬಲ. ಕೆಲಕಾಲ ದಲ್ಲೇ ಅವರಿಗಿದ್ದ ಈ ವ್ಯಾಕುಲತೆ ಇನ್ನಷ್ಟು ಮತ್ತಷ್ಟು ಬೆಳೆಯಿತು; ಅವರ ವ್ಯಕ್ತಿತ್ವ ವನ್ನೇ ಸಂಪೂರ್ಣ ಮಾರ್ಪಡಿಸಿತು. ಮತ್ತು ಈ ಅದಮ್ಯ ಹಂಬಲವೇ ಅವರ ಇಷ್ಟದೇವತೆಯ ಬಗ್ಗೆ ಪರಮಪ್ರೇಮದ ರೂಪತಾಳಿತು. ಹೀಗಾಗಿ, ಶಾಸ್ತ್ರನಿಯಮ ಗಳ ಉಕ್ಕಿನ ಕಟಕಟೆಯ ಮೂಲಕ ಹಾದುಹೋಗುವ ಶ್ರಮತಪ್ಪಿತು. ರಾಗಾತ್ಮಿಕ ಭಕ್ತ್ಯಾವೇಶದ ನೇರ ದಾರಿಯಲ್ಲಿ ವೇಗವಾಗಿ ಮುನ್ನಡೆದ ರಾಮಕೃಷ್ಣರು ಶೀಘ್ರ ದಲ್ಲೇ ಗುರಿ ಸೇರಿದರು; ಜಗನ್ಮಾತೆಯನ್ನು ದರ್ಶಿಸಿದರು, ಮಹಾಯೋಗಿಗಳಾದರು.

ಮನುಷ್ಯಜೀವಿತದ ಚರಮ ಗುರಿಯೇ ಭಗವತ್ಸಾಕ್ಷಾತ್ಕಾರ — ಹಿಂದೂ ವೇದ ಶಾಸ್ತ್ರಗಳು ಸಾರುವುದೂ ಇದನ್ನೇ, ಶ್ರೀರಾಮಕೃಷ್ಣರು ಹೇಳಿದ್ದೂ ಇದನ್ನೇ. ಈ ಗುರಿಯನ್ನು ಅವರು ಅತ್ಯಲ್ಪ ಅವಧಿಯಲ್ಲಿ ಸಾಧಿಸಿಕೊಂಡಾಯಿತು. ಹಾಗಾದರೆ ಅವರು ಮತ್ತೆ ಸಾಧನೆಗಳನ್ನು ಕೈಗೊಂಡರಲ್ಲ, ಅದರ ಅಗತ್ಯವೇನಿತ್ತು? ಈ ಪ್ರಶ್ನೆ ತುಂಬ ಸ್ವಾಭಾವಿಕವಾದದ್ದೇ. ಒಂದು ದೃಷ್ಟಿಯಿಂದ ಅವರಿಗೆ ಸಾಧನೆಯ ಆವಶ್ಯಕತೆ ಯಿರಲಿಲ್ಲವೆಂಬುದು ನಿಜವೇ. ಆದರೆ ಇತರ ಅನೇಕ ದೃಷ್ಟಿಕೋನಗಳಿಂದ ನೋಡಿ ದಾಗ ಆ ಸಾಧನೆಯ ಮಹತ್ವ ಮನವರಿಕೆಯಾಗುತ್ತದೆ. ರಾಮಕೃಷ್ಣರೇ ಹೇಳು ತ್ತಿದ್ದರು — "ಗಿಡಮರಗಳು ಮೊದಲು ಹೂ ಬಿಟ್ಟು ಬಳಿಕ ಹಣ್ಣು ಬಿಡುವುದು ತುಂಬ ಸಾಮಾನ್ಯ, ಮತ್ತು ಇದು ಪ್ರಕೃತಿ ಸಹಜ. ಆದರೆ ಮೊದಲು ಫಲ ಬಿಟ್ಟು ಆಮೇಲೆ ಹೂ ಬಿಡುವ ಸಸ್ಯಗಳೂ ಕೆಲವು ಕಂಡುಬರುತ್ತವೆ" ಎಂದು. ಸಾಧನೆಯ

---

* ರಾಮಕೃಷ್ಣರ ವಾಸಕ್ಕೆ ಹಳೀ ದೇವಾಲಯದ ಕೋಣೆಯಿದ್ದೇ ಇತ್ತು. ಪ್ರತಿದಿನವೂ ದೇವಿಗೆ ನೈವೇದ್ಯ ಮಾಡಿದ ಹವಿಷ್ಯಾನ್ನವನ್ನೂ ಹಣ್ಣುಗಳನ್ನೂ ಅವರ ಕೋಣೆಗೇ ತಂದು ತಲುಪಿಸುತ್ತಿದ್ದರು. ಅಲ್ಲದೆ ಬದುಕಿರುವವರೆಗೂ ಅವರಿಗೆ ತಿಂಗಳಿಗೆ ಏಳು ರೂಪಾಯಿಗಳ ಸಂಬಳವನ್ನೂ — ಇದನ್ನು 'ನಿವೃತ್ತಿ ಭತ್ಯೆ' ಎನ್ನಬಹುದು — ಕೊಡಿಸಲು ಮಥುರ ವ್ಯವಸ್ಥೆ ಮಾಡಿಸಿದ.

ಕ್ಷೇತ್ರದಲ್ಲಿ ರಾಮಕೃಷ್ಣರ ಮನೋವಿಕಾಸವಾದದ್ದು ಎರಡನೆಯ ವರ್ಗದ ಸಸ್ಯಗಳಂತೆ. ಅವರ ವಿಷಯದಲ್ಲಿ ಇಂತಹ ಅಪೂರ್ವ ಬೆಳವಣಿಗೆಗೆ ಅನೇಕ ಕಾರಣಗಳಿದ್ದುವು.

ಶ್ರೀರಾಮಕೃಷ್ಣರು ವೇದೋಪನಿಷತ್ತುಗಳನ್ನಾಗಲಿ, ಆಗಮ–ದರ್ಶನಗಳನ್ನಾಗಲಿ ಅಧ್ಯಯನ ಮಾಡಿದವರಲ್ಲ. ಆಧ್ಯಾತ್ಮಿಕ ಸಾಧನೆಗಳ ವಿಷಯದಲ್ಲಿ ಶಾಸ್ತ್ರಗಳು ಏನು ಹೇಳುತ್ತವೆ, ಯಾವಯಾವ ನಿಯಮಗಳನ್ನು ಹಾಕಿವೆ ಎಂಬೀ ವಿವರಗಳು ಅವರಿಗೆ ತಿಳಿದದ್ದು ಅತ್ಯಲ್ಪ. ಅವರು ತಮ್ಮದೇ ಆದ ರೀತಿಯಲ್ಲಿ ಸಾಧನೆಗಳನ್ನು ಕೈಗೊಂಡಾಗ ಅನೇಕ ಅದ್ಭುತ ದರ್ಶನಗಳನ್ನು ಕಂಡಿದ್ದರು, ಅನುಭವಗಳನ್ನು ಪಡೆದಿದ್ದರು, ಆನಂದವನ್ನು ಸವಿದಿದ್ದರು. ಆದರೆ ಈ ಅನುಭವಗಳಿಗೆಲ್ಲ ಪ್ರಮಾಣ ಯಾವುದು? ಶಾಸ್ತ್ರಗಳು. ಎಂದಮೇಲೆ ಈ ಪ್ರಮಾಣಗಳೊಂದಿಗೆ ತಾಳೆ ಹಾಕಿ ನೋಡಿದ ಹೊರತು ಅವರ ಅನುಭವಗಳು ನಿಜವೋ ಅಥವಾ ಕೇವಲ ಭ್ರಮೆಯೋ ಎಂದು ಹೇಳಲಾಗುವುದಿಲ್ಲ. ಆದ್ದರಿಂದ ಅವರೀಗ ಶಾಸ್ತ್ರೋಕ್ತ ವಿಧಾನಗಳನ್ನು ಅನುಸರಿಸಿ ಅವುಗಳ ಪರಿಣಾಮವನ್ನು ಕಂಡುಕೊಳ್ಳಬೇಕಾಯಿತು. ಅಲ್ಲದೆ ಈ ಸಾಧನೆಗಳನ್ನೆಲ್ಲ ಒಬ್ಬ ಗುರುವಿನ ಮೂಲಕವೇ ವಿಧಿಬದ್ಧವಾಗಿ ಸಂಪ್ರದಾಯ ರೀತ್ಯಾ ಕಲಿತು ಆತನ ಮೇಲ್ವಿಚಾರಣೆಯಲ್ಲೇ ನಡೆಸಬೇಕಾದುದು ಕ್ರಮ. ಹೀಗೆ ಸಾಧನೆ ನಡೆಸಿದ ಬಳಿಕ ಸಾಧಕನು ತನ್ನ ಅನುಭವಗಳನ್ನು ಗುರುವಾಕ್ಯದೊಡನೆ ಹಾಗೂ ಶಾಸ್ತ್ರವಾಕ್ಯದೊಡನೆ ಹೋಲಿಸಿನೋಡಿಕೊಳ್ಳಬೇಕು ಎಂದು ಶಾಸ್ತ್ರಗಳು ವಿಧಿಸುತ್ತವೆ.

ಇದಕ್ಕಿಂತ ಮುಖ್ಯವಾದ ಹಾಗೂ ಮಹತ್ತಾದ ಮತ್ತೊಂದು ಕಾರಣವಿದೆ. ಪ್ರಥಮತಃ ಶ್ರೀರಾಮಕೃಷ್ಣರು ತಮ್ಮ ಜೀವನದಲ್ಲಿ ಯಾವಯಾವ ಆಧ್ಯಾತ್ಮಿಕ ಸಾಧನೆಗಳನ್ನೆಲ್ಲ ಮಾಡಿದರೋ, ಅವೆಲ್ಲವೂ ಕೇವಲ ತಾವು ಶಾಂತಿಯನ್ನು ಗಳಿಸಿ ವಿಮುಕ್ತರಾಗುವುದಕ್ಕಾಗಿ ಅಲ್ಲ. ಅವರು ಜನ್ಮತಾಳಿದುದೇ ಇತರರಿಗಾಗಿ, ಲೋಕಹಿತಕ್ಕಾಗಿ, ಜಗತ್ಕಲ್ಯಾಣಕ್ಕಾಗಿ. ಜಗತ್ಕಲ್ಯಾಣವೆನ್ನುವುದು ಕೇವಲ ಹಣದಿಂದ ಸಾಧ್ಯವಾಗುವುದಲ್ಲ ಎನ್ನುವ ಮಾತು ಹಣವಂತರ ಜೀವನಗಳನ್ನು ಪರಿಶೀಲಿಸಿದಾಗ ಸ್ಪಷ್ಟವಾಗುತ್ತದೆ. ಆದ್ದರಿಂದ, ಜಗತ್ಕಲ್ಯಾಣವು ಶಿಸ್ತುಬದ್ಧ ಆಧ್ಯಾತ್ಮಿಕ ಸಾಧನೆಯ ಮೂಲಕ ಜೀವನದಲ್ಲಿ ಧರ್ಮವನ್ನು ನೆಲೆಗೊಳಿಸಿಕೊಳ್ಳುವುದರಿಂದ ಮಾತ್ರ ಸಾಧ್ಯ. ಆದರೆ ಈ ಆಧ್ಯಾತ್ಮಿಕ ಸಾಧನೆ ಒಬ್ಬೊಬ್ಬರ ವಿಷಯದಲ್ಲೂ ವಿಭಿನ್ನವಾದದ್ದು. ಮನುಷ್ಯರ ಸ್ವಭಾವ ಒಬ್ಬೊಬ್ಬರದು ಒಂದೊಂದು ಬಗೆ. ಅವರವರ ಸ್ವಭಾವಕ್ಕೆ ಅನುಗುಣವಾಗಿಯೇ ಅವರವರು ಸಾಧನೆ ಮಾಡಿ ಸಿದ್ಧಿಯನ್ನು ಕಂಡುಕೊಳ್ಳಬೇಕಾಗುತ್ತದೆ. ಮನುಷ್ಯರ ವಿವಿಧ ಸ್ವಭಾವಗಳಿಗೆ ಅನುಗುಣವಾಗಿ ವಿವಿಧ ಭಾವಗಳಿಂದ ಕೂಡಿದ ಆಧ್ಯಾತ್ಮಿಕ ಸಾಧನೆಗಳಿವೆ. ಉದಾಹರಣೆಗೆ ಶಾಂತ ಭಾವ, ಮಧುರ ಭಾವ, ಸಖ್ಯ ಭಾವ, ವಾತ್ಸಲ್ಯ ಭಾವ, ಸಂತಾನ ಭಾವ ಹಾಗೂ ದಾಸ್ಯ ಭಾವ ಎಂಬಿವು ಭಕ್ತಿಮಾರ್ಗದ ಮುಖ್ಯ ಪ್ರಭೇದಗಳು. ರಾಮಕೃಷ್ಣರು ಈ ಎಲ್ಲ ಭಾವಗಳ ಮೂಲಕವೂ ಸಾಧನೆ ಮಾಡುವ ಪರಿಯನ್ನು ನಾವು ನೋಡಲಿದ್ದೇವೆ.

ರಾಮಕೃಷ್ಣರು ಈ ವಿವಿಧ ಭಾವಗಳ ಮೂಲಕ ಸಾಧನೆ ಮಾಡ ಹೊರಟಿದ್ದರ ಉದ್ದೇಶ ಪ್ರಧಾನವಾಗಿ ಎರಡು. ಮೊದಲನೆಯದು, ಒಬ್ಬನೇ ಭಗವಂತನನ್ನು ವಿವಿಧ ಭಾವಗಳಿಂದ ಸಾಕ್ಷಾತ್ಕರಿಸಿಕೊಂಡು ಅನುಭವಿಸಿ ಆನಂದಿಸುವುದು. ಎರಡನೆಯದು, ಮುಂದೆ ತಮ್ಮ ಬಳಿಗೆ ಬರುವ ವಿಭಿನ್ನ ಸ್ವಭಾವದ ಸಾಧಕರಿಗೆ ಅವರ ಭಾವಗಳಿಗೆ ಅನುಗುಣವಾದ ಮಾರ್ಗದರ್ಶನ ನೀಡುವುದು. ಆದ್ದರಿಂದಲೇ ಈಗ ರಾಮಕೃಷ್ಣರು, ಕಾಳಿಯನ್ನು ಸಾಕ್ಷಾತ್ಕರಿಸಿಕೊಂಡ ಬಳಿಕ ಅವಳ ದಿವ್ಯಾನಂದವನ್ನುಂಡು ಸುಮ್ಮನೆ ಕುಳಿತಿರದೆ ಇನ್ನೊಂದು ಬಗೆಯ ಸಾಧನೆಗಿಳಿದರು.

ಈಗವರ ಮನಸ್ಸು ಬಾಲ್ಯದಿಂದಲೂ ತಮ್ಮ ಮೆಚ್ಚಿನ ದೇವತೆಯೂ ಮನೆ ದೇವರೂ ಆದ ಶ್ರೀರಘುವೀರನತ್ತ ಹರಿಯಿತು. ಆದ್ದರಿಂದ ಈಗ ಅವರು ಕೈಗೊಂಡ ಸಾಧನಾ ವಿಧಾನವೇ ದಾಸ್ಯಭಾವ. ಮಹಾವೀರನಾದ ಹನುಮಂತನೇ ಈ ದಾಸ್ಯ ಭಾವದ ಆಚಾರ್ಯ ಎನ್ನಬಹುದು. ಅಸಂಖ್ಯಾತ ಮಾನವರ, ಅಸಂಖ್ಯಾತ ವಾನರರ ಮಧ್ಯೆ ಶ್ರೀರಾಮನ ಆಪ್ತಭಕ್ತನಾಗಿ, ಪ್ರಾಣಪ್ರಿಯನಾಗಿ ಕಂಗೊಳಿಸಿದ ಕಿಂಕರನೆಂದರೆ ಹನುಮಂತನಲ್ಲವೆ? ಅವನು ಶ್ರೀರಾಮನನ್ನು ಒಲಿಸಿಕೊಂಡದ್ದು ಹೇಗೆ? ನಿಷ್ಠಾಯುತ ದಾಸ್ಯಭಾವದಿಂದ ಸಲ್ಲಿಸಿದ ಸೇವೆಯಿಂದ. ಪರಮಾತ್ಮನಿಗೆ ದಾಸ್ಯಭಾವದಿಂದ ಸೇವೆಗೈದು ಪರಿಪೂರ್ಣತೆಯನ್ನು ಪಡೆಯಲು ಖಂಡಿತ ಸಾಧ್ಯ ಎಂದು ಮನಗಂಡ ರಾಮಕೃಷ್ಣರು ಸ್ವಲ್ಪವೂ ಕಾಲ ವಿಳಂಬ ಮಾಡದೆ ಹನುಮಂತನನ್ನು ಆದರ್ಶವಾಗಿಟ್ಟುಕೊಂಡು ಸಾಧನೆಗೆ ಧುಮುಕಿಯೇಬಿಟ್ಟರು. ಈಗ ಅವರು ಕೈಗೊಂಡ ಉಪಾಯವೆಂದರೆ ತಮ್ಮನ್ನೇ ಹನುಮಂತ, ಶ್ರೀರಾಮನ ನಿಷ್ಠಾವಂತ ದಾಸ ಎಂದು ಭಾವಿಸತೊಡಗಿದ್ದು. ಈ ಉಪಾಯ ಅವರಿಗೆ ಯಾರೂ ಹೇಳಿಕೊಟ್ಟದ್ದಲ್ಲ. ಇಂಥ ಸಾಧನೆಯನ್ನು ಹಿಂದೆ ಯಾರಾದರೂ ಮಾಡಿದ್ದರೊ ಇಲ್ಲವೊ — ಎಂಬುದೂ ಅವರಿಗೆ ತಿಳಿಯದು. ಈ ಭಾವ ಅವರಲ್ಲಿ ತಾನೇತಾನಾಗಿ ಉದ್ಭವಿಸಿತು. ಒಡನೆಯೇ ಅವರು ತಮ್ಮ ಮನದ ನಿರ್ದೇಶನದಂತೆ ಸಾಧನೆಯಲ್ಲಿ ತೊಡಗಿಯೇ ಬಿಟ್ಟರು.

ಅವರೀಗ ಸಾಕ್ಷಾತ್ ಹನುಮಂತನಂತೆ ಸದಾ ಸರ್ವದಾ ರಾಮಚಿಂತನೆಯಲ್ಲಿ, ರಾಮಸಂಕೀರ್ತನೆಯಲ್ಲಿ, ರಾಮಧ್ಯಾನದಲ್ಲಿ ಮುಳುಗಿ ಕೆಲಕಾಲ ತಮ್ಮ ಪ್ರತ್ಯೇಕ ವ್ಯಕ್ತಿತ್ವವನ್ನೂ ಅಸ್ತಿತ್ವವನ್ನೂ ಮರೆತುಬಿಟ್ಟರು. ಅದೊಂದು ಅದ್ಭುತ ಅಸಾಧಾರಣ ಸ್ಥಿತಿ! ಸಾಮಾನ್ಯರು ಅಂಥದೊಂದು ಅವಸ್ಥೆಯನ್ನು ಊಹಿಸಲೂ ಆರರು. 'ತನ್ಮಯತೆ' ಎಂಬುದರ ನಿಜವಾದ ಅರ್ಥವನ್ನು ನಾವು ರಾಮಕೃಷ್ಣರ ಈ ಸಾಧನೆಗಳಲ್ಲಿ ಕಾಣಬಹುದು. ಮುಂದೆ ಅವರೇ ತಮ್ಮ ಈ ದಾಸ್ಯಭಾವ ಸಾಧನೆಯ ಸಂಬಂಧವಾಗಿ ಹೀಗೆ ಹೇಳುತ್ತಾರೆ — "ಆ ಸಮಯದಲ್ಲಿ ನನ್ನ ನಡೆದಾಟ, ಊಟ ಮಾಡುವ ರೀತಿ ಮತ್ತು ಇತರೆಲ್ಲ ಕಾರ್ಯಗಳೂ ಹನುಮಂತನ ವರ್ತನೆಯನ್ನೇ ಹೋಲುತ್ತಿದ್ದುವು. ಆದರೆ ಅದಾವುದನ್ನೂ ನಾನು ಪ್ರಯತ್ನಪೂರ್ವಕವಾಗಿ ಮಾಡುತ್ತಿದ್ದುದ್ದಲ್ಲ. ಅವು ನನ್ನ ನಿಯಂತ್ರಣವನ್ನೂ ಮೀರಿ ತಮ್ಮಷ್ಟಕ್ಕೆ ತಾವೇ ಆಗಿಹೋಗುತ್ತಿದ್ದುವು. ನಾನು ನನ್ನ ಧೋತರವನ್ನು ಬಾಲದಂತೆ ಕಟ್ಟಿಕೊಂಡು ನೆಗೆನೆಗೆಯುತ್ತ

ಓಡಾಡುತ್ತಿದ್ದೆ. ಹಣ್ಣು–ಗೆಡ್ಡೆಗೆಣಸುಗಳನ್ನಲ್ಲದೆ ಬೇರೇನನ್ನೂ ತಿನ್ನುತ್ತಿರಲಿಲ್ಲ. ಅವುಗಳನ್ನೂ ಕೂಡ ಸುಲಿದು ತಿನ್ನಲು ಮನಸ್ಸಾಗುತ್ತಿರಲಿಲ್ಲ. ನಾನು ಬಹಳಷ್ಟು ಸಮಯವನ್ನು ಮರದ ಮೇಲೇ ಕಳೆಯುತ್ತಿದ್ದೆ. ಸದಾಕಾಲವೂ 'ರಘುವೀರ, ರಘುವೀರ' ಎಂದು ಗಂಭೀರ ಧ್ವನಿಯಲ್ಲಿ ಉದ್ಗರಿಸುತ್ತಿದ್ದೆ. ನನ್ನ ಕಣ್ಣುಗಳು ಮರ್ಕಟಗಳ ಕಣ್ಣಿನಂತೆಯೇ ಚಂಚಲವಾಗಿದ್ದು ಸದಾ ಅತ್ತಿತ್ತ ಹೊರಳುತ್ತಿದ್ದುವು. ಎಲ್ಲಕ್ಕಿಂತ ಅದ್ಭುತವೆಂದರೆ, ನನ್ನ ಬೆನ್ನುಮೂಳೆಯ ಕೆಳಗಿನ ಭಾಗ ಒಂದು ಅಂಗುಲದಷ್ಟು ಉದ್ದವಾಗಿ ಬೆಳೆದಿತ್ತು."

ಮುಂದೆ ರಾಮಕೃಷ್ಣರಿಂದ ಈ ವಿಷಯವನ್ನು ಕೇಳಿದ ಶಿಷ್ಯರು ವಿಸ್ಮಯದಿಂದ ಪ್ರಶ್ನಿಸಿದ್ದುಂಟು: "ಮಹಾಶಯರೇ, ನಿಮ್ಮ ಶರೀರದ ಆ ಭಾಗ ಈಗಲೂ ಹಾಗೆಯೇ ಇದೆಯೆ?" ಎಂದು. ಆಗ ಅವರೆನ್ನುತ್ತಾರೆ: "ಇಲ್ಲ, ನನ್ನಲ್ಲಿ ಹನುಮಂತನ ಆ ಭಾವ ನಿಧಾನವಾಗಿ ಕಡಿಮೆಯಾದಂತೆ, ಬಾಲದಂತಹ ಆ ಬೆಳವಣಿಗೆಯೂ ಕುಗ್ಗುತ್ತ ಹಿಂದಿನ ಸ್ಥಿತಿಗೇ ಮುಟ್ಟಿತು."

ದಾಸ್ಯಭಕ್ತಿಯ ಸಾಧನೆಯಲ್ಲಿ ತೊಡಗಿದ್ದ ಸಮಯದಲ್ಲಿ ಶ್ರೀರಾಮಕೃಷ್ಣರು ತಮ್ಮ ಜೀವನದ ಒಂದು ಅಪೂರ್ವ ದರ್ಶನವನ್ನೂ ಅನುಭವವನ್ನೂ ಪಡೆದರು. ಅದನ್ನು ಆ ಸಾಧನೆಯ ಪರಾಕಾಷ್ಠೆಯೆನ್ನಬಹುದು. ಆ ದರ್ಶನಾನುಭವವು ಅವರ ಹಿಂದಿನ ಎಲ್ಲ ಅನುಭವಗಳಿಗಿಂತಲೂ ಎಷ್ಟು ವಿಭಿನ್ನವಾಗಿತ್ತು ಮತ್ತು ಪ್ರಭಾವಶಾಲಿಯಾಗಿತ್ತು ಎಂದರೆ ಅವರ ಮನಃಪಟಲದ ಮೇಲೆ ಅದು ಆಳವಾದ ಮುದ್ರೆಯೊತ್ತಿತು. ಅದರ ನೆನಪು ಅವರ ಮನದಲ್ಲಿ ಸದಾ ಹಸಿರಾಗಿ ಉಳಿಯಿತು. ಅವರು ಅದನ್ನು ತಮ್ಮ ಶಿಷ್ಯರಿಗೆ ಹೀಗೆ ತಿಳಿಸುತ್ತಾರೆ:

"ಒಮ್ಮೆ ನಾನು ಪಂಚವಟಿಯ ನೆರಳಲ್ಲಿ ಕುಳಿತಿದ್ದೆ. ಧ್ಯಾನಜಪಗಳನ್ನೇನೂ ಮಾಡುತ್ತಿರಲಿಲ್ಲ. ಸುಮ್ಮನೆ ಕಣ್ತೆರೆದೇ ಕುಳಿತಿದ್ದೆ. ಆಗ ಅತ್ಯಂತ ಉಜ್ವಲವಾದ ಅಸದೃಶವಾದ ಸ್ತ್ರೀ ಆಕೃತಿಯೊಂದು ನನ್ನೆದುರು ಪ್ರತ್ಯಕ್ಷವಾಯಿತು. ಅಬ್ಬ! ಏನದರ ತೇಜಸ್ಸು! ಅದರ ತೇಜಸ್ಸಿನಿಂದ ಆ ಸ್ಥಳವೆಲ್ಲ ಪ್ರಜ್ವಲಿಸಿತು! ಆ ಆಕೃತಿ ಮಾತ್ರವಲ್ಲ, ಸುತ್ತಮುತ್ತಲಿನ ಮರಗಿಡಗಳು, ಗಂಗಾನದಿ ಮುಂತಾದ ಎಲ್ಲ ವಸ್ತುಗಳೂ ಯಥಾವತ್ತಾಗಿ, ಸ್ಪಷ್ಟವಾಗಿ ಗೋಚರವಾಗುತ್ತಿದ್ದವು. ಸ್ವಲ್ಪ ಗಮನಿಸಿ ನೋಡಿದಾಗ ಆಕೆ ಒಬ್ಬ ಮಾನವ ಸ್ತ್ರೀ ಎಂದು ಗೊತ್ತಾಯಿತು. ಏಕೆಂದರೆ ದೇವಿಯರಲ್ಲಿ ಕಂಡುಬರುವಂತಹ ತ್ರಿನೇತ್ರಗಳು, ಹಲವು ಕೈಗಳು ಮುಂತಾದ ಯಾವ ಅಂಶವೂ ಆಕೆಯಲ್ಲಿ ಇರಲಿಲ್ಲ. ಆದರೆ ಪ್ರೇಮ, ಕರುಣೆ, ಸಹಿಷ್ಣುತೆಗಳಿಂದ ಕೂಡಿದ ಆಕೆಯ ಮುಖದಲ್ಲಿ ಕಾಣುತ್ತಿದ್ದ ತೇಜೋಮಯವಾದ ಗಾಂಭೀರ್ಯವು ದೇವದೇವಿಯರಲ್ಲೂ ಸಾಧಾರಣವಾಗಿ ಕಾಣಸಿಗುವಂಥದಲ್ಲ. ಪ್ರಸನ್ನದೃಷ್ಟಿಯಿಂದ ನನ್ನನ್ನೇ ಈಕ್ಷಿಸುತ್ತ ಆ ದೇವೀಮಾನವಿ, ಅಥವಾ ಮಾನವ ರೂಪದ ದೇವಿ, ಸ್ಥಿರಗತಿಯಿಂದ ನಿಧಾನವಾಗಿ ಉತ್ತರದಿಂದ ದಕ್ಷಿಣಾಭಿಮುಖವಾಗಿ ನನ್ನೆಡೆಗೆ ನಡೆದುಬಂದಳು. 'ಯಾರಿರಬಹುದು ಈಕೆ?' ಎಂದು ನಾನು ವಿಸ್ಮಯದಿಂದ ಭಾವಿಸುವಷ್ಟರಲ್ಲಿ ಎಲ್ಲಿಂದಲೋ ಏನೋ ಇದ್ದಕ್ಕಿದ್ದಂತೆ ಒಂದು ಕಪ್ಪು ಮುಖದ ಕೋತಿ 'ಉಪ್

ಉಪ್' ಎಂದು ಶಬ್ದಮಾಡುತ್ತಾ ಓಡಿಬಂದು ಆಕೆಯ ಪಾದದಡಿಯಲ್ಲಿ ಉರುಳಾಡಿತು. ಆಗ ಯಾರೋ ನನ್ನೊಳಗೆ ಉದ್ಗರಿಸಿದರು: 'ಇವಳೇ ಸೀತೆ ! ಜನಕರಾಜನಂದಿನಿ ಸೀತೆ ! ಆಜನ್ಮದುಃಖಿನೀ ಸೀತೆ ! ರಾಮಮಯಜೀವಿತೆ ಸೀತೆ !' ಎಂದು. ತಕ್ಷಣ ನಾನು ಆವೇಶಭರಿತನಾಗಿ 'ಅಮ್ಮಾ ಅಮ್ಮಾ' ಎಂದು ಕೂಗುತ್ತ ಅವಳ ಪದತಲಕ್ಕೆರಗಲು ಓಡಿದೆ. ಅಷ್ಟರಲ್ಲಿ ಅವಳೇ ಬೇಗ ಬೇಗ ನಡೆದು ಬಂದು ನನ್ನ ಶರೀರದೊಳಗೆ ಐಕ್ಯವಾಗಿಬಿಟ್ಟಳು. ಮತ್ತು ಹಾಗೆ ಐಕ್ಯಳಾಗುವ ಮುನ್ನ ಅವಳು, 'ಮಗು, ನಾನು ನನ್ನ ಮಂದಹಾಸವನ್ನು ನಿನಗೆ ಕಾಣಿಕೆಯಾಗಿತ್ತಿದ್ದೇನೆ' ಎಂದು ನುಡಿದಳು. ಆನಂದಾಶ್ಚರ್ಯಗಳಿಂದ ಪರವಶನಾದ ನಾನು ಬಾಹ್ಯಪ್ರಜ್ಞೆಯನ್ನು ಕಳೆದುಕೊಂಡು ಬಿದ್ದುಬಿಟ್ಟೆ. ಧ್ಯಾನಮಗ್ನನಾಗಿ, ಇಲ್ಲವೆ ಆಲೋಚನಾಮಗ್ನನಾಗಿ ಕುಳಿತಿರುವಾಗಲ್ಲದೆ ಎಚ್ಚರದ ಸ್ಥಿತಿಯಲ್ಲಿ ಹಿಂದೆಂದೂ ನನಗೆ ಆ ಬಗೆಯ ದರ್ಶನಾನುಭವವಾಗಿರಲಿಲ್ಲ."

ಶ್ರೀರಾಮಕೃಷ್ಣರಲ್ಲಿ ಐಕ್ಯಳಾದ ಸೀತಾಮಾತೆ ಅವರ ವ್ಯಕ್ತಿತ್ವದ ಮೇಲೆ ವಿಶಿಷ್ಟ ಪ್ರಭಾವ ಬೀರಿದಳು. ಅಪಾರ ಸಹನೆ, ಅದ್ಭುತ ಅನುಕಂಪೆ, ಪರಮ ಕ್ಷಮಾಶೀಲತೆ—ಇಂತಹ ದಿವ್ಯಗುಣಗಳೆಲ್ಲ ಅವರಲ್ಲಿ ಪ್ರಸ್ಫುಟವಾಗಿ ಪ್ರಕಟಗೊಂಡುವು.

೨೮

## ಶಾಪ ವರವಾಯಿತು

ಈ ನಡುವೆ ಶ್ರೀರಾಮಕೃಷ್ಣರಿಗೆ ಸಾಧನೆಗಳಲ್ಲಿ ತೊಡಗಲು ಅತ್ಯಂತ ಪ್ರಶಾಂತ ತಾಣವನ್ನು ಒದಗಿಸಿದ್ದ ಪಂಚವಟಿಯ ಪರಿಸರ ಬದಲಾಗಿತ್ತು. ಹಿಂದೆ ಅಲ್ಲಿಗೆ ಸಮೀಪದಲ್ಲಿ ಹಂಸಪುಷ್ಕರಣಿ ಎಂಬ ಒಂದು ಸಣ್ಣ ಮಡುವಿತ್ತು. ಆದರೆ ಬಹಳ ದಿನಗಳಿಂದಲೂ ಅದು ಕೆಸರು–ಮಣ್ಣು ತುಂಬಿಕೊಂಡು ಮುಚ್ಚಿಹೋಗಿತ್ತು. ಆ ಮಡುವನ್ನು ಮತ್ತೆ ಉಪಯುಕ್ತವನ್ನಾಗಿ ಮಾಡಲು ಜನರು ಅದರ ಕೆಸರನ್ನು ತೆಗೆದು ಪಂಚವಟಿಯ ಬಳಿ ಹರವಿ ಸಮ ಮಾಡಿದರು. ಇದರಿಂದಾಗಿ ಅಲ್ಲಿದ್ದ ನೆಲ್ಲಿಯ ಮರ ಮುಚ್ಚಿಹೋಯಿತು. ಆದ್ದರಿಂದ ರಾಮಕೃಷ್ಣರು ಹೊಸದೊಂದು ಪಂಚವಟಿಯನ್ನು ನಿರ್ಮಾಣ ಮಾಡಲು ಇಚ್ಛಿಸಿದರು. ಹೃದಯರಾಮ ಕೂಡಲೇ ಅದಕ್ಕೆ ಬೇಕಾದ ಸಿದ್ಧತೆಗಳನ್ನೆಲ್ಲ ಮಾಡಿದ.

ಪಂಚವಟಿ ಎಂಬುದು ಐದು ವೃಕ್ಷಗಳ ಸಮೂಹ. ವಟ, (ಆಲ), ಬಿಲ್ವ, ಆಮಲಕ (ನೆಲ್ಲಿ), ಅಶ್ವತ್ಥ ಮತ್ತು ಅಶೋಕ – ಇವೇ ಆ ಐದು ವೃಕ್ಷಗಳು. ಆಧ್ಯಾತ್ಮಿಕ ಸಾಧನೆಗಳಿಗೆ ಈ ಸ್ಥಳ ಅತ್ಯಂತ ಪ್ರಶಸ್ತವೆಂದು ಹೇಳಲಾಗಿದೆ. ಸ್ಕಂದ ಪುರಾಣದಲ್ಲಿ ಪಂಚವಟಿಯ ಬಗ್ಗೆ ಹೀಗೆ ವಿವರಿಸಲಾಗಿದೆ: ಈ ಐದು ವೃಕ್ಷಗಳು ಐದು ನಿರ್ದಿಷ್ಟ ದಿಕ್ಕುಗಳಲ್ಲಿರಬೇಕು—ವಟವೃಕ್ಷವು ಪೂರ್ವಕ್ಕೂ, ಅಶ್ವತ್ಥವೃಕ್ಷವು ಪಶ್ಚಿಮಕ್ಕೂ, ಬಿಲ್ವ ವೃಕ್ಷವು ಉತ್ತರಕ್ಕೂ, ಆಮಲಕವೃಕ್ಷವು ದಕ್ಷಿಣಕ್ಕೂ, ಅಶೋಕ ವೃಕ್ಷವು ಆಗ್ನೇಯಕ್ಕೂ ಇರಬೇಕು. ಇವುಗಳ ನಡುವೆ ಮನೋಹರವಾದ ಒಂದೂ ವರೆ ಮೊಳದ ಒಂದು ಚೌಕಾಕೃತಿಯ ಪೀಠವಿರಬೇಕು.

ಶ್ರೀರಾಮಕೃಷ್ಣರು ಒಂದು ಸೂಕ್ತ ಸ್ಥಳದಲ್ಲಿ ತಮ್ಮ ಕೈಯಾರೆ ಅಶ್ವತ್ಥ ಸಸಿಯನ್ನು ನೆಟ್ಟರು. ಉಳಿದ ನಾಲ್ಕನ್ನು ಹೃದಯರಾಮನಿಂದ ನೆಡಿಸಿದರು. ಅಲ್ಲದೆ ಅನೇಕ ತುಳಸೀ ಗಿಡಗಳನ್ನೂ ಶಂಖಪುಷ್ಪ ಬಳ್ಳಿಗಳನ್ನೂ ನೆಡಿಸಿದರು. ಬಳಿಕ ದನಕರುಗಳಿಂದ ಅವುಗಳನ್ನು ರಕ್ಷಿಸಲು ಸುತ್ತಲೂ ಬೇಲಿ ಹಾಕಿಸಿದರು. ಅವರು ಹೀಗೆ ಬೇಲಿ ಹಾಕಿಸಿದ್ದೇ ಒಂದು ಕಥೆ:

ಈ ಹೊಸ ಪಂಚವಟಿಯ ಐದು ಸಸಿಗಳೂ ಇನ್ನೂ ಚಿಕ್ಕವು. ಅವುಗಳ ಚಿಗುರೆಲೆಗಳು ಸುಲಭವಾಗಿ ಬಾಯಿಗೆ ಎಟಕುವಂತಿದ್ದು ಹಸುಕರುಗಳು ಹರಿದು ತಿನ್ನಲಾರಂಭಿಸಿದ್ದುವು. ರಾಮಕೃಷ್ಣರು ಇದನ್ನು ನೋಡಿ ಬೇಲಿ ಹಾಕಿಸಲು ನಿಶ್ಚಯಿಸಿದರು. ಆದರೆ ಬೇಲಿ ಹಾಕಲು ಸಲಕರಣೆಗಳು ಬೇಕಲ್ಲ? ಶ್ರೀರಾಮಕೃಷ್ಣರು

ಅದಕ್ಕಾಗಿ ಯಾರನ್ನೂ ಕೇಳಬೇಕಾಗಿಯೇ ಬರಲಿಲ್ಲ. ಸಸಿಗಳಿಗೆ ಬೇಲಿ ಹಾಕಬೇಕೆಂಬ ಆಲೋಚನೆ ಅವರ ಮನದಲ್ಲಿ ಎದ್ದುದೇ ತಡ, ನೋಡನೋಡುತ್ತಿದ್ದಂತೆ ಸ್ವಲ್ಪ ಹೊತ್ತಿನಲ್ಲೇ ಗಂಗಾನದಿಯ ಉಬ್ಬರದೊಂದಿಗೆ ಆ ಸಲಕರಣೆಗಳೆಲ್ಲ ಎಲ್ಲಿಂದಲೋ ತೇಲಿಕೊಂಡು ಬಂದೇಬಿಟ್ಟವು! ದಕ್ಷಿಣೇಶ್ವರ ಪ್ರಾಂತದ ಗಂಗಾನದಿಯಲ್ಲಿ ದಿನ ಕ್ಕೊಮ್ಮೆ ದೊಡ್ಡದೊಂದು ಅಲೆ ಸಮುದ್ರದಿಂದ ಹೊರಟು ನುಗ್ಗಿ ಬರುತ್ತದೆ. ಇದಕ್ಕೆ 'ಬಾನ್' ಎನ್ನುತ್ತಾರೆ. ಈ ಅಲೆಗೆ ಸಿಕ್ಕಿಕೊಂಡು ಮರದ ಹಾಗೂ ಬಿದಿರಿನ ಗೂಟಗಳ ಕಟ್ಟೊಂದು ಮಚ್ಚು ಮತ್ತು ಹಗ್ಗಗಳ ಸಮೇತವಾಗಿ ತೇಲಿ ಬಂದು ಪಂಚವಟಿಯ ಸಮೀಪದಲ್ಲೇ ನಿಂತಿತು. ಇದನ್ನು ಕಂಡ ರಾಮಕೃಷ್ಣರು ದೇವಾಲಯದ ತೋಟ ಗಾರನಾದ ಭರ್ತಾಭಾರಿ ಎಂಬವನ ಸಹಾಯದಿಂದ ಅದನ್ನು ತಂದು ಎಲ್ಲ ಸಸಿ ಗಳಿಗೂ ಬೇಲಿ ಬಿಗಿಸಿದರು. ರಾಮಕೃಷ್ಣರ ಪ್ರೀತಿಯ ಆರೈಕೆಯಿಂದ ಕೆಲದಿನಗಳಲ್ಲೇ ತುಳಸಿ ಹಾಗೂ ಶಂಖಪುಷ್ಪ ಸಸ್ಯಗಳು ಎತ್ತರಕ್ಕೆ ಸೊಂಪಾಗಿ ಬೆಳೆದು ಆ ಸ್ಥಳವನ್ನೆಲ್ಲ ಮುಚ್ಚಿಬಿಟ್ಟವು. ಅವರು ಅಲ್ಲಿ ಧ್ಯಾನಕ್ಕೆ ಕುಳಿತುಬಿಟ್ಟರೆ ಹೊರಗಿನಿಂದ ಯಾರಿಗೂ ಕಾಣುತ್ತಿರಲಿಲ್ಲ.

ಉತ್ತರ ಭಾರತದ ಹಾಗೂ ಬಂಗಾಳದ ವಿವಿಧ ಸ್ಥಳಗಳಿಂದ ಪುರೀಕ್ಷೇತ್ರಕ್ಕೂ ಗಂಗಾಸಾಗರಕ್ಕೂ ಹೋಗುತ್ತಿದ್ದ ಯಾತ್ರಿಕರು ಕಲ್ಕತ್ತದ ಮೂಲಕ ಹಾದುಹೋಗು ತ್ತಿದ್ದರು. ದಕ್ಷಿಣೇಶ್ವರದಲ್ಲಿ ರಾಣಿ ರಾಸಮಣಿ ಭವ್ಯವಾದ ಕಾಳೀ ದೇವಾಲಯವನ್ನು ಕಟ್ಟಿಸಿದ ಮೇಲೆ ಅದರ ಕೀರ್ತಿ ಎಲ್ಲೆಡೆ ಹರಡಿತು. ಅಲ್ಲದೆ ರಾಸಮಣಿಯ ಔದಾರ್ಯ ಹಾಗೂ ಅಲ್ಲಿ ದೊರೆಯುವ ಇತರ ಸೌಲಭ್ಯಗಳ ಸುದ್ದಿಯೂ ಎಲ್ಲ ಕಡೆಗೆ ಪಸರಿಸಿತು. ಆದ್ದರಿಂದ ಈ ಕ್ಷೇತ್ರಗಳಿಗೆ ಹೋಗುವ ಹಾಗೂ ಅಲ್ಲಿಂದ ಹಿಂದಿರುಗಿ ಬರುವ ಸಾಧುಸಂನ್ಯಾಸಿಗಳನೇಕರು ದಕ್ಷಿಣೇಶ್ವರಕ್ಕೆ ಬಂದು ಕೆಲದಿನ ವಿಶ್ರಮಿಸಿ ಮುಂದುವರಿಯತೊಡಗಿದರು. ಇವರ ಪೈಕಿ ಅನೇಕ ಸಿದ್ಧಪುರುಷರೂ ಉತ್ತಮ ಸಾಧಕರೂ ಇರುತ್ತಿದ್ದರು. ಈ ಸಾಧು ಸಂನ್ಯಾಸಿಗಳ ಆಗಮನದಿಂದ ಎಲ್ಲರಿಗಿಂತ ಹೆಚ್ಚು ಸಂತಸಪಟ್ಟವರೆಂದರೆ ರಾಮಕೃಷ್ಣರು. ಅವರು ದಕ್ಷಿಣೇಶ್ವರಕ್ಕೆ ಬಂದ ಎಲ್ಲ ಸಾಧಕರೊಂದಿಗೂ ಬೆರೆತು ಅವರ ಸಾಧನಾ ಮಾರ್ಗಗಳನ್ನು, ಅನುಭವಗಳನ್ನು ಶಾಸ್ತ್ರವಿಚಾರಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು.

ಇಂತಹ ಸಾಧಕರೊಬ್ಬರಿಂದ ಶ್ರೀರಾಮಕೃಷ್ಣರು ಪ್ರಾಣಾಯಾಮವನ್ನೂ ಹಠ ಯೋಗದ ವಿವಿಧ ಪ್ರಕ್ರಿಯೆಗಳನ್ನೂ ಕಲಿತು ಅಭ್ಯಾಸಮಾಡಿದರು. ತನ್ಮೂಲಕ, ಈ ಸಾಧನಾ ವಿಧಾನ ಲಾಭ, ಇತಿಮಿತಿ, ಅಪಾಯಗಳ ಅರಿವು ಮಾಡಿಕೊಂಡರು. ಹಠಯೋಗವೆಂದರೆ ಇಂದಿನಂತೆ ಅಂದೂ ಹೆಚ್ಚಿನ ಜನರಿಗೆ ವಿಶೇಷ ಕುತೂಹಲ, ಆಕರ್ಷಣೆ. ಮುಂದೆ ಶ್ರೀರಾಮಕೃಷ್ಣರು ತಮ್ಮ ಭಕ್ತರಿಗೆ ಅದನ್ನು ಕೈಗೊಳ್ಳದಂತೆ ಬೋಧಿಸುತ್ತಿದ್ದರು. ಒಮ್ಮೆ ಈ ಭಕ್ತರಲ್ಲಿ ಕೆಲವರು ತಮಗೆ ಹಠಯೋಗವನ್ನು ಕಲಿಸಿಕೊಡುವಂತೆ ಕೇಳಿಕೊಂಡಾಗ ಅವರು ಹೇಳಿದರು: "ಆ ಸಾಧನೆಗಳು ಇಂದಿನ ಯುಗಕ್ಕೆ ಹೇಳಿಸಿದ್ದಲ್ಲ. ಈ ಯುಗದಲ್ಲಿ ಮಾನವನ ಆಯುಷ್ಯವೇ ಕಡಿಮೆ ಮತ್ತು ಅವನ ಪ್ರಾಣ ನಿಂತಿರುವುದೇ ಅನ್ನದ ಮೇಲೆ. ಹಾಗಿರುವಾಗ, ಹಠಯೋಗದ

ಮೂಲಕ ದೇಹವನ್ನು ದೃಢಪಡಿಸಿಕೊಂಡು, ಆಮೇಲೆ ರಾಜಯೋಗ ಮಾರ್ಗವನ್ನನುಸರಿಸಿ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಸಮಯವಾದರೂ ಎಲ್ಲಿದೆ ? ಅಲ್ಲದೆ ಆ ಆಸನಗಳನ್ನೆಲ್ಲ ಕಲಿಯಬೇಕೆಂಬವನು ಅವುಗಳಲ್ಲಿ ಚೆನ್ನಾಗಿ ಪರಿಣತನಾದ ಗುರುವಿನೊಂದಿಗೆ ದೀರ್ಘಕಾಲ ವಾಸವಾಗಿರಬೇಕು. ಆತನ ಮೇಲ್ವಿಚಾರಣೆಯಲ್ಲಿ ಆಹಾರ ವಿಹಾರ ವ್ಯಾಯಾಮಗಳಿಗೆ ಸಂಬಂಧಿಸಿದ ಕಟುತರ ನಿಯಮಗಳನ್ನು ಬಿಡದೆ ಪಾಲಿಸಿಕೊಂಡು ಬರಬೇಕು. ಆ ನಿಯಮಗಳಿಂದ ಸ್ವಲ್ಪ ಜಾರಿದರೂ ಸಾಧಕನು ರೋಗರುಜಿನಗಳಿಗೆ ಗುರಿಯಾಗುತ್ತಾನೆ; ಪ್ರಾಣವನ್ನೇ ಕಳೆದುಕೊಳ್ಳುವುದೂ ಅಪರೂಪವೇನಲ್ಲ. ಆದ್ದರಿಂದ ಇಂತಹ ಕಠಿಣ ಸಾಧನೆಗಳನ್ನೆಲ್ಲ ಅಭ್ಯಾಸ ಮಾಡಬೇಕಾದ ಆವಶ್ಯಕತೆಯೇನಿಲ್ಲ. ಅದೂ ಅಲ್ಲದೆ ಈ ಕುಂಭಕ–ಪ್ರಾಣಾಯಾಮಗಳನ್ನೆಲ್ಲ ಮಾಡಿ ಪ್ರಾಣವಾಯುವನ್ನು ನಿಯಂತ್ರಿಸುವುದರ ಉದ್ದೇಶವಾದರೂ ಏನು ? ಮನಸ್ಸಿನ ಹತೋಟಿ ಸಾಧಿಸುವುದೊಂದೇ ತಾನೆ ? ಸರಳ ಭಕ್ತಿಯಿಂದೊಡಗೂಡಿದ ಧ್ಯಾನದಿಂದ ಮನಸ್ಸೂ ಪ್ರಾಣಶಕ್ತಿಯೂ ತಾವಾಗಿಯೇ ಹತೋಟಿಗೆ ಸಿಗುತ್ತವೆ ಎಂಬುದನ್ನು ನೀವೇ ನೋಡಬಹುದು. ಕಲಿಯುಗದಲ್ಲಿ ಮಾನವರ ಆಯುಸ್ಸೂ ಶಕ್ತಿಯೂ ತೀರ ಮಿತವಾದದ್ದು. ಆದ್ದರಿಂದಲೇ ಭಗವಂತ ಮಾನವರ ಮೇಲೆ ಕರುಣೆ ತೋರಿ ತನ್ನನ್ನು ಸಾಕ್ಷಾತ್ಕರಿಸಿಕೊಳ್ಳುವ ಮಾರ್ಗವನ್ನು ಬಹಳ ಸುಗಮವಾಗಿಸಿದ್ದಾನೆ....''

ಬಂಗಾಳದಲ್ಲಿ ತಂತ್ರಸಾಧನೆ ಬಹಳ ಪ್ರಚಲಿತವಾದದ್ದು. ಆದರೆ ಅದನ್ನು ಪರಿಶುದ್ಧರೂಪದಲ್ಲಿ ಅಭ್ಯಸಿಸಬಲ್ಲವರನ್ನು ಕಾಣುವುದು ಅಷ್ಟೇ ದುರ್ಲಭ. ತಂತ್ರಸಾಧನೆಯಲ್ಲಿ ತೊಡಗಿ ದಾರಿತಪ್ಪುವವರೇ ಬಹಳ. 'ಪರಕೀಯ ಪ್ರೇಮ' ಎಂಬುದು ಇದರಲ್ಲಿ ಒಂದು ವಿಧಾನ. ರಾಮಕೃಷ್ಣರ ಸಂಬಂಧಿ ಹಲಧಾರಿಯೂ ಗುಟ್ಟಾಗಿ ಈ ಬಗೆಯ ಸಾಧನೆಯಲ್ಲಿ ತೊಡಗಿದ್ದ. ಇದರಲ್ಲಿ ಸ್ತ್ರೀ ಸಂಬಂಧವೊಂದು ಪ್ರಮುಖ ಅಂಗ. ಆದರೆ ಇದನ್ನು ಯಾವ ಸಾಧನೆಯ ಹೆಸರಿನಲ್ಲೇ ಮಾಡಿದರೂ ತಾನು ಮಾಡುತ್ತಿರುವುದು ಅಶ್ಲೀಲವಾದದ್ದು ಎಂಬ ಅರಿವು ಅವರಿಗಿದ್ದೇ ಇರುತ್ತದೆ. ಮತ್ತು ಎಷ್ಟೇ ಗುಟ್ಟಾಗಿ ಮಾಡಿದರೂ ಇಂಥ ವಿಷಯಗಳು ರಟ್ಟಾಗದಿರುತ್ತವೆಯೇ ? ಒಂದು ಕಿವಿಯಿಂದ ಮತ್ತೊಂದಕ್ಕೆ ಹರಿಯದಿರುತ್ತವೆಯೇ ? ಜನ ಹಲಧಾರಿಯ ವಿಷಯವಾಗಿ ಏನೇನೋ ಮಾತನಾಡಿಕೊಂಡು ವ್ಯಂಗ್ಯವಾಗಿ ನಕ್ಕರು. ಆದರೆ ಅದನ್ನು ಅವನೆದುರಿಗೆ ಹೇಳುವ ಧೈರ್ಯ ಮಾತ್ರ ಯಾರಿಗೂ ಇರಲಿಲ್ಲ. ಏಕೆಂದರೆ ಅವನಿಗೆ ವಾಕ್ಸಿದ್ಧಿಯಿದೆ ಎಂಬ ಸುದ್ದಿ ಇತ್ತು. ಎಂದರೆ, ಅವನೇನಾದರೂ ಒಂದು ಮಾತನ್ನು ಆಡಿಬಿಟ್ಟರೆ ಅದು ಹಾಗೆಯೇ ನಡೆದುಹೋಗುತ್ತದೆಯಂತೆ ! ಆದರದು ನಿಜವೋ ಸುಳ್ಳೋ ಎಂದು ಪರೀಕ್ಷಿಸಿ ನೋಡುವವರಾರು ? ಕಂಡದ್ದನ್ನು ಕಂಡಂತೆ ಹೇಳಿ ಅವನ ಶಾಪಕ್ಕೆ ಗುರಿಯಾಗುವ ಗ್ರಹಚಾರ ಯಾರಿಗೆ ಬೇಕು ! ಹಲಧಾರಿಯ ಕುರಿತಾದ ಈ ಮಾತುಗಳೆಲ್ಲ ರಾಮಕೃಷ್ಣರ ಕಿವಿಗೂ ಬಿದ್ದುವು. ಆದರೆ ಅವರು ಮಾತ್ರ ಇದನ್ನೆಲ್ಲ ಕೇಳಿಕೊಂಡು ಸುಮ್ಮನಿರುವ ಸ್ವಭಾವದವರಲ್ಲ. 'ನನ್ನ ಅಣ್ಣ ಹೀಗೆ ಹೀನ ಮಾರ್ಗಕ್ಕಿಳಿದು ಜನರ ಬಾಯಿಗೆ ಈಡಾದನಲ್ಲ' ಎಂದು

ಅವರಿಗೆ ಬಹಳ ಸಂಕಟವಾಯಿತು. ಆದ್ದರಿಂದ ಅವರು ಸ್ವಲ್ಪವೂ ಹಿಂಜರಿಯದೆ ನೇರವಾಗಿ ಹಲಧಾರಿಯ ಬಳಿಗೆ ಹೋಗಿ ಹೇಳಿದರು, "ಏನಪ್ಪ, ನಿನ್ನ ವಿಷಯವಾಗಿ ಜನ ಹೀಗೆಲ್ಲ ಮಾತನಾಡಿಕೊಳ್ಳುತ್ತಾರಲ್ಲ, ಅದು ನಿಜವೇ ? ನೀನು ಹೀಗೆ ಮಾಡುವುದು ಸರಿಯೆ ?"

ರಾಮಕೃಷ್ಣರು ಹೀಗೆ ಹೇಳಿದ್ದೇ ತಡ, ಹಲಧಾರಿಗೆ ಮೈಯೆಲ್ಲ ಬೆಂಕಿಯಾಯಿತು. ನ್ಯಾಯಾನ್ಯಾಯದ ವಿವೇಚನೆ ತಪ್ಪಿಹೋಯಿತು. ಹಿಂದುಮುಂದು ನೋಡದೆ ಹರಿಹಾಯ್ದ — "ಏನೋ, ನನಗಿಂತ ಚಿಕ್ಕವನಾಗಿ ನೀನು ನನ್ನನ್ನೇ ಪ್ರಶ್ನಿಸುತ್ತೀಯಾ ? ಅಷ್ಟು ಪೊಗರೆ ನಿನಗೆ ? ನೀನು ರಕ್ತ ಕಾರುವಂತಾಗಲಿ !" ಎಂದು ಶಪಿಸಿಯೇ ಬಿಟ್ಟ. ಅವರು ಆತನನ್ನು ಸಮಾಧಾನ ಪಡಿಸಲು ಎಷ್ಟೋ ವಿಧವಾಗಿ ಪ್ರಯತ್ನಿಸಿದರು. "ತಪ್ಪು ತಿಳಿಯಬೇಡಪ್ಪ; ಇತರರು ಹಾಗೆಲ್ಲ ಮಾತನಾಡಿಕೊಳ್ಳುತ್ತಿದ್ದಾರೆಂದು ನಿನಗೆ ತಿಳಿಸಿದೆ ಅಷ್ಟೆ. ನಿನ್ನ ಒಳಿತಿಗಾಗಿಯೇ ಹಾಗೆಂದೆ; ನನ್ನ ಮೇಲೆ ಸಿಟ್ಟು ಮಾಡಬೇಡಪ್ಪ" ಎಂದು ವಿವರಿಸಲೆತ್ನಿಸಿದರು. ಆದರೆ ಅವನು ಇವರ ಮಾತಿಗೆ ಕಿವಿಗೊಡಲೇ ಇಲ್ಲ.

ಇದಾಗಿ ಕೆಲದಿನಗಳಾಗಿರಬಹುದು. ರಾತ್ರಿ ಸುಮಾರು ಎಂಟೊಂಬತ್ತು ಗಂಟೆಯ ಸಮಯ. ಶ್ರೀರಾಮಕೃಷ್ಣರಿಗೆ ಗಂಟಲಲ್ಲಿ ಏನೋ ಕೆರೆತದ ಅನುಭವವಾಯಿತು; ತಕ್ಷಣವೇ ಬಾಯಿಂದ ಧಾರಾಕಾರವಾಗಿ ರಕ್ತ ಸುರಿಯಲಾರಂಭಿಸಿತು ! ಮುಂದೆ ಅವರೇ ಆ ದೃಶ್ಯವನ್ನು ಬಣ್ಣಿಸುತ್ತಾರೆ:

"ರಕ್ತದ ಬಣ್ಣ ಕೆಂಪಾಗಿರಲಿಲ್ಲ, ಹುರುಳೀಕಾಯಿ ಗಿಡದ ಎಲೆಯ ರಸದಂತೆ ಕಪ್ಪು ಮಿಶ್ರಿತವಾಗಿತ್ತು. ಮತ್ತು ಅದೆಷ್ಟು ಗಟ್ಟಿಯಾಗಿತ್ತೆಂದರೆ ಅದರಲ್ಲಿ ಸ್ವಲ್ಪ ಭಾಗ ಬಾಯೊಳಗೇ ಹೆಪ್ಪುಗಟ್ಟಿದಂತಾಯಿತು. ಆ ರಕ್ತ ಆಲದಮರದ ಬಿಳಲಿನಂತೆ ಬಾಯಿಂದ ಹೊರಬಂದು ಜೋತಾಡುತ್ತಿತ್ತು."

ರಾಮಕೃಷ್ಣರು ರಕ್ತ ಒಸರುತ್ತಿದ್ದ ಭಾಗವನ್ನು ಒಂದು ಬಟ್ಟೆಯಿಂದ ಒತ್ತಿ ಹಿಡಿದು, ರಕ್ತಸ್ರಾವವನ್ನು ನಿಲ್ಲಿಸಲು ಪ್ರಯತ್ನಿಸಿದರು. ಆದರೆ ಏನು ಮಾಡಿದರೂ ಅದು ನಿಲ್ಲಲೇ ಇಲ್ಲ. ಅವರಿಗೆ ಆ ರಕ್ತವನ್ನು ನೋಡುವುದಕ್ಕೇ ಭಯವಾಗುತ್ತಿತ್ತು. ಸುದ್ದಿ ತಿಳಿದು ಎಲ್ಲರೂ ಓಡೋಡಿ ಬಂದರು. ಆದರೆ ಆ ಭಯಂಕರ ದೃಶ್ಯವನ್ನು ನೋಡಿ ಬೆಪ್ಪಾಗಿ ನಿಂತರು. ಯಾರಿಗೂ ಏನು ಮಾಡಬೇಕೆಂದೇ ತೋಚಲಿಲ್ಲ. ಆ ಸಮಯದಲ್ಲಿ ಹಲಧಾರಿ ದೇವಸ್ಥಾನದಲ್ಲಿ ಏನೋ ಕೆಲಸದಲ್ಲಿ ನಿರತನಾಗಿದ್ದ. ರಾಮಕೃಷ್ಣರ ಬಾಯಿಂದ ರಕ್ತ ಹರಿಯುತ್ತಿದೆ ಎಂದು ಕೇಳಿದೊಡನೆ ಅವನಿಗೆ ತನ್ನ ಶಾಪದ ನೆನಪಾಗಿ ದಿಗಿಲಾಯಿತು. ಕೂಡಲೇ ಅಲ್ಲಿಂದೆದ್ದು ಓಡಿ ಬಂದ. ರಕ್ತ ಇನ್ನೂ ಒಸರುತ್ತಲೇ ಇತ್ತು. ಹಲಧಾರಿಯನ್ನು ಕಂಡು ರಾಮಕೃಷ್ಣರು ಕಣ್ಣಲ್ಲಿ ನೀರುತುಂಬಿ ನುಡಿದರು, "ಅಣ್ಣಾ ನೋಡು, ನಿನ್ನ ಶಾಪದಿಂದ ಏನಾಯಿತೆಂದು ನೋಡು !" ಆದರೆ ಅವನಾದರೂ ಈಗೇನು ಮಾಡಬಲ್ಲ ? ಅವರ ಆ ಸ್ಥಿತಿಯನ್ನು ಕಂಡು ಅವನೂ ಅತ್ತುಬಿಟ್ಟ.

ಆ ಸಮಯದಲ್ಲಿ ವೃದ್ಧ ಸಾಧುಗಳೊಬ್ಬರು ದೇವಾಲಯದಲ್ಲಿದ್ದರು. ಏನೋ

ಕೋಲಾಹಲವಾಗುತ್ತಿರುವುದನ್ನು ಕಂಡು ಅವರೂ ಅಲ್ಲಿಗೆ ಓಡಿ ಬಂದರು. ಅವರೊಬ್ಬ ಅನುಭವಸ್ಥ ಸಾಧಕರು. ರಕ್ತದ ಬಣ್ಣವನ್ನು ಅವರು ಗಮನಿಸಿದರು. ಬಳಿಕ, ಬಾಯಿಯ ಯಾವ ಭಾಗದಿಂದ ರಕ್ತ ಒಸರುತ್ತಿದೆ ಎಂಬುದನ್ನು ಪರಿಶೀಲಿಸಿ ನೋಡಿದರು. ಅವರು ಏನೋ ತೀರ್ಮಾನಕ್ಕೆ ಬಂದಂತೆ ಕಂಡಿತು, ತಲೆಯಾಡಿಸಿದರು. ಬಳಿಕ ರಾಮಕೃಷ್ಣರಿಗೆ ಹೇಳಿದರು:

"ಏನೂ ಭಯವಿಲ್ಲ. ಈ ರಕ್ತವು ಹೊರಕ್ಕೆ ಬಂದದ್ದು ಬಹಳ ಉತ್ತಮವೇ ಆಯಿತು. ನೀವು ಯೋಗಾಭ್ಯಾಸ ಮಾಡುತ್ತೀರೆಂದು ಕಾಣುತ್ತದೆ. ಆ ಸಾಧನೆಯ ಪರಿಣಾಮವಾಗಿ ಸುಷುಮ್ನಾ ನಾಡಿಯ ದ್ವಾರ ತೆರೆದುಕೊಂಡಿದೆ. ಅದರ ಮೂಲಕ ರಕ್ತ ಶಿರಸ್ಸಿಗೆ ಹರಿಯಬೇಕಾಗಿತ್ತು. ಹಾಗಾಗಿಬಿಟ್ಟಿದ್ದರೆ ನಿಮಗೆ ಜಡಸಮಾಧಿಯ ಸ್ಥಿತಿ ಬಂದುಬಿಡುತ್ತಿತ್ತು. ಆ ಸ್ಥಿತಿಯಿಂದ ಮತ್ತೆ ಕೆಳಗೆ ಬರುವುದು ಮಾತ್ರ ಯಾರಿಗೂ ಸಾಧ್ಯವಾಗದ ಮಾತು. ಆದರೆ ಹಾಗಾಗುವುದರ ಬದಲು ರಕ್ತ ತಾನಾಗಿಯೇ ಒಂದು ದಾರಿ ಮಾಡಿಕೊಂಡು ಬಾಯಿಂದ ಹೊರಗೆ ಬಂದುಬಿಟ್ಟಿದೆ. ಹೀಗಾಗಿ ನೀವು ಉಳಿದುಕೊಂಡಿರಿ. ನಿಮ್ಮ ಈ ದೇಹದಿಂದ ಜಗನ್ಮಾತೆ ಏನೋ ಒಂದು ವಿಶೇಷವಾದ ಕಾರ್ಯವನ್ನು ಸಾಧಿಸುವುದಕ್ಕಿದೆ ಎಂದು ತೋರುತ್ತದೆ. ಆದ್ದರಿಂದಲೇ ಅದನ್ನು ಆಕೆ ಉಳಿಸಿದ್ದಾಳೆ."

ಸಾಧುಗಳ ಮಾತು ಕೇಳಿ ರಾಮಕೃಷ್ಣರಿಗೆ ತುಂಬ ಸಮಾಧಾನವಾಯಿತು. ಹಲಧಾರಿಗೂ ಅಷ್ಟೆ ಎಂದು ಹೇಳಬೇಕಾಗಿಯೇ ಇಲ್ಲ! ಸ್ವಲ್ಪ ಹೊತ್ತಿಗೆಲ್ಲ ರಕ್ತಸ್ರಾವ ನಿಂತಿತು. ಮತ್ತೆಂದೂ ಅದು ಮರುಕಳಿಸಲಿಲ್ಲ. ಹೀಗೆ ಹಲಧಾರಿಯ ಶಾಪ ಕಾಕತಾಳೀಯವಾಗಿ ಒಂದು ವರವಾಗಿ ಪರಿಣಮಿಸಿತು.

೩೦

## ಭಾವಪ್ರೇರಕ–ರಾಮತಾರಕ

ಹಲಧಾರಿಗೂ ಶ್ರೀರಾಮಕೃಷ್ಣರಿಗೂ ಇದ್ದ ಬಾಂಧವ್ಯ ಒಂದು ರೀತಿಯಲ್ಲಿ ಬಹಳ ತಮಾಷೆಯಾಗಿತ್ತು. ಏಕೆಂದರೆ ಹಲಧಾರಿಗೆ ರಾಮಕೃಷ್ಣರ ವ್ಯಕ್ತಿತ್ವ–ಸ್ವಭಾವ ಗಳನ್ನು ನಿಖರವಾಗಿ ಅರಿತುಕೊಳ್ಳಲು ಸಾಧ್ಯವಾಗಲೇ ಇಲ್ಲ. ಆದ್ದರಿಂದ ಅವರ ಬಗ್ಗೆ ಆತನ ಅಭಿಪ್ರಾಯ ಬದಲಾಗುತ್ತಲೇ ಇತ್ತು. ೧೮೫೮ರ ಸುಮಾರಿಗೆ ದಕ್ಷಿಣೇಶ್ವರಕ್ಕೆ ಬಂದ ಹಲಧಾರಿ ೧೮೬೫ರ ವರೆಗೂ ರಾಧಾಗೋವಿಂದರ ಅರ್ಚಕ ನಾಗಿ ಅಲ್ಲೇ ಉಳಿದುಕೊಂಡಿದ್ದ. ಹೀಗೆ ಅವನು ಆರು ವರ್ಷಕ್ಕೂ ಹೆಚ್ಚು ಕಾಲ ಅವರ ಸಂಪರ್ಕದಲ್ಲಿದ್ದ. ಅವರ ಅದ್ಭುತ ಆಧ್ಯಾತ್ಮಿಕ ಸಾಧನೆಗಳನ್ನೂ ಅಲೌಕಿಕ ಸ್ಥಿತಿಯನ್ನೂ ಕಣ್ಣಾರೆ ಕಂಡ. ಅಲ್ಲದೆ ಅವನೂ ಶಾಸ್ತ್ರಪಾರಂಗತ, ಸಂಪ್ರದಾಯ ಪ್ರೇಮಿ. ಆದರೂ ಅವನಿಗೆ ಅವರ ವಿಷಯ ಅರ್ಥವಾಗಲಿಲ್ಲ. ಅವರು ಸಾಧನೆ ಯಲ್ಲಿ ತೊಡಗಿದ್ದಾಗ ತಮ್ಮ ಮೈಮೇಲಿನ ಬಟ್ಟೆಗಳನ್ನು, ಅಷ್ಟೇಕೆ, ಪವಿತ್ರವಾದ ಯಜ್ಞೋಪವೀತವನ್ನು ಕಳಚಿಡುವುದನ್ನು ನೋಡಿದಾಗಲಂತೂ ಅವನಿಗೆ ತುಂಬ ಕಸಿವಿಸಿಯಾಯಿತು. 'ಈ ರಾಮಕೃಷ್ಣನಿಗೆ ಒಂದೋ, ಶಾಸ್ತ್ರವಾಕ್ಯದಲ್ಲಿ ಶ್ರದ್ಧೆಯಿಲ್ಲ. ಇಲ್ಲವೇ ಇವನ ತಲೆ ಸ್ವಲ್ಪ ಕೆಟ್ಟಿದೆ' ಎಂದು ನಿಶ್ಚಯಿಸಿದ. ಇದರ ಬಗ್ಗೆ ಅವನು ಆಗಾಗ ಹೃದಯನೊಂದಿಗೆ ಚರ್ಚಿಸುವುದಿತ್ತು. ಈ ವಿಷಯದಲ್ಲಿ ಇಬ್ಬರೂ ಸಮಾನಾಭಿಪ್ರಾಯವುಳ್ಳವರಲ್ಲವೆ ? ಹಲಧಾರಿ ಹೇಳುತ್ತಿದ್ದ:

"ನೋಡು ಹೃದೂ, ಅವನಿದ್ದಾನಲ್ಲ–ರಾಮಕೃಷ್ಣ, ಅವನು ಮೈ ಮೇಲಿನ ಬಟ್ಟೆ ಜನಿವಾರ ಎಲ್ಲವನ್ನೂ ತೆಗೆದುಬಿಡುತ್ತಾನೆ! ಎಂಥಾ ಪ್ರಮಾದ ನೋಡು ಅದು ! ಈ ಬ್ರಾಹ್ಮಣಜನ್ಮವೇನು ಸುಮ್ಮನೆ ಸಿಕ್ಕಿಬಿಡುತ್ತದೆಯೋ ? ಎಷ್ಟೋ ಜನ್ಮಗಳ ಪುಣ್ಯಫಲ ಸಂಚಯನದಿಂದ ಮಾತ್ರವೇ ಲಭಿಸುವಂಥಾದ್ದು ಅದು ! ಅಂಥಾದ್ದರಲ್ಲಿ ಇವನು ಬ್ರಾಹ್ಮಣ್ಯವೆಂದರೆ ಮೂರು ಕಾಸಿನ ಸಾಮಾನೋ ಎಂಬಂತೆ ಅದನ್ನು ಬಿಟ್ಟುಬಿಡುತ್ತಿದ್ದಾನಲ್ಲ! ಅಥವಾ ಹೋಗಲಿ, ಹಾಗೆ ಮಾಡುವುದಕ್ಕೆ ಮನುಷ್ಯ ಯಾವ ಎತ್ತರಕ್ಕೆ ಏರಬೇಕೋ ಆ ಸ್ಥಿತಿಯನ್ನು ಇವನು ತಲುಪಿದ್ದಾನೆಯೆ ?"

ಹಲಧಾರಿಯ ಪ್ರತಿ ಮಾತಿಗೂ ಹೃದಯರಾಮ 'ಹೌದು, ಹೌದು' ಎಂದು ಗೋಣು ಹಾಕುತ್ತಿದ್ದ. ಒಮ್ಮೊಮ್ಮೆ ಹಲಧಾರಿ ಹೇಳುತ್ತಿದ್ದ:

"ಹೃದೂ, ಅವನು ನಿನ್ನ ಮಾತೆಂದರೆ ಎಷ್ಟೋ ಬೆಲೆ ಕೊಡುತ್ತಾನೆ. ಆದ್ದರಿಂದ ನೀನು ಅವನ ಮೇಲೆ ಸದಾ ಒಂದು ಕಣ್ಣಿಟ್ಟು ಅವನು ಹಾಗೇನೂ

ಮಾಡದಂತೆ ನೋಡಿಕೊ. ಕಡೆಗೆ ಅವನ ಕೈಕಾಲು ಕಟ್ಟಿಹಾಕಿಯಾದರೂ ಸರಿಯೆ, ಅವನನ್ನು ಹತೋಟಿಗೆ ತರಬೇಕು."

ಹೀಗೆಲ್ಲ ಕೂಗಾಡಿದ ಬಳಿಕ, ಅವನು ಇನ್ನಾವಾಗಲಾದರೂ ರಾಮಕೃಷ್ಣರ ಪೂಜಾವಿಧಾನವನ್ನು ಕುತೂಹಲದಿಂದ ನೋಡುತ್ತ ನಿಲ್ಲುತ್ತಿದ್ದ. ಅವರ ಕಣ್ಣು ಗಳಿಂದ ಧಾರಾಕಾರವಾಗಿ ಹರಿಯುವ ಅಶ್ರುಪ್ರವಾಹವನ್ನು ನೋಡುತ್ತಿದ್ದ. ಮಾತೆ ಯನ್ನು ನುತಿಸುತ್ತ ಭಜನಾನಂದದಲ್ಲಿ ಮೈಮರೆಯುವುದನ್ನು ನೋಡುತ್ತಿದ್ದ. ಭಗವಂತನಿಗಾಗಿ ಅವರ ವ್ಯಾಕುಲತೆ ಎಷ್ಟೆಂಬುದನ್ನು ನೋಡುತ್ತಿದ್ದ; ನೋಡಿ ವಿಸ್ಮಯಮೂಕನಾಗುತ್ತಿದ್ದ. ಆಗ ಅವನು ಭಾವಿಸುತ್ತಿದ್ದ—'ಆಹಾ! ಖಂಡಿತ ವಾಗಿಯೂ ಇವನಲ್ಲಿ ದೈವೀಶಕ್ತಿಯು ಆವೇಶವಾಗಿರಲೇಬೇಕು. ಇವನ ಈ ಬಗೆಯ ವರ್ತನೆಗೆ ಅದೇ ಕಾರಣ. ಇಲ್ಲದಿದ್ದರೆ ಸಾಮಾನ್ಯ ಮಾನವರಿಗೆ ಹೀಗೆಲ್ಲ ಆಗುವು ದುಂಟೆ?' ತಕ್ಷಣ ಹೃದಯನ ಹತ್ತಿರ ತನ್ನ ಅನಿಸಿಕೆಯನ್ನೆಲ್ಲ ತೋಡಿಕೊಂಡು ಮತ್ತೆ ಹೇಳುತ್ತಿದ್ದ, "ಏ ಹೃದೂ, ನಿಜವಾಗಿಯೂ ನೀನು ಅವನಲ್ಲಿ ಏನೋ ಒಂದು ಅಸಾಧಾರಣ ಶಕ್ತಿಯನ್ನು ಕಂಡಿರಬೇಕು. ಇಲ್ಲದಿದ್ದರೆ ನೀನು ಅವನಿಗೆ ಹಾಗೆ ಸೇವೆ ಮಾಡುತ್ತಿದ್ದೆಯಾ? ನಿಜ ಹೇಳೊ; ಅವನಲ್ಲಿ ನೀನು ಅದೇನು ಕಂಡೆಯೊ?"

ಹೀಗೆ ಹಲಧಾರಿಯ ಮನಸ್ಸು ತೂಗುಯ್ಯಾಲೆಯಾಗಿಯೇ ಇತ್ತು. ಒಮ್ಮೆ ಅವರ ಬಗ್ಗೆ ಭಕ್ತಿ-ಗೌರವ ತಾಳಿ ಪೂಜ್ಯದೃಷ್ಟಿಯಿಂದ ನೋಡಿದರೆ, ಇನ್ನೊಮ್ಮೆ 'ಅಯ್ಯೋ ಪಾಪ! ಇವನಿಗೆ ಹೀಗಾಗಿಹೋಯಿತಲ್ಲ!' ಎಂದು ಮರುಕ ತಾಳುತ್ತಿದ್ದ. ಎಷ್ಟೋ ಸಲ ದೇವಾಲಯದಲ್ಲಿ ಅವರ ಪೂಜೆಯನ್ನು ಕಂಡು ಮುಗ್ಧನಾಗಿ ಉದ್ಗರಿಸುತ್ತಿದ್ದ:

"ರಾಮಕೃಷ್ಣ, ಈ ಬಾರಿ ನಾನು ನಿನ್ನನ್ನು ಅರಿತುಕೊಂಡುಬಿಟ್ಟೆ! ನಿನ್ನ ನಿಜ ವ್ಯಕ್ತಿತ್ವವೇನೆಂದು ತಿಳಿದುಕೊಂಡುಬಿಟ್ಟೆ!"

ಆಗ ಅವರು ಹಾಸ್ಯವಾಗಿ ಹೇಳುತ್ತಿದ್ದರು:

"ಹೋಗಲಿ, ಇನ್ನು ಮೇಲಾದರೂ ಮನಸ್ಸಿಗೆ ಗಲಿಬಿಲಿಯಾಗದಂತೆ ನೋಡಿಕೋ."

ಆಗ ಅವನು ದೃಢ ಸ್ವರದಲ್ಲಿ ಹೇಳುತ್ತಿದ್ದ:

"ಛೆ ಛೆ! ಇನ್ನು ಮೇಲೆ ನೀನು ನನ್ನ ಕಣ್ಣಿಗೆ ಮಣ್ಣೆರಚಲಾರೆ. ನಿಜವಾಗಿಯೂ ನಿನ್ನಲ್ಲಿ ಏನೋ ದೈವಿಕತೆಯಿದೆ. ನನಗದು ಖಂಡಿತವಾಗಿದೆ. ಇನ್ನು ಆ ಬಗ್ಗೆ ಅನುಮಾನವೇ ಇಲ್ಲ."

ಅವನು ಹೇಳುವುದನ್ನೆಲ್ಲ ಕೇಳಿ, ಕಡೆಗೆ ಅವರೆನ್ನುತ್ತಿದ್ದರು:

"ಇರಲಿ, ಬಹಳ ಒಳ್ಳೆಯದು. ಎಷ್ಟು ಹೊತ್ತು ಇರುತ್ತದೆಯೋ ಈ ನಂಬಿಕೆ, ನೋಡೋಣ."

ಸರಿ, ಮಧ್ಯಾಹ್ನದ ಮೇಲೆ ಪೂಜೆಯ ಕೆಲಸವೆಲ್ಲ ಮುಗಿಯಿತೆಂದರೆ ಹಲಧಾರಿ ಶ್ರೀಮದ್ಭಾಗವತವನ್ನೋ ಗೀತೆಯನ್ನೋ ಇಲ್ಲವೆ ಅಧ್ಯಾತ್ಮ ರಾಮಾಯಣ ವನ್ನೋ ಹಿಡಿದು ಕೂರುವುದಿತ್ತು. ಈಗವನು ಒಂದು ಚಿಟಿಕೆ ನಶ್ಯವೇರಿಸಿ, ಬಳಿಕ

ಆ ಗ್ರಂಥಗಳ ಪಾರಾಯಣ ಮಾಡುತ್ತ, ಇಲ್ಲವೆ ಯಾರೊಂದಿಗಾದರೂ ಆ ವಿಷಯದ ಬಗ್ಗೆ ಚರ್ಚಿಸುತ್ತ ಕುಳಿತನೆಂದರೆ ಮತ್ತೆ ಬೇರೆಯೇ ಮನುಷ್ಯನಾಗಿಬಿಡುತ್ತಿದ್ದ. ಅವನ ಅಹಂಕಾರ ಅಭಿಮಾನವೆಲ್ಲ ಮೇಲೆದ್ದು ಬರುತ್ತಿತ್ತು. ಆಗ ಅವನ ಮಾತಿನಲ್ಲಿ, ಮುಖಭಾವದಲ್ಲಿ, 'ಇಂಥಿಂಥ ವಿಷಯಗಳನ್ನೆಲ್ಲ ತಿಳಿದುಕೊಂಡಿರುವವನು ನಾನು! ನನಗೆ ಸರಿಸಮನಾದವರು ಯಾರಿದ್ದಾರೆ?' ಎಂಬ ಧೋರಣೆ ಸ್ಪಷ್ಟವಾಗಿ ಕಾಣುತ್ತಿತ್ತು. ಆಗ ಕೆಲವೊಮ್ಮೆ ರಾಮಕೃಷ್ಣರೆನ್ನುತ್ತಿದ್ದರು:

"ನೀನು ಶಾಸ್ತ್ರಗಳಲ್ಲಿ ಯಾವಯಾವ ಆಧ್ಯಾತ್ಮಿಕ ಅನುಭವಗಳ ಬಗ್ಗೆ, ಆಧ್ಯಾತ್ಮಿಕ ಸ್ಥಿತಿಗಳ ಬಗ್ಗೆ ಓದಿದ್ದೀಯೋ ಅದೆಲ್ಲವನ್ನೂ ನಾನು ಸಾಕ್ಷಾತ್ಕರಿಸಿಕೊಂಡಿದ್ದೇನೆ. ನನಗೆ ಅದೆಲ್ಲ ಚೆನ್ನಾಗಿ ಅರ್ಥವಾಗುತ್ತದೆ."

ಆಗ ಹಲಧಾರಿ ತಿರಸ್ಕಾರದಿಂದ ನಕ್ಕು ಹೇಳುತ್ತಿದ್ದ:

"ವಾಹ್ ವಾಹ್, ಚೆನ್ನಾಗಿ ಹೇಳಿದೆಯೋ, ಮೂರ್ಖಶಿಖಾಮಣಿ! ನಿನ್ನಂಥವನಿಗೆ ಇದೆಲ್ಲ ಅರ್ಥವಾಗುತ್ತದೇನಯ್ಯ?"

ಶ್ರೀರಾಮಕೃಷ್ಣರು: "ನಾನು ನಿಜವನ್ನೇ ಹೇಳುತ್ತಿರುವುದು. ನನ್ನ ಈ ದೇಹದೊಳಗೆ ಯಾವ ಭಗವಂತನಿದ್ದಾನೆಯೋ ಅವನು, ಈಗ ನೀನು ಯಾರ ಮಹಿಮೆಯ ಬಗ್ಗೆ ಹೇಳಿದೆಯೋ ಆತನ ಬಗ್ಗೆ ಎಲ್ಲವನ್ನೂ ತಿಳಿಸಿಕೊಡುತ್ತಾನೆ."

ಇದನ್ನು ಕೇಳಿ ಹಲಧಾರಿ ಸಿಟ್ಟಿಗೆದ್ದು ಕೂಗುತ್ತಿದ್ದ:

"ಆ, ಏನೆಂದೆ? ನಿನ್ನೊಳಗಿನ ದೇವರೆ? ಎಲ್ಲೋ ನೀನೊಬ್ಬ ಮಡ್ಡಿ! ಕಲಿಗಾಲದಲ್ಲಿ ಕಲ್ಕ್ಯವತಾರವನ್ನು ಬಿಟ್ಟರೆ ಬೇರೊಂದು ಅವತಾರದ ಬಗ್ಗೆ ಯಾವ ಶಾಸ್ತ್ರದಲ್ಲಿ ಹೇಳಿದೆ? ನಿನಗೆ ಬುದ್ಧಿ ಕೆಟ್ಟುಹೋಗಿದೆ. ಆದ್ದರಿಂದಲೇ ನೀನು ಹೀಗೆಲ್ಲ ಮಾತನಾಡುವುದು!"

ಹಲಧಾರಿಯ ಕೂಗಾಟವನ್ನು ಕೇಳಿ ರಾಮಕೃಷ್ಣರು ಗಟ್ಟಿಯಾಗಿ ನಕ್ಕುಬಿಡುತ್ತಿದ್ದರು. ಅವರಿಗೆ ಅವನ ಮಾತೇನು ಹೊಸದೆ? ಬಳಿಕ ಹೇಳುತ್ತಿದ್ದರು: "ಅಲ್ಲಯ್ಯ, ಈಗತಾನೆ ಸ್ವಲ್ಪ ಹೊತ್ತಿನಲ್ಲಿ –'ನಿನ್ನ ವಿಷಯವೆಲ್ಲ ನನಗೆ ಅರ್ಥವಾಯಿತು, ನೀನು ಯಾರೆಂದು ಅರ್ಥಮಾಡಿಕೊಂಡುಬಿಟ್ಟೆ' ಅಂತ ನೀನೇ ಹೇಳಿದೆ?" ಆದರೆ ಅದನ್ನೆಲ್ಲ ಕೇಳುವ ತಾಳ್ಮೆ ಈಗ ಅವನಿಗೆಲ್ಲಿ!

ಹೀಗೆ ಇಂತಹ ಘಟನೆಗಳು ಮರುಕಳಿಸುತ್ತಲೇ ಇದ್ದುವು. ಒಂದು ದಿನ ರಾಮಕೃಷ್ಣರು ಬಾಹ್ಯಪ್ರಜ್ಞೆಯೇ ಇಲ್ಲದೆ ಉನ್ಮತ್ತಾವಸ್ಥೆಯಲ್ಲಿ, ಸಂಪೂರ್ಣ ಬತ್ತಲಾಗಿ ಪಂಚವಟಿಯ ಆಲದ ಮರದ ಮೇಲೆ ಕುಳಿತಿದ್ದರು. ಆ ಸ್ಥಿತಿಯಲ್ಲಿ ಅವರು ಮೂತ್ರ ವಿಸರ್ಜಿಸುವುದನ್ನು ಹಲಧಾರಿ ನೋಡಿಬಿಟ್ಟ. ಆಗಂತೂ ಅವನಿಗೆ ಸಂಪೂರ್ಣ ದೃಢವಾಗಿಬಿಟ್ಟಿತು –ಇವನಿಗೆ ಹಿಡಿದಿರುವುದು ಬ್ರಹ್ಮದೈತ್ಯವೇ ಎಂದು!

ಹಲಧಾರಿಗೆ ರಾಮಕೃಷ್ಣರ ಮೇಲೆ ಇನ್ನೊಂದು ಅಸಮಾಧಾನವಿತ್ತು. ಅದು ಅವರ ಕಾಳೀ ಉಪಾಸನೆಗೆ ಸಂಬಂಧಿಸಿದ್ದು. ಈ ಕಾಳಿಕಾ ದೇವಿ ಸಿಟ್ಟಾಗಿದ್ದರಿಂದಲೇ ಅಲ್ಲವೆ ಅವನ ಮಗ ಸತ್ತುಹೋದದ್ದು? ಆಗಿನಿಂದ ಅವನಿಗೆ ಕಾಳಿಕಾಂಬೆಯೆಂದರೆ ತಾಮಸಿಕ ಮೂರ್ತಿ ಎಂಬ ನಂಬಿಕೆ ಬೆಳೆದಿತ್ತು. ಆಗಾಗ ಆ ದೇವಿಯನ್ನು

ದೂಷಿಸುತ್ತಲೇ ಇದ್ದ. ಒಮ್ಮೆಯಂತೂ ರಾಮಕೃಷ್ಣರಿಗೇ ಹೇಳಿಬಿಟ್ಟ, "ತಾಮಸೀ ದೇವಿಯ ಉಪಾಸನೆ ಮಾಡಿದರೆ ಆಧ್ಯಾತ್ಮಿಕ ಉನ್ನತಿಯಾಗುವುದುಂಟೇನೋ? ಎಲ್ಲಾ ಬಿಟ್ಟು ಅಂಥಾ ದೇವಿಯನ್ನು ನೀನು ಆರಾಧಿಸುತ್ತೀಯಲ್ಲ!"

ಅದಕ್ಕೆ ರಾಮಕೃಷ್ಣರೇನೂ ಬದಲು ಹೇಳಲು ಹೋಗಲಿಲ್ಲ. ಆದರೆ ತಮ್ಮ ಇಷ್ಟದೇವತೆಯ ಮೇಲಿನ ಭರ್ತ್ಸನೆಯನ್ನು ಕೇಳಿ ತುಂಬ ಸಂಕಟಪಟ್ಟರು. ನೇರ ವಾಗಿ ದೇವಾಲಯಕ್ಕೆ ಹೋದರು. ಅಶ್ರುಪೂರ್ಣ ಕಂಗಳಿಂದ ಆಕೆಯ ಮುಂದೆ. ನಿಂತು ಕೇಳಿದರು:

"ಅಮ್ಮ ಹಲಧಾರಿ ಶಾಸ್ತ್ರಪಾರಂಗತನಾದ ಪಂಡಿತ. ಅಂಥವನು ಹೇಳು ತ್ತಿದ್ದಾನೆ– ನೀನು ತಮೋಗುಣಮಯಿ ಎಂದು. ಹೇಳಮ್ಮ ನೀನು ತಮೋಗುಣ ಮಯಿಯೇನಮ್ಮ?"

ಜಗನ್ಮಾತೆ ತಡಮಾಡಲಿಲ್ಲ. ಕೂಡಲೇ ತನ್ನ ಸುಪುತ್ರನಿಗೆ ತನ್ನ ನಿಜಸ್ವರೂಪ ವನ್ನು ತೋರಿದಳು. ರಾಮಕೃಷ್ಣರ ಸಂದೇಹ ನಿವಾರಣೆಯಾಯಿತು. ಬಾಲಕನಂತೆ ಕುಣಿಯುತ್ತ ಓಡಿಬಂದರು. "ಎಲ್ಲಿ ಆ ಹಲಧಾರಿ?" ಎನ್ನುತ್ತ ರಾಧಾಗೋವಿಂದ ಮಂದಿರಕ್ಕೆ ನುಗ್ಗಿದರು. ಹಲಧಾರಿ ಪೂಜೆಗೆ ಕುಳಿತಿದ್ದ. ರಾಮಕೃಷ್ಣರು ಭಾವಾವಿಷ್ಟ ರಾಗಿ, "ಏನೆಂದೆ ನೀನು? ಜಗನ್ಮಾತೆ ತಾಮಸಿಕ ಮೂರ್ತಿಯೆಂದೆಯಲ್ಲವೆ?" ಎಂದು ಕೂಗುತ್ತ ಅವನ ಹೆಗಲ ಮೇಲೇರಿ ಕುಳಿತುಕೊಂಡರು! "ನನ್ನ ತಾಯಿ ತಮೋಗುಣಯೆ? ಕೇಳಿಲ್ಲಿ! ಅವಳು ಎಲ್ಲವೂ ಆಗಿದ್ದಾಳೆ. ಅವಳು ತ್ರಿಗುಣ ಮಯಿ, ಅವಳೇ ಶುದ್ಧ ಸತ್ವಗುಣಮಯಿ ಕೂಡ!" ಎಂದು ಮತ್ತೆ ಮತ್ತೆ ಘೋಷಿಸಿದರು.

ಭಾವಸಮಾಧಿಯಲ್ಲಿದ್ದ ಶ್ರೀರಾಮಕೃಷ್ಣರ ಸ್ಪರ್ಶ! ಹಲಧಾರಿಗೆ ಮಿಂಚು ತಗುಲಿದಂತಾಯಿತು. ಆ ಪವಿತ್ರ ಸ್ಪರ್ಶದ ಮತ್ತು ಅವರ ದೃಢ ನಿಶ್ಚಯದ ಮಾತುಗಳ ಪ್ರಭಾವ ಅದ್ಭುತವಾಗಿತ್ತು. ಹಲಧಾರಿಯ ಒಳಗಣ್ಣು ತೆರೆಯಿತು. ಅರ್ಚಕಪೀಠದಲ್ಲಿ ಕುಳಿತಿದ್ದ ಅವನು ರಾಮಕೃಷ್ಣರ ಮಾತನ್ನು ಹೃತ್ಪೂರ್ವಕವಾಗಿ ಸ್ವೀಕರಿಸಿದ. ಅಲ್ಲದೆ ಅವರೊಳಗೆ ಸಾಕ್ಷಾತ್ ಜಗನ್ಮಾತೆಯ ಆವಿರ್ಭಾವವನ್ನು ಕಂಡು ಹೂ ಚಂದನಗಳಿಂದ ಅವರ ಪಾದಗಳಿಗೆ ಅಂಜಲಿಯನ್ನರ್ಪಿಸಿದ!

ಹೃದಯನಿಗೆ ಈ ವಿಷಯವೆಲ್ಲ ತಿಳಿಯಿತು. ಸ್ವಲ್ಪಹೊತ್ತಿನ ಮೇಲೆ ಅವನು ಬಂದು ಹಲಧಾರಿಯನ್ನು ಕೇಳಿದ:

"ಏನು ಮಾವ! ರಾಮಕೃಷ್ಣನಿಗೆ ಬ್ರಹ್ಮದೈತ್ಯ ಅಮರಿಕೊಂಡಿದೆ ಎಂದು ಹೇಳುತ್ತಿದ್ದೆಯಲ್ಲ? ಅಂಥವನಿಗೇಕೆ ನೀನು ಪೂಜೆಮಾಡಿದೆ?"

ತನಗಾದ ಆ ಆಘಾತದಿಂದ ಹಲಧಾರಿ ಇನ್ನೂ ಚೇತರಿಸಿಕೊಂಡಿರಲಿಲ್ಲ. ಅವನೆಂದ : "ಅದೇನೋ ನನಗೆ ಗೊತ್ತಿಲ್ಲಪ್ಪ. ಕಾಳೀ ಗುಡಿಯಿಂದ ಬಂದು ಅವನು ನನಗೆ ಏನೋ ಮಾಡಿಬಿಟ್ಟ ನೋಡು; ನಾನು ಎಲ್ಲವನ್ನೂ ಮರೆತು ಅವನೊಳಗೆ ಸಾಕ್ಷಾತ್ ದೈವೀ ಪ್ರಕಾಶವನ್ನು ಕಂಡೆ ಹೃದೂ! ನಾನು ಕಾಳೀ ದೇವಾಲಯದಲ್ಲಿ ಅವನ ಬಳಿಗೆ ಹೋದಾಗಲೆಲ್ಲ ಅವನು ನನಗೆ ಇಂಥದೇನೋ ಮಾಡಿಬಿಡುತ್ತಾನೆ!

ಓಹ್, ಅದೆಂಥ ಅನುಭವ! ನನಗಂತೂ ಏನೂ ಅರ್ಥವಾಗುತ್ತಿಲ್ಲ."

ಹೀಗೆಲ್ಲ ಹೇಳಿದರೂ ಹಲಧಾರಿ ಸಂಪೂರ್ಣ ಪರಿವರ್ತನೆಗೊಂಡನೆಂದು ಅರ್ಥವಲ್ಲ. ಶ್ರೀರಾಮಕೃಷ್ಣರಲ್ಲಿ ದೈವೀ ಪ್ರಕಾಶವನ್ನು ಎಷ್ಟೇ ಬಾರಿ ಕಂಡರೂ ಅವನ ಬುದ್ಧಿಯೇನೂ ಬದಲಾಗಲಿಲ್ಲ. ಮತ್ತೆ ಒಂದು ಚಿಟಕಿ ನಶ್ಯವೇರಿಸಿ ಶಾಸ್ತ್ರವಿಚಾರ ಚರ್ಚೆ ಮಾಡಲು ಕುಳಿತನೆಂದರೆ ಪಾಂಡಿತ್ಯದ ಪಿತ್ತ ನೆತ್ತಿಗೇರುತ್ತಿತ್ತು. 'ಪುನರ್ಮೂಷಿಕೋ ಭವ' ಎಂಬಂತೆ ಮತ್ತೆ ಹಿಂದಿನ ವ್ಯಕ್ತಿಯೇ ಆಗುತ್ತಿದ್ದ.

ರಾಮಕೃಷ್ಣರು ತಮ್ಮ ಎಲ್ಲ ಬಗೆಯ ಅಹಂಕಾರಗಳನ್ನು ನಾಶಪಡಿಸಿಕೊಳ್ಳುವುದಕ್ಕಾಗಿ ಹಲವು ಬಗೆಯ ಸಾಧನೆಗಳನ್ನು ಮಾಡಿದರು. ಭಗವಂತನು ಎಲ್ಲ ಜೀವಿಗಳಲ್ಲೂ ಇದ್ದಾನೆ ಎಂಬ ನಂಬಿಕೆ ತಮ್ಮಲ್ಲಿ ದೃಢವಾಗಿ ಬೇರೂರುವಂತೆ ಮಾಡಲು ತಮ್ಮದೇ ಆದ ವಿಚಿತ್ರ ವಿಧಾನವನ್ನನುಸರಿಸಿದರು. ಕಾಳೀ ದೇವಾಲಯದಲ್ಲಿ ಬಡವರೆಲ್ಲ ಒಂದು ಪಂಕ್ತಿಯಲ್ಲಿ ಕುಳಿತು ಊಟಮಾಡಿ ಹೋಗಿದ್ದರೆ, ರಾಮಕೃಷ್ಣರು ಆ ಎಲೆಗಳಲ್ಲಿ ಮಿಕ್ಕಿದ್ದ ಉಚ್ಛಿಷ್ಟವನ್ನು ಸಾಕ್ಷಾತ್ ದೇವತಾ ಪ್ರಸಾದ ಎಂಬಂತೆ ಬಾಯಿಗೆ ಹಾಕಿಕೊಂಡರು. ಬಳಿಕ ಆ ಎಲೆಗಳನ್ನೆಲ್ಲ ಸೇರಿಸಿ ತಿಪ್ಪೆಗೆಸೆದು ಬಂದರು. ಕೊಳಕಾಗಿದ್ದ ಆ ಸ್ಥಳವನ್ನು ಕೈಯಾರೆ ಗುಡಿಸಿ ನೀರಿನಿಂದ ತೊಳೆದರು. ತಮ್ಮ ಈ ಮರ್ತ್ಯ ದೇಹದಿಂದ ಕಿಂಚಿತ್ತಾದರೂ ಭಗವಂತನ ಸೇವೆಯಾಯಿತಲ್ಲ ಎಂದು ಆನಂದಿತರಾದರು.

ಹಲಧಾರಿಗೆ ಇವೆಲ್ಲ ತಿಳಿದಾಗ ಅತೀವ ಜುಗುಪ್ಸೆಯಾಯಿತು. ಅವರನ್ನು ಚೆನ್ನಾಗಿ ನಿಂದಿಸಿ ಕೊನೆಗೆ ಹೇಳಿದ:

"ನೀನು ಇಂಥಾ ಅನಾಚಾರವನ್ನೆಲ್ಲ ಮಾಡುತ್ತೀಯಲ್ಲ, ಮುಂದೆ ನಿನ್ನ ಮಕ್ಕಳನ್ನು ಯಾರು ಮದುವೆಯಾಗುತ್ತಾರೋ ?"

ಇದನ್ನು ಕೇಳಿ ರಾಮಕೃಷ್ಣರು ರೋಷಾವಿಷ್ಟರಾಗಿ ತಿರಸ್ಕಾರದಿಂದ ನುಡಿದರು:

"ಏನೆಂದೆಯೋ ಧೂರ್ತ! 'ಶಾಸ್ತ್ರ ಓದುವುದು, ಗಾಳ ಹಾಕುವುದು' ಎಂಬಂತಾಯಿತು. ಜಗತ್ತೆಂಬುದು ಮಿಥ್ಯೆ, ಸರ್ವಜೀವಿಗಳಲ್ಲೂ ಪರಬ್ರಹ್ಮವನ್ನು ಕಾಣಬೇಕು ಎಂದು ಸಾರುವವನಲ್ಲವೆ ನೀನು? ನಿನ್ನ ಹಾಗೆ ನಾನು 'ಜಗತ್ತು ಮಿಥ್ಯೆ' ಅಂತ ಬಾಯಲ್ಲಿ ಹೇಳುತ್ತ ಮಕ್ಕಳ ತಂದೆಯೂ ಆಗುತ್ತೇನೆ ಎಂದು ಭಾವಿಸಿದೆಯಾ? ಥೂ ನಿನ್ನ ಶಾಸ್ತ್ರಜ್ಞಾನಕ್ಕೆ!"

ಇಷ್ಟಾದರೂ ಒಮ್ಮೊಮ್ಮೆ ಅವರು ಹಲಧಾರಿಯ ಪಾಂಡಿತ್ಯದ ಬೆಡಗಿಗೆ ಮೋಸಹೋಗುವುದಿತ್ತು. ಏಕೆಂದರೆ ಅವರದು ಮಗುವಿನಂತಹ ಮುಗ್ಧ ಮನಸ್ಸು. ಆಗ ಅವರಿಗೆ ಏನು ಮಾಡಬೇಕೆಂದು ತೋಚದೆ ಗರ್ಭಗುಡಿಯಲ್ಲಿರುವ ತಮ್ಮ 'ತಾಯಿ'ಯನ್ನೇ ಕೇಳಲು ಓಡುತ್ತಿದ್ದರು. ಒಂದು ದಿನ ಹಲಧಾರಿ ಅವರ ಮುಂದೆ ತನ್ನ ಶಾಸ್ತ್ರಪಾಂಡಿತ್ಯದ ಮೂಟೆಯನ್ನು ಬಿಚ್ಚಿದ; ಭಗವಂತನು ಭಾವಾಭಾವಗಳಿಗೆ ಅತೀತನಾದವನು, ಆದ್ದರಿಂದ ಭಾವಸಮಾಧಿಯ ಸ್ಥಿತಿಯಲ್ಲಿ ಉಂಟಾಗುವ ಭಗವದನುಭವಗಳೆಲ್ಲವೂ ಮಿಥ್ಯೆ ಎಂದು ತನ್ನ ಶಾಸ್ತ್ರಪಾಂಡಿತ್ಯದ ಆಧಾರದಿಂದ ಸಾಬೀತುಪಡಿಸಿದ. ಆಗ ರಾಮಕೃಷ್ಣರಿಗಾದ ದುಗುಡ, ಸಂಕಟ ಅದೆಷ್ಟೋ! ತಾವು

ಇಷ್ಟುದಿನ ಯಾವ ಅಲೌಕಿಕ ದೃಶ್ಯಗಳನ್ನು ಕಂಡಿದ್ದರೋ, ಯಾವ ಅಪೂರ್ವ ಅನುಭವಗಳನ್ನು ಪಡೆದಿದ್ದರೋ ಅವೆಲ್ಲ ಕೇವಲ ಭ್ರಮೆಯೆಂದು ತಿಳಿದು ಅತೀವ ನಿರಾಶೆಯಿಂದ ಹುಚ್ಚಾದರು. ತಾಯಿ ತಮಗೆ ಮೋಸಮಾಡಿದಳೆಂದು ಗೋಳಾಡಿದರು. ಮತ್ತೆ ಆಕೆಯ ಬಳಿಯೇ ಮೊರೆಯಿಟ್ಟರು, "ಅಮ್ಮ ನಾನೊಬ್ಬ ನಿರಕ್ಷರಕುಕ್ಷಿ ಎಂದು ನೀನು ನನ್ನನ್ನು ಹೀಗೆ ಮೋಸಗೊಳಿಸಬಹುದೇನಮ್ಮ? ಇದೇನು ನಿನ್ನ ರೀತಿ?" ಎಷ್ಟು ಹೊತ್ತಾದರೂ ಅವರ ದುಃಖ ಕಡಿಮೆಯಾಗುವುದರ ಬದಲು ಹೆಚ್ಚುತ್ತಲೇ ಹೋಯಿತು. ಅವರು ತಮ್ಮ ಕೋಣೆಯಲ್ಲಿ ಒಬ್ಬರೇ ಕುಳಿತು ಅತ್ತರು.

ಯಾವಾಗಲೋ ಅವರೊಮ್ಮೆ ಕಣ್ದೆರೆದು ನೋಡಿದಾಗ ಎದುರಿಗೆ ನೆಲದಿಂದ ಮಂಜಿನಂತೆ ಹೊಗೆ ಮೇಲೇಳುತಿದ್ದುದನ್ನು ಕಂಡರು! ಇದೇನಿದು ಎಂದು ಅಚ್ಚರಿಯಿಂದ ದಿಟ್ಟಿಸುತ್ತಿರುವಾಗಲೇ ಆ ಹೊಗೆಯ ಮಧ್ಯೆ ಒಂದು ಸುಂದರ ಪುರುಷಾಕೃತಿ ಮೂಡಿತು. ಗೌರವರ್ಣ, ಎದೆಯವರೆಗೆ ಜೋಲುವ ಬಿಳಿಯ ಗಡ್ಡ, ಚೈತನ್ಯಮಯವಾದ ಸೌಮ್ಯ ಮುಖಮಂಡಲ! ಆ ಮೂರ್ತಿ ರಾಮಕೃಷ್ಣರನ್ನೇ ಸ್ಥಿರನೋಟದಿಂದ ನೋಡುತ್ತ ಗಂಭೀರ ದನಿಯಲ್ಲಿ "ಮಗು, ಭಾವಮುಖದಲ್ಲಿರು, ಭಾವಮುಖದಲ್ಲಿರು, ಭಾವಮುಖದಲ್ಲಿರು" ಎಂದು ಮೂರು ಬಾರಿ ನುಡಿಯಿತು. ಬಳಿಕ ಮೆಲ್ಲನೆ ಆ ಆಕೃತಿ ಹೊಗೆಯಲ್ಲಿ ಲೀನವಾಯಿತು, ಹೊಗೆಯೂ ಮಾಯವಾಯಿತು. ಇದಾದ ಮೇಲೆ ರಾಮಕೃಷ್ಣರ ಮನಸ್ಸು ತಾನಾಗಿಯೇ ಶಾಂತವಾಗಿ ಸಹಜ ಸ್ಥಿತಿಗೆ ಹಿಂದಿರುಗಿತು.

ರಾಮಕೃಷ್ಣರಿಗೆ ಆಗ ಸಮಾಧಾನವಾದರೂ ಕೆಲದಿನಗಳ ಮೇಲೆ ಹಲಧಾರಿಯ ಮಾತು ನೆನಪಿಗೆ ಬಂದಾಗ ಮತ್ತೆ ಸಂಶಯ ತಲೆದೋರಿತು. ಆ ಬಗ್ಗೆ ಅವರೇ ಹೇಳುತ್ತಾರೆ: "ಅಂದು ಪೂಜೆಗೆ ಕುಳಿತಾಗ ನನ್ನ ಸಂಶಯವನ್ನು ಪರಿಹರಿಸುವಂತೆ ತಾಯಿಯನ್ನು ಮತ್ತೆ ಮತ್ತೆ ಪ್ರಾರ್ಥಿಸುತ್ತ ಅತ್ತೆ. ಆಗ ಆಕೆ 'ರತಿಯ ತಾಯಿ'ಯ (ಯಾರೋ ಒಬ್ಬ ಹೆಂಗಸಿನ) ರೂಪದಲ್ಲಿ ಕಾಣಿಸಿಕೊಂಡು, 'ನೀನು ಭಾವಮುಖದಲ್ಲಿರು' ಎಂದು ನುಡಿದಳು."

ಇಂಥದೇ ಅನುಭವ ಅವರಿಗೆ ಇನ್ನೂ ಒಮ್ಮೆ ಆಯಿತು. ಮುಂದೆ ಅವರು ಪರಿವ್ರಾಜಕ ಸಂನ್ಯಾಸಿಯಾದ ತೋತಾಪುರಿಯ ನೇತೃತ್ವದಲ್ಲಿ ಅದ್ವೈತ ಸಾಧನೆಯನ್ನು ಕೈಗೊಂಡು ನಿರ್ವಿಕಲ್ಪ ಸಮಾಧಿಯಲ್ಲಿ ನಿಮಗ್ನರಾದರು. ಆ ಸ್ಥಿತಿಯಲ್ಲಿ ಅವರು ನಿರಂತರವಾಗಿ ಆರು ತಿಂಗಳ ಕಾಲ ಇದ್ದರು. ಅದರ ಮುಕ್ತಾಯದ ಹಂತದಲ್ಲಿ ಅವರು ಮತ್ತೆ ತಮ್ಮ ಹೃದಯಾಂತರಾಳದಲ್ಲಿ "ನೀನು ಭಾವಮುಖದಲ್ಲಿರು" ಎಂಬ ಜಗನ್ಮಾತೆಯ ಧ್ವನಿಯನ್ನು ಕೇಳಿದರು.

ಭಾವಮುಖ! ಇದೊಂದು ವಿಶಿಷ್ಟ ಮಾನಸಿಕ ಸ್ಥಿತಿ. ಇದನ್ನು ಹೊಸ್ತಿಲ ಮೇಲಿರಿಸಿದ ಬಳಿಕ ದೀಪದ ಸ್ಥಿತಿಗೆ ಹೋಲಿಸಬಹುದು. ಹೊಸ್ತಿಲ ಮೇಲಿನ ದೀಪದ ಬೆಳಕು ಕೋಣೆಯ ಒಳಗನ್ನೂ ಬೆಳಗುತ್ತದೆ, ಹೊರಗನ್ನೂ ಬೆಳಗುತ್ತದೆ. ಹಾಗೆಯೇ ಭಾವಮುಖ ಎಂದು ಕರೆಯಲಾದ ಮಧ್ಯಂತರ ಸ್ಥಿತಿಯಲ್ಲಿರುವ ಮನಸ್ಸು ಅತ್ತ ಅವ್ಯಕ್ತ ಅನಂತ ಅಖಂಡ ಸಚ್ಚಿದಾನಂದ ಪರಬ್ರಹ್ಮದ ಪರಿಚಯ

ವನ್ನೂ ಹೊಂದಿರುತ್ತದೆ; ಇತ್ತ ವ್ಯಕ್ತ ಪ್ರಪಂಚದ ವಿವರಗಳನ್ನೂ ಗಮನಿಸುತ್ತಿರುತ್ತದೆ. ಇಂಥದೊಂದು ಅದ್ಭುತ ಮಾನಸಿಕ ಸ್ಥಿತಿಯಲ್ಲಿ ನೆಲೆನಿಂತು ತಮ್ಮ ಅವತಾರ ಕಾರ್ಯವನ್ನು ನಡೆಸಿಕೊಂಡು ಬರುವಂತೆ ಸೂಚನೆ ಸಿಗುತ್ತದೆ ರಾಮಕೃಷ್ಣರಿಗೆ.

ಅಂತೂ ರಾಮತಾರಕನ ಹಗರಣದ ನಿಮಿತ್ತದಿಂದಾಗಿ ಶ್ರೀರಾಮಕೃಷ್ಣರು 'ಭಾವಮುಖ'ವೆಂಬ ವಿಶಿಷ್ಟ ಮನಸ್ಥಿತಿಯಲ್ಲಿ ನಿಲ್ಲುವಂತಾಯಿತು, ಹಾಗೂ ಆಧ್ಯಾತ್ಮಿಕ ಇತಿಹಾಸದಲ್ಲೇ ಅಪೂರ್ವವಾದ ಸ್ಥಿತಿಯೊಂದರ ಆವಿರ್ಭಾವವಾಯಿತು.

ತಾನು ದಕ್ಷಿಣೇಶ್ವರದಲ್ಲಿದ್ದ ಅವಧಿಯಲ್ಲಿ ಹಲಧಾರಿ ಅಲ್ಲಿನ ಹಲವಾರು ಅಭೂತಪೂರ್ವ ಘಟನೆಗಳಿಗೆ ಸಾಕ್ಷಿಯಾಗಿದ್ದ. ಪಿಶಾಚದಂತೆ ತೋರುತ್ತಿದ್ದ ಬ್ರಹ್ಮಜ್ಞಾನಿ, ಭೈರವಿ ಬ್ರಾಹ್ಮಣಿ, ರಾಮಾಯತ ಪಂಥದ ಸಾಧು ಜಟಾಧಾರಿ, ನಗ್ನಸಂನ್ಯಾಸಿ ತೋತಾಪುರಿ–ಇವರೆಲ್ಲರನ್ನೂ ಆತ ಕಂಡ. ಹಲಧಾರಿಯೂ ತೋತಾಪುರಿಯೂ ಯಾವಾಗಲಾದರೊಮ್ಮೆ ಒಟ್ಟಿಗೆ ಕುಳಿತು ಅಧ್ಯಾತ್ಮರಾಮಾಯಣವೇ ಮೊದಲಾದ ಗ್ರಂಥಗಳನ್ನು ಓದುವುದಿತ್ತೆಂದು ರಾಮಕೃಷ್ಣರು ಹೇಳಿದ್ದಾರೆ. ಹಲಧಾರಿಗೆ ಸಂಬಂಧಿಸಿದ ಈ ಮೇಲೆ ಹೇಳಿದ ಘಟನೆಗಳೆಲ್ಲವೂ ನಡೆದದ್ದು ಬೇರೆ ಬೇರೆ ಸಮಯಗಳಲ್ಲಿ. ಆದರೂ ಅನುಕೂಲಕ್ಕಾಗಿ ಅವುಗಳನ್ನೆಲ್ಲ ಇಲ್ಲಿ ಒಟ್ಟಿಗೆ ಹೇಳಲಾಗಿದೆ.

## ಕಂಡುಕೇಳದ ಸಂಗತಿಗಳು

ಹಲಧಾರಿ, ದೇವಾಲಯದ ಸಿಬ್ಬಂದಿ ವರ್ಗದವರು, ಸುತ್ತಮುತ್ತಲ ಜನಗಳು—ಇವರೆಲ್ಲ ಶ್ರೀರಾಮಕೃಷ್ಣರನ್ನು ಯಾವ ದೃಷ್ಟಿಯಿಂದ ಕಾಣುತ್ತಿದ್ದರು, ಅವರೊಂದಿಗೆ ಹೇಗೆ ವರ್ತಿಸುತ್ತಿದ್ದರು ಎಂಬುದು ಒಂದು ವಿಚಾರ. ಆ ಬಗ್ಗೆ ಇದುವರೆಗೆ ನೋಡಿದೆವು. ಆದರೆ ಜಿಜ್ಞಾಸುಗಳು, ಸಾಧಕರು, ಸಾಧುಸಂತರು—ಇಂಥವರು ಅವರನ್ನು ಹೇಗೆ ಕಂಡರು, ಅವರೊಂದಿಗೆ ಹೇಗೆ ನಡೆದುಕೊಂಡರು ಎಂಬುದು ಹೆಚ್ಚು ಮಹತ್ವದ ಹಾಗೂ ಹೆಚ್ಚು ಆಸಕ್ತಿಕರವಾದ ಅಂಶ. ಪ್ರತಿಯೊಬ್ಬರೂ ಇತರರನ್ನು ಅಳೆಯುವುದು ತಮ್ಮತಮ್ಮ ಅಳತೆಗೋಲಿನಿಂದಲೇ ಅಲ್ಲವೆ? ಭಗವತ್ ಸಾಕ್ಷಾತ್ಕಾರದ ತೀವ್ರ ವ್ಯಾಕುಲತೆಯಿಂದಾಗಿ ರಾಮಕೃಷ್ಣರು ಇತರರೊಂದಿಗೆ ಬೆರೆಯದಿದ್ದಾಗ, ಇತರರಂತೆ 'ಸುಖವಾಗಿ' ಇರುವುದನ್ನು ಬಿಟ್ಟು ಕಾಣದ ವಸ್ತುವಿಗಾಗಿ ಅಳುವುದನ್ನು ಕಂಡಾಗ, ಜನ ಅದನ್ನು ಹುಚ್ಚು ಎಂದು ಕರೆದರು. ಅವರ ಮನಸ್ಥಿತಿಯನ್ನು ಸ್ವಲ್ಪವಾದರೂ ಅರ್ಥಮಾಡಿಕೊಳ್ಳಬಲ್ಲ ಬುದ್ಧಿವಂತಿಕೆಯಿದ್ದುದು ಮಥುರಾನಾಥನೊಬ್ಬನಿಗೇ. ಆಗಾಗ ದಕ್ಷಿಣೇಶ್ವರಕ್ಕೆ ಬರುತ್ತಿದ್ದ ಸಾಧುಸಂನ್ಯಾಸಿಗಳು, ಸಾಧಕರು ಮಾತ್ರ ರಾಮಕೃಷ್ಣರನ್ನು ಕಂಡೊಡನೆ ಅವರ ಅಸಾಧಾರಣ ಆಧ್ಯಾತ್ಮಿಕ ತೇಜಸ್ಸನ್ನು ಗುರುತಿಸಿ ಗೌರವಾದರಭಾವ ತಾಳುತ್ತಿದ್ದರು.

ಈ ಅವಧಿಯಲ್ಲಿನ ಕೆಲವು ಘಟನೆಗಳನ್ನು ಅವಲೋಕಿಸಿದಾಗ ರಾಮಕೃಷ್ಣರ ವಿಶಿಷ್ಟಸ್ವಭಾವ ನಮ್ಮ ಗಮನಕ್ಕೆ ಬರುತ್ತದೆ. ಅವರ ಆರೋಗ್ಯದ ಹಿತದೃಷ್ಟಿಯಿಂದ ಯಾರು ಏನೇ ಸಲಹೆ ನೀಡಲಿ, ಅವರು ಅದನ್ನು ತಕ್ಷಣ ಸ್ವೀಕರಿಸಿ ಅದರಂತೆ ನಡೆಯುತ್ತಿದ್ದರು. ಆದರೆ ಅವರು ಭಗವದ್ವ್ಯಾಕುಲತೆಯ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿದ್ದು ಬಾಹ್ಯಪ್ರಜ್ಞೆಯನ್ನೇ ಕಳೆದುಕೊಂಡಿದ್ದಂತಹ ಕಾಲಕ್ಕೆ ಈ ಮಾತುಗಳು ಅನ್ವಯಿಸುವುದಿಲ್ಲ, ಆ ವಿಚಾರ ಬೇರೆ. ಆದರೆ ಸಾಮಾನ್ಯವಾಗಿ ಇತರರ ಸಲಹೆ–ಸೂಚನೆಗಳನ್ನು ಅವರು ಪ್ರತಿಮಾತಿಲ್ಲದೆ ಸ್ವೀಕರಿಸಿ ಪಾಲಿಸುತ್ತಿದ್ದರು. ಉದಾಹರಣೆಗೆ ಮಥುರನಾಗಲಿ ಇತರರಾಗಲಿ, 'ಏಕೋ ನಿಮ್ಮ ಆರೋಗ್ಯ ಅಷ್ಟು ಚೆನ್ನಾಗಿರುವಂತೆ ಕಾಣುತ್ತಿಲ್ಲ; ನೀವು ವೈದ್ಯರಿಂದ ಚಿಕಿತ್ಸೆ ಮಾಡಿಸಿಕೊಳ್ಳುವುದೊಳಿತು' ಎಂದು ಸೂಚಿಸಿದರೆ, 'ಅಯ್ಯೋ! ನನಗೇನಾಗಿದೆ ಧಾಡಿ!' ಎಂದೋ, 'ಒಂದಲ್ಲ ಒಂದು ದಿನ ಬಿದ್ದುಹೋಗುವ ಶರೀರಕ್ಕೆ ಯಾಕೆ ಅಷ್ಟೊಂದು ಉಪಚಾರ?' ಎಂದೋ ಹೇಳುತ್ತ ಪ್ರತಿಭಟಿಸಿದವರಲ್ಲ. ಬದಲಾಗಿ ಮರುಮಾತಿಲ್ಲದೆ

ಒಪ್ಪಿಕೊಳ್ಳುತ್ತಿದ್ದರು. ಉತ್ಕಟ ಸಾಧನೆಯಿಂದ ಅವರ ಶರೀರ ಬಳಲಿದ್ದನ್ನು ಕಂಡು, 'ನೀವು ಕೆಲದಿನಗಳ ಮಟ್ಟಿಗೆ ಹಳ್ಳಿಗೆ ಹೋಗಿ ವಿಶ್ರಾಂತಿ ಪಡೆದು ಬರುವುದೊಳ್ಳೆಯದು' ಎಂಬ ಸಲಹೆ ನೀಡಿದಾಗ ಅವರು ಅದಕ್ಕೂ ಒಪ್ಪಿದರು. ಮುಂದೆ ಅವರ ಮದುವೆಯ ಪ್ರಸ್ತಾಪ ಬಂದಾಗಲೂ ಅವರು ಅದನ್ನು ವಿರೋಧಿಸಲಿಲ್ಲ ಎಂಬುದನ್ನು ನೋಡಲಿದ್ದೇವೆ. ಇದೆಲ್ಲ ಬುದ್ಧಿಸ್ವಾಸ್ಥ್ಯವಿಲ್ಲದವರ ಲಕ್ಷಣಗಳಲ್ಲ. ಇಲ್ಲಿ ಈ ಮಾತನ್ನು ಹೇಳುವ ಉದ್ದೇಶವೇನೆಂದರೆ, ಯಾವುದೇ ಬಗೆಯ ಸಾಧನೆಯಿಂದಾಗಲಿ, ಅತೀವ ವ್ಯಾಕುಲತೆಯಿಂದಾಗಲಿ ಅವರ ಬುದ್ಧಿ ಪಲ್ಲಟಗೊಂಡಿದ್ದಿರಬಹುದಾದ ಸಾಧ್ಯತೆಯೇ ಇಲ್ಲ ಎಂಬುದರ ಕಡೆಗೆ ಗಮನ ಸೆಳೆಯುವುದಷ್ಟೆ.

ರಾಮಕೃಷ್ಣರು ಪ್ರಾಪಂಚಿಕ ವ್ಯಕ್ತಿಗಳಿಂದಲೂ ಪ್ರಾಪಂಚಿಕ ವ್ಯವಹಾರಗಳಿಂದಲೂ ಸಾಧ್ಯವಾದಷ್ಟು ದೂರವೇ ಇರುತ್ತಿದ್ದರೆಂಬುದೇನೋ ನಿಶ್ಚಯ. 'ಇವನ್ಯಾರೋ ಮನುಷ್ಯರೊಂದಿಗೆ ಬೆರೆಯದ ವಿಚಿತ್ರ ಪ್ರಾಣಿ' ಎಂದು ಯಾರಾದರೂ ಆಡಿಕೊಂಡಾರು ಎಂಬ ಭಯದಿಂದಲಾದರೂ ಅವರು ಜನರೊಂದಿಗೆ ಸೇರುತ್ತಿದ್ದವರಲ್ಲ. ಆದರೆ, ಎಲ್ಲೆಲ್ಲಿ ಜನ ಒಟ್ಟಾಗಿ ಸೇರಿ ದೇವದೇವಿಯರ ಆರಾಧನೆ, ನಾಮಸಂಕೀರ್ತನೆ, ಉತ್ಸವಗಳನ್ನು ನಡೆಸುತ್ತಿದ್ದರೋ ಅಂಥಲ್ಲಿಗೆ ಹೋಗಲು ಮಾತ್ರ ಅವರು ಸ್ವಲ್ಪವೂ ಹಿಂದೆಮುಂದೆ ನೋಡುತ್ತಿರಲಿಲ್ಲ. ಅಷ್ಟೇ ಅಲ್ಲ, ತಾವಾಗಿಯೇ ಅಲ್ಲಿಗೆ ಹೋಗಿ ಎಲ್ಲರೊಂದಿಗೆ ಉತ್ಸಾಹದಿಂದ ಬೆರೆತು ಭಗವದಾನಂದವನ್ನು ಸವಿಯುತ್ತಿದ್ದರು. ಕಾಳೀಘಾಟಿನ ಪ್ರಸಿದ್ಧ ಕಾಳೀ ದೇವಾಲಯವನ್ನು ಮತ್ತು ಬಾರಾನಾಗೋರಿನ ದಶಮಹಾವಿದ್ಯೆಯರ ದೇವಾಲಯವನ್ನು ಅವರು ಆಗಾಗ ಸಂದರ್ಶಿಸಿ ಪ್ರಣಾಮ ಸಲ್ಲಿಸಿ ಬರುತ್ತಿದ್ದರು. ಅಲ್ಲದೆ ಸಮೀಪದ ಪಾನಿಹಾಟಿ ಎಂಬಲ್ಲಿ ವರ್ಷಕ್ಕೊಮ್ಮೆ ನಡೆಯುತ್ತಿದ್ದ ಜಾತ್ರೆಯಲ್ಲಿ ತಪ್ಪದೆ ಭಾಗವಹಿಸುತ್ತಿದ್ದರು. ಈ ಸಂದರ್ಭಗಳಲ್ಲಿ ಕೆಲವೊಮ್ಮೆ ಅವರು ಶಾಸ್ತ್ರವೇತ್ತರಾದ ಸಾಧಕರನ್ನು ಸಂಧಿಸಿ ಸಂಭಾಷಣೆ ನಡೆಸುವುದಿತ್ತು. ಆ ಸಾಧಕರೆಲ್ಲರೂ ಶ್ರೀರಾಮಕೃಷ್ಣರನ್ನು ಅತ್ಯಂತ ಪೂಜ್ಯ ದೃಷ್ಟಿಯಿಂದ ಕಾಣುತ್ತಿದ್ದರೆಂಬ ಸಂಗತಿ ತಿಳಿದುಬರುತ್ತದೆ.

ಇದಕ್ಕೆ ಉದಾಹರಣೆಯಾಗಿ ೧೮೫೮ ರಲ್ಲಿ ಅವರು ಪಾನಿಹಾಟಿಯ ಮಹಾಜಾತ್ರೆಗೆ ಹೋಗಿದ್ದ ಸಂದರ್ಭವನ್ನು ನೋಡಬಹುದು. ಅಲ್ಲಿ ಅವರು ಮಣಿಮೋಹನ ಸೇನನ ದೇವಸ್ಥಾನದಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದರು. ಆಗ ವೈಷ್ಣವಚರಣ ಎಂಬೊಬ್ಬ ಮೇಧಾವಿಯಾದ ಮಹಾವಿದ್ವಾಂಸ ಅಲ್ಲಿಗೆ ಬಂದ; ರಾಮಕೃಷ್ಣರನ್ನು ಕಂಡ. ಅವರನ್ನು ಕಂಡೊಡನೆಯೇ ವಿಸ್ಮಯಮೂಕನಾಗಿ ನಿಂತು ಅವರನ್ನೇ ದಿಟ್ಟಿಸಿದ. ಇವರು ಅತ್ಯುನ್ನತ ಆಧ್ಯಾತ್ಮಿಕ ಸ್ತರಕ್ಕೇರಿದವರು, ಅಪೂರ್ವ ಮಹಾಪುರುಷರು ಎಂಬುದು ಪ್ರಥಮ ನೋಟದಲ್ಲೇ ಅವನಿಗೆ ಖಚಿತವಾಯಿತು. ತಾನಾಗಿಯೇ ಹೋಗಿ ಅವರ ಪರಿಚಯ ಮಾಡಿಕೊಂಡ. ಸ್ವಲ್ಪ ಹೊತ್ತಿನಲ್ಲೇ ಇಬ್ಬರೂ ಬಹುಕಾಲದ ಪರಿಚಿತರಂತೆ ಸಂಭಾಷಿಸತೊಡಗಿದರು. ಬಳಿಕ ವೈಷ್ಣವಚರಣ ಮಾವಿನ ಹಣ್ಣು, ಅವಲಕ್ಕಿ, ಅರಳು, ಬೆಲ್ಲ ಮೊದಲಾದುವನ್ನು ಕೊಂಡು ದೇವರಿಗೆ ನೈವೇದ್ಯ ಮಾಡಿಸಿದ. ಅನಂತರ ಅವನ್ನು ಹದವಾಗಿ ಬೆರಸಿ ಮಣ್ಣಿನ ಬಟ್ಟಲುಗಳಲ್ಲಿ ಹಾಕಿ

ಶ್ರೀರಾಮಕೃಷ್ಣರಿಗೂ ಸುತ್ತಲಿದ್ದವರಿಗೂ ಹಂಚಿದ; ಮತ್ತು ತಾನೂ ತಿನ್ನುತ್ತ ಕೆಲಹೊತ್ತು ಆನಂದದಿಂದ ಮಾತುಕತೆಯಾಡಿ ಅವರಿಂದ ಬೀಳ್ಕೊಂಡ. ಸಂಜೆಯ ವೇಳೆಗೆ ಅವನು ವಾಪಸು ಕಲ್ಕತ್ತಕ್ಕೆ ಹೊರಟ. ಆದರೆ ಅವನ ಮನದಲ್ಲೆಲ್ಲ ಶ್ರೀರಾಮಕೃಷ್ಣರೇ ತುಂಬಿಕೊಂಡಿದ್ದರು. ಕಾರಣವೇನಿರಬಹುದು? ತಾನು ಹೃದ್ಗತ ಮಾಡಿಕೊಂಡಿರುವ ಶಾಸ್ತ್ರಗಳಲ್ಲಿ ಏನೇನು ಬರೆಯಲಾಗಿದೆಯೋ ಅವೆಲ್ಲವನ್ನೂ ಶ್ರೀರಾಮಕೃಷ್ಣರ ವ್ಯಕ್ತಿತ್ವದಲ್ಲಿ ಮೂರ್ತಿಮತ್ತಾಗಿ ಕಾಣುತ್ತಿದ್ದಾನೆ! ನಿಜ, ಆ ಶಾಸ್ತ್ರವಾಕ್ಯಗಳೆಲ್ಲವೂ ಅನುಷ್ಠಾನದ ಮೂಲಕ ಅನುಭವಸಾಧ್ಯವಾದವುಗಳೇ ನಿಜ! ಈಗ ವೈಷ್ಣವಚರಣನಿಗೆ ತಾನು ಹಲವು ವರ್ಷ ಶ್ರಮವಹಿಸಿ ಅಧ್ಯಯನ ಮಾಡಿದ ಶಾಸ್ತ್ರಗಳ ಮಹಿಮೆ, ಮಹತ್ವ ಮನವರಿಕೆಯಾಗುತ್ತಿದೆ. ಕಲ್ಕತ್ತದ ಕಡೆಗೆ ಹೊರಟ ಅವನಿಗೆ ದಾರಿಯಲ್ಲಿ ಅನ್ನಿಸಿತು, 'ಹೇಗಿದ್ದರೂ ಗಾಡಿ ದಕ್ಷಿಣೇಶ್ವರದ ದಾರಿಯಾಗಿಯೇ ಹೋಗುತ್ತದೆ. ಇನ್ನೊಮ್ಮೆ ಅಲ್ಲಿ ಅವರನ್ನು ನೋಡಿಕೊಂಡೇ ಹೋಗಬಹುದಲ್ಲ' ಎಂದು. ಆದ್ದರಿಂದ ದಕ್ಷಿಣೇಶ್ವರದ ಕಾಳೀ ಗುಡಿಯ ಬಳಿ ಗಾಡಿಯಿಂದಿಳಿದು, ರಾಮಕೃಷ್ಣರಿಗಾಗಿ ಹುಡುಕಿದ. ಆದರೆ ಅವರಿನ್ನೂ ಜಾತ್ರೆಯಿಂದ ಹಿಂದಿರುಗಿರಲಿಲ್ಲ. ಅವನಿಗೆ ಸ್ವಲ್ಪ ನಿರಾಶೆಯಾಯಿತು. 'ಇರಲಿ, ಮತ್ತೆಂದಾದರೂ ಭೇಟಿ ಮಾಡೋಣ' ಎಂದುಕೊಂಡು ಮುನ್ನಡೆದ. ಮೂರ್‍ನಾಲ್ಕು ವರ್ಷಗಳ ಮೇಲೆ ಇಬ್ಬರೂ ಮತ್ತೆ ಭೇಟಿಯಾಗುವುದನ್ನು ಮುಂದೆ ವಿವರವಾಗಿ ನೋಡಲಿದ್ದೇವೆ.

ಶ್ರೀರಾಮಕೃಷ್ಣರ ಸಾಧನೆಗಳ ವೈಶಿಷ್ಟ್ಯವೆಂದರೆ ಅವರು ತಾವೇನು ಮಾಡಬಯಸುತ್ತಿದ್ದರೊ ಅದನ್ನು ತ್ರಿಕರಣಪೂರ್ವಕವಾಗಿ ಮಾಡುತ್ತಿದ್ದುದು. ಲಜ್ಜೆಯೇ ಮೊದಲಾದ ಅಷ್ಟಬಂಧನಗಳಿಂದ ಸಂಪೂರ್ಣ ಮುಕ್ತರಾಗಲು ಅವರು ತಮ್ಮ ಯಜ್ಞೋಪವೀತವನ್ನು ತೆಗದಿಟ್ಟು ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದುದನ್ನು ಹಿಂದೆ ನೋಡಿದೆವು. ಅವರು ತಮ್ಮ ಜೀವನಪರ್ಯಂತ ಸಕಲ ವಿಷಯಗಳಲ್ಲೂ ಹೀಗೆಯೇ ವರ್ತಿಸಿದರು. ಯಾವುದನ್ನೂ ಕೇವಲ ಮನಸ್ಸಿನಲ್ಲೇ ಮಾಡಿ ಮುಗಿಸಿದವರಲ್ಲ ಅವರು.

ಇದಕ್ಕೊಂದು ಉದಾಹರಣೆಯನ್ನು ನೋಡಬಹುದು. ಬಹುತೇಕ ಜನರು ಯಾವ ಧನಕನಕವನ್ನು ಜೀವನದ ಸಾರಸರ್ವಸ್ವವೆಂದು ತಿಳಿದಿದ್ದಾರೆಯೋ, ಅಂಥದನ್ನು ಸಾಧಕನ ಮನಸ್ಸು ಮಣ್ಣಿಗೆ ಸಮನಾಗಿ ಕಾಣಲು ಕಲಿಯದಿದ್ದರೆ ಅವನು ತನ್ನ ಗುರಿ ಮುಟ್ಟಲಾರ ಎಂದು ರಾಮಕೃಷ್ಣರು ಬಲ್ಲವರಿಂದ ಕೇಳಿ ತಿಳಿದಿದ್ದರು. ನಿಜಕ್ಕೂ ಅವರಿಗೆ ಆ ವಿಷಯ ಹೊಸದೇನೂ ಅಲ್ಲ. ಅದು ಅವರಲ್ಲಿ ಜನ್ಮಗತವಾಗಿಯೇ ಬಂದಿದ್ದ ಸ್ವಭಾವ. ಬಾಲ್ಯದಲ್ಲಿಯೇ 'ಹೊಟ್ಟೆಪಾಡಿನ ವಿದ್ಯೆಯನ್ನು ಕಲಿಯುವವನಲ್ಲ ನಾನು' ಎಂದು ಘೋಷಿಸಿದವರಲ್ಲವೆ ಅವರು? ಹಣದ ವ್ಯಾಮೋಹವನ್ನು ಅವರು ಹೊಸದಾಗಿ ಕಳೆದುಕೊಳ್ಳಬೇಕಾದದ್ದೇನಿದೆ? ಆದರೆ ರಾಮಕೃಷ್ಣರು ಹಾಗೆಂದುಕೊಳ್ಳಲಿಲ್ಲ. ಬದಲಾಗಿ ಆ ವಿಷಯವನ್ನು ತಮ್ಮ ಮನಸ್ಸಿಗೆ ಮತ್ತೆಮತ್ತೆ ಹೇಳಿಕೊಂಡರು. ವಿಚಾರ ಮಾಡಿದರು. ಕಡೆಗೆ, 'ಯಾವನು ಸಚ್ಚಿದಾನಂದಸ್ವರೂಪನಾದ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದನ್ನೇ ತನ್ನ ಜೀವನದ

ಪರಮಗುರಿಯನ್ನಾಗಿ ಮಾಡಿಕೊಂಡಿದ್ದಾನೋ ಅಂಥವನಿಗೆ, ಒಂದು ಹಿಡಿ ಮಣ್ಣಿಗಿಂತಲೂ ಒಂದು ಗಡಿಗೆ ಹೊನ್ನು ಯಾವ ರೀತಿಯಲ್ಲೂ ಹೆಚ್ಚು ಉಪಯುಕ್ತವಾಗಲಾರದು ಎಂಬ ನಿಶ್ಚಲ ನಿರ್ಧಾರಕ್ಕೆ ಬಂದರು. ಅದು ತಮ್ಮ ಮನಸ್ಸಿನಲ್ಲಿ ಅಚ್ಚಳಿಯದಂತೆ ಉಳಿಯುವಂತೆ ಮಾಡುವುದಕ್ಕಾಗಿ ಒಂದು ಕೈಯಲ್ಲಿ ಮಣ್ಣಿನ ಮುದ್ದೆಯನ್ನೂ ಇನ್ನೊಂದು ಕೈಯಲ್ಲಿ ನಾಣ್ಯವನ್ನೂ ಹಿಡಿದುಕೊಂಡು, 'ಹೊನ್ನೇ ಮಣ್ಣು, ಮಣ್ಣೇ ಹೊನ್ನು' ಎಂದು ಮತ್ತೆಮತ್ತೆ ಹೇಳುತ್ತ, ಎರಡನ್ನೂ ಗಂಗೆಯೊಳಗೆ ಎಸೆದು ಕೈತೊಳೆದುಕೊಂಡರು. ಅದಾದ ಬಳಿಕ ಅವರ ಅಂಗಪ್ರತ್ಯಂಗವೂ ಹೊನ್ನನ್ನೂ ಧನವನ್ನೂ ತಿರಸ್ಕರಿಸಿಬಿಟ್ಟಿತು! ಅರಿತೋ ಅರಿಯದೆಯೋ ಕೈಗೆ ನಾಣ್ಯದ ಸ್ಪರ್ಶವಾದರೆ ಅವರ ಕೈ ತಾನಾಗಿಯೇ ಸುರುಟಿಕೊಂಡು ಹಿಂದಕ್ಕೆ ಸೆಳೆದುಕೊಳ್ಳುತ್ತಿತ್ತು! ಮುಂದೆ ಮಥುರನು ಇತರರೂ ಅವರಿಗೆ ಹಲವಾರು ಸಂದರ್ಭಗಳಲ್ಲಿ ಬೇಕೆಂಬಷ್ಟು ಧನವನ್ನು ನೀಡಲು ಮುಂದಾದಾಗ ಅವರು ಹೇಗೆ ವರ್ತಿಸಿದರೆಂಬ ಕುತೂಹಲಕರ ಘಟನೆಗಳನ್ನು ನೋಡಲಿದ್ದೇವೆ.

ಬ್ರಹ್ಮನಿಂದ ಹಿಡಿದು ಒಂದು ಹುಲ್ಲುಗರಿಕೆಯವರೆಗೆ ಪ್ರತಿಯೊಂದು ಜೀವಿಯೂ ಪ್ರತಿಯೊಂದು ವಸ್ತುವೂ ಅದೇ ಜಗನ್ಮಾತೆಯ ಒಂದೊಂದು ಆವಿರ್ಭಾವ, ಒಂದೊಂದು ರೂಪ ಎಂಬ ಭಾವನೆಯನ್ನು ಮನದಲ್ಲಿ ದೃಢಪಡಿಸಿಕೊಳ್ಳಲು ಶ್ರೀರಾಮಕೃಷ್ಣರು ಬಡಬಗ್ಗರು ತಿಂದುಬಿಟ್ಟ ಎಂಜಲನ್ನವನ್ನು ಪ್ರಸಾದವೆಂಬಂತೆ ತಿಂದರು; ಅವರು ಊಟ ಮಾಡಿದ ಜಾಗವನ್ನು ಶುಚಿಗೊಳಿಸಿದರು. ಸಮಾಜದ ಅತಿ ಕನಿಷ್ಠ ಜಾತಿಗೆ ಸೇರಿದ ಭಂಗಿಗಳಿಗಿಂತಲಾದರೂ ತಾವು ಉತ್ತಮರೆಂಬ ಅಹಂಕಾರವೇನಾದರೂ ಮನಸ್ಸಿನಾಳದಲ್ಲಿ ಹುದುಗಿಕೊಂಡಿದ್ದರೆ ಅದೂ ಕೂಡ ನಾಶವಾಗಲೆಂದು ಆ ಜನರು ಬಹಿರ್ದೇಶಕ್ಕೆ ಹೋಗುವ ಸ್ಥಳಗಳನ್ನು ಕೈಯಾರೆ ತೊಳೆದರು. ಹೀಗೆ ಹಿಂದೆಂದೂ ಯಾರೂ ಕೇಳರಿಯದ ಇನ್ನೂ ಹಲವಾರು ಸಾಧನೆಗಳನ್ನು ರಾಮಕೃಷ್ಣರು ಈ ಮೊದಲ ನಾಲ್ಕು ವರ್ಷಗಳ ಅವಧಿಯಲ್ಲಿ ಮಾಡಿ ಮುಗಿಸಿದರು.

ನಿರಂತರ ತ್ಯಾಗ-ಸಂಯಮಗಳಿಂದ ಸಾಧಕನು ತನ್ನ ಮನಸ್ಸು ಇಂದ್ರಿಯಗಳನ್ನು ಸ್ಫಟಿಕದಂತೆ ಪರಿಶುದ್ಧಗೊಳಿಸಿಕೊಂಡಾಗ ಅವನ ಮನಸ್ಸೇ ಅವನಿಗೆ ಗುರುವಾಗುತ್ತದೆ ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅಂತಹ ಶುದ್ಧಮನಸ್ಸಿನಲ್ಲಿ ಏಳುವ ಭಾವತರಂಗಗಳೆಂದೂ ಸಾಧಕನನ್ನು ತಪ್ಪುದಾರಿಗೆಳೆಯುವುದಿಲ್ಲ. ಬದಲಾಗಿ ಅವು ಆತನನ್ನು ಗಮ್ಯ ಸ್ಥಾನದೆಡೆಗೆ ವೇಗವಾಗಿ ಕರೆದೊಯ್ಯುತ್ತವೆ. ಶ್ರೀರಾಮಕೃಷ್ಣರ ವಿಷಯದಲ್ಲೂ ಹಾಗೆಯೇ ಆಯಿತು. ಅವರ ಪರಮ ಪರಿಶುದ್ಧ ಮನಸ್ಸೇ ಅವರ ಗುರುವಾಗಿ, ಏನು ಮಾಡಬೇಕು ಏನು ಮಾಡಬಾರದೆಂಬುದನ್ನು ಅವರಿಗೆ ಕಾಲಕಾಲಕ್ಕೆ ತಿಳಿಸಿಕೊಟ್ಟಿತು. ಇದು ಅಷ್ಟಕ್ಕೇ ನಿಲ್ಲಲಿಲ್ಲ. ಅವರ ಜೀವನದಲ್ಲಿ ಈ ಮಾರ್ಗದರ್ಶನ ಮತ್ತಷ್ಟು ಬೃಹತ್ ಪ್ರಮಾಣದಲ್ಲಿ ವ್ಯಕ್ತವಾಯಿತು. ಅವರ ಒಳಮನಸ್ಸು ಎಂಬುದು, ಅದು ಬೇರೆಯೇ ಒಬ್ಬ ವ್ಯಕ್ತಿಯೋ ಎಂಬಂತೆ, ಅವರ ಶರೀರದಿಂದಾಚೆ ಬಂದು ಅವರೆದುರಿಗೆ ಮೈದಾಳಿ ನಿಂತಿತು; ಸಾಧನೆಯನ್ನು

ಮುಂದುವರಿಸುವಂತೆ ಅವರನ್ನು ಪ್ರೇರೇಪಿಸಿತು; ಏನೇನು ಮಾಡಬೇಕೆಂದು ತಿಳಿಸಿಕೊಟ್ಟಿತು. ಕೆಲವೊಮ್ಮೆ ಯಾವುದಾದರೊಂದು ಸಾಧನೆಗೆ ಸಂಬಂಧಿಸಿದಂತೆ, ಅದರ ಅಗತ್ಯವೇನು, ಫಲಾಫಲಗಳೇನು ಎಂದು ವಿವರಿಸಿತು. ಮತ್ತೆ ಕೆಲವು ಬಾರಿ, ತೀವ್ರ ಸಾಧನೆಯಲ್ಲಿ ಮುಳುಗದಿದ್ದರೆ ಶಿಕ್ಷೆಯ ಬೆದರಿಕೆಯನ್ನೂ ಒಡ್ಡುತ್ತಿತ್ತು! ಇದೇ ಮನಸ್ಸು ಒಮ್ಮೊಮ್ಮೆ ತ್ರಿಶೂಲಧಾರಿಯಾದ ಒರ್ವ ತರುಣ ಸಂನ್ಯಾಸಿಯಂತೆ ಅವರೆದುರಿಗೆ ನಿಂತು, 'ನೀನು ಬೇರೆಲ್ಲ ಆಲೋಚನೆಗಳನ್ನೂ ಆಚೆಗೆಸೆದು ನಿನ್ನ ಇಷ್ಟದೈವವನ್ನು ಏಕಾಗ್ರಚಿತ್ತದಿಂದ ಧ್ಯಾನಿಸದಿದ್ದರೆ ಈ ತ್ರಿಶೂಲದಿಂದ ನಿನ್ನೆದೆಯನ್ನು ಇರಿದುಬಿಡುತ್ತೇನೆ' ಎಂದು ಹೆದರಿಸುತ್ತಿತ್ತು! ವಿಷಯಲಂಪಟನಾದ ಪಾಪಪುರುಷನು ಅವರ ಶರೀರದಿಂದ ಹೊರಬರುತ್ತಿದ್ದಂತೆಯೇ ಈ ಸಂನ್ಯಾಸಿಯೂ ಪ್ರತ್ಯಕ್ಷನಾಗಿ ಅವನನ್ನು ಕೊಂದುಹಾಕಿದ ವಿಷಯವನ್ನು ಹಿಂದೆಯೇ ನೋಡಿದೆವು. ಇವೆಲ್ಲ ಅಲ್ಲದೆ, ಯಾವಾಗಲಾದರೂ ಶ್ರೀರಾಮಕೃಷ್ಣರಿಗೆ ದೂರದ ಸ್ಥಳಗಳಲ್ಲಿ ನಡೆಯುತ್ತಿರುವ ಭಜನೆ–ಸಂಕೀರ್ತನೆಗಳನ್ನು ಕೇಳುವ ಇಚ್ಛೆಯಾದರೆ, ಇಲ್ಲವೆ ವಿವಿಧ ದೇವದೇವಿಯರ ಮೂರ್ತಿಗಳ ದರ್ಶನ ಮಾಡುವ ಮನಸ್ಸಾದರೆ, ಆ ಯುವ ಸಂನ್ಯಾಸಿಯು ಅವರ ರೂಪವನ್ನೇ ಧರಿಸಿ ಜ್ಯೋತಿರ್ಮಯ ಶರೀರದಿಂದ ಕಾಣಿಸಿಕೊಳ್ಳುತ್ತಿದ್ದ; ಜ್ಯೋತಿರ್ಮಾರ್ಗದಲ್ಲಿ ಸಂಚರಿಸಿ ಆ ಎಲ್ಲ ಸ್ಥಳಗಳನ್ನೂ ಸಂದರ್ಶಿಸಿ, ಆನಂದವನ್ನನುಭವಿಸಿ ಹಿಂದಿರುಗುತ್ತಿದ್ದ; ಪುನಃ ಅವರ ಶರೀರದಲ್ಲಿ ಲೀನನಾಗುತ್ತಿದ್ದ!

ಶ್ರೀರಾಮಕೃಷ್ಣರು ತಮ್ಮ ಸಾಧನೆಯ ಕಾಲದ ಪ್ರಾರಂಭದಿಂದಲೇ ಈ ಸಂನ್ಯಾಸಿಯ ದರ್ಶನವನ್ನು ಪಡೆಯಲಾರಂಭಿಸಿದ್ದರು. ಮೊದಮೊದಲು ಅವರು ಈ ಅನುಭವಗಳಿಂದ ಬೆದರಿದರೂ ಕ್ರಮೇಣ ಅದಕ್ಕೆ ಹೊಂದಿಕೊಂಡರು. ಪ್ರತಿಯೊಂದು ವಿಷಯದಲ್ಲಿಯೂ ಆ ಸಂನ್ಯಾಸಿಯ ಸೂಚನೆಯಂತೆ ನಡೆಯುವುದನ್ನು ಕಲಿತರು. ಇವುಗಳನ್ನೆಲ್ಲ ತಮ್ಮ ಶಿಷ್ಯರ ಮುಂದೆ ಬಣ್ಣಿಸುತ್ತ ಅವರೊಮ್ಮೆ ಹೇಳುತ್ತಾರೆ:

"ನೋಡುವುದಕ್ಕೆ ನನ್ನಂತೆಯೇ ಇದ್ದ ಒರ್ವ ಸಂನ್ಯಾಸಿ ಆಗಿಂದಾಗ್ಗೆ ನನ್ನೊಳಗಿನಿಂದ ಹೊರಬಂದು ಎಲ್ಲ ವಿಷಯಗಳಲ್ಲೂ ನನಗೆ ಉಪದೇಶ ಕೊಡುತ್ತಿದ್ದ. ಅವನು ಆ ರೀತಿಯಾಗಿ ಹೊರಗೆ ಬಂದಾಗ ಕೆಲವೊಮ್ಮೆ ನನಗೆ ಸ್ವಲ್ಪ ಮಾತ್ರ ಬಾಹ್ಯಜ್ಞಾನವಿರುತ್ತಿತ್ತು; ಇನ್ನು ಕೆಲವೊಮ್ಮೆ ಸಂಪೂರ್ಣ ಪ್ರಜ್ಞಾಹೀನನಾಗಿ ನಿಶ್ಚೇಷ್ಟಿತನಾಗಿ ಬಿದ್ದಿರುತ್ತಿದ್ದೆ. ಆಗ ನನಗೆ ಕೇವಲ ಆತನ ಮಾತು-ಕೃತಿಗಳಲ್ಲದೆ ಬೇರಾವ ವಿಷಯವೂ ಗೋಚರವಾಗುತ್ತಿರಲಿಲ್ಲ. ಆತ ಮತ್ತೆ ಈ ಶರೀರವನ್ನು ಪ್ರವೇಶಿಸಿದ ಮೇಲೆಯೇ ನನಗೆ ಬಾಹ್ಯಪ್ರಜ್ಞೆ ಮರಳುತ್ತಿದ್ದುದು. ನಾನು ಆ ಸಂದರ್ಭಗಳಲ್ಲಿ ಆತನಿಂದ ಯಾವಯಾವ ವಿಷಯಗಳನ್ನೆಲ್ಲ ಕೇಳಿ ತಿಳಿದೆನೊ, ಅದನ್ನೇ ಮುಂದೆ ಭೈರವಿ ಬ್ರಾಹ್ಮಣಿ, ನಗ್ನ ಸಂನ್ಯಾಸಿ ತೋತಾಪುರಿ ಮತ್ತಿತರರೆಲ್ಲ ಪುನಃ ಬೋಧಿಸಿದರು. ಎಂದರೆ ನನಗೆ ಅದಾಗಲೇ ಗೊತ್ತಿದ್ದುದನ್ನೇ ಅವರು ಬೋಧಿಸಿದುದು. ನಾನು ಶಾಸ್ತ್ರ ಮರ್ಯಾದೆಯನ್ನು ಕಾಪಾಡುವಂತಾಗಬೇಕೆಂದೇ ಅವರೆಲ್ಲ ಗುರುರೂಪದಲ್ಲಿ ಬಂದಿದ್ದರೆಂದು ತೋರುತ್ತದೆ. ಇಲ್ಲದಿದ್ದರೆ ಅವರನ್ನು ನಾನು ಗುರುಗಳೆಂದು ಸ್ವೀಕರಿಸಿದುದಕ್ಕೆ ಬೇರೆ ಯಾವ ಕಾರಣವೂ ಕಂಡುಬರುವುದಿಲ್ಲ."

ಈ ಸಾಧನೆಯ ಅಂತ್ಯದ ವೇಳೆಗೆ ರಾಮಕೃಷ್ಣರು ಒಮ್ಮೆ ಕಾಮಾರಪುಕುರಕ್ಕೆ ಹೋದರು. ಆಗ ಅವರ ಜೀವನದ ಅದ್ಭುತಗಳಲ್ಲೊಂದೆಂದು ಹೇಳಬಹುದಾದ ಇನ್ನೊಂದು ದರ್ಶನವನ್ನು ಅವರು ಕಂಡರು. ಇದು ನಡೆದದ್ದು ಅವರು ಪಲ್ಲಕ್ಕಿಯಲ್ಲಿ ಕುಳಿತು, ಕಾಮಾರಪುಕುರದಿಂದ ಸಿಹೋರ್ ಗ್ರಾಮದಲ್ಲಿದ್ದ ಹೃದಯನ ಮನೆಗೆ ಹೋಗುತ್ತಿದ್ದಾಗ. ಅದೊಂದು ಅತ್ಯಂತ ಮನೋಹರ ದೃಶ್ಯ. ವಿಶಾಲ ನೀಲಾಗಸದಡಿಯಲ್ಲಿ ಎಲ್ಲೆಲ್ಲೂ ಹರಡಿಕೊಂಡಿರುವ ಬತ್ತದ ಗದ್ದೆಗಳ ಹಸಿರು; ಮೆಲ್ಲನೆ ತಲೆದೂಗುತ್ತಿರುವ ತೆನೆದುಂಬಿದ ಪಚ್ಚೆಪಯಿರು; ದಾರಿಯುದ್ದಕ್ಕೂ ಸಾಲುಸಾಲು ಆಲ-ಅಶ್ವತ್ಥ ವೃಕ್ಷಗಳ ನೆರಳಿನ ತಂಪು; ಕುಸುಮಭರಿತ ವನರಾಜಿಯ ಕಂಪು; ಪಕ್ಷಿಗಳ ವೈವಿಧ್ಯಮಯ ಸಂಗೀತದ ಇಂಪು! ಈ ಅಹ್ಲಾದಕರ ತಾಣದಲ್ಲಿ ಜಗನ್ಮಾತೆಯ ಶಿಶು ಶ್ರೀರಾಮಕೃಷ್ಣರು ಆನಂದಭರಿತರಾಗಿ ಸಾಗುತ್ತಿದ್ದಾರೆ. ಆಗ —

ತಮ್ಮ ಶರೀರದೊಳಗಿನಿಂದ ಕಿಶೋರ ವಯಸ್ಕರಾದ ಮುದ್ದುಕುವರರಿಬ್ಬರು ಹೊರಜಿಗಿದುದನ್ನು ಅವರು ಕಂಡರು. ಆ ಬಾಲಕರು ಆಟವಾಡುತ್ತ ನಲಿದಾಡುತ್ತ ಕುಣಿದಾಡುತ್ತ ಪಲ್ಲಕ್ಕಿಯ ಜೊತೆಯಲ್ಲೇ ಬಂದರು. ಒಮ್ಮೆ ಪಲ್ಲಕ್ಕಿಯ ಸುತ್ತ ಸುತ್ತುತ್ತಾರೆ, ಮತ್ತೊಮ್ಮೆ ವನಪುಷ್ಪಗಳನ್ನರಸುತ್ತ ಬಹುದೂರದವರೆಗೆ ಓಡಿ ಹೋಗುತ್ತಾರೆ; ಮತ್ತೆ ಓಡಿಬಂದು ಹಾಸ್ಯ–ಪರಿಹಾಸದಲ್ಲಿ ತೊಡಗುತ್ತಾರೆ! ಸಾಮಾನ್ಯ ಬಾಲಕರಂತೆಯೇ ವಿವಿಧ ತುಂಟಾಟಗಳಲ್ಲಿ ತೊಡಗುತ್ತ ನಗುತ್ತಾರೆ! ಯಾರು ಈ ದೇವಸದೃಶ ಬಾಲಕರು? ಎಲ್ಲಿಂದ ಬಂದರು? ರಾಮಕೃಷ್ಣರಿಗಿದೊಂದೂ ತಿಳಿಯಲಿಲ್ಲ. ಬಹು ಹೊತ್ತಿನವರೆಗೂ ಇವರ ತುಂಟಾಟ ಮುಂದುವರಿಯಿತು. ಬಳಿಕ ಆಯಾಸವಾಯಿತೋ ಎಂಬಂತೆ, ಮರಳಿ ಬಂದು ಅವರ ಶರೀರವನ್ನು ಪ್ರವೇಶಿಸಿ ಅಂತರ್ಧಾನರಾದರು.

ತಮಗಾದ ಈ ಅಲೌಕಿಕ ದರ್ಶನವನ್ನು ರಾಮಕೃಷ್ಣರು ಆಗ ಯಾರ ಮುಂದೆಯೂ ಹೇಳಲಿಲ್ಲ. ಹೇಳಿದರೆ ಅದನ್ನು ಅರ್ಥ ಮಾಡಿಕೊಳ್ಳುವುದಿರಲಿ, ನಂಬುವವರಾದರೂ ಯಾರು? ಆದರೆ ಇದಾದ ಒಂದೂವರೆ ವರ್ಷದ ಬಳಿಕ ಭೈರವಿ ಬ್ರಾಹ್ಮಣಿಯನ್ನು ಭೇಟಿಯಾದಾಗ ಅವಳಿಗೆ ಅದನ್ನು ತಿಳಿಸಿದರು. ಅವರು ಹೇಳುವುದನ್ನೆಲ್ಲ ಆಕೆ ಶಾಂತವಾಗಿ ಕೇಳಿದಳು. ಆ ವಿಚಿತ್ರ ವೃತ್ತಾಂತವನ್ನು ಕೇಳಿ ಅವಳಿಗೆ ಆಶ್ಚರ್ಯವಾಗಲಿ ಸಂದೇಹವಾಗಲಿ ಉಂಟಾಗಲಿಲ್ಲ. ಬದಲಾಗಿ ಅವಳು ದೃಢವಿಶ್ವಾಸದಿಂದ ನುಡಿದಳು: "ಮಗು, ನೀನು ಏನೇನು ಕಂಡೆಯೋ ಅದೆಲ್ಲವೂ ನಿಜ. ಈ ಬಾರಿ ಶ್ರೀಚೈತನ್ಯನು ನಿತ್ಯಾನಂದನ ದೇಹದಲ್ಲಿ ಜನ್ಮತಾಳಿದ್ದಾನೆ. ನಿತ್ಯಾನಂದ–ಶ್ರೀಚೈತನ್ಯರಿಬ್ಬರೂ ಈ ಸಲ ಒಟ್ಟಾಗಿ ಬಂದಿದ್ದಾರೆ; ಮತ್ತು ಇಬ್ಬರೂ ನಿನ್ನಲ್ಲಿ ಆವಿರ್ಭವಿಸಿದ್ದಾರೆ! ಆದ್ದರಿಂದಲೇ ನಿನಗೆ ಆ ಬಗೆಯ ದರ್ಶನವಾಯಿತು."

ಹೀಗೆಂದ ಬ್ರಾಹ್ಮಣಿ, 'ಚೈತನ್ಯ ಭಾಗವತ' ಎಂಬ ಗ್ರಂಥದಿಂದ ಈ ಭಾಗವನ್ನು ಓದಿ ಹೇಳುತ್ತಾಳೆ: "ಶ್ರೀ ಚೈತನ್ಯನು ತನ್ನ ಸಖನಾದ ಅದ್ವೈತಗೋಸ್ವಾಮಿಯ ಕೊರಳನ್ನು ತನ್ನ ಕೈಗಳಿಂದ ಬಳಸಿ, 'ಮುಂದೆ ನಾನು ಮತ್ತೊಮ್ಮೆ ನನ್ನೀ ಲೀಲೆಗಳನ್ನು ಆಡಿ ತೋರಿಸಲಿದ್ದೇನೆ. ಸಂಕೀರ್ತನೆಯ ಸ್ಥಳಗಳಲ್ಲಿ ಆನಂದರೂಪ

ದಿಂದ ಇರುತ್ತೇನೆ' ಎಂದು ಮತ್ತೆಮತ್ತೆ ನುಡಿದ." ಬಳಿಕ ಆಕೆ ಅದೇ ಗ್ರಂಥದ ಇನ್ನೊಂದು ಭಾಗವನ್ನು ಉದ್ಧರಿಸುತ್ತಾಳೆ: "ಚೈತನ್ಯನು ಈಗಲೂ ತನ್ನ ಲೀಲೆಯನ್ನು ಆಡುತ್ತಿದ್ದಾನೆ. ಭಾಗ್ಯಶಾಲಿಗಳು ಮಾತ್ರ ಅದನ್ನು ಕಾಣಬಲ್ಲರು." ಇದೀಗ ಅವನು ಶ್ರೀರಾಮಕೃಷ್ಣರೂಪದಲ್ಲಿ ಆವಿರ್ಭಾವಗೊಂಡಿದ್ದಾನೆ ಎಂಬುದು ಭೈರವಿ ಬ್ರಾಹ್ಮಣಿಯ ನಿಶ್ಚಿತ ಅಭಿಪ್ರಾಯ.

ಆದರೆ ಮುಂದೆ ಶ್ರೀರಾಮಕೃಷ್ಣರು ತಮ್ಮ ಆ ಅಪೂರ್ವ ಅನುಭವವನ್ನು ಶಿಷ್ಯರೆದುರು ಬಣ್ಣಿಸುವಾಗ, ಆ ಬಗ್ಗೆ ಆಕೆಯ ಅಭಿಪ್ರಾಯವೇ ಅಂತಿಮವೆಂದೇನೂ ಅವರು ಹೇಳಲಿಲ್ಲ. ಬದಲಾಗಿ, "ನನಗೆ ಆ ದರ್ಶನವಾಯಿತೆಂಬುದು ಸತ್ಯ. ಮತ್ತು ಅದರ ಬಗ್ಗೆ ಭೈರವಿ ಹಾಗೆ ಅಭಿಪ್ರಾಯಪಟ್ಟಳೆಂಬುದೂ ಸತ್ಯ. ಆದರೆ ಅದರ ನಿಜಾರ್ಥವೇನೆಂದು ನಾನು ಹೇಗೆ ಹೇಳಲಿ?" ಎಂದಷ್ಟೇ ಹೇಳಿದರು.

ರಾಮಕೃಷ್ಣರಿಗಾದಂತಹ ಈ ಬಗೆಯ ಅನುಭವಗಳನ್ನು ಜನರು ಇಲ್ಲಿಯವರೆಗೆ ಎಲ್ಲಿಯೂ ಕಂಡವರಲ್ಲ. ಆದ್ದರಿಂದ ಹೆಚ್ಚಿನವರು ಅವರ ವರ್ತನೆಯನ್ನು 'ಹುಚ್ಚಾಟ' ಎಂದು ಒಂದೇ ಸಲಕ್ಕೆ ತೀರ್ಮಾನ ಮಾಡಿದರು. ಹಲಧಾರಿ, ಹೃದಯನಂಥವರು 'ಹಾಗೋ, ಹೀಗೋ?' ಎಂಬ ತೂಗುಯ್ಯಾಲೆಗೆ ಸಿಲುಕಿ ಒಮ್ಮೆ 'ಹಾಗಿರಬಹುದು' ಎಂದು ಭಾವಿಸಿದರು; ಇನ್ನೊಮ್ಮೆ 'ಹೀಗಿರಬೇಕು' ಎಂದು ಊಹಿಸಿದರು. ಇನ್ನು ಮಥುರಾನಾಥನಿಗಾದರೋ ಅವರ ಕುರಿತು ಭಕ್ತಿ-ಆದರಗಳಿತ್ತಾದರೂ, ಅವರನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಬಲ್ಲ ಸಾಮರ್ಥ್ಯವೆಲ್ಲಿತ್ತು? ಒಮ್ಮೊಮ್ಮೆ ಅವನ ಮನಸ್ಸಿಗೆ ಅವರ ಮಹಿಮೆ ಕೋಲ್ಮಿಂಚಿನಂತೆ ಗೋಚರವಾಗುತ್ತಿತ್ತು. ಆ ಬೆಳಕನ್ನು ಕಂಡು ಅವನು 'ಆಹಾ!' ಎಂದು ಅರೆಕ್ಷಣ ವಿಭ್ರಾಂತನಾಗಿ ನಿಲ್ಲುತ್ತಿದ್ದ. ಆದರೆ ಆಮೇಲೆ ಮತ್ತೆ ಅಂಧಕಾರವೇ! ಒಟ್ಟಿನಲ್ಲಿ ಎಷ್ಟೋ ವರ್ಷಗಳವರೆಗೂ ರಾಮಕೃಷ್ಣರ ವಿಷಯದಲ್ಲಿ ಅವನ ದೃಷ್ಟಿಕೋನ ಹೀಗೆಯೇ ಇತ್ತು.

ಇದೇ ಅವಧಿಯಲ್ಲಿ ಯಾವಾಗಲೋ ಒಮ್ಮೆ ಶ್ರೀರಾಮಕೃಷ್ಣರ ಮಾನಸಿಕ ಸ್ಥಿತಿ ದಿನದಿನಕ್ಕೂ ಸುಧಾರಿಸುವ ಬದಲು ಹದಗೆಡುತ್ತಿರುವುದನ್ನು ಕಂಡು ಮಥುರನಿಗೂ ರಾಸಮಣಿಗೂ ಬಹಳ ಚಿಂತೆಯಾಯಿತು. ಏನು ಮಾಡಿದರೆ ಸರಿಹೋದೀತು ಎಂದು ಸಮಾಲೋಚನೆ ನಡೆಸಿದರು. ಕೊನೆಗೆ ಸಮಸ್ಯೆಯ ಮೂಲ ಗೋಚರವಾಗಿಬಿಟ್ಟಿತು! ಈ ಏರು ಯೌವನದಲ್ಲಿ (ರಾಮಕೃಷ್ಣರಿಗೆ ಆಗಿನ್ನೂ ಇಪ್ಪತ್ತು-ಇಪ್ಪತ್ತೆರಡು ವರ್ಷ) ಕಟ್ಟುನಿಟ್ಟಿನ ಬ್ರಹ್ಮಚರ್ಯಪಾಲನೆಯಿಂದ ಅವರ ತಲೆ ಸ್ವಲ್ಪ ಬಿಸಿಯೇರಿದೆ; ಅವರ ವಿಪರೀತ ವರ್ತನೆಗೆಲ್ಲ ಅದೇ ಕಾರಣ ಎಂದು ಅವರಿಗೆ ಖಚಿತವಾಯಿತು. ಸಮಸ್ಯೆಯ ಪರಿಹಾರವೂ ತಕ್ಷಣವೇ ಹೊಳೆಯಿತು—ಅವರ ಬ್ರಹ್ಮಚರ್ಯವನ್ನು ಸ್ವಲ್ಪ ಸಡಿಲಿಸಿದರೆ ಎಲ್ಲವೂ ತಾನಾಗಿಯೇ ಸರಿಹೋಗುತ್ತದೆ! ಆದರೆ ಅದನ್ನು ರಾಮಕೃಷ್ಣರೊಡನೆಯೇ ಹೇಳಲು ಧೈರ್ಯ ಸಾಲಲಿಲ್ಲ. ಆದ್ದರಿಂದ ತಮ್ಮ ಯೋಜನೆಯನ್ನು ಕಾರ್ಯಗತಗೊಳಿಸಲು ರಹಸ್ಯವಾಗಿ ಸಿದ್ಧತೆ ಮಾಡಿದರು.

ಒಂದು ದಿನ ಶ್ರೀರಾಮಕೃಷ್ಣರು ತಮ್ಮ ಕೋಣೆಯಲ್ಲಿ ಏಕಾಂಗಿಯಾಗಿದ್ದಾರೆ;

ಆಗ ಅತ್ಯಂತ ರೂಪವತಿಯರಾದ ಇಬ್ಬರು ತರುಣಿಯರು ಕೋಣೆಯನ್ನು ಪ್ರವೇಶಿಸಿದರು. ರಾಮಕೃಷ್ಣರನ್ನು ಮರುಳುಗೊಳಿಸಲೆಂದು ಮಥುರನಿಂದ ನಿಯುಕ್ತರಾದ ವೇಶ್ಯೆಯರು ಅವರು. ಆದರೆ ಅವರು ದೃಷ್ಟಿಗೆ ಬಿದ್ದೊಡನೆಯೇ ರಾಮಕೃಷ್ಣರು ಅವರಲ್ಲಿ ಕಂಡದ್ದು ಸಾಕ್ಷಾತ್ ಜಗನ್ಮಾತೆಯನ್ನು! ಭಾವಾವೇಶಕ್ಕೊಳಗಾದ ರಾಮಕೃಷ್ಣರು 'ಅಮ್ಮಾ ಅಮ್ಮಾ' ಎನ್ನುತ್ತ ಅವರ ಪಾದಗಳಿಗೆ ಮಣಿದರು. 'ಅಮ್ಮಾ' ಎಂಬ ಉದ್ಗಾರವನ್ನು ಕೇಳಿದೊಡನೆಯೇ ಆ ತರುಣಿಯರು ತಮ್ಮ ಕುಕೃತ್ಯಕ್ಕೆ ನಾಚಿ ಹೊರಗೋಡಿದರು.

ಮಥುರನಿಗೆ ಇದರಿಂದಲೂ ಬುದ್ಧಿ ಬರಲಿಲ್ಲವೇನೋ. ಮುಂದೆ ಇನ್ನೊಮ್ಮೆ ರಾಮಕೃಷ್ಣರನ್ನು ವಿಹಾರಕ್ಕೆಂದು ಸಾರೋಟಿನಲ್ಲಿ ಕಲ್ಕತ್ತಕ್ಕೆ ಕರೆದೊಯ್ದ. ಸಾರೋಟು ಕಲ್ಕತ್ತದ ಕುಪ್ರಸಿದ್ಧ ಮೆಛುವಾಬಜಾರಿನ ಮನೆಯೊಂದರ ಮುಂದೆ ನಿಂತಿತು. ಆದಾಗಲೇ ಅಲ್ಲಿ ಅನೇಕ ಬೆಡಗಿಯರು ಕಾದಿದ್ದರು. ಮಥುರಾನಾಥ ರಾಮಕೃಷ್ಣರನ್ನು ಗಾಡಿಯಿಂದಿಳಿಸಿದ. "ನನಗೆ ಏನೋ ಸ್ವಲ್ಪ ತುರ್ತಿನ ಕೆಲಸವಿದೆ; ಹೋಗಿ ಈಗಲೇ ಬಂದುಬಿಡುತ್ತೇನೆ" ಎಂದು ಹೇಳಿ ಅಲ್ಲಿಂದ ಕಣ್ಮರೆಯಾದ. ಮಥುರನಿಂದ ನಿಯೋಜಿತರಾದ ಆ ಯುವತಿಯರು ರಾಮಕೃಷ್ಣರನ್ನು ರಮಿಸಲು ಮುಂದಾದರು. ಆದರೆ ಆ ಯುವತಿಯರನ್ನು ಕಂಡೊಡನೆಯೆ ಅವರು ಹಸುಳೆಯಂತಾದರು. 'ಅಮ್ಮಾ ಅಮ್ಮಾ' ಎಂದು ಜಗನ್ಮಾತೆಯನ್ನು ಸ್ಮರಿಸುತ್ತ ಬಾಹ್ಯಜ್ಞಾನಶೂನ್ಯರಾಗಿಬಿಟ್ಟರು. (ಮುಂದೆ ಅವರೇ ಹೇಳುವಂತೆ ಅವರ ಜನನೇಂದ್ರಿಯವು ಆಮೆಯ ಅಂಗಾಂಗಗಳಂತೆ ದೇಹದೊಳಗೆ ಸೇರಿಕೊಂಡಿತು.) ಅವರ ಈ ಅದ್ಭುತ ಸ್ಥಿತಿಯನ್ನು ಕಂಡಾಗ ಆ ಯುವತಿಯರ ಮೇಲಾದ ಪರಿಣಾಮ ಅಗಾಧ. ಅವರೊಳಗೆ ಮಾತೃಭಾವ ತಾನೇತಾನಾಗಿ ಜಾಗೃತವಾಯಿತು. ಇಂತಹ ಸಂತನನ್ನು ಮೋಹಗೊಳಿಸಲು ನೋಡಿದೆವಲ್ಲ! ಇದರಿಂದ ತಮಗೆ ಎಂತಹ ಪಾಪ ಬರುವುದೋ, ಯಾವ ಶಾಪ ತಟ್ಟುವುದೋ ಎಂದು ಭಯಭೀತರಾದರು. ರಾಮಕೃಷ್ಣರಿಗೆ ಅಡ್ಡಬಿದ್ದು "ಬಾಬಾ, ನಮ್ಮನ್ನು ಕ್ಷಮಿಸಿಬಿಡಿ" ಎಂದು ಮತ್ತೆಮತ್ತೆ ಯಾಚಿಸಿದರು.

ಅಷ್ಟು ಹೊತ್ತಿಗೆ 'ಏನದು ಗಲಾಟೆ' ಎಂದುಕೊಂಡು ಮಥುರ ಅಲ್ಲಿಗೆ ಬಂದು ಮೆಲ್ಲನೆ ಇಣಿಕಿ ನೋಡಿದ; ರಾಮಕೃಷ್ಣರ ಅದ್ಭುತ ಪಾವಿತ್ರ್ಯ-ಸಂಯಮಗಳ ನಿಚ್ಚಳ ಸಾಕ್ಷ್ಯವನ್ನು ಕಂಡು ಸ್ತಂಭೀಭೂತನಾಗಿ ನಿಂತ. ವಿಸ್ಮಯ ಆನಂದ ಭಯ ನಾಚಿಕೆಗಳು ಏಕಕಾಲದಲ್ಲುದಿಸಿ ಬಾಯಿಂದ ಮಾತೇ ಹೊರಡದಾಯಿತು. ಆದರೂ ಕೂಡಲೇ ಸಾವರಿಸಿಕೊಂಡು ಹತ್ತಿರಕ್ಕೆ ಓಡಿಬಂದ. ಮೆಲ್ಲನೆ ಅವರ ಕೈಹಿಡಿದು ಹೊರಗೆ ಕರೆದುಕೊಂಡು ಹೋಗಲೆತ್ನಿಸಿದ. ಮಥುರನನ್ನು ಕಂಡೊಡನೆಯೆ ವೇಶ್ಯೆಯರು, "ಛೀ! ಥೂ! ನಮ್ಮನ್ನೆಲ್ಲ ನರಕಕ್ಕೆ ತಳ್ಳಬೇಕೆಂದಿದ್ದೆಯಾ? ನಿನ್ನ ಬುದ್ಧಿಗೆ ಬೆಂಕಿ ಹಾಕ!" ಎಂದು ಅವನ ಮೇಲೆ ಉರಿ ಕಾರಿದರು. ರಾಮಕೃಷ್ಣರು ಮಾತ್ರ ಇದೊಂದನ್ನೂ ಅರಿಯದೆ ಜಗನ್ಮಾತೆಯ ಭಾವದಲ್ಲೇ ಅಲ್ಲಿಂದ ಹೊರಟರು. ಪಶ್ಚಾತ್ತಾಪದಿಂದ ಬೆಂದ ಮಥುರ ತನ್ನನ್ನು ಮನ್ನಿಸುವಂತೆ ಅವರಲ್ಲಿ ಶರಣಾದ. ಅವರ ಬಗ್ಗೆ ಮಥುರ-ರಾಸಮಣಿಯರ ಭಕ್ತಿ ಗೌರವಗಳು ಇಮ್ಮಡಿಯಾದುವು.

೩೨

# ಜನ್ಮಸ್ಥಳ ಸಂದರ್ಶನ

ಇತ್ತ ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರು ತಮ್ಮ ಸಾಧನೆಗಳ ಸುಂಟರಗಾಳಿಯಲ್ಲಿ ಹಾರುತ್ತ ತೇಲುತ್ತ ತಾವೇತಾವಾಗಿರುವಾಗ ಅತ್ತ ಅವರ ಜನ್ಮಸ್ಥಳವಾದ ಕಾಮಾರಪುಕುರದಲ್ಲೇನು ನಡೆಯುತ್ತಿತ್ತೆಂದು ನೋಡೋಣ ಬನ್ನಿ. ಮನೆಗೆ ಹಿರಿಯುನಾದ ರಾಮಕುಮಾರ ತೀರಿಕೊಂಡು ಎರಡು ವರ್ಷಗಳಾಗಿವೆ. ಈಗ ರಾಮೇಶ್ವರನ ಯಜಮಾನಿಕೆಯಲ್ಲಿ ಸಂಸಾರ ಹೇಗೋ ಕುಂಟಿಕೊಂಡು ಸಾಗುತ್ತಿದೆ. ವೃದ್ಧೆ ಚಂದ್ರಮಣಿ ತನ್ನ ಪ್ರೀತಿಯ ಕಿರಿ ಮಗನಲ್ಲೇ ಜೀವವಿರಿಸಿ ಕಾಲ ತಳ್ಳುತ್ತಿದ್ದಾಳೆ. ರಾಮಕೃಷ್ಣರು ಕಲ್ಕತ್ತಕ್ಕೆ ಹೋದ ಮೇಲೆ, ಆಕೆ ಅವರನ್ನು ಕಂಡದ್ದು ಬಹುಶಃ ರಾಮಕುಮಾರ ತೀರಿಕೊಂಡಾಗ ಮಾತ್ರ. ಮತ್ತೆ ಅವರ ಸುದ್ದಿಯೇ ಇರಲಿಲ್ಲ. ಆದರೆ ಆಮೇಲೆ ಒಂದೋ ಎರಡೋ ಸಲ ಹೃದಯರಾಮ, 'ಗದಾಯಿಗೆ ಆರೋಗ್ಯ ಚೆನ್ನಾಗಿಲ್ಲ; ವಾಯುಪ್ರಕೋಪವೋ ಏನೋ ಆಗಿದೆ; ಬುದ್ಧಿ ಸ್ವಲ್ಪ ಹೆಚ್ಚುಕಡಿಮೆಯಾದಂತೆ ಕಾಣುತ್ತದೆ' ಎಂದು ಸುದ್ದಿ ಕಳಿಸಿದ್ದ. ಬಳಿಕ ಕೆಲದಿನಗಳಲ್ಲೇ ಕಲ್ಕತ್ತಕ್ಕೆ ಹೋಗಿ ಬರುವವರ ಮೂಲಕ, ರಾಮಕೃಷ್ಣರು ಅರ್ಚಕ ಸ್ಥಾನವನ್ನು ಬಿಟ್ಟದ್ದು, ಎಲ್ಲರ ಸಹವಾಸವನ್ನೂ ದೂರಮಾಡಿ ಒಬ್ಬಂಟಿಗನಾಗಿ ಅಲೆಯುವುದು, ಬಟ್ಟೆ–ಜನಿವಾರ ಎಲ್ಲವನ್ನೂ ಬಿಚ್ಚಿ ಧ್ಯಾನಕ್ಕೆಂದು ಕೂಡುವುದು, ಒಬ್ಬನೇ ಮಾತನಾಡಿಕೊಂಡು ಅಳುವುದು ನಗುವುದು — ಎಲ್ಲ ವಿಷಯವೂ ತಿಳಿಯಿತು. ತನ್ನ ಮಗನ ಬುದ್ಧಿಸ್ವಾಸ್ಥ್ಯ ಕೆಟ್ಟಿದೆಯೆಂಬುದಕ್ಕೆ ಚಂದ್ರಮಣಿಗೆ ಮತ್ತಿನ್ನೇನು ಪುರಾವೆ ಬೇಕು? 'ಈ ಇಳಿವಯಸ್ಸಿನಲ್ಲಿ ನನಗಿನ್ನೇನು ಬರೆದಿದ್ದೀಯೋ ರಘುವೀರಾ!' ಎಂದು ದುಃಖಿಸಿದಳು.

ಅಷ್ಟೊಂದು ಚಿಂತೆಯಾದರೆ ಒಮ್ಮೆ ಹೋಗಿ ನೋಡಿಕೊಂಡೇ ಬರಬಹುದಲ್ಲ ಎಂದರೆ ಅದು ಅಷ್ಟೊಂದು ಸುಲಭದ ಮಾತಾಗಿರಲಿಲ್ಲ. ಏಕೆಂದರೆ ಬಸ್ಸು–ರೈಲುಗಳ ಸೌಕರ್ಯವಾಗಲಿ, ಸರಿಯಾದ ರಸ್ತೆಯಾಗಲಿ ಇಲ್ಲದ ಆ ಕಾಲದಲ್ಲಿ ಕಾಡು ಹೊಲ ಗದ್ದೆಗಳ ಮೂಲಕ ಕಾಲ್ನಡಿಗೆಯಲ್ಲಿ ದಿನಗಟ್ಟಲೆ ಪ್ರಯಾಣ ಮಾಡಬೇಕಾಗಿತ್ತು. ಮತ್ತು ಇಬ್ಬರುಮೂವರಾದರೂ ಒಟ್ಟಿಗೆ ಸೇರಿ ಸಾಕಷ್ಟು ಸಿದ್ಧತೆಗಳನ್ನು ಮಾಡಿಕೊಂಡು, ಬೇರೆ ಕೆಲಸಗಳನ್ನೆಲ್ಲ ಬಿಟ್ಟು ಹೊರಡಬೇಕಾಗಿತ್ತು. ಹೀಗಾಗಿ ಮುಖಾಮುಖಿ ಭೇಟಿಯಾಗಬೇಕೆಂದರೆ ಬಹಳ ಕಷ್ಟ. ಊರಿನ ಬೇರೆ ಯಾರಾದರೂ ಹೋದರೆ–ಬಂದರೆ ಅವರ ಮೂಲಕ ಏನಾದರೂ ಸ್ವಲ್ಪ ತಿಳಿಯಬೇಕಷ್ಟೆ. ಆದ್ದರಿಂದ

ಕೊನೆಗೆ ಕೆಲಕಾಲ ಊರಿಗೆ ಬಂದುಹೋಗುವಂತೆ ರಾಮಕೃಷ್ಣರಿಗೇ ಹೇಳಿಕಳಿಸಿದರು. ಇತ್ತ ಮಥುರನೇ ಮೊದಲಾದವರು ಕೂಡ, ರಾಮಕೃಷ್ಣರು ಊರಿಗೆ ಹೋಗಿ ವಿಶ್ರಾಂತಿ ಪಡೆದುಬರುವುದು ಒಳ್ಳೆಯದೆಂದು ಅಭಿಪ್ರಾಯಪಟ್ಟರು. ಅವರೆಲ್ಲರ ಸಲಹೆಗೆ ಮರುಮಾತಿಲ್ಲದೆ ಒಪ್ಪಿದ ರಾಮಕೃಷ್ಣರು ಜಗನ್ಮಾತೆ ಭವತಾರಿಣಿಗೆ ಪ್ರಣಾಮ ಸಲ್ಲಿಸಿ ಕಾಮಾರಪುಕುರಕ್ಕೆ ಹೊರಟರು.

ಆದರೆ ಅವರು ದಕ್ಷಿಣೇಶ್ವರವನ್ನು ಬಿಟ್ಟರೂ ಭವತಾರಿಣಿ ಅವರನ್ನು ಬಿಟ್ಟಾಳೆ? ಊರಿಗೆ ಬಂದರೂ ಅದೇ ದೈವೋನ್ಮತ್ತತೆ, ಕಾತರತೆ, ಭಾವಪರವಶತೆ! ಆಗಾಗ ಹೃದಯವಿದ್ರಾವಕವಾದ 'ಅಮ್ಮಾ!' ಎಂಬ ಕೂಗು. ಜೊತೆಗೆ ಹೊತ್ತು ಹೊತ್ತಿಗೆ ಆಹಾರ ನಿದ್ರೆಗಳಿಲ್ಲದೆ ಸೊರಗಿದ ಶರೀರ. ಪ್ರೀತಿಯ ಮಗನ ಅವಸ್ಥೆಯನ್ನು ಕಂಡು ಚಂದ್ರಮಣಿಯ ಹೃದಯ ನೊಂದಿತು, ಬೆಂದಿತು. ಇದೇನು ಹುಚ್ಚೋ, ರೋಗವೋ, ಭೂತ–ಪ್ರೇತದ ಕಾಟವೋ ಅಥವಾ ಯಾರದಾದರೂ ಮಾಟಮಂತ್ರದ ಪ್ರಭಾವವೋ—ಒಂದೂ ತಿಳಿಯಲಿಲ್ಲ. ಎಲ್ಲಾ ಬಿಟ್ಟು ತನ್ನ ಮಗನಿಗೇ ಬರಬೇಕೆ ಈ ಅವಸ್ಥೆ ಎಂದು ಬಹು ಸಂಕಟಪಟ್ಟಳು. ಎಲ್ಲ ದೇವರಿಗೂ ಹರಕೆ ಹೊತ್ತಳು. ವೈದ್ಯರಿಂದ ಮದ್ದು ಕೊಡಿಸಿದಳು. ಚೆನ್ನಾಗಿ ಊಟ ತಿಂಡಿ ಹಾಕಿ ಉಪ ಚಾರ ಮಾಡಿದಳು. ಜೊತೆಗೆ ಶಾಂತಿ-ಸ್ವಸ್ತ್ಯಯನ, ಮಂತ್ರ-ತಂತ್ರಗಳನ್ನು ಮಾಡಿ ಸಿದಳು. ಒಟ್ಟಿನಲ್ಲಿ ತನ್ನಿಂದ ಏನೇನು ಸಾಧ್ಯವೋ ಎಲ್ಲವನ್ನೂ ಮಾಡಿದಳು.

ರಾಮಕೃಷ್ಣರು ಸದಾ ಭಾವಾವಸ್ಥೆಯಲ್ಲೇ ಇರುತ್ತಿದ್ದರೆಂದೇನಲ್ಲ. ಎಷ್ಟೋ ವೇಳೆ ಅವರು ಸಹಜಾವಸ್ಥೆಗೆ ಇಳಿದುಬರುತ್ತಿದ್ದರು. ಆಗ ಅವರಲ್ಲಿ ಬಾಲ್ಯದಿಂದಲೂ ಬೆಳೆದು ಬಂದಿದ್ದ ಸರಳತೆ, ದೈವಭಕ್ತಿ, ಮಾತೃಭಕ್ತಿ ಮೊದಲಾದ ಗುಣಗಳೆಲ್ಲ ಮತ್ತೆ ವ್ಯಕ್ತವಾಗುತ್ತಿದ್ದುವು. ಅವರು ಊರವರೊಂದಿಗೆ, ತಮ್ಮ ಹಿಂದಿನ ಸ್ನೇಹಿತರೊಂದಿಗೆ ಸಹಜವಾಗಿಯೇ ಸ್ನೇಹದಿಂದ ನಗುನಗುತ್ತ ಮಾತನಾಡಿದರು. ಹೀಗೆ ಅವರ ಹಿಂದಿನ ಸದ್ಗುಣಗಳಾವುವೂ ಮಾಯವಾದಂತೆ ಕಾಣಲಿಲ್ಲ. ಮತ್ತು 'ದೇವರ ಹುಚ್ಚೊಂ' ದನ್ನು ಬಿಟ್ಟರೆ ಬೇರೆ ಯಾವ ದುರ್ಗುಣವಾಗಲಿ ದುಶ್ಚಟವಾಗಲಿ ಕಾಣಲಿಲ್ಲ. ಆದರೆ ಅವರ ಮಾತುಕತೆಯಲ್ಲಿ ಬಾಲ್ಯದ ಸಲುಗೆ, ತಮಾಷೆ ಕಣ್ಮರೆಯಾಗಿತ್ತು. ಎಲ್ಲ ಪ್ರಾಪಂಚಿಕ ವಿಷಯಗಳಲ್ಲೂ ಉದಾಸೀನತೆ ಎದ್ದುಕಾಣುತ್ತಿತ್ತು. ಇದರೊಂದಿಗೆ, ಸಾಮಾನ್ಯ ಜನರಲ್ಲಿ ಕಂಡುಬರುವಂತಹ ನಾಚಿಕೆ, ಸಂಕೋಚ, ಮುಚ್ಚುಮರೆ, ಭಯ—ಇವೆಲ್ಲವನ್ನೂ ಅವರು ಕಳಚಿಕೊಂಡಿದ್ದಂತೆ ತೋರುತ್ತಿತ್ತು. ಅಲ್ಲದೆ ಇತರರ ಬುದ್ಧಿಗೆ ಗೋಚರವಾಗದ ಯಾವುದೋ ಒಂದು ವಸ್ತುವನ್ನು ಗಳಿಸಲು ತೀವ್ರ ವ್ಯಾಕುಲತೆ ಮತ್ತು ಅದನ್ನು ಪಡೆದುಕೊಳ್ಳುವ ದಾರಿಯಲ್ಲಿ ಎದುರಾಗುವ ಎಲ್ಲ ಅಡ್ಡಿ ಆತಂಕಗಳನ್ನು ನಿವಾರಿಸುವ ನಿರಂತರ ಪ್ರಯತ್ನ ಅವರಲ್ಲಿ ಎದ್ದು ಕಾಣುತ್ತಿತ್ತು. ಇದನ್ನೆಲ್ಲ ನೋಡಿ ನೋಡಿ ಎಲ್ಲರೂ ಒಂದೇ ತೀರ್ಮಾನಕ್ಕೆ ಬಂದರು—ಇವರಿಗೆ ಯಾವುದೋ ಭೂತ ತಗಲಿಕೊಂಡಿದೆ, ಮತ್ತೇನಿಲ್ಲ ಎಂದು.

ಚಂದ್ರಮಣಿಗೂ ಮೊದಲೇ ಆ ಅನುಮಾನ ಬಂದಿತ್ತು. ಈಗ ಎಲ್ಲರೂ ಅದನ್ನೇ ಹೇಳಿದಾಗ ಅದು ದೃಢವಾಯಿತು. ಸರಿ, ಭೂತ ಬಿಡಿಸಲು ಗಟ್ಟಿಗನಾದ

ಒಬ್ಬ ಮಂತ್ರವಾದಿಯನ್ನು ಕರೆಸಿದರು. ಇಲ್ಲದಿರುವ ಭೂತವನ್ನು ಓಡಿಸು ಎಂದರೆ ಯಾವ ಮಂತ್ರವಾದಿ ತಾನೆ ಏನು ಮಾಡಿಯಾನು ? ಆದರೂ ಅವನನ್ನು ಕರೆಯಿಸಿದ್ದರಿಂದ ಸ್ವಲ್ಪ ಒಳ್ಳೆಯದೇ ಆಯಿತು. ಮುಂದೆ ಶ್ರೀರಾಮಕೃಷ್ಣರೇ ಆ ಕಥೆಯನ್ನು ಹೀಗೆ ಹೇಳುತ್ತಾರೆ:

"ಒಂದು ದಿನ ಒಬ್ಬ ಮಂತ್ರವಾದಿ ಬಂದ. ಮಂತ್ರ ಹಾಕಿದ ಬತ್ತಿಯನ್ನು ಸುಟ್ಟು ನನ್ನ ಮೂಗಿಗಿಟ್ಟು ಮೂಸುವಂತೆ ಹೇಳಿದ. 'ನಿಜವಾಗಿಯೂ ಭೂತ ಹಿಡಿದಿದ್ದರೆ ಅದು ಬಿಟ್ಟುಹೋಗುತ್ತದೆ' ಎಂದ. ನಾನು ಮೂಸಿ ನೋಡಿದೆ; ಆದರೆ ಏನೇನೂ ಪ್ರಯೋಜನವಾಗಲಿಲ್ಲ! ಬಳಿಕ ಬೇರೆ ಕೆಲವು ಪ್ರಸಿದ್ಧ ಮಂತ್ರವಾದಿಗಳನ್ನು ಕರೆಸಿದರು. ಅವರು ಮಂತ್ರಗಳನ್ನು ಪಠಿಸಿ ಅಲ್ಲಿದ್ದ ಒಬ್ಬನ ಮೇಲೆ ಚಂಡನನ್ನು (ಒಂದು ಭೂತಗಣ) ಆವಾಹನೆ ಮಾಡಿದರು. ಚಂಡನು ಪೂಜೆ ಬಲಿಗಳನ್ನೆಲ್ಲ ಸ್ವೀಕರಿಸಿ ಪ್ರಸನ್ನನಾಗಿ, 'ಇವನಿಗೆ ಭೂತ, ದೆವ್ವ ಏನೂ ಹಿಡಿದಿಲ್ಲ ಅಥವಾ ಯಾವ ರೋಗವೂ ಬಂದಿಲ್ಲ' ಎಂದು ಹೇಳಿದ. ಅನಂತರ ಎಲ್ಲರ ಸಮಕ್ಷಮದಲ್ಲಿ ಚಂಡ ನನ್ನನ್ನು ಸಂಬೋಧಿಸಿ, 'ಓ ಗದಾಯ್, ನೀನು ಸಾಧುವಾಗಬಯಸುವವನಲ್ಲವೆ ? ಹಾಗಿರುವಾಗ ನೀನು ಅಷ್ಟೊಂದು ಅಡಿಕೆ ತಿನ್ನುವುದೇಕೆ ? ಅಡಿಕೆ ಹೆಚ್ಚಾಗಿ ತಿಂದರೆ ಕಾಮ ವೃದ್ಧಿಯಾಗುವುದೆಂದು ಗೊತ್ತಿಲ್ಲವೆ ?' ಎಂದ. ನಿಜವಾಗಿಯೂ ಆ ಮೊದಲು ನನಗೆ ಅಡಿಕೆಯೆಂದರೆ ಪ್ರಾಣ. ಅದನ್ನು ಪದೇಪದೇ ತಿನ್ನುತ್ತಿದ್ದೆ. ಚಂಡನ ಮಾತು ಕೇಳಿದಾಗಿನಿಂದ ಅಷ್ಟೊಂದು ಅಡಿಕೆ ತಿನ್ನುವುದನ್ನು ಬಿಟ್ಟುಬಿಟ್ಟೆ."

ಅಂತೂ ಮಂತ್ರವಾದಿಗಳನ್ನು ಕರೆಯಿಸಿದ್ದರಿಂದ ಭೂತವೂ ಹಿಡಿದಿಲ್ಲ, ರೋಗವೂ ಬಡಿದಿಲ್ಲ ಎಂದು ತಿಳಿದಂತಾಯಿತು ! ಆದರೆ ಇದರಿಂದ ಸಮಸ್ಯೆ ಇನ್ನೂ ಜಟಿಲವಾಯಿತು ಅಷ್ಟೆ. ಎಲ್ಲವೂ ಸರಿಯಾಗಿದೆ ಎಂದ ಮೇಲೆ ಗದಾಧರನ ವರ್ತನೆ ಮಾತ್ರ ಅಷ್ಟೊಂದು ವಿಚಿತ್ರವೇಕೆ ? ಮೊದಲಿನಿಂದಲೂ ಅವನು ಇತರರಂತಲ್ಲ ಎನ್ನುವುದೇನೋ ಪ್ರತಿಯೊಬ್ಬರಿಗೂ ತಿಳಿದದ್ದೇ. ಆದರೂ ಅಂಥಾ ವ್ಯಾಕುಲತೆ, ಉನ್ಮತ್ತ ವರ್ತನೆ, ಅತಿಯಾದ ಉದಾಸೀನತೆ—ಇವು ಆ ಊರಿನ ಜನ ಕಂಡು ಕೇಳರಿಯದ ವಿಷಯ. ಕಡೆಗೆ ಇವನ ಸ್ವಭಾವವೇ ಇಂಥದು ಎಂದುಕೊಂಡು ಮನೆಯವರೂ ನೆಂಟರಿಷ್ಟರೂ ಸಮಾಧಾನ ತಂದುಕೊಳ್ಳಬೇಕಾಯಿತು.

ಆದರೆ ಈ ಸಮಯದಲ್ಲಿ ರಾಮಕೃಷ್ಣರ ವರ್ತನೆ ಅತ್ಯಂತ ಆಶ್ಚರ್ಯಕರ ರೀತಿಯಲ್ಲಿ ತನ್ನಷ್ಟಕ್ಕೇ ಬದಲಾಯಿತು. ಊರಿಗೆ ಮರಳಿದ ಮೇಲೆ ಕೆಲಕಾಲ ನಿರಂತರವಾಗಿ ತಮ್ಮ ಇಷ್ಟದೈವದ ವಿರಹದುಃಖವನ್ನು ಅನುಭವಿಸಿದ ರಾಮಕೃಷ್ಣರು ಇದ್ದಕ್ಕಿದ್ದಂತೆ ಶಾಂತರಾದರು. ಅವರ ರೋದನ, ಉದ್ವೇಗಯುತ ಮುಖಭಾವ, 'ಅಮ್ಮಾ ಅಮ್ಮಾ' ಎಂದು ಕೂಗುವುದು—ಇವೆಲ್ಲ ನಿಂತುಹೋಯಿತು. ಅವರ ಮಾತುಕತೆ ಹೆಚ್ಚು ಸಹಜವಾಯಿತು. ಮನೆಯವರಿಗೂ ಆಪ್ತೇಷ್ಟರಿಗೂ ಇದರಿಂದ ಸಂತೋಷವಾಯಿತೆಂದು ಹೇಳಬೇಕಾಗಿಯೇ ಇಲ್ಲ. ಆದರೆ ರಾಮಕೃಷ್ಣರ ಸ್ವಭಾವದಲ್ಲಿ ಬೇರೊಂದು ಬಗೆಯ ತಿರುವು ಕಾಣಿಸಿಕೊಂಡಿತು.

ಈಗ ಅವರು ಊರಾಚೆಗಿನ 'ಭೂತೀರ್ ಖಾಲ್' ಎಂಬ ಸ್ಮಶಾನದಲ್ಲಿ ದಿನದ

ಹೆಚ್ಚಿನ ವೇಳೆಯನ್ನು ಕಳೆಯತೊಡಗಿದರು. ಸ್ಮಶಾನವೆಂದರೆ ಯಾವಾಗಲೂ ನಿರ್ಜನ ಪ್ರದೇಶವೇ. ಬದುಕಿರುವವರಿಗೆ ಅಲ್ಲಿ ಹೆಚ್ಚೇನೂ ಕೆಲಸವಿರುವುದಿಲ್ಲ. ಅಲ್ಲದೆ ಅವು ಪ್ರೇತ–ಪಿಶಾಚಿಗಳ ಆವಾಸಸ್ಥಾನವೆಂಬ ನಂಬಿಕೆಯಿರುವುದರಿಂದ ಜನ ಸಾಧ್ಯವಾದಷ್ಟು ಅಲ್ಲಿಂದ ದೂರವೇ ಇರುತ್ತಾರೆ. ಆದರೆ ಸ್ಮಶಾನಗಳು ನಿರ್ಜನ ಹಾಗೂ ಶಾಂತ ಎಂಬ ಕಾರಣಕ್ಕಾಗಿಯೇ ಅವು ವಿರಾಗಿಗಳಿಗೆ, ಸಾಧಕರಿಗೆ—ಅದರಲ್ಲೂ ತಾಂತ್ರಿಕ ಸಾಧಕರಿಗೆ—ಬಹು ಪ್ರಿಯವಾದವು. ಅಲ್ಲದೆ ಅವು ಜಗತ್ತಿನ ಹಾಗೂ ಸಕಲ ಸುಖಭೋಗಗಳ ನಶ್ವರತೆಯ ಪ್ರತೀಕವಾದ್ದರಿಂದ ಜಪತಪ ಧ್ಯಾನ ಗಳಿಗೆ ಹೆಚ್ಚು ಸಹಾಯಕಾರಿ. ಆದ್ದರಿಂದ ಶ್ರೀರಾಮಕೃಷ್ಣರು ಎಲ್ಲರ ಸಂಗವನ್ನೂ ವರ್ಜಿಸಿ ಇಡೀ ಬೆಳಗ್ಗೆ ಹಾಗೂ ರಾತ್ರಿಯ ಹೆಚ್ಚಿನ ಸಮಯ ಸ್ಮಶಾನದಲ್ಲೇ ಇರ ತೊಡಗಿದರು. ಅಲ್ಲಿ ಅವರು ಪೂಜೆ, ಧ್ಯಾನ, ಜಪಗಳಲ್ಲಿ ಮುಳುಗಿಹೋಗುತ್ತಿದ್ದರು.

ರಾಮಕೃಷ್ಣರನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಅವರ ಬಂಧುಗಳು ಅವರಲ್ಲಿ ಆಗಾಗ ಕೆಲವು ಅತೀಂದ್ರಿಯ ಶಕ್ತಿಗಳು ವ್ಯಕ್ತಗೊಳ್ಳುವುದನ್ನು ಗುರುತಿಸಿದರು. ಈ ಸಮಯದಲ್ಲಿ ಅವರು ಅನೇಕ ಆಶ್ಚರ್ಯಕರ ಸಾಧನೆಗಳಲ್ಲಿ ತೊಡಗಿದ್ದರೆಂಬ ವಿಷಯವೂ ತಿಳಿದುಬರುತ್ತದೆ. ಕೆಲವೊಮ್ಮೆ ಅವರು ಸ್ಮಶಾನಕ್ಕೆ ಹೊಸ ಮಡಕೆ ಯಲ್ಲಿ ಸಿಹಿ ತಿಂಡಿತಿನಿಸುಗಳನ್ನು ತುಂಬಿಕೊಂಡು ಹೋಗುತ್ತಿದ್ದರು. ಅಲ್ಲಿ ಅದನ್ನು ಭೂತಗಣಗಳಿಗೆ ಬಲಿಯಿಟ್ಟು ಬಳಿಕ ನರಿಗಳಿಗೆ ತಿನ್ನಿಸುತ್ತಿದ್ದರು. ಖಾಲಿಯಾದ ಮಡಕೆಯು ತಾನಾಗಿಯೇ ಅವರ ಕೈಯಿಂದ ಮೇಲೇರಿ ಗಾಳಿಯಲ್ಲಿ ಕರಗಿಹೋಗು ತ್ತಿತ್ತಂತೆ ! ಮತ್ತು ಆ ಭೂತಗಣಗಳು ಆಗಾಗ ಅವರ ಕಣ್ಣಿಗೆ ಕಾಣುತ್ತಿದ್ದುವಂತೆ ! ನಿಜಕ್ಕೂ ರಾಮಕೃಷ್ಣರು ಇಂತಹ ಇನ್ನೂ ಎಷ್ಟೆಷ್ಟು ಸಾಧನೆಗಳನ್ನು ಮಾಡಿದರೋ, ಎಷ್ಟೆಷ್ಟು ದರ್ಶನಗಳನ್ನು ಪಡೆದುಕೊಂಡರೋ ಬಲ್ಲವರಾರು ?

ಮಧ್ಯರಾತ್ರಿಯ ವೇಳೆಯಾದರೂ ರಾಮಕೃಷ್ಣರು ಮನೆಗೆ ಹಿಂದಿರುಗದಿದ್ದರೆ ರಾಮೇಶ್ವರ ಅವರನ್ನು ಹುಡುಕಿಕೊಂಡು ಬರುತ್ತಿದ್ದ. ಸ್ಮಶಾನದ ಬಳಿಗೆ ಬಂದು, 'ಗದಾಯ್, ಓ ಗದಾಯ್' ಎಂದು ಕೂಗುತ್ತಿದ್ದ. ಆಗ ಅವರು ಅಲ್ಲಿಂದಲೇ ಗಟ್ಟಿ ಯಾಗಿ, "ಬಂದೆ ಅಣ್ಣಾ, ಈಗಲೇ ಬಂದೆ; ನೀನು ಸ್ವಲ್ಪ ಅಲ್ಲೇ ಇರು. ಇತ್ತ ಕಡೆ ಬಂದರೆ ನಿನಗೆ ತೊಂದರೆಯಾದೀತು" ಎಂದು ಉತ್ತರಿಸುತ್ತಿದ್ದರು.

ಈ ಅವಧಿಯಲ್ಲಿ ರಾಮಕೃಷ್ಣರು ಆ ಸ್ಮಶಾನದಲ್ಲಿ ತಮ್ಮ ಕೈಯಾರೆ ಒಂದು ಬಿಲ್ವವೃಕ್ಷದ ಸಸಿಯನ್ನು ನೆಟ್ಟರು. ಅವರು ಧ್ಯಾನ ಜಪಗಳನ್ನು ಮಾಡುತ್ತಿದ್ದುದು ಒಂದು ಅಶ್ವತ್ಥ ವೃಕ್ಷದ ಬುಡದಲ್ಲಿ. ಈ ದಿನಗಳಲ್ಲಾದ ವಿವಿಧ ಅನುಭವಗಳಿಂದಾಗಿ ಅವರ ಮನಸ್ಸು ಸ್ವಲ್ಪ ಶಾಂತವಾಯಿತು. ಜಗನ್ಮಾತೆಯ ಅಗಲಿಕೆಯ ದುಃಖ ಸ್ವಲ್ಪ ಮಟ್ಟಿಗೆ ಶಮನಗೊಂಡಿತು. ಈ ಸಾಧನೆಗಳ ಫಲವಾಗಿ ಅವರಿಗೆ ಎರಡು ಕೈಗಳಲ್ಲಿ ಖಡ್ಗ–ರುಂಡಗಳನ್ನು ಧರಿಸಿರುವ ಮತ್ತು ಇನ್ನೆರಡು ಕೈಗಳಲ್ಲಿ ವರ–ಅಭಯಗಳನ್ನು ನೀಡುತ್ತಿರುವ ಸಾಧಕಾನುಗ್ರಹಕಾರಿಣಿಯಾದ ಕಾಳಿಕಾಮಾತೆಯ ನಿರಂತರ ದರ್ಶನ ಲಾಭವಾಗುತ್ತಿತ್ತೆಂದು ತಿಳಿದುಬರುತ್ತದೆ. ಅವರು ತಮ್ಮೆಲ್ಲ ಸಮಸ್ಯೆ ಸಂದೇಹ ಗಳನ್ನು ಆಕೆಯಲ್ಲಿ ತೋಡಿಕೊಂಡು ಆಕೆಯ ನಿರ್ದಿಷ್ಟ ಸೂಚನೆಯಂತೆಯೇ

ನಡೆದುಕೊಳ್ಳಲಾರಂಭಿಸಿದರು.

ಸ್ಮಶಾನದಲ್ಲಿ ತೀವ್ರ ಸಾಧನೆಗಳನ್ನು ಮಾಡುತ್ತಿದ್ದ ಆ ಸಮಯದಲ್ಲೇ ರಾಮಕೃಷ್ಣರು ಹಲವು ವಿಧದ ಯೋಗಾಭ್ಯಾಸಗಳನ್ನೂ ಕೈಗೊಂಡರು. ಬಹುಶಃ ಈ ಯೋಗಾಭ್ಯಾಸದ ಫಲವಾಗಿಯೇ ಅವರಲ್ಲಿ ಭವಿಷ್ಯತ್ ದರ್ಶನಶಕ್ತಿಯುಂಟಾಗಿದ್ದುದು ಗೋಚರವಾಗುತ್ತಿತ್ತೆಂದು ಹೃದಯನೂ ಹಲವಾರು ಜನ ಹಳ್ಳಿಗರೂ ಹೇಳಿದ್ದಾರೆ. ಮತ್ತು ಅವರಲ್ಲಿದ್ದ ಆ ಶಕ್ತಿಯನ್ನು ತೋರಿಸುವ ಘಟನೆಗಳು ಅಸಂಖ್ಯಾತ. ಅವುಗಳಲ್ಲಿ ಕೆಲವನ್ನು ಮುಂದೆ ಸಂದರ್ಭಾನುಸಾರ ನೋಡಲಿದ್ದೇವೆ.

ಆದರೆ ಇಂತಹ ಸ್ಮಶಾನವಾಸ, ವಿಚಿತ್ರ ಸಾಧನೆಗಳು, ಭೂತ–ಪ್ರೇತಗಳ ಒಡನಾಟ-ಇವೆಲ್ಲ ಯಾವ ಮನೆಯವರಿಗೆ ತಾನೆ ಪ್ರಿಯವಾದೀತು ? ಆದರೂ ಕಾಮಾರಪುಕುರಕ್ಕೆ ಮರಳಿದ ಕೆಲವು ತಿಂಗಳಲ್ಲಿ ರಾಮಕೃಷ್ಣರ ಆರೋಗ್ಯ ಬಹುಮಟ್ಟಿಗೆ ಸುಧಾರಿಸಿತು. ಹೊತ್ತುಹೊತ್ತಿಗೆ ಊಟತಿಂಡಿ ಸೇವಿಸತೊಡಗಿದರು. ಇದರಿಂದ ಅವರ ಸೊರಗಿದ ಶರೀರ ಸ್ವಲ್ಪ ತುಂಬಿಕೊಂಡು ಚಂದ್ರಮಣಿಗೆ ಸಂತಸ ತಂದಿತು. ಅವರ ವರ್ತನೆಯೂ ಸಹಜಸ್ಥಿತಿಗೆ ಮರಳುತ್ತಿರುವುದನ್ನು ಗಮನಿಸಿದ ನೆಂಟರಿಷ್ಟರೆಲ್ಲ ಸಮಾಧಾನಗೊಂಡರು. ರಾಮಕೃಷ್ಣರು ಆಗಾಗ ಸ್ಮಶಾನಕ್ಕೆ ಹೋಗುವುದು, ದಿನದ ಹೆಚ್ಚಿನ ಸಮಯವೆಲ್ಲ ದೇವದೇವಿಯರ ಪೂಜೆ–ಧ್ಯಾನಗಳಲ್ಲಿ ಕಳೆಯುವುದು, ಉಟ್ಟ ಬಟ್ಟೆಯನ್ನು ಕಳಚಿ ಬತ್ತಲಾಗಿರುವುದು, ಇತರರ ಬುದ್ಧಿವಾದಕ್ಕೆ ಕಿವಿಗೊಡದಿರುವುದು —ಇವೆಲ್ಲ ಇದ್ದೇ ಇತ್ತು. ಆದರೆ ಅದು ಅವರ ಹುಟ್ಟುಗುಣ, ಅದನ್ನೇನೂ ಬದಲಿಸಲು ಸಾಧ್ಯವಿಲ್ಲ ಎಂದು ತಿಳಿದು ಸುಮ್ಮನಾಗಬೇಕಾಯಿತು.

ರಾಮಕೃಷ್ಣರ ಆಪ್ತೇಷ್ಟರಿಗೆ ಇನ್ನೊಂದು ಭಯವಿತ್ತು. 'ಇವನ ಆರೋಗ್ಯ ಈಗೇನೋ ಸುಧಾರಿಸಿದೆ. ಆದರೆ ಇದು ಎಷ್ಟು ದಿನ ಹೀಗಿರುವುದೋ ಯಾರಿಗೆ ಗೊತ್ತು? ಪ್ರಾಪಂಚಿಕ ಸುಖಭೋಗಗಳ ಕಡೆಗೆ ಸ್ವಲ್ಪವಾದರೂ ಗಮನ ಹರಿದ ಹೊರತು ಈ ವಿಮನಸ್ಕತೆ, ಈ ದೇವರ ಹುಚ್ಚು ಇವನನ್ನು ಪೂರ್ತಿಯಾಗಿ ಬಿಡಲಾರದು. ಅಲ್ಲಿಯವರೆಗೂ ನಾವು ಎಷ್ಟೇ ಕಷ್ಟಪಟ್ಟರೂ ನೀರ ಮೇಲೆ ಮಾಡಿದ ಹೋಮವಾಗುತ್ತದೆ' ಎಂದು ಅವರೆಲ್ಲ ಮಾತನಾಡಿಕೊಂಡರು. ಆ ಹಿಂದಿನ ಹುಚ್ಚು ಮರುಕಳಿಸದಂತೆ ಮಾಡಲು ಚಂದ್ರಮಣಿಯೂ ರಾಮೇಶ್ವರನೂ ಸಾಕಷ್ಟು ಸಮಾಲೋಚನೆ ನಡೆಸಿದರು. ಎಷ್ಟೋ ಉಪಾಯಗಳನ್ನು ಹುಡುಕಿದರು. ಹೀಗೆ ಸಾಕಷ್ಟು ಬುದ್ಧಿ ಓಡಿಸಿ ಚರ್ಚೆ ವಾದ–ವಿವಾದಗಳನ್ನೆಲ್ಲ ನಡೆಸಿದ ಮೇಲೆ ಒಂದು ದಿವ್ಯೌಷಧ ಗೋಚರವಾಯಿತು ! ಅಂತಿಂಥ ಉಪಾಯವಲ್ಲ ಅದು, ರಾಮಬಾಣ ! ಆದರೆ ಸರಿಯಾಗಿ ಗುರಿತಲುಪಬೇಕು ಅಷ್ಟೆ. ಯಾವುದು ಆ ಉಪಾಯ ? ಮದುವೆ ಮಾಡಿಬಿಡುವುದು !

ಹೌದು. ರಾಮಕೃಷ್ಣರಿಗೀಗ ಇಪ್ಪತ್ಮೂರು ವರ್ಷ ನಡೆಯುತ್ತಿದೆ. ಒಳ್ಳೇ ಏರುಯೌವನದ ಸಮಯ. ಗುಣವತಿಯೂ ರೂಪವತಿಯೂ ಆದ ಹೆಣ್ಣನ್ನು ತಂದು ಮದುವೆ ಮಾಡಿಬಿಟ್ಟರೆ ಹುಡುಗನ ಹುಚ್ಚು ಬಿಡಲೇಬೇಕು. ಆಮೇಲೆ ಅವನ ಮನಸ್ಸು ಎಲ್ಲೆಂದರಲ್ಲಿ ಸ್ವಚ್ಛಂದವಾಗಿ ಹಾರಾಡಲಾರದು. ಒಮ್ಮೆ ಸಂಸಾರದ ನೊಗ

ಕೊರಳ ಮೇಲೆ ಬಿತ್ತೆಂದರೆ ಹುಡುಗ ಪ್ರಪಂಚದ 'ಸರಿದಾರಿ'ಯಲ್ಲೇ ಮುನ್ನಡೆಯು ವಂತಾಗುತ್ತದೆ—ಇದು ಚಂದ್ರಮಣಿ, ರಾಮೇಶ್ವರರ ಲೆಕ್ಕಾಚಾರ. ಅಲ್ಲದೆ ರಾಮ ಕೃಷ್ಣರು ಯೌವನಾವಸ್ಥೆಯನ್ನು ತಲುಪಿದ್ದರೂ ಅವರು ಒಬ್ಬ ಪುಟ್ಟ ಹುಡುಗನಂತೆ ಎಲ್ಲ ವಿಷಯಗಳಲ್ಲೂ ತಮ್ಮ ತಾಯಿಯನ್ನೂ ಅಣ್ಣನನ್ನೂ ಅವಲಂಬಿಸಿಕೊಂಡಿದ್ದರು. ತಮ್ಮ ಸ್ವಂತ ಲೌಕಿಕ ವ್ಯವಹಾರಗಳ ಜವಾಬ್ದಾರಿಯನ್ನು ತಾವೇ ಹೊರ ಬೇಕೆಂಬ ಬುದ್ಧಿ ಅವರಲ್ಲಿ ಕಿಂಚಿತ್ತಾದರೂ ಕಾಣುತ್ತಿರಲಿಲ್ಲ. ಮದುವೆಯಾಗಿ ಪ್ರೀತಿಯ ಮಡದಿ-ಮಕ್ಕಳನ್ನು ಸಾಕಬೇಕಾಗಿ ಬಂದಾಗ ಹೊಣೆಗಾರಿಕೆ ಬಂದೇ ಬರುತ್ತದಲ್ಲವೆ ?

ಇಷ್ಟು ಸುಲಭವಾದ ಈ ಉಪಾಯ ಅವರಿಗೆಲ್ಲ ಹಿಂದೆಯೇ ಹೊಳೆದಿರಲಿಲ್ಲ ವೆಂದಲ್ಲ. ನಿಜ ಹೇಳಬೇಕೆಂದರೆ ಆ ಆಲೋಚನೆ ಹಿಂದೆಯೇ ಬಂದಿತ್ತಾದರೂ ಅದನ್ನು ತಾತ್ಕಾಲಿಕವಾಗಿ ಬದಿಗಿರಿಸಿದ್ದರು. ಕಾರಣ—ಹಣದ ಸಮಸ್ಯೆ! ಗಂಡಿನವರಿಗೇಕೆ ಹಣದ ಚಿಂತೆ ಎನ್ನುವಂತಿಲ್ಲ. ಏಕೆಂದರೆ ಆ ಕಾಲದಲ್ಲಿ ಬಂಗಾಳ ಪ್ರಾಂತದಲ್ಲಿ ಪ್ರಚಲಿತವಿದ್ದುದು ವರದಕ್ಷಿಣೆಯಲ್ಲ, ಕನ್ಯಾಶುಲ್ಕ. ಕುಲವಂತಳಾದ ಯೋಗ್ಯ ಕನ್ಯೆ ಬೇಕೆಂದರೆ ಐನೂರರಿಂದ ಸಾವಿರ ರೂಪಾಯಿಗಳಷ್ಟು ಶುಲ್ಕ ತೆರಬೇಕಾಗಿತ್ತು. ಆದರೆ ರಾಮೇಶ್ವರನಿಗೆ ಅಷ್ಟೆಲ್ಲ ಖರ್ಚುಮಾಡುವ ಶಕ್ತಿಯಿರಲಿಲ್ಲ. ಕ್ಷುದಿರಾಮನ ಆರ್ಥಿಕ ಸ್ಥಿತಿ ಚೆನ್ನಾಗಿದ್ದಿದ್ದರೆ ಅದು ಬೇರೆಯೇ ಕತೆಯಾಗಿತ್ತು. ಅಂತೂ ಗದಾಧರನ ಮದುವೆ ತಡವಾಗಲು ಈ ಬಡತನವೇ ಕಾರಣವಾಗಿ ಕುಳಿತಿತ್ತು. ಆದರೆ ಪ್ರಾಪ್ತ ವಯಸ್ಕಳಾಗದ, ಎಂದರೆ ನಾಲ್ಕೈದು ವರ್ಷದ ಹುಡುಗಿಯನ್ನು ಮದುವೆಯಾಗುವುದಾದರೆ ಅಷ್ಟರ ಮಟ್ಟಿಗೆ ಶುಲ್ಕ ಕಡಿಮೆ. ಹಾಗಾದರೆ ಹಿಂದೆಯೇ ಗದಾಧರನಿಗೆ ಅಂತಹ ಒಂದು ಪುಟ್ಟ ಹುಡುಗಿಯನ್ನೇ ತಂದು ಗಂಟು ಹಾಕಿದ್ದರಾಗಿತ್ತಲ್ಲ! ಇಷ್ಟು ಹೊತ್ತಿಗೆ ಆಕೆ ಬೆಳೆದು ದೊಡ್ಡವಳಾಗಿ ಇವನಿಗೆ ಅನುರೂಪಳಾಗುತ್ತಿದ್ದಳು ಎಂದರೆ, ದೈವೇಚ್ಛೆಯೊಂದಿದೆಯಲ್ಲ! ಹೋಗಲಿ, ಇನ್ನಾದರೂ ತಡ ಮಾಡಬಾರದೆಂದು ರಾಮೇಶ್ವರನೂ ಚಂದ್ರಮಣಿಯೂ ಆಲೋಚಿಸಿ ಕಾರ್ಯಸನ್ನದ್ಧರಾದರು. ಸುತ್ತ ಮುತ್ತಲ ಹಳ್ಳಿಗಳಲ್ಲೆಲ್ಲ ವಧುವಿನ ಅನ್ವೇಷಣೆಗೆ ಪ್ರಾರಂಭವಾಯಿತು.

ಆದರಿನ್ನೊಂದು ವಿಷಯ. ಮನೆಮಂದಿಯೆಲ್ಲ ಸೇರಿ, ಮದುವೆ ಮಾಡ ಬೇಕೆಂದು ತೀರ್ಮಾನಿಸಿಬಿಡಬಹುದು. ಆದರೆ ಗಂಡು ಒಪ್ಪಬೇಕಲ್ಲ! ಸದಾ ದೇವರ ಹುಚ್ಚಿನಲ್ಲೇ ಇರುವವರು ಮದುವೆಗೆ ಒಪ್ಪುವುದುಂಟೆ? ಇಂತಹ ಹುಡುಗರು ಮೊದಲು ಹೇಳುವುದೇ 'ಮದುವೆಯಾಗಲೊಲ್ಲೆ' ಎಂದು. ಹಾಗಿರುವಾಗ ಮದುವೆಯ ಸುದ್ದಿ ರಾಮಕೃಷ್ಣರ ಕಿವಿಗೆ ಬಿದ್ದು ಅವರು ಇಲ್ಲದ ನೆಪ ಹೂಡಿ ಮೊಂಡಾಟ ಪ್ರಾರಂಭಿಸಿದರೆ? ಆದ್ದರಿಂದ ಈ ವಿಷಯ ಅವರ ಕಿವಿಗೆ ಬೀಳದಂತೆ ಎಲ್ಲರೂ ಎಚ್ಚರವಹಿಸಿದರು. ಆದರೆ ರಾಮಕೃಷ್ಣರಂತಹ ಕುಶಾಗ್ರಮತಿಗೆ ಇವೆಲ್ಲ ಗೊತ್ತಾಗಲು ಎಷ್ಟು ಹೊತ್ತು ಬೇಕು? ಮನೆಯವರ ಪರದಾಟವನ್ನು ಕಂಡು ಮನದಲ್ಲೇ ನಕ್ಕರು. ತಾಯಿಯನ್ನು ಕೇಳಿದರು: "ಏನಮ್ಮ, ಮನೆಯಲ್ಲಿ ಯಾವುದೋ ಕಾರ್ಯಕ್ಕಾಗಿ ಸಿದ್ಧತೆ ನಡೆಯುತ್ತಿರುವಂತಿದೆ? ಏನೆಂದು ನಾನು ಕೇಳಬಹುದೆ?"

ಒಂದು ಕ್ಷಣ ಚಂದ್ರಮಣಿ ತಬ್ಬಿಬ್ಬಾದಳು. ಆದರೆ ಇನ್ನು ವಿಷಯವನ್ನು ಮುಚ್ಚಿಡಲು ಸಾಧ್ಯವಿಲ್ಲ ಎಂಬುದು ಅವಳಿಗೆ ಅರ್ಥವಾಯಿತು. ಹೇಳಿದಳು:

"ಮಗು, ಮತ್ತೇನಿಲ್ಲ. ನಿನಗೆ ಮದುವೆ ಮಾಡಬೇಕು ಎನ್ನುವುದು ನಮ್ಮೆಲ್ಲರ ಇಚ್ಛೆ. ಆದ್ದರಿಂದ ಒಬ್ಬಳು ಒಳ್ಳೇ ಹುಡುಗಿಯನ್ನು ಹುಡುಕುತ್ತಿದ್ದೇವೆ. ಹುಡುಗಿ ಸಿಕ್ಕಿದೊಡನೆಯೇ ಮದುವೆ. ನಿನ್ನೊಬ್ಬನ ಮದುವೆಯಾಯಿತೆಂದರೆ ನನಗೆ ನಿಶ್ಚಿಂತೆ."

ಈಗ ಇವನು ಏನಾದರೂ ತಕರಾರು ಪ್ರಾರಂಭಿಸಬಹುದು ಎಂದು ಎಲ್ಲರೂ ನಿರೀಕ್ಷಿಸಿದ್ದರು. ಆದರೆ ಅದೇನು ವಿಚಿತ್ರವೋ ಏನೋ, ರಾಮಕೃಷ್ಣರು ಒಮ್ಮೆ ಕೂಡ, 'ನನಗೆ ಮದುವೆ ಬೇಡ' ಎಂದೋ ಅಥವಾ 'ನಾನು ಈಗಲೇ ಮದುವೆಯಾಗುವುದಿಲ್ಲ'ಎಂದೋ ಹೇಳಲೇ ಇಲ್ಲ. ಬದಲಾಗಿ, ಮನೆಯಲ್ಲಿ ಯಾವುದಾದರೂ ಹಬ್ಬ ನಡೆದರೆ ಮಕ್ಕಳು ಸಂಭ್ರಮ ಪಡುವುದಿಲ್ಲವೆ, ಹಾಗೆ ಸಂತೋಷದಿಂದಿದ್ದುಬಿಟ್ಟರು. ಮನೆಯವರೆಲ್ಲರಿಗೂ ತಲೆಯ ಮೇಲಿನಿಂದ ದೊಡ್ಡ ಭಾರ ಇಳಿದಂತಾಯಿತು.

ಸರಿ; ಕನ್ಯಾನ್ವೇಷಣೆಯ ಕಾರ್ಯ ಭರದಿಂದ ಸಾಗಿತು. ಆದರೆ ಎಲ್ಲೂ ರಾಮಕೃಷ್ಣರಿಗೆ ತಕ್ಕ ಜೊತೆ ಸಿಗಲೇ ಇಲ್ಲ. ಇನ್ನು ಕೆಲವು ಕನ್ಯಾಪಿತೃಗಳು ತುಂಬಾ ದುಬಾರಿ ಶುಲ್ಕ ಕೇಳಿದ್ದರಿಂದ ಅಲ್ಲಿ ಮಾತೇ ಮುಂದುವರಿಯಲಿಲ್ಲ. ರಾಮೇಶ್ವರ ಹೇಗಾದರೂ ಮಾಡಿ ಹಣವನ್ನು ಹೊಂದಿಸಿ ಕೊಡುತ್ತಿದ್ದನೋ ಏನೋ, ಆದರೆ ಅವನ ಸ್ನೇಹಿತರು ಅವನಿಗೆ ಹಾಗೆ ಮಾಡದಂತೆ ಬುದ್ಧಿ ಹೇಳಿದರು. ಈಗ ಚಂದ್ರಮಣಿ ಚಿಂತಾಕ್ರಾಂತಳಾದಳು. ಮದುವೆಯಾಗಲು ಮಗ ಒಪ್ಪಿರುವುದೇ ಅದೃಷ್ಟ; ಹಾಗಿರುವಾಗ ಈಗ ಹೆಣ್ಣು ಸಿಗಲಿಲ್ಲವೆಂದರೆ ಹೇಗೆ? ತಾಯಿಯ ಚಿಂತೆಯನ್ನು ಕಂಡು ರಾಮೇಶ್ವರ, 'ಇನ್ನೊಮ್ಮೆ ಚೆನ್ನಾಗಿ ಪ್ರಯತ್ನಮಾಡಿ ನೋಡೋಣ' ಎಂದ. ಸರಿ, ಮತ್ತೆ ಎಲ್ಲರೂ ಸೇರಿ ಹೊಸ ಹುರುಪಿನಿಂದ ಹುಡುಕಿದರು. ಊಹುಂ, ಎಷ್ಟು ಹುಡುಕಿದರೂ ಸರಿಯಾದ ಹುಡುಗಿ ಸಿಗಲೇ ಇಲ್ಲ! ರಾಮೇಶ್ವರ–ಚಂದ್ರಾದೇವಿಯರಿಬ್ಬರೂ ಹತಾಶರಾಗಿ ಕುಳಿತರು.

ಇದನ್ನೆಲ್ಲ ಗಮನಿಸುತ್ತಿದ್ದ ರಾಮಕೃಷ್ಣರು ಒಂದು ದಿನ ಕೇಳಿದರು:

"ಯಾಕಮ್ಮ ಎಲ್ಲರೂ ಏನೋ ಚಿಂತೆಯಲ್ಲಿ ಮುಳುಗಿದ್ದೀರಲ್ಲ?"

ಚಂದ್ರಮಣಿ ನಿಡುಸುಯ್ದು ನುಡಿದಳು: "ಏನು ಹೇಳಲಪ್ಪ, ಎಷ್ಟೆಷ್ಟು ಹುಡುಕಿದರೂ ನಿನಗೆ ಸರಿಯಾದ ಹುಡುಗಿ ಇನ್ನೂ ಸಿಕ್ಕಿಲ್ಲ. ಏನು ಮಾಡುವುದೋ ಗೊತ್ತಾಗುತ್ತಿಲ್ಲ." ಆಗ ರಾಮಕೃಷ್ಣರು ಭಾವಸ್ಥಿತಿಗೇರಿ ಹೇಳಿದರು:

"ಸುಮ್ಮನೆ ಅಲ್ಲಿ ಇಲ್ಲಿ ಹುಡುಕುವುದೆಲ್ಲ ನಿರರ್ಥಕ. ಸೀದಾ ಜಯರಾಂಬಾಟಿಗೆ ಹೋಗಿ; ಅಲ್ಲಿ ರಾಮಚಂದ್ರ ಮುಖರ್ಜಿಯ ಮನೆಯಲ್ಲಿ ವಿಚಾರಿಸಿ ನೋಡಿ. ಅಲ್ಲಿ ನನಗಾಗಿ ಗುರುತು ಮಾಡಿಟ್ಟ* ಹುಡುಗಿ ಇದ್ದಾಳೆ."

ಎಲ್ಲಿದೆ ಈ ಜಯರಾಂಬಾಟಿ? ಯಾರು ಈ ರಾಮಚಂದ್ರ ಮುಖರ್ಜಿ?

---

*ದೇವರಿಗೆ ಅರ್ಪಿಸಬೇಕಾದ ಫಲವನ್ನು ಒಂದು ಹುಲ್ಲುಕಡ್ಡಿಯಿಂದ ಕಟ್ಟುವ ಮೂಲಕ ಗುರುತು ಮಾಡಿ ಮೀಸಲಿಡುವ ಪದ್ಧತಿ ಹಳ್ಳಿಗಳಲ್ಲಿದೆ. ಹಾಗೆಯೇ ರಾಮಚಂದ್ರ ಮುಖರ್ಜಿಯ ಮಗಳಾದ ಶಾರದೆ ತಮಗಾಗಿ ಮೀಸಲಾದವಳು ಎಂದು ರಾಮಕೃಷ್ಣರು ಇಲ್ಲಿ ಸೂಚಿಸುತ್ತಿದ್ದಾರೆ.

## ವಿಶಿಷ್ಟ ವಿವಾಹ

ಕಲ್ಕತ್ತಾ ನಗರದಿಂದ ಸುಮಾರು ಅರವತ್ತು ಮೈಲಿ ಪಶ್ಚಿಮಕ್ಕೆ ಬಾಂಕುರ ಎಂಬ ಜಿಲ್ಲೆ. ಆದರದೊಂದು ಮೂಲೆಯಲ್ಲಿ ಜಯರಾಂಬಾಟಿ ಎಂಬ ಪುಟ್ಟ ಹಳ್ಳಿ. ಪ್ರಕೃತಿದೇವಿಯ ಮಡಿಲಿನ ಈ ಸುಂದರ ಹಳ್ಳಿಯ ಜನ ಶಾಂತ-ಸರಳ ಜೀವನ ನಡೆಸುತ್ತಿದ್ದರು. ಇಲ್ಲಿ ಎರಡು ಬ್ರಾಹ್ಮಣ ಕುಟುಂಬಗಳು — ಒಂದು ಬ್ಯಾನರ್ಜಿ ಮನೆತನ, ಇನ್ನೊಂದು ಮುಖರ್ಜಿ ಮನೆತನ. ರಾಮಚಂದ್ರ, ಈಶ್ವರಚಂದ್ರ ಹಾಗೂ ನೀಲ ಮಾಧವ ಎಂಬವರು ಮುಖರ್ಜಿ ಮನೆತನಕ್ಕೆ ಸೇರಿದ ಮೂವರು ಸೋದರರು.

ರಾಮಚಂದ್ರ ಮುಖರ್ಜಿಯ ಪತ್ನಿ ಶ್ಯಾಮಸುಂದರೀ ದೇವಿ. ಇವರದು ಬಡ ಸಂಸಾರ. ಆದರೆ ತೃಪ್ತಿಯೊಂದಿದ್ದುಬಿಟ್ಟರೆ ಬಡತನದ ಬೇಗೆ ತಟ್ಟದು. ಸಣ್ಣ ಜಮೀನಿನಲ್ಲಿ ಬೆಳೆದ ಬೆಳೆ, ಪೌರೋಹಿತ್ಯದಿಂದ ಬರುವ ಕಿಂಚಿತ್ ಸಂಪಾದನೆ ಮತ್ತು ಯಜ್ಞೋಪವೀತದ ತಯಾರಿಕೆಯಿಂದ ಒಂದು ನಾಲ್ಕು ಕಾಸು — ಇಷ್ಟರಿಂದಲೇ ಅವರ ಜೀವನ. ಬಡವರಾದರೂ ಕೂಡ ಪತಿಪತ್ನಿಯರಿಬ್ಬರೂ ಸದ್ಗುಣ ಸಂಪನ್ನರು, ದೈವಭೀರುಗಳು. ರಾಮಚಂದ್ರ ಮುಖರ್ಜಿ ಸಚ್ಚರಿತ್ರ, ಸತ್ಯಸಂಧ. ಬ್ರಾಹ್ಮಣ್ಯಕ್ಕೆ ಆದರ್ಶಪ್ರಾಯನಾದ ವ್ಯಕ್ತಿ. ಪತಿಗೆ ತಕ್ಕ ಸತಿ ಶ್ಯಾಮಸುಂದರಿ. ಅವಳದು ತುಂಬ ಸರಳಸ್ವಭಾವ, ಕಪಟರಹಿತ ನಡತೆ, ಕರುಣಾಪೂರ್ಣ ಹೃದಯ. ತಾವೇ ಬಡವರಾದರೂ ಇತರರ ನೆರವಿಗೆ ಒದಗುವುದೆಂದರೆ ಇಬ್ಬರಿಗೂ ಅತೀವ ಆನಂದ.

ಇಂತಹ ಸಾತ್ವಿಕರೂ ಭಗವದ್ಭಕ್ತರೂ ಆದ ಆದರ್ಶ ದಂಪತಿಗಳ ಹಿರಿಯ ಮಗಳೇ ಶಾರದಾದೇವಿ. ರಾಮಕೃಷ್ಣರ ಜನನಕ್ಕೆ ಮೊದಲು ಕ್ಷುದಿರಾಮ-ಚಂದ್ರ ಮಣಿಯರಿಗಾದ ಹಲವಾರು ಅಲೌಕಿಕ ಅನುಭವಗಳ ವೃತ್ತಾಂತವನ್ನು ನೋಡಿದೆವಷ್ಟೆ. ಅಂತೆಯೇ ಆದ್ಯಾಶಕ್ತಿಯ ಆವಿರ್ಭಾವವಾದ ಶಾರದೆ, ತನ್ನ ತಾಯ್ತಂದೆಗಳಾಗಲಿರುವವರಿಗೆ ತನ್ನ ಆಗಮನದ ಮುನ್ಸೂಚನೆಗಳನ್ನು ನೀಡಿದ್ದಳು.

ಒಂದು ದಿನ ಶ್ಯಾಮಸುಂದರಿ ತನ್ನ ತವರೂರಾದ ಸಿಹೋರ್ ಗ್ರಾಮದ ಶಾಂತಿನಾಥ ದೇವಾಲಯದ ಜಾತ್ರೆಗೆ ಹೋಗಿದ್ದಳು. ಓಡಾಡಿ ಆಯಾಸವಾದ್ದರಿಂದಲೋ ಏನೋ, ದೇವಸ್ಥಾನದ ಬಳಿಯ ಒಂದು ಬಿಲ್ವವೃಕ್ಷದ ಕೆಳಗೆ ಕುಳಿತುಕೊಂಡಳು. ಸುಮ್ಮನೆ ಕಣ್ತೆರೆದುಕೊಂಡು ಶಾಂತವಾಗಿ ಕುಳಿತಿದ್ದಾಳೆ — ಆಗ ಆ ಮರದ ಮೇಲಿಂದ ಸುಮಾರು ಐದಾರು ವರ್ಷದ ಸುಂದರ ಬಾಲಕಿಯೊಬ್ಬಳು ಕೆಳಗಿಳಿದು ಬಂದಂತೆ ಕಂಡಿತು ! ಆ ಬಾಲಕಿ ಕೆಂಪು ರೇಶ್ಮೆ ಸೀರೆಯನ್ನುಟ್ಟು, ಕಾಲಿಗೆ

ಗೆಜ್ಜೆ ತೊಟ್ಟು ಮನಮೋಹಕವಾಗಿದ್ದಳು. 'ಆಹ್ ! ಯಾರಿರಬಹುದು ಈ ಬಾಲೆ !' ಎಂದು ಶ್ಯಾಮಸುಂದರಿ ವಿಸ್ಮಯದಿಂದ ನೋಡುತ್ತಿರುವಷ್ಟರಲ್ಲಿ ಆ ದಿವ್ಯ ಬಾಲಕಿ ತನ್ನ ಮೃದುವಾದ ತೋಳುಗಳಿಂದ ಅವಳ ಕೊರಳನ್ನು ಬಳಸಿದಳು. ಕೂಡಲೆ ಆಕೆಗೆ ಬಾಹ್ಯಪ್ರಜ್ಞೆ ತಪ್ಪಿಹೋಯಿತು. ಹೀಗೆ ಎಷ್ಟು ಹೊತ್ತು ಕಳೆಯಿತೋ ತಿಳಿಯ ಲಿಲ್ಲ. ಕೊನೆಗೆ ಅವಳ ಬಂಧುಗಳು ಅವಳನ್ನು ಮನೆಗೆ ಕರೆತಂದು ಶೈತ್ಯೋಪಚಾರ ಮಾಡಿದ ಮೇಲೆಯೇ ಅವಳಿಗೆ ಬಾಹ್ಯಪ್ರಜ್ಞೆ ಮರಳಿದ್ದು. ಎಚ್ಚರವಾದ ಕೂಡಲೇ ಶ್ಯಾಮಸುಂದರಿಗೆ ತನಗಾದ ಆ ಅನುಭವ ನೆನಪಿಗೆ ಬಂದಿತು. ಅದೇಕೊ ಅವಳಿಗೆ ಆ ಪುಟ್ಟ ಬಾಲಕಿ ತನ್ನ ಗರ್ಭವನ್ನು ಪ್ರವೇಶಿಸಿದ್ದಂತೆ ಅನ್ನಿಸಿತು. ಶ್ಯಾಮಸುಂದರಿ ಆನಂದಪರವಶಳಾದಳು.

ಇದೇ ಸಮಯಕ್ಕೆ ರಾಮಚಂದ್ರ ಮುಖರ್ಜಿ ಯಾವುದೋ ಕಾರ್ಯನಿಮಿತ್ತ ವಾಗಿ ಕಲ್ಕತ್ತಕ್ಕೆ ಹೋಗಿದ್ದ. ಒಂದು ದಿನ ಅವನು ತನ್ನ ಸಂಪಾದನೆಯ ಚಿಂತೆಯಲ್ಲಿ ಕುಳಿತಿದ್ದಾಗ ಜೊಂಪು ಹತ್ತಿ ನಿದ್ರೆ ಬಂದಿತು. ಆಗ ಅವನೊಂದು ಆಶ್ಚರ್ಯಕರ ಸ್ವಪ್ನ ಕಂಡ. ಅದರಲ್ಲಿ ಸುವರ್ಣದಂತಹ ಉಜ್ವಲ ಮೈಬಣ್ಣದ ಅಪೂರ್ವ ಸುಂದರಿ ಯಾದ ಒಬ್ಬಳು ಹುಡುಗಿ ಅವನ ಬಳಿಸಾರಿ ತನ್ನ ಪುಟ್ಟ ಕೈಗಳನ್ನು ಅವನ ಕೊರಳ ಸುತ್ತ ಹಾಕಿ ಮುಗುಳ್ನಕ್ಕಳು. ಅವಳ ದಿವ್ಯ ಸೌಂದರ್ಯ, ಮೈಮೇಲಿನ ದಿವ್ಯಾ ಭರಣಗಳು—ಇವನ್ನೆಲ್ಲ ಕಂಡು ರಾಮಚಂದ್ರನಿಗೆ ಈಕೆ ಸಾಕ್ಷಾತ್ ಭಗವತಿಯೇ ಇರಬೇಕು ಎಂದೆನಿಸಿತು. ವಿಸ್ಮಯಾನಂದಭರಿತನಾಗಿ ಕೇಳಿದ:

"ಮಗು, ಯಾರು ನೀನು, ಯಾರು ನೀನು !"

ಆ ಬಾಲಕಿ ತನ್ನ ಮೃದು ಮಧುರ ಕಂಠದಿಂದ ಉಲಿದಳು:

"ನಾನು ನಿನ್ನ ಮನೆಗೆ ಬರುತ್ತೇನೆ... ಏನು ?"

ಕೂಡಲೇ ರಾಮಚಂದ್ರ ನಿದ್ರೆಯಿಂದ ಎಚ್ಚತ್ತ. ಅವನ ಮನಸ್ಸನ್ನು ಒಂದು ಅಪೂರ್ವ ಆನಂದ ಆವರಿಸಿತ್ತು. ಅವನು ನೇರವಾಗಿ ಊರಿಗೆ ಹಿಂದಿರುಗಿದ. ಆಗ ಶ್ಯಾಮಸುಂದರಿ ತನಗಾದ ಆ ದಿವ್ಯಾನುಭವವನ್ನು ಹೇಳಿಕೊಂಡಳು. ರಾಮಚಂದ್ರ ಅತ್ಯಾಶ್ಚರ್ಯಪಡುತ್ತ ತನಗೂ ಅಂಥದೇ ಅನುಭವವಾದದ್ದನ್ನು ಬಣ್ಣಿಸಿದ. ಇಬ್ಬ ರಿಗೂ ತಾವು ಕಂಡದ್ದು ಕೇವಲ ಕನಸಲ್ಲವೆಂದು ಖಚಿತವಾಯಿತು. ತಾವು ದಿವ್ಯ ಶಿಶುವೊಂದನ್ನು ಪಡೆಯಲಿದ್ದೇವೆ ಎಂದು ಅವರಿಗನ್ನಿಸಿತು.

ಅಂದಿನಿಂದ ಆ ದಂಪತಿಗಳ ಸ್ವಭಾವದಲ್ಲೇ ಒಂದು ಅಪೂರ್ವ ಪರಿವರ್ತನೆ ಯುಂಟಾಯಿತು. ಶಿಶುವಿನ ಜನನವಾಗುವವರೆಗೂ ರಾಮಚಂದ್ರ ಪತ್ನಿಯ ಮೈ ಮುಟ್ಟುವುದಿರಲಿ, ಅವಳನ್ನು ಸಾಕ್ಷಾತ್ ದೇವತೆಯಂತೆಯೇ ನೋಡಿಕೊಂಡ. ಶ್ಯಾಮಸುಂದರಿಯೂ ದೇವತೆಯಂತೆಯೇ ಬೆಳಗಿದಳು. ಆ ಸಮಯದಲ್ಲಿ ಅವಳು ಪ್ರತಿಯೊಬ್ಬರ ಪ್ರೀತ್ಯಾದರಗಳಿಗೆ ಪಾತ್ರಳಾಗಿದ್ದಳು. ೧೮೫೩ ನೆಯ ಡಿಸೆಂಬರ್ ೨೨ ಗುರುವಾರದಂದು (ಕೃಷ್ಣಪಕ್ಷದ ಸಪ್ತಮಿಯ ಶುಭರಾತ್ರಿ) ಶುಭ ಮುಹೂರ್ತದಲ್ಲಿ ಅವಳು ದಿವ್ಯ ಶಿಶುವೊಂದಕ್ಕೆ ಜನ್ಮವಿತ್ತಳು. ನಿರೀಕ್ಷಿಸಿದ್ದಂತೆಯೇ ಅದು ಹೆಣ್ಣು ಮಗು. ಜಾತಕಕ್ಕನುಸಾರವಾಗಿ ಮಗುವಿಗೆ 'ಠಾಕೂರ್ ಮಣಿ' (ಅರ್ಥಾತ್, ದೇವಿ)

ಎಂದು ಹೆಸರಿಟ್ಟರು. ಆದರೆ ಕಾಲಕ್ರಮದಲ್ಲಿ ಆಕೆ 'ಶಾರದಾಮಣಿ ದೇವಿ'* ಎಂಬ ಹೆಸರೇ ರೂಢಿಗೆ ಬಂದು ಪ್ರಸಿದ್ಧಳಾಗುವಂತಾಯಿತು.

ಸಂಪ್ರದಾಯಸ್ಥ ಬ್ರಾಹ್ಮಣ ಮನೆತನ; ಗ್ರಾಮೀಣ ವಾತಾವರಣ. ಇಂಥ ಪರಿಸ್ಥಿತಿಯಲ್ಲಿ ಭಾರತದ ಬಡ ಹಳ್ಳಿಯ ಹೆಣ್ಣುಮಗಳೊಬ್ಬಳು ಬೆಳೆಯಬಹುದಾದ ರೀತಿಯಲ್ಲಿ ಶಾರದೆಯೂ ಬೆಳೆದುಬಂದಳು.

ಶಾರದೆಯ ಬಾಲ್ಯಜೀವನದ ಉಲ್ಲೇಖಾರ್ಹ ಘಟನೆಗಳು ತೀರಾ ಕೆಲವು. ಈ ಸಂದರ್ಭದಲ್ಲಿ ಒಂದು ಸ್ವಾರಸ್ಯಕರ ಘಟನೆಯನ್ನು ನೆನೆಸಿಕೊಳ್ಳಬಹುದು. ಶಾರದೆ ಆಗಿನ್ನೂ ಎರಡು ಮೂರು ವರ್ಷದ ಪುಟ್ಟ ಬಾಲೆ. ಒಂದು ಸಲ ತಾಯಿ ಶ್ಯಾಮಸುಂದರಿ ಮಗು ಶಾರದೆಯನ್ನು ಸಿಹೋರ್ ಗ್ರಾಮದ ಶಾಂತಿನಾಥ ದೇವಸ್ಥಾನದ ಜಾತ್ರೆಗೆ ಕರೆದುಕೊಂಡು ಹೋಗಿದ್ದಳು. ಸಿಹೋರು ಆಕೆಯ ತವರೂರು. ರಾಮಕೃಷ್ಣರ ಸೋದರಳಿಯ ಹೃದಯರಾಮನೂ ಆ ಊರಿನವನೇ. ರಾಮಕೃಷ್ಣರು ಹೃದಯನ ಮನೆಗೆ ಆಗಾಗ ಬಂದು ಹೋಗುವುದಿತ್ತು. ಈ ಸಲ ಶ್ಯಾಮಸುಂದರಿ ಮಗು ಶಾರದೆಯನ್ನು ಕರೆದುಕೊಂಡು ಬಂದಾಗ ಜಾತ್ರೆಗೆಂದು ರಾಮಕೃಷ್ಣರೂ ಸಿಹೋರಿಗೆ ಬಂದಿದ್ದರು. ಜಾತ್ರೆ ಒಳ್ಳೇ ಭರದಿಂದ ಸಾಗಿತ್ತು. ಜಾತ್ರೆಯೆಂದಮೇಲೆ ಕೇಳಬೇಕೆ, ಜನವೋ ಜನ. ಬಯಲಾಟ ಹರಿಕಥೆಗಳ ಆಕರ್ಷಣೆ ಬೇರೆ. ಮಗು ಶಾರದೆ ತನ್ನ ಪುಟ್ಟ ಕಣ್ಣುಗಳನ್ನು ಅಗಲಿಸಿಕೊಂಡು ಜಾತ್ರೆಯ ಸೊಬಗನ್ನು ನೋಡುತ್ತಿದ್ದಳು.

ಈ ಮಧ್ಯೆ ಹೃದಯನ ಮನೆಯಲ್ಲಿ ಕೀರ್ತನೆಯನ್ನು ಏರ್ಪಡಿಸಲಾಗಿತ್ತು. ಆ ಕಡೆ ಕೀರ್ತನೆ ನಡೆಯುತ್ತಿದ್ದರೆ ಈ ಕಡೆ ಹಳ್ಳಿಯ ಸ್ತ್ರೀಯರದೊಂದು ತಮಾಷೆ. ಏನೆಂದರೆ ಪುಟ್ಟ ಹುಡುಗಿಯರಿಗೆ ಅಲ್ಲಿಗೆ ಬಂದ ಯುವಕರನ್ನು ತೋರಿಸುತ್ತ ಕೇಳುವುದು: "ಏನಮ್ಮ ಇವರಲ್ಲಿ ನೀನು ಯಾರನ್ನು ಮದುವೆಯಾಗುತ್ತೀ ಹೇಳು ?" ಹಾಗೆಂದಾಗ ಆ ಹುಡುಗಿ ಸುಮ್ಮನೆ ನಾಚಿಕೊಂಡರೆ ಅದೇ ಒಂದು ಮೋಜು. ಹಾಗಲ್ಲದೆ ಒಂದು ವೇಳೆ ಆ ಹುಡುಗಿ ಯಾರಾದರೊಬ್ಬ ಹುಡುಗನನ್ನು ತೋರಿಸಿ, "ಅವನನ್ನು" ಎಂದರಂತೂ ಅದು ಇನ್ನೂ ಒಳ್ಳೆಯ ಮೋಜಾಗುತ್ತದೆ. ಹಾಗೆಯೇ ಒಬ್ಬಳು ಮಹಿಳೆ ಶಾರದೆಯನ್ನು ಮಡಿಲಲ್ಲಿ ಕೂಡಿಸಿಕೊಂಡು ಸುತ್ತ ಇದ್ದ ಹುಡುಗರನ್ನೆಲ್ಲ ತೋರಿಸಿ ಕೇಳಿದಳು: "ಇವರಲ್ಲಿ ನೀನು ಯಾರನ್ನು ಮದುವೆಯಾಗುತ್ತೀಯಮ್ಮಾ?" ತಕ್ಷಣ ಆ ಬಾಲೆ ತನ್ನ ಎರಡೂ ಪುಟ್ಟ ಕೈಗಳನ್ನೆತ್ತಿ ಅಲ್ಲೇ

---

* ದೇವಿ ಸರಸ್ವತಿಗೆ ದಕ್ಷಿಣ ಭಾರತದಲ್ಲಿ 'ಶಾರದಾ' ಎಂಬ ಹೆಸರೂ, ಉತ್ತರ ಭಾರತದಲ್ಲಿ 'ಸಾರದಾ' ಎಂಬ ಹೆಸರೂ ಹೆಚ್ಚಾಗಿ ರೂಢಿಯಲ್ಲಿವೆ. (ಆದ್ದರಿಂದ 'ಸಾರದಾಮಣಿ' ಎಂಬುದೇ ಶಾರದಾದೇವಿಯವರ ನಿಜವಾದ ಹೆಸರು ಎಂದು ಹೇಳಬಹುದು.) ದೇವಿಯು ಶರದೃತುವಿನಲ್ಲಿ (ನವರಾತ್ರಿಯ ಸಮಯದಲ್ಲಿ) ಆಗಮಿಸುವವಳಾದ್ದರಿಂದ 'ಶಾರದಾ' ಎಂದು ಹೆಸರು ಗಳಿಸಿದ್ದರೆ, ಆಕೆ ಸಾರವನ್ನು, ಎಂದರೆ ಪರಮಜ್ಞಾನವನ್ನು ಕರುಣಿಸುವವಳಾದ್ದರಿಂದ 'ಸಾರದಾ' ಎಂಬ ಹೆಸರು ಬಂದಿದೆ. ಇವೆರಡು ಹೆಸರುಗಳೂ ಒಬ್ಬಳೇ ದೇವಿಗೆ ಅನ್ವಯಿಸುವುದಾದ್ದರಿಂದ ಎರಡೂ ಸರಿಯೆ. ಆದರೆ ಈ ಕಡೆ ರೂಢಿಯಲ್ಲಿರುವ ಶಾರದಾ ಎಂಬ ಹೆಸರನ್ನೇ ಈ ಪುಸ್ತಕದಲ್ಲಿ ಬಳಸಲಾಗಿದೆ.

ಸ್ವಲ್ಪ ದೂರದಲ್ಲಿ ಕುಳಿತಿದ್ದ ರಾಮಕೃಷ್ಣರನ್ನು ತೋರಿಸಿಬಿಟ್ಟಳು! ಇದೊಂದು ತಮಾಷೆಗೇನೋ ತಮಾಷೆಯೇ ಆಯಿತು. ಆದರೆ ಬೇರೆ ಯಾರ ವಿಷಯದಲ್ಲೂ ಈ ತಮಾಷೆ ನಿಜವಾಗಿ ಪರಿಣಮಿಸಿರಲಿಕ್ಕಿಲ್ಲ. ಶಾರದೆಯ ವಿಷಯದಲ್ಲಿ ಮಾತ್ರ ಇದು ನಿಜವಾಗಿಯೂ ಪರಿಣಯದಲ್ಲೇ ಪರಿಣಮಿಸಿತು.

ಈ ಘಟನೆ ಎಷ್ಟು ಅರ್ಥಪೂರ್ಣವಾಗಿದೆ ಮತ್ತು ಪೂರ್ವಸೂಚಿಯಾಗಿದೆ ಎಂಬುದು ಸ್ವಲ್ಪ ವಿಚಾರ ಮಾಡಿ ನೋಡಿದರೆ ಗೊತ್ತಾಗುತ್ತದೆ. ಮೂರು ವರ್ಷದ ಮಗುವಿಗೆ ಮದುವೆಯ ವಿಷಯ ಏನು ಗೊತ್ತಿದ್ದೀತು? ಅಂಥಾದ್ದರಲ್ಲಿ 'ನೀನು ಇವರಲ್ಲಿ ಯಾರನ್ನು ಮದುವೆಯಾಗುತ್ತೀ?' ಎಂದು ಶಾರದೆಯನ್ನು ಕೇಳಿದಾಗ ಆ ಮಗು ಒಬ್ಬ ಯುವಕನನ್ನು ತೋರಿಸಿ, "ಅವನನ್ನು" ಎಂದು ಹೇಳಬೇಕಾದರೆ, ಅದೂ ಆ ಯುವಕ ಬೇರಾರೂ ಆಗಿರದೆ ರಾಮಕೃಷ್ಣರೇ ಆಗಿರಬೇಕಾದರೆ, ಇದು ನಿಜಕ್ಕೂ ದೈವನಿಯಾಮಕವಾದ ಸಂದರ್ಭವಲ್ಲದೆ ಮತ್ತೇನು? ಇರಲಿ. ಈ ತಮಾಷೆ ಅಂದಿಗೆ ಮುಗಿಯಿತು. ಜಾತ್ರೆಯೂ ಮುಗಿಯಿತು. ಎಲ್ಲರೂ ತಮ್ಮತಮ್ಮ ಮನೆಗಳಿಗೆ ಹಿಂದಿರುಗಿದರು. ಪುನಃ ಮನೆವಾರ್ತೆಯ ಕೆಲಸಗಳಲ್ಲಿ ಮಗ್ನರಾದರು. ದಿನಗಳು ಕಳೆದುವು. ತಿಂಗಳುಗಳು ಸಂದುವು. ವರ್ಷಗಳೂ ಉರುಳಿದುವು. ಈಗ ಶಾರದೆಗೆ ಐದು ವರ್ಷ.

ಇತ್ತ ಕಾಮಾರಪುಕುರದಲ್ಲಿ, ತಮಗಾಗಿ ಒಂದು ಹೆಣ್ಣನ್ನು ಹುಡುಕುವಲ್ಲಿ ತಾಯಿ ಚಂದ್ರಮಣಿಯೂ ಅಣ್ಣ ರಾಮೇಶ್ವರನೂ ವಿಫಲರಾದಾಗ ಶ್ರೀರಾಮಕೃಷ್ಣರು ಭಾವಾವಸ್ಥೆಗೇರಿ, "ನನಗಾಗಿ ಗುರುತು ಮಾಡಿಟ್ಟ ಹೆಣ್ಣು ಅಲ್ಲಿದ್ದಾಳೆ" ಎಂದು ತಾವಾಗಿಯೇ ಸೂಚಿಸಿದುದು ಈ ಶಾರದೆಯನ್ನೇ! ಅವರು ಹಾಗೆ ಭಾವಾವಿಷ್ಟರಾಗಿ ತಮಗೆ ಈ ಹುಡುಗಿಯನ್ನು ತಂದುಕೊಳ್ಳಬೇಕು ಎಂದು ತಾಯಿಗೆ ಹೇಳಿದಾಗ ಬಹುಶಃ ಆ ಪುಟ್ಟ ಹುಡುಗಿಯ ಸ್ವಯಂವರದ ವ್ರತವನ್ನು ಈಡೇರಿಸಿಕೊಡುತ್ತಿರುವರೋ ಎಂಬಂತಿತ್ತು; ಅಥವಾ ಈ ಪುಟ್ಟ ಹುಡುಗಿಯ ಪತಿವ್ರತಾ ಧರ್ಮವನ್ನು ಪರಿಪುಷ್ಟಿಗೊಳಿಸಿದರೋ ಎಂಬಂತಿತ್ತು; ಅಥವಾ, ತಾವು ಸಾಮಾನ್ಯ ಮಾನವರಂತೆ ಈ ಧರೆಗೆ ಬಂದಿಲ್ಲ, ತಾವೆಲ್ಲ ಒಂದು ದಿವ್ಯೋದ್ದೇಶಕ್ಕಾಗಿ ಮಾತನಾಡಿಕೊಂಡೇ ಜನ್ಮವೆತ್ತಿದ್ದೇವೆ, ಆದ್ದರಿಂದ ತಮ್ಮ ಸಹಧರ್ಮಿಣಿಯಾಗಿ ಬಂದವಳು ಅಲ್ಲಿದ್ದಾಳೆ ಹೋಗಿ ನೋಡಿ—ಎಂದು ಸೂಚಿಸಿದಂತಿತ್ತು. ಚಂದ್ರಮಣಿಗೆ ಮಗನ ಮಾತಿನಲ್ಲಿ ನಂಬಿಕೆಯೇನೂ ಉಂಟಾಗಲಿಲ್ಲ. ಆದರೂ ಜಯರಾಂಬಾಟಿಗೆ ಹೋಗಿ ನೋಡಿದಳು. ನೋಡಿದರೆ, ಅಲ್ಲಿ ಹುಡುಗಿಯೂ ಇದ್ದಾಳೆ, ಹುಡುಗಿಯ ತಂದೆಯೂ ಧಾರೆಯೆರೆದು ಕೊಡಲು ಸಿದ್ಧನಾಗಿದ್ದಾನೆ! ಆದರೆ ಹುಡುಗನ ಕಡೆಯವರಿಗೆ ಸಂಕೋಚ. ಏನೆಂದರೆ ವಧುವಿಗೆ ಇನ್ನೂ ಐದು ವರ್ಷ, ವರನಿಗೋ ಇಪ್ಪತ್ತ ಮೂರು. ಹೀಗಿರುವಾಗ ಆ ಮಗುವನ್ನು ಮದುವೆ ಮಾಡಿಸಿಕೊಡಿ ಎಂದು ಕೇಳುವುದು ಹೇಗೆ? ಆದರೆ ಹೆಣ್ಣಿನ ಕಡೆಯವರಿಗೆ ಅದಕ್ಕಿಂತ ಉತ್ತಮವಾದ ವರಸಾಮ್ಯ ಇನ್ನೊಂದು ಸಿಕ್ಕದಿದ್ದುದರಿಂದ ಈ ಸಂಬಂಧಕ್ಕೇ ಒಪ್ಪಿಕೊಂಡರು. ೧೮೫೯ರ ಮೇ ತಿಂಗಳಲ್ಲಿ ಜಯರಾಂಬಾಟಿಯ ವಧುವಿನ ಗೃಹದಲ್ಲಿ ಪುಟ್ಟ ಶಾರದೆಯನ್ನು

ರಾಮಕೃಷ್ಣರಿಗೆ ಕೊಟ್ಟು ವಿವಾಹವಾಯಿತು.

ಈ ವಿವಾಹದ ಸಂದರ್ಭದಲ್ಲಿ ಒಂದು ಸ್ವಾರಸ್ಯಕರ ಘಟನೆ ನಡೆಯಿತು. ಸುಮಂಗಲಿಯರು ಇಪ್ಪತ್ತೇಳು ಬತ್ತಿಗಳ ಆರತಿ ಎತ್ತುತ್ತ ವಧೂವರರ ಸುತ್ತ ಪ್ರದಕ್ಷಿಣೆ ಮಾಡುತ್ತಿದ್ದರು. ಆಗ, ರಾಮಕೃಷ್ಣರ ಕೈಗೆ ಕಟ್ಟಿದ್ದ ಮಂಗಳಸೂಚಕವಾದ ಅರಿಶಿನದ ದಾರ ಉರಿ ತಗುಲಿ ಸುಟ್ಟುಹೋಯಿತು! ನಿಜಕ್ಕೂ ಇದು ದೈವ ನಿಯಾಮಕವೇ ಎನ್ನಬೇಕು. ಏಕೆಂದರೆ ರಾಮಕೃಷ್ಣರು ಲೌಕಿಕ ದೃಷ್ಟಿಯಿಂದ ವಿವಾಹ ವಾದರೂ ಅವಿದ್ಯಾಬಂಧನ ಸ್ವರೂಪವಾದ, ಆ ದಾರ ಮಾತ್ರ ಹೀಗೆ ಒಂದು ಊಹಿಸಲಾಗದ ರೀತಿಯಿಂದ ಸುಟ್ಟುಹೋಯಿತು. ವಿವಾಹವಾದರೂ ಅವರು ಸಂಸಾರಕ್ಕೆ ಬದ್ಧರಾಗಿ ಉಳಿಯುವವರಲ್ಲ ಎಂಬುದನ್ನು ಅದು ಸೂಚಿಸುವಂತಿತ್ತು. ವಿವಾಹಾನಂತರ ವಧುವನ್ನು ನಾಲ್ಕು ಮೈಲಿ ದೂರದ ಕಾಮಾರಪುಕುರದ ವರನ ಮನೆಗೆ ಕರೆತಂದರು. ಕರೆತಂದರು ಎಂದರೆ, ವಧುವಿನ ಚಿಕ್ಕಪ್ಪ ಆ ಪುಟ್ಟ ವಧು ವನ್ನು ಎತ್ತಿಕೊಂಡು ಬಂದ.

ವಿವಾಹವೇನೋ ಆಯಿತು. ಆದರೆ ವಿವಾಹದ ವೈಭವ ಮಾತ್ರ ಇರಲಿಲ್ಲ. ಎರಡು ಕುಟುಂಬದವರೂ ಬಡವರಾದ್ದರಿಂದ ವಿವಾಹ ನಿರಾಡಂಬರವಾಗಿಯೇ ನಡೆಯಿತು. ಆದರೆ ಎಷ್ಟೇ ನಿರಾಡಂಬರವೆಂದರೂ ರಾಮೇಶ್ವರ ಕನ್ಯಾಶುಲ್ಕವಾಗಿ ಮುನ್ನೂರು ರೂಪಾಯಿ ಕೊಟ್ಟಿದ್ದ. ಅಲ್ಲದೆ ಮದುವೆಯ ದಿನವಾದರೂ ವಧುವಿನ ಮೈಮೇಲೆ ಚಿನ್ನಾಭರಣಗಳ ಅಲಂಕಾರ ಇರಬೇಕಲ್ಲವೆ? ಇಲ್ಲದಿದ್ದರೆ ಮದುವೆಗೆ ಶೋಭೆಯೆಲ್ಲಿದ್ದೀತು! ಆದರೆ ಚಂದ್ರಮಣಿಯ ಮನೆಯಲ್ಲಿ ಚಿನ್ನದ ಚೂರೂ ಇದ್ದಿಲ್ಲ. ಆದ್ದರಿಂದ ಊರಿನ ಜಮೀನ್ದಾರ ಲಾಹಾರ ಮನೆಯಿಂದ ಒಂದಿಷ್ಟು ಒಡವೆ ಗಳನ್ನು ಎರವಲು ತಂದು ಪುಟ್ಟ ವಧುವನ್ನು ಮನದಣಿಯೆ ಅಲಂಕರಿಸಿದ್ದರು. ಆದರೆ ಎರವಲು ತಂದ ಒಡವೆಗಳನ್ನು ಹಿಂದಿರುಗಿಸಲೇಬೇಕಲ್ಲ! ಅತ್ತೆ ಚಂದ್ರಮಣಿಗೆ ಇದೊಂದು ವಿಷಮ ಪರಿಸ್ಥಿತಿ. ತನ್ನ ಪ್ರೀತಿಯ ಪುಟ್ಟ ಸೊಸೆ ಮೈತುಂಬ ಥಳಥಳಿ ಸುವ ಆಭರಣಗಳನ್ನಿಟ್ಟುಕೊಂಡು ದೊಡ್ಡ ಸಂಭ್ರಮದಿಂದ ಪುಟ್ಟ ಪುಟ್ಟ ಹೆಜ್ಜೆ ಹಾಕಿ ಕೊಂಡು ಮನೆಯ ತುಂಬ ಓಡಾಡುತ್ತಿದ್ದರೆ ಇದ್ದಕ್ಕಿದ್ದಂತೆ ಅವುಗಳನ್ನೆಲ್ಲ ಕಳಚಿ ತೆಗೆಯುವುದಾದರೂ ಹೇಗೆ? ತಾಯಿಯ ಸಂಕಟವನ್ನು ಗಮನಿಸಿದ ರಾಮಕೃಷ್ಣರು ಅವಳ ನೆರವಿಗೆ ಬಂದರು. ತಮ್ಮ ಪುಟ್ಟ ಮಡದಿ ನಿದ್ರಿಸುತ್ತಿದ್ದಾಗ ಮೆಲ್ಲಗೆ ಒಡವೆ ಗಳನ್ನೆಲ್ಲ ಸದ್ದಾಗದಂತೆ ಕಳಚಿ, ಲಾಹಾ ಮನೆಯವರಿಗೆ ತಲುಪಿಸಿ ಬಂದುಬಿಟ್ಟರು.

ಆಭರಣಗಳನ್ನೇನೋ ಹಿಂದಿರುಗಿಸಿದ್ದಾಯಿತು. ಆದರೆ ಮುಂದಿನ ಪರಿಣಾಮ ವನ್ನು ಎದುರಿಸಬೇಕಾದರೆ ಮಾತ್ರ ಹೃದಯ ಗಟ್ಟಿಮಾಡಿಕೊಳ್ಳಬೇಕಾಗಿತ್ತು. ರಾತ್ರಿ ಕಳೆಯಿತು... ಬೆಳಗಾಯಿತು... ಶಾರದೆ ಎದ್ದಳು. ಎದ್ದವಳೇ ಮೈಮುಟ್ಟಿ ನೋಡಿ ಕೊಂಡಳು. ನೋಡಿದರೇ, ಒಡವೆಗಳಿಲ್ಲ! ಒಂದೇ ಸಮನೆ ಅಳಲು ಶುರುಮಾಡಿ ದಳು. ಅಳುತ್ತ ಅಳುತ್ತ ಅತ್ತೆಯ ಬಳಿಗೆ ಓಡಿಬಂದು ಕೇಳಿದಳು, "ನಂದು....ಒಡವೆ ಗಳೆಲ್ಲ ಎಲ್ಲಿ?" ಇದಕ್ಕೀಗ ಚಂದ್ರಮಣಿ ಏನು ತಾನೆ ಹೇಳಿಯಾಳು? ಪುಟ್ಟ ಶಾರದೆ ಮತ್ತೂ ಮತ್ತೂ ಕೇಳುತ್ತಲೇ ಇದ್ದಳು—ತನ್ನ ಕೈ, ಕೊರಳು, ಕಾಲು

ತೋರಿಸುತ್ತ, "ಇಲ್ಲಿ..., ಇಲ್ಲಿ..., ಒಡವೆ ಇತ್ತಲ್ಲ! ಎಲ್ಲಾ ಎಲ್ಲಿ ಹೋಯ್ತು?" ಚಂದ್ರಮಣಿಗೆ ಕಂಠ ಬಿಗಿದುಬಂತು. ಪುಟ್ಟ ಸೊಸೆಯನ್ನು ಎತ್ತಿ ಅಪ್ಪಿಕೊಂಡು, "ಮಗು, ಅಳಬೇಡಮ್ಮ. ಮುಂದೆ ನಿನ್ನ ಗಂಡ ಅದಕ್ಕಿಂತಲೂ ಚೆನ್ನಾಗಿರುವ ಒಡವೆ ಮಾಡಿಸಿ ಹಾಕುತ್ತಾನೆ" ಎಂದು ಸಮಾಧಾನ ಹೇಳಿದಳು. ಹೀಗೆ ಸಮಾಧಾನ ಹೇಳುವುದಲ್ಲದೆ ಅವಳು ಇನ್ನೇನು ಮಾಡಿಯಾಳು? ಅತ್ತೆಯ ಮಾತು ಕೇಳಿ ಶಾರದೆಯೇನೋ ಬಿಕ್ಕುತ್ತ ಬಿಕ್ಕುತ್ತ ಸ್ವಲ್ಪ ಸಮಾಧಾನ ತಂದುಕೊಂಡಳು. ಆದರೆ ಅಲ್ಲೇ ಇದ್ದ ಶಾರದೆಯ ಚಿಕ್ಕಪ್ಪ ಮಾತ್ರ ಕಿಡಿಕಿಡಿಯಾಗಿಬಿಟ್ಟ. ಈಗ ಅವನಿಗೆ ಸಮಾಧಾನ ಹೇಳುವವರು ಯಾರು? ಕೋಪದ ಭರದಲ್ಲಿ ಅವನು ಅದೇ ದಿನ ಹುಡುಗಿಯನ್ನು ಕರೆದುಕೊಂಡು ಜಯರಾಂಬಾಟಿಗೆ ನಡೆದುಬಿಟ್ಟ. ಚಂದ್ರಮಣಿಗೆ ತುಂಬ ದುಃಖವಾಯಿತು. ಆದರೆ ರಾಮಕೃಷ್ಣರು ಮಾತ್ರ ಈ ಘಟನೆಯನ್ನು ತಮಾಷೆಯಾಗಿಯೇ ತೆಗೆದುಕೊಂಡರು. ಅವರು ನಗುನಗುತ್ತ ತಾಯಿಗೆ ಹೇಳಿದರು, "ಅವರೇನೇ ಮಾಡಿದರೂ, ಆಗಿಹೋದ ಮದುವೆಯನ್ನು ನಿರಾಕರಿಸುವ ಹಾಗಿಲ್ಲವಲ್ಲ!"

ಮದುವೆಯಾದ ಮೇಲೆ ರಾಮಕೃಷ್ಣರು ಸಾಧ್ಯವಾದಷ್ಟು ಬೇಗ ದಕ್ಷಿಣೇಶ್ವರಕ್ಕೆ ಹಿಂದಿರುಗಲು, ತಮ್ಮ ಸಾಧನೆಗಳನ್ನು ಪುನರಾರಂಭಿಸಲು ಕಾತರರಾದರು. ಆದರೆ ವೃದ್ಧೆ ತಾಯಿ ಚಂದ್ರಮಣಿ ಬಿಡಬೇಕಲ್ಲ. ಈಗಾಗಲೇ ತನ್ನ ಪ್ರೀತಿಯ ಮಗ ಅಷ್ಟು ವರ್ಷ ದೂರವಾಗಿದ್ದರಿಂದ ಅವಳಿಗೆ ಬಹಳವೇ ದುಃಖವಾಗಿತ್ತು. ಈಗ ಊರಿಗೆ ಬಂದವನು ಕೂಡಲೇ ಹೊರಟುಬಿಡುತ್ತೇನೆಂದರೆ ಒಪ್ಪಿಯಾಳೆ? ಅಲ್ಲದೆ ಆ ಪರ ಊರಿನಲ್ಲಿ ಸರಿಯಾಗಿ ನೋಡಿಕೊಳ್ಳುವವರು ಇಲ್ಲದ್ದರಿಂದಲೇ ಅಲ್ಲವೆ ಅವನಿಗೆ ಹುಚ್ಚುಹಿಡಿದದ್ದು? ಈಗ ಅವಸರಪಟ್ಟು ಹೊರಟು ಹೋಗಿ, ಮತ್ತೆ ಅದು ಮರುಕಳಿಸಿದರೇನು ಗತಿ? ಆದ್ದರಿಂದ ಅವಳು ಮಗನನ್ನು ಕಲ್ಕತ್ತಕ್ಕೆ ಹೋಗಲು ಬಿಡಲೇ ಇಲ್ಲ. ಹೀಗೆ ಸುಮಾರು ಎರಡು ವರ್ಷ ರಾಮಕೃಷ್ಣರು ಕಾಮಾರಪುಕುರದಲ್ಲೇ ಉಳಿದುಕೊಂಡರು.

ಈ ವೇಳೆಗೆ ಅವರ ಪತ್ನಿ ಶಾರದೆಗೆ ಏಳು ವರ್ಷ ತುಂಬಿತು. ಈಗ ಮನೆತನದ ಸಂಪ್ರದಾಯದ ಪ್ರಕಾರ ರಾಮಕೃಷ್ಣರು ಕೆಲವು ದಿನ ಮಾವನ ಮನೆಯಲ್ಲಿ ಇದ್ದು ಬರುವುದಕ್ಕಾಗಿ ಹೋದರು. ಅವರ ಜೊತೆಗೆ ಹೃದಯರಾಮನೂಹೋಗಿದ್ದ. ಹೋದವನೇ ಒಳಗೆ ಅವಿತಿಟ್ಟುಕೊಂಡಿದ್ದ ತನ್ನ ಪುಟ್ಟ ಸೋದರತ್ತೆಯನ್ನು ಹುಡುಕಿ ತಂದು ಕುಳ್ಳಿರಿಸಿ, ಅವಳ ಪಾದಗಳನ್ನು ಕಮಲಪುಷ್ಪಗಳಿಂದ ಪೂಜಿಸಿದ. ಇದರಿಂದ ಶಾರದೆಗೆ ಆದ ನಾಚಿಕೆ ಅಷ್ಟಿಷ್ಟಲ್ಲ. ಆಮೇಲೆ ಅವಳೂ ಕೂಡ — ಇತರರು ಯಾರೂ ಹೇಳಿಕೊಡದಿದ್ದರೂ — ಸ್ವತಃ ತಾನೇ ಪತಿಯ ಪಾದಗಳಿಗೆ ನಮಸ್ಕರಿಸಿ, ಪಕ್ಕದಲ್ಲಿ ನಿಂತುಕೊಂಡು ಬೀಸಣಿಗೆಯಿಂದ ಗಾಳಿ ಬೀಸಿದಳು. ಈ ಮುಗ್ಧ ದೃಶ್ಯವನ್ನು ಕಂಡು ಅಲ್ಲಿದ್ದವರಿಗೆಲ್ಲ ನಗುವೋ ನಗು.

ರಾಮಕೃಷ್ಣರು ಕೆಲವು ದಿನ ಅಲ್ಲಿದ್ದು ಬಳಿಕ ಪುಟ್ಟ ಪತ್ನಿ ಶಾರದೆಯನ್ನು ಕರೆದುಕೊಂಡು ಕಾಮಾರಪುಕುರಕ್ಕೆ ಬಂದರು. ಈ ಸಂದರ್ಭದಲ್ಲಿ ಪತ್ನಿಗೆ ಅವರೊಂದು ಮಾತು ಹೇಳಿದರು, "ನೋಡು, ನಿನಗೆ ಯಾವ ವಯಸ್ಸಿನಲ್ಲಿ

ಮದುವೆಯಾಯಿತು ಎಂದು ಯಾರಾದರೂ ಕೇಳಿದರೆ ಐದನೇ ವರ್ಷಕ್ಕೆ ಎನ್ನು; ಏಳನೇ ವರ್ಷಕ್ಕೆ ಎನ್ನಬೇಡ.'' ಅವರು ಹೀಗೆನ್ನಲು ಕಾರಣ–ಶಾರದೆ ಪುಟ್ಟ ಹುಡುಗಿಯಾದ್ದರಿಂದ ಐದನೆಯ ವಯಸ್ಸಿನಲ್ಲಿ ನಡೆದ ಮದುವೆಯ ಘಟನೆಯನ್ನು ಮರೆತು, ಈ ಏಳನೇ ವಯಸ್ಸಿನಲ್ಲಿ ಗಂಡನ ಜೊತೆಯಲ್ಲಿ ಮಾವನ ಮನೆಗೆ ಬಂದದ್ದನ್ನೇ ಮದುವೆ ಎಂದು ತಿಳಿಯಲು ಸಾಧ್ಯವಿತ್ತು. ಅಲ್ಲದೆ ಅಂದು ಹೊರಡುವ ದಿವಸ ಹೂವಿನ ಅಲಂಕಾರ ಮಾಡಿ, ಹಬ್ಬದ ಊಟ ಹಾಕಿ ಕಳಿಸಿದ್ದರಿಂದ ಮತ್ತು ನಾಲ್ಕಾರು ಜನರೂ ಸೇರಿದ್ದರಿಂದ ಆಕೆ ಅದನ್ನೇ ಮದುವೆಯೆಂದು ತಿಳಿದರೆ ಆಶ್ಚರ್ಯವೇನಿರಲಿಲ್ಲ.

ಮೇಲ್ನೋಟಕ್ಕೆ ಇದೊಂದು ಅತ್ಯಂತ ಸಾಧಾರಣ ವಿಷಯ. ಆದರೆ ಸ್ವಲ್ಪ ಆಲೋಚಿಸಿ ನೋಡಿದಾಗ, ಶ್ರೀರಾಮಕೃಷ್ಣರಲ್ಲಿ ಸತ್ಯನಿಷ್ಠೆಯೆಂಬುದು ಎಷ್ಟರ ಮಟ್ಟಿಗೆ ರಕ್ತಗತವಾಗಿತ್ತೆಂಬುದಕ್ಕೆ ಈ ಘಟನೆ ಒಂದು ಸಣ್ಣ ಉದಾಹರಣೆಯಷ್ಟೆ ಎಂಬುದು ತಿಳಿದುಬರುತ್ತದೆ.

ಇದಾದ ಕೆಲದಿನಗಳಲ್ಲೇ ರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹೊರಟುನಿಂತರು. ಚಂದ್ರಮಣಿಯೂ ರಾಮೇಶ್ವರನೂ ಅವರನ್ನು ಇನ್ನೂ ಸ್ವಲ್ಪ ಕಾಲ ಮನೆಯಲ್ಲೇ ಇರುವಂತೆ ಹೇಳಿ ನೋಡಿದರು. ಆದರೆ ಅವರು ಒಪ್ಪಲೇ ಇಲ್ಲ. ಏಕೆಂದರೆ ಮನೆಯ ಬಡತನ ಅವರಿಗೇನೂ ತಿಳಿಯದ ವಿಷಯವಲ್ಲ. ಒಬ್ಬರನ್ನು ಸಾಕಬೇಕೆಂದರೆ ಅದೇನು ಸುಮ್ಮನೆ ಆಗುತ್ತದೆಯೆ ? ಇತರರಿಗೆ ಭಾರವಾಗಿರಲು ಅವರ ಮನಸ್ಸು ಹೇಗೆತಾನೆ ಒಪ್ಪೀತು ? ಆದ್ದರಿಂದ ಈ ಸಲ ಅವರು ಮನೆಯವರಿಂದ ಬೀಳ್ಕೊಂಡು ಹೊರಟೇಬಿಟ್ಟರು. ಶಾರದೆಯಿನ್ನೂ ಪ್ರಾಪ್ತವಯಸ್ಕಳಲ್ಲದುದರಿಂದ ಅವಳು ಪತಿಯೊಂದಿಗೆ ಹೋಗದೆ ತನ್ನ ತವರಿಗೆ ಹಿಂದಿರುಗಿದಳು.

೩೪

## ದಂಗುಬಡಿಸಿದ ದರ್ಶನ

ದಕ್ಷಿಣೇಶ್ವರಕ್ಕೆ ಮರಳಿದ ರಾಮಕೃಷ್ಣರು ಮತ್ತೆ ಕಾಳೀ ದೇವಾಲಯದ ಅರ್ಚಕರಾಗಿ ನಿಯುಕ್ತಗೊಂಡರು. ಪೂಜೆಯನ್ನು ಪ್ರಾರಂಭಿಸಿ ಕೆಲದಿನಗಳಾಗಿರ ಬಹುದಷ್ಟೆ; ಅಷ್ಟರಲ್ಲೇ ಹಿಂದಿನ ಆ ವ್ಯಾಕುಲತೆ, ಉನ್ಮತ್ತತೆ ಮತ್ತೆ ಅದೇ ರಭಸ ದಿಂದ ಬಂದು ಅಪ್ಪಳಿಸಿತು. ಕಾಮಾರಪುಕುರ, ಜಯರಾಂಬಾಟಿ, ಅಮ್ಮ ಅಣ್ಣ ಹೆಂಡತಿ, ಸಂಸಾರ, ಕಷ್ಟ, ಸುಖ—ಎಲ್ಲವೂ ಅವರ ಮನದ ಯಾವುದೋ ಕತ್ತಲ ಮೂಲೆಯಲ್ಲಿ ಅಡಗಿ ಮಾಯವಾದುವು. ತಮ್ಮ ಸರ್ವಸ್ವವಾದ ಜಗನ್ಮಾತೆಯನ್ನು ಸದಾ ಸರ್ವದಾ ಕಾಣುತ್ತಿರಬೇಕೆಂಬ ಒಂದೇ ಹಂಬಲ ಅವರ ಹೃದಯ ಬುದ್ಧಿ ಮನಸ್ಸುಗಳನ್ನೆಲ್ಲ ಆಕ್ರಮಿಸಿಬಿಟ್ಟಿತು. ಪರಿಣಾಮವಾಗಿ, ಹಿಂದೆ ಉಂಟಾಗಿದ್ದ ಶರೀರದ ಏರುಪೇರಿನ ಲಕ್ಷಣಗಳೆಲ್ಲ ಮತ್ತೆ ಕಾಣಿಸಿಕೊಂಡುವು. ಅನವರತ ಜಪ ಧ್ಯಾನ ಸಾಧನೆಗಳಿಂದಾಗಿ ಅವರೆದೆ ರಕ್ತವರ್ಣಕ್ಕೆ ತಿರುಗಿತು. ಶರೀರದ ಅಸಹನೀಯ ಉರಿತ ಪುನಃ ಪ್ರಾರಂಭವಾಯಿತು. ನಿದ್ರೆಯೆಂಬುದು ಕನಸಿನ ವಸ್ತುವಾಯಿತು. ಆದರೆ ಈ ಎಲ್ಲ ಅನುಭವಗಳೂ ಹಿಂದೆಯೇ ಆಗಿದ್ದುದರಿಂದ ಈ ಸಲ ಅವರಿಗೆ ಹೆಚ್ಚೇನೂ ಗಾಬರಿಯಾಗಲಿಲ್ಲ. ಅವರ ಸ್ಥಿತಿಯನ್ನು ಕಂಡು ಮಥುರನಿಗೆ ಮಾತ್ರ ಮತ್ತೆ ಚಿಂತೆಗಿಟ್ಟುಕೊಂಡಿತು. ಚಿಕಿತ್ಸೆ ನೀಡಲು ಪ್ರಸಿದ್ಧ ವೈದ್ಯ ಗಂಗಾಪ್ರಸಾದ ಸೇನನನ್ನೇ ಪುನಃ ನಿಯೋಜಿಸಿದ. ರಾಮಕೃಷ್ಣರನ್ನು ಪರೀಕ್ಷಿಸಿದ ವೈದ್ಯ ಅವರ ಉರಿತ, ವಾಯುಪ್ರಕೋಪ, ನಿದ್ರಾರಾಹಿತ್ಯ ಇತ್ಯಾದಿ ಕಾಯಿಲೆಗಳಿಗೆ 'ಚತುರ್ಮುಖ ಗುಳಿಗೆ', 'ಮಧ್ಯಮ ನಾರಾಯಣ ತೈಲ' ಮೊದಲಾದ ಅತ್ಯುತ್ತಮ ಔಷಧಿಗಳನ್ನೇ ಒಂದಾದ ಮೇಲೊಂದರಂತೆ ನೀಡಿದ. ಹೃದಯರಾಮನು ಹಿಂದಿನಂತೆಯೇ ಉತ್ಸಾಹದಿಂದ ತನ್ನ ಶಕ್ತಿ ಮೀರಿ ಮಾವನ ಸೇವೆ ಮಾಡಿದ. ಇಷ್ಟೆಲ್ಲ ಮಾಡಿದರೂ ಅಂತಹ ಪ್ರಯೋಜನವೇನೂ ಕಂಡುಬರಲಿಲ್ಲ. ಆದರೆ ರಾಮಕೃಷ್ಣರದು ಕೇವಲ ದೈಹಿಕ ವ್ಯಾಧಿಯಿರಲಾರದು, ಬೇರೇನಾದರೂ ಕಾರಣವಿರಬಹುದು ಎಂದು ಮಾತ್ರ ಒಬ್ಬರಿಗೂ ತೋಚಲಿಲ್ಲ.

ಕಲ್ಕತ್ತದಲ್ಲಿದ್ದ ವೈದ್ಯನ ಮನೆಗೆ ಹೃದಯ ಆಗಾಗ ಹೋಗಿ ಔಷಧಿ ತರುತ್ತಿದ್ದ. ಕೆಲವೊಮ್ಮೆ ರಾಮಕೃಷ್ಣರೂ ಹೋಗುವುದಿತ್ತು. ಹೀಗೆ ಒಮ್ಮೆ ಅವರು ಹೃದಯ ನೊಂದಿಗೆ ವೈದ್ಯ ಗಂಗಾಪ್ರಸಾದನ ಮನೆಗೆ ಹೋಗಿದ್ದರು. ಆತ ಮತ್ತೊಮ್ಮೆ ಬಹಳ ಎಚ್ಚರಿಕೆಯಿಂದ ಪರೀಕ್ಷೆ ಮಾಡಿ ಹೊಸ ಔಷಧಿಗಳನ್ನು ಕೊಟ್ಟ. ಅದೇ ಸಮಯದಲ್ಲಿ

ಪೂರ್ವಬಂಗಾಳದಿಂದ ಬಂದಿದ್ದ ಮತ್ತೊಬ್ಬ ವೈದ್ಯ ಅಲ್ಲಿದ್ದ. ರಾಮಕೃಷ್ಣರ ಭಾವ ಭರಿತ ಸ್ಥಿತಿಯನ್ನು ಕಂಡೊಡನೆ ಅವನು ಅವರೆಡೆಗೆ ಆಕರ್ಷಿತನಾದ. ಅವರ ರೋಗ ಲಕ್ಷಣಗಳನ್ನು ಕೇಳಿದಾಗ ಅವನಿಗೆ ಏನೋ ತೋರಿತು; ಅವರ ಶರೀರವನ್ನು ಸೂಕ್ಷ್ಮ ವಾಗಿ ಪರಿಶೀಲಿಸಿ ನೋಡಿದ. ಬಳಿಕ ನಿರ್ಧಾರದಿಂದ ಹೇಳಿದ, "ಈ ಲಕ್ಷಣಗಳನ್ನೆಲ್ಲ ನೋಡಿದರೆ, ಇವರಿಗೆ ಯಾವ ರೋಗವೂ ಇದ್ದಂತೆ ಕಾಣುತ್ತಿಲ್ಲ. ಇವರು ದೈವೀ ಉನ್ಮತ್ತತೆಯ ಸ್ಥಿತಿಯಲ್ಲಿರುವಂತೆ ತೋರುತ್ತದೆ. ಅದರಿಂದಾಗಿಯೇ ಈ ತೊಂದರೆ ಗಳೆಲ್ಲ ಕಾಣಿಸಿಕೊಳ್ಳುತ್ತಿವೆ. ಔಷಧಿಗಳಿಂದ ಗುಣವಾಗುವಂಥವಲ್ಲ ಇವು."

ರಾಮಕೃಷ್ಣರ ಶರೀರದಲ್ಲಿ ಕಾಣಿಸಿಕೊಂಡ ರೋಗಲಕ್ಷಣಗಳ ನಿಜವಾದ ಕಾರಣವನ್ನು ಮೊತ್ತಮೊದಲು ಕಂಡುಕೊಂಡವನೆಂದರೆ ಈ ವೈದ್ಯನೇ. ಆದರೆ ರಾಮಕೃಷ್ಣರನ್ನು ಬಿಟ್ಟರೆ ಬೇರೆ ಯಾರಿಗೂ ಅವನ ಮಾತಿನಲ್ಲಿ ವಿಶ್ವಾಸವುಂಟಾಗ ಲಿಲ್ಲ. ಹೀಗೆಯೇ ಕಾಲ ಉರುಳಿತು. ನಾನಾ ಪ್ರಕಾರವಾದ ಚಿಕಿತ್ಸೆಗಳೂ ಮುಂದು ವರಿದುವು. ಯಾರೇನು ಮಾಡಿದರೂ 'ರೋಗ' ಮಾತ್ರ ತಗ್ಗುವ ಸೂಚನೆಯೇ ಇಲ್ಲದೆ ವೃದ್ಧಿಗೊಳ್ಳುತ್ತ ಬಂದಿತು.

ಕ್ರಮೇಣ ಈ ಸುದ್ದಿ ಕಾಮಾರಪುಕುರಕ್ಕೂ ಮುಟ್ಟಿತು. ಮಗನನ್ನು ಕಳಿಸಿ ಕೊಡುವಾಗ ಚಂದ್ರಮಣಿ ಹೆದರಿಕೊಂಡೇ ಇದ್ದಳು. ಪಾಪ, ಅವಳು ಹೆದರಿ ದ್ದಂತೆಯೇ ಆಯಿತು. ಆದರೆ ಎಲ್ಲ ತರಹದ ಚಿಕಿತ್ಸೆ ಮಾಡಿಯೂ ಮಗನಿಗೆ ಗುಣ ವಾಗಲಿಲ್ಲವೆಂದು ತಿಳಿದಾಗ ಅವಳಿಗೆಷ್ಟು ಸಂಕಟವಾಗಿರಬೇಡ ! ಹತಾಶಳಾದ ಚಂದ್ರ ಮಣಿ ಬೇರಾವ ಉಪಾಯವನ್ನೂ ಕಾಣದೆ ಶಿವನ ಸನ್ನಿಧಿಯಲ್ಲಿ ಪ್ರಾಯೋಪವೇಶ ಮಾಡುವ ವ್ರತ ಕೈಗೊಂಡಳು. ಕಾಮಾರಪುಕುರದ 'ವೃದ್ಧ' (ಪುರಾತನ) ಶಿವನು ಜಾಗೃತ ದೇವತೆ ಎಂದು ಪ್ರಸಿದ್ಧಿ. ಆದ್ದರಿಂದ ಅವಳು ಆ ದೇವಸ್ಥಾನದ ಬಳಿ ಅನ್ನ-ನೀರು ಇಲ್ಲದೆ ಮಲಗಿಬಿಟ್ಟಳು. ಆಗ ಅವಳಿಗೆ "ಮುಕುಂದಪುರದಲ್ಲಿರುವ ಶಿವ ದೇವಾಲಯದಲ್ಲಿ ಇದೇ ವ್ರತವನ್ನು ಕೈಗೊಂಡರೆ ನಿನ್ನ ಬಯಕೆ ಈಡೇರುವುದು" ಎಂಬ ಆದೇಶ ಸಿಕ್ಕಿತು.

ಆದರೆ ಮುಕುಂದಪುರದ ಶಿವದೇವಾಲಯದಲ್ಲಿ ಹಿಂದೆ ಯಾರಾದರೂ ಅಂತಹ ಪ್ರಾಯೋಪವೇಶ ವ್ರತವನ್ನು ಕೈಗೊಂಡ ಉದಾಹರಣೆಯಿರಲಿಲ್ಲ. ಸಾಧಾರಣವಾಗಿ, ಇಂತಿಂಥ ದೇವರಿಗೆ ಇಂತಿಂಥ ಹರಕೆ ಹೇಳಿಕೊಳ್ಳಬಹುದು ಎಂದು ವಾಡಿಕೆಯಾಗಿ ಬಂದಿರುತ್ತದೆ. ಆ ಸಂಪ್ರದಾಯವನ್ನು ಯಾರೂ ಮುರಿಯಹೋಗು ವುದಿಲ್ಲ. ಆದರೆ ಚಂದ್ರಮಣಿ ತನಗೆ ದೊರಕಿದ ಆದೇಶದಲ್ಲಿ ದೃಢವಿಶ್ವಾಸ ತಾಳಿ, ಅಲ್ಲಿಗೆ ಹೋಗಿ ಮತ್ತೆ ಉಪವಾಸವನ್ನು ಪ್ರಾರಂಭಿಸಿಯೇ ಬಿಟ್ಟಳು ! ಅವಳು ಹೀಗೆ ಎರಡು ಮೂರು ದಿನ ಶಿವಧ್ಯಾನದಲ್ಲಿ ನಿರತಳಾಗಿದ್ದಿರಬಹುದು; ಅಷ್ಟರಲ್ಲೇ ಅವಳ ಮನೋರಥ ಈಡೇರಿತು. ಕನಸಿನಲ್ಲಿ ಅವಳು ಉಜ್ವಲ ಜಟಾಜೂಟಧಾರಿಯೂ ವ್ಯಾಘ್ರಾಂಬರಧರನೂ ಆದ ಮಹಾದೇವನು ಪ್ರಖರ ತೇಜೋಮಯ ರೂಪು ದಳೆದು ಪ್ರತ್ಯಕ್ಷನಾದಂತೆ ಕಂಡಳು. ಪರಮೇಶ್ವರನು ಆಕೆಯನ್ನು ಸಂತೈಸುತ್ತ, "ಭಯಪಡಬೇಡ ! ನಿನ್ನ ಮಗನಿಗೆ ಹುಚ್ಚು ಹಿಡಿದಿಲ್ಲ. ಪ್ರಚಂಡ ದೈವಿಕ

ಆವೇಶದಿಂದಾಗಿ ಅವನಿಗೆ ಹಾಗಾಗಿದೆ ಅಷ್ಟೆ. ಸಕಾಲದಲ್ಲಿ ಎಲ್ಲವೂ ಸರಿಹೋಗುತ್ತದೆ'' ಎಂದು ನುಡಿದ.

ಇದೀಗ ಚಂದ್ರಮಣಿಯ ಮನಸ್ಸು ಸಮಾಧಾನಗೊಂಡಿತು. ಪರಮೇಶ್ವರನ ಆದೇಶದಲ್ಲಿ ಸಂಪೂರ್ಣ ವಿಶ್ವಾಸವಿರಿಸಿ ತನ್ನ ವ್ರತವನ್ನು ಮುಕ್ತಾಯಗೊಳಿಸಿ ಮನೆಗೆ ಹಿಂದಿರುಗಿದಳು. ಎಲ್ಲವೂ ಭಗವದಿಚ್ಛೆಯಂತೆ ನಡೆಯಲಿ ಎಂದು ಸಮಾಧಾನ ತಂದುಕೊಂಡಳು. ಮನೆಗೆ ಬರುತ್ತಿದ್ದಂತೆಯೇ, ಮಗನಿಗೆ ಶಾಂತಿ ದೊರಕಲಿ ಎಂದು ಮೊರೆಯಿಡುತ್ತ ಏಕಚಿತ್ತದಿಂದ ಶೀತಲಾದೇವಿಯ ಮತ್ತು ಮನೆದೇವರಾದ ರಘುವೀರನ ಪೂಜೆಯಲ್ಲಿ ನಿರತಳಾದಳು.

ರಾಮಕೃಷ್ಣರ ಶರೀರದಲ್ಲಿ ಕಾಣಿಸಿಕೊಂಡ ಆ ರೋಗಲಕ್ಷಣಗಳು ನಿಜಕ್ಕೂ ವಿಚಿತ್ರ ಎಂದೇ ಹೇಳಬೇಕು. ಏಕೆಂದರೆ ಅಂಥವನ್ನು ನಾವು ಕಾಣುವುದು ಅಪರೂಪವೇ. ಆದರೆ ಅಷ್ಟು ದೀರ್ಘಕಾಲ ಅವರ ಶರೀರ ಉಳಿದುಕೊಂಡುದೇ ದೊಡ್ಡ ಆಶ್ಚರ್ಯ. ಇದಕ್ಕೆ ಕಾರಣವೇನೆಂದು ಅವರೇ ವಿವರಿಸುತ್ತಾರೆ:

''ಇತರ ಸಾಧಾರಣ ವ್ಯಕ್ತಿಗಳ ಶರೀರ ಮನಸ್ಸುಗಳಲ್ಲಿ ಅಂತಹ ಉತ್ಕಟ ಸ್ಥಿತಿ ಉಂಟಾಗುವ ಮಾತು ಹಾಗಿರಲಿ, ಅದರಲ್ಲಿ ಕಾಲು ಭಾಗ ಉಂಟಾದರೂ ಪ್ರಾಣ ಉಳಿಯುವುದಿಲ್ಲ. ಜಗನ್ಮಾತೆಯ ಒಂದಲ್ಲ ಒಂದು ದರ್ಶನವನ್ನು ನಾನು ದಿವಾರಾತ್ರಿಗಳಲ್ಲಿ ಹೆಚ್ಚಿನ ಹೊತ್ತು ಕಾಣುತ್ತಲೇ ಇದ್ದೆ. ಆದ್ದರಿಂದಲೇ ಈ ಶರೀರ ಉಳಿದುಕೊಂಡಿತು. ಇಲ್ಲದಿದ್ದರೆ (ತಮ್ಮ ಶರೀರವನ್ನು ತೋರಿಸುತ್ತ) ಈ ಕೋಶ ಯಾವಾಗಲೋ ಬಿದ್ದುಹೋಗಬೇಕಾಗಿತ್ತು. ಆರು ವರ್ಷಗಳಷ್ಟು ಸುದೀರ್ಘ ಕಾಲ ನನಗೆ ನಿದ್ರೆಯೇ ಇರಲಿಲ್ಲ! ಕಣ್ಣುಗಳಿಗೆ ರೆಪ್ಪೆಯನ್ನು ಮಿಟುಕಿಸುವ ಶಕ್ತಿಯೇ ಹೊರಟುಹೋಗಿತ್ತು. ನಾನು ಎಷ್ಟೇ ಪ್ರಯತ್ನ ಪಟ್ಟರೂ ಕಣ್ಣನ್ನು ಮುಚ್ಚಲು ಸಾಧ್ಯವಾಗುತ್ತಿರಲಿಲ್ಲ. ಸಮಯ ಉರುಳುತ್ತಿರುವುದರ ಪ್ರಜ್ಞೆಯೇ ಇರಲಿಲ್ಲ. ಮತ್ತು ದೇಹವನ್ನು ರಕ್ಷಿಸಿಕೊಳ್ಳಬೇಕೆಂಬ ಪರಿಜ್ಞಾನವೂ ಹೊರಟುಹೋಗಿತ್ತು. ನನ್ನ ಶರೀರದ ಕಡೆಗೆ ಸ್ವಲ್ಪ ದೃಷ್ಟಿ ಹರಿದರೂ ಸಾಕು, ಅದರ ಅವಸ್ಥೆಯನ್ನು ಕಂಡು ಗಾಬರಿಯಾಗುತ್ತಿತ್ತು. ನನಗೆ ಹುಚ್ಚು ಹಿಡಿಯುತ್ತದೆಯೇನೊ ಎಂದು ಹೆದರುತ್ತಿದ್ದೆ. ಕಣ್ರೆಪ್ಪೆಗಳು ಮುಚ್ಚದಿರುವುದನ್ನು ಕಂಡು ಕನ್ನಡಿಯ ಮುಂದೆ ನಿಂತು, ಕಣ್ಣಿನಲ್ಲಿ ಬೆರಳು ಹಾಕಿದರಾದರೂ ಮುಚ್ಚಿಕೊಳ್ಳುವುದೇ ಎಂದು ಪರೀಕ್ಷಿಸಿದೆ. ಆದರೂ ರೆಪ್ಪೆಗಳು ಮುಚ್ಚಿಕೊಳ್ಳಲೇ ಇಲ್ಲ! ಆಗ ನಾನು ದಿಗಿಲುಗೊಂಡು ಅಳುತ್ತ ಜಗದಂಬೆಗೆ ಹೇಳಿದೆ, 'ಅಮ್ಮಾ ನಿನ್ನನ್ನೇ ನಿರಂತರವಾಗಿ ಸ್ಮರಿಸಿದ್ದಕ್ಕೆ ಇದೇಯೇನು ಫಲ ? ನಿನ್ನನ್ನೇ ನೆಚ್ಚಿಕೊಂಡಿದ್ದುದಕ್ಕೆ ಈಗ ಈ ಭಯಂಕರ ಕಾಯಿಲೆಯನ್ನು ಕೊಟ್ಟಿರುವೆಯಾ ?' ಎಂದು. ಆದರೆ ಮರುಕ್ಷಣವೇ ನನ್ನ ಮನಸ್ಸು ಬದಲಾಯಿತು. ಆಗ ನಾನು, 'ಛೆ ! ಈ ಶರೀರಕ್ಕೆ ಏನು ಬೇಕಾದರೂ ಆಗಿಹೋಗಲಿ. ಇದು ಬಿದ್ದುಹೋಗಬೇಕೆಂದಿದ್ದರೆ ಹಾಗೆಯೇ ಆಗಲಿ. ಆದರೆ ನೀನು ಮಾತ್ರ ಕೈಬಿಡಬೇಡಮ್ಮ! ನನ್ನ ಮೇಲೆ ಕೃಪೆದೋರಿ ದರ್ಶನಭಾಗ್ಯ ನೀಡಮ್ಮ. ನಾನು ನಿನ್ನ ಪಾದ ಪದ್ಮಗಳಲ್ಲಿ ಸಂಪೂರ್ಣ ಶರಣಾಗಿದ್ದೇನೆ. ಅಮ್ಮಾ ನನಗೆ ನಿನ್ನನ್ನುಳಿದು ಬೇರಾರೂ ಗತಿಯಿಲ್ಲಮ್ಮ' ಎಂದು

ಕಣ್ಣೀರ್ಗರೆದೆ. ಈ ರೀತಿ ಎಷ್ಟೋ ಸಲ ಆಗುತ್ತಿತ್ತು. ಬಳಿಕ ಬಹಳ ಹೊತ್ತು ಅತ್ತು ಆಕೆಯು ಮರೆಹೊಕ್ಕ ಮೇಲೆ ಮತ್ತೆ ನನ್ನ ಮನಸ್ಸು ಅಲೌಕಿಕ ಆನಂದೋತ್ಸಾಹ ಭರಿತವಾಗುತ್ತಿತ್ತು. ಈ ಶರೀರವೆಂಬುದೊಂದು ತುಚ್ಛವಾದ ವಸ್ತುವಿನಂತೆ ತೋರುತ್ತಿತ್ತು. ಆಗ ನಾನು ಜಗದಂಬೆಯ ದರ್ಶನವನ್ನು ಪಡೆದು ಆಕೆಯ ಅಭಯವಾಣಿಯನ್ನಾಲಿಸಿ ನೆಮ್ಮದಿ ಹೊಂದುತ್ತಿದ್ದೆ.''

ಶ್ರೀರಾಮಕೃಷ್ಣರ ಈ ವಿಧದ ವಿಚಿತ್ರ ಭಾವಗಳನ್ನೂ ಅವಸ್ಥೆಗಳನ್ನೂ ಗಮನಿಸಿದ ಮಥುರಾನಾಥ ಆಶ್ಚರ್ಯಚಕಿತನಾಗಿದ್ದ. ದಿನಕಳೆದಂತೆಲ್ಲ ಅವನು ಅವರ ದೈವಿಕತೆಯನ್ನು ಹೆಚ್ಚು ಸ್ಪಷ್ಟವಾಗಿ ಗುರುತಿಸಲಾರಂಭಿಸಿದ. ಅವನ ಮನಸ್ಸೆಂಬ ಗೂಡಿನಲ್ಲಿ ಅವರ ಕುರಿತಾದ ಹಲವಾರು ವಿಚಾರಗಳೆಂಬ ಭ್ರಮರಗಳು ಗುಂಯ್‌ಗುಡುತ್ತಿದ್ದುವು. ಒಮ್ಮೆ ಅವನಿಗನ್ನಿಸುತ್ತಿತ್ತು, 'ಇವರು ಇತರ ಸಾಮಾನ್ಯ ಜನರಂತಲ್ಲ ಎಂಬುದು ನಿಶ್ಚಿತ. ಇಂತಹ ಭಕ್ತಿ–ವೈರಾಗ್ಯ ಬರಬೇಕಾದರೆ ಅದೆಷ್ಟು ಪುಣ್ಯ ಮಾಡಿರಬೇಕೋ!' ಆದರೆ ಅವರ ವಿಚಿತ್ರ ವರ್ತನೆಗಳನ್ನು ಕಂಡು ಭಾವಿಸುತ್ತಿದ್ದ: 'ಅಲ್ಲ, ಸ್ವಲ್ಪವಾದರೂ ಬುದ್ಧಿ ಏರುಪೇರಾಗಿಲ್ಲದಿದ್ದರೆ ಯಾರಾದರೂ ಹೀಗಾಡುತ್ತಾರೆಯೇ? ಆದರೆ ಇದು ಸಾಮಾನ್ಯ ಹುಚ್ಚಲ್ಲ, ಅತಿಯಾದ ಸಾಧನೆಯಿಂದ ಹೀಗಾಗಿದೆ ಅಷ್ಟೆ. ಇವರು ತಮ್ಮ ಸಾಧನೆಯನ್ನು ಸ್ವಲ್ಪ ಸಡಿಲಿಸಿದರೆ ಎಲ್ಲವೂ ತಾನಾಗಿಯೇ ಸರಿಹೋಗುತ್ತದೆ.' ರಾಮಕೃಷ್ಣರ ವೈರಾಗ್ಯಬುದ್ಧಿಯನ್ನು ಕಂಡಾಗಲಂತೂ 'ಇಂಥ ವೈರಾಗ್ಯ ಯಾರಲ್ಲಾದರೂ ಇರಲು ಸಾಧ್ಯವೇ?' ಎಂದು ಬೆರಗಾಗುತ್ತಿದ್ದ. ಬರಬರುತ್ತ ಅವರ ಸತ್ಸಂಗದ ಪರಿಣಾಮವಾಗಿ ಅವನಿಗೂ ಅವನ ಮನೆಮಂದಿಗೂ ಅವರ ದಿವ್ಯಭಾವದ ಸೋಂಕು ತಗುಲಿತು! ಈ ನಡುವೆ ಅವರ ಬಗ್ಗೆ ಮಥುರನ ಭಕ್ತಿಗೌರವಗಳು ಸಹಸ್ರಮಡಿಯಾಗುವಂತೆ ಮಾಡಿದ ಒಂದು ಘಟನೆ ನಡೆಯಿತು.

ಒಂದು ದಿನ ರಾಮಕೃಷ್ಣರು ತಮ್ಮ ಕೋಣೆಯ ಹೊರಗೆ ಉದ್ದನೆಯ ಜಗುಲಿಯಲ್ಲಿ ಒಬ್ಬರೇ ಅತ್ತಿಂದಿತ್ತ ನಡೆದಾಡುತ್ತಿದ್ದಾರೆ; ತಮ್ಮ ಎಂದಿನ ಅತೀಂದ್ರಿಯ ಭಾವದಲ್ಲಿ ಮುಳುಗಿ ಇಹಲೋಕದ ಪರಿವೆಯೇ ಇಲ್ಲದಂತಿದ್ದಾರೆ. ಅವರ ಕಣ್ಣುಗಳು ತೆರೆದಿದ್ದರೂ ದೃಷ್ಟಿ ಅಂತರ್ಮುಖವಾಗಿದೆ; ಮುಖದಲ್ಲಿ ಭಕ್ತಿ–ಶಾಂತಿ–ಕರುಣ ಭಾವಗಳು ತುಳುಕಾಡುತ್ತಿವೆ; ನಿಧಾನವಾಗಿ ಅತ್ತಿಂದಿತ್ತ ಇತ್ತಿಂದತ್ತ ಹೆಜ್ಜೆ ಹಾಕುತ್ತಿದ್ದಾರೆ. ಇದೇ ವೇಳೆಗೆ ದೇವಾಲಯಕ್ಕೂ ಪಂಚವಟಿಗೂ ನಡುವೆ ಇರುವ ಬಂಗಲೆಯ ವರಾಂಡದಲ್ಲಿ ಗುಡುಗುಡಿ ಸೇದುತ್ತ ಮಥುರಬಾಬು ಆರಾಮವಾಗಿ ಕುಳಿತಿದ್ದಾನೆ; ಅನತಿ ದೂರದಲ್ಲಿ ರಾಮಕೃಷ್ಣರು ತಮ್ಮ ಕೋಣೆಯ ಬಳಿ ಅಡ್ಡಾಡುತ್ತಿರುವುದು ಕಾಣುತ್ತಿದೆ. ಶ್ರೀಮಂತ ಜಮೀನ್ದಾರನಿಗೆ ಚಿಂತೆಗೇನು ಕೊರತೆ? ಮಥುರ ತನ್ನದೇ ಆದ ನೂರು ಆಲೋಚನೆಗಳಲ್ಲಿ ಮಗ್ನನಾಗಿದ್ದಾನೆ. ಎದುರಿಗೇ ಕಿರಿಯ ಭಟ್ಟಾಚಾರ್ಯರು ನಡೆದಾಡುವುದು ಕಾಣುತ್ತಿರುವುದರಿಂದ ಮನಸ್ಸು ಒಮ್ಮೊಮ್ಮೆ ಆ ಕಡೆಗೂ ಹೊರಳುತ್ತದೆ. 'ಅವರ ಮುಖದಲ್ಲಿ ಎಂಥ ನಿರ್ಲಿಪ್ತ ಭಾವ!' ಎಂದು ಒಮ್ಮೆ ಆಲೋಚಿಸುತ್ತಾನೆ. ಮತ್ತೆ ಮರುಕ್ಷಣ ಜಮೀನಿನ ವಿವಾದವಾವುದೋ

ನೆನಪಾಗುತ್ತದೆ.

ಆದರೆ ತಾವು ಮಥುರಬಾಬುವಿನ ದೃಷ್ಟಿಗೆ ಬೀಳುವಂತೆ ನಡೆದಾಡುತ್ತಿದ್ದೇವೆ ಎಂಬುದರ ಅರಿವು ರಾಮಕೃಷ್ಣರಿಗಿಲ್ಲ. ಅವರಿಗೆ ಆ ಆಲೋಚನೆ ಹೇಗೆತಾನೆ ಬರಬೇಕು? ಅಥವಾ ಅವರಿಗೆ ಅದರ ಅರಿವಿದ್ದರೆ ತಾನೆ ಏನಂತೆ? ಅವರಿಬ್ಬರ ನಡುವಿನ ಸಾಮಾಜಿಕ ಸ್ಥಾನಮಾನದ ಅಂತರ, ಆರ್ಥಿಕ ಸ್ಥಿತಿಗತಿಗಳಲ್ಲಿನ ತಾರತಮ್ಯ ಎಷ್ಟು ಅಗಾಧವೆಂದರೆ ಒಬ್ಬರ ಕುರಿತಾಗಿ ಇನ್ನೊಬ್ಬರು ಆಲೋಚಿಸುವ ಪ್ರಮೇಯವೇ ಇರಬೇಕಾಗಿರಲಿಲ್ಲ. ಒಂದು ದೃಷ್ಟಿಯಿಂದ ನೋಡಿದರೆ, ಮಥುರ ಬಾಬು ಅಲ್ಲಿ ಕುಳಿತಿರುವುದನ್ನು ಕಂಡರೆ ರಾಮಕೃಷ್ಣರು ಸಂಕೋಚಗೊಂಡು ಬದಿಗೆ ಸರಿಯಬೇಕಾದುದೇ ಸಹಜವಾಗಿತ್ತು. ಏಕೆಂದರೆ ಇವರೋ ಒಬ್ಬ ಬಡ ಹಾರುವ, ಜನರ ದೃಷ್ಟಿಯಲ್ಲಿ ಹುಚ್ಚ, ನಗೆಪಾಟಲಿನ ವಸ್ತು. ಅವನೋ ಲಕ್ಷ್ಮೀಪುತ್ರನಾದ ಜಮೀನ್ದಾರ, ಲೋಕಮಾನ್ಯ, ವಿದ್ಯಾಬುದ್ಧಿ ಸಂಪನ್ನ. ಅಲ್ಲದೆ ಅವನ ಕನಿಕರಕ್ಕೆ ಪಾತ್ರರಾಗಿದ್ದರಿಂದಲೇ ಇವರಿನ್ನೂ ಕೆಲಸದಲ್ಲಿ ಉಳಿದುಕೊಂಡಿರುವುದು ಎನ್ನಬೇಕು. ಹಾಗಿರುವಾಗ ಈ ಅನಾಮಧೇಯ ಬ್ರಾಹ್ಮಣನು ಅವನಂತಹ ದೊಡ್ಡ ಮನುಷ್ಯರ ಸಮ್ಮುಖದಲ್ಲಿ ಸಂಕೋಚವಿಲ್ಲದೆ ಓಡಾಡಲು ಹೇಗೆ ಸಾಧ್ಯ?

ಆದರೆ ಆಗ ಅತ್ಯಂತ ಅಚಿಂತ್ಯವಾದ ವಿಚಿತ್ರವೊಂದು ಸಂಭವಿಸಿತು. ಮಥುರ ಬಾಬುವಿಗೆ ಏನಾಯಿತೋ ಏನೋ, ರಾಮಕೃಷ್ಣರನ್ನೇ ದಿಟ್ಟಿಸಿ ನೋಡಲಾರಂಭಿಸಿದ. ಆಶ್ಚರ್ಯದಿಂದ ಅವನ ಕಣ್ಣು ಅಗಲವಾಗಿ ತೆರೆದುಕೊಂಡಿತು. ಹುಕ್ಕಾ ಕೊಳವೆ ಕೈಯಿಂದ ಜಾರಿಬಿತ್ತು. ಕಣ್ಣು ತಿಕ್ಕಿಕೊಂಡು ನೋಡಿದ. ಮತ್ತೆ ಮತ್ತೆ ನೋಡಿದ. ಏನೂ ಅರ್ಥವಾಗಲಿಲ್ಲ. ಧಿಗ್ಗನೆ ಮೇಲೆದ್ದು ನಿಂತ. ಸೀದಾ ಮೆಟ್ಟಿಲಿಳಿದು ಓಡುತ್ತ ಹೋದ. ನೇರವಾಗಿ ರಾಮಕೃಷ್ಣರ ಮುಂದೆ ಹೋಗಿ ಕುಸಿದು ಬಿದ್ದ. ಅವರ ಪಾದಗಳನ್ನು ಬಿಗಿಯಾಗಿ ಹಿಡಿದು ಮಗುವಿನಂತೆ ಅಳತೊಡಗಿದ! ಭಗವದ್ಭಾವಲೀನರಾಗಿದ್ದ ರಾಮಕೃಷ್ಣರು ಗಾಬರಿಗೊಂಡು ಕೇಳಿದರು:

"ಅಯ್ಯೋ! ಇದೇನು ಮಾಡುತ್ತಿದ್ದೀಯಪ್ಪಾ ನೀನು? ಏಳು ಏಳು! ನೀನು ಜಮೀನ್ದಾರ, ರಾಣಿಯ ಅಳಿಯ! ಇದನ್ನು ಕಂಡರೆ ಜನ ಏನೆಂದಾರು! ಏನಾಯಿತು ನಿನಗೆ? ಸಮಾಧಾನ ತಂದುಕೊ, ಎದ್ದೇಳು!"

ಆದರೆ ಮಥುರ ಅವರ ಮಾತಿಗೆ ಕಿವಿಗೊಟ್ಟರೆ ತಾನೆ? ಅವನೆಂದ:

"ತಂದೆ! ನಿಜ ಹೇಳಿ ತಂದೆ, ನೀವ್ಯಾರು? ನಿಜವಾಗಿಯೂ ನೀವ್ಯಾರು?"

ಶ್ರೀರಾಮಕೃಷ್ಣರು: "ಇದೇನಪ್ಪ ನೀನು ಕೇಳುತ್ತಿರುವುದು? ನಾನ್ಯಾರು ಎನ್ನುವುದನ್ನು ಹೊಸದಾಗಿ ಹೇಳಬೇಕೆ?"

ಮಥುರ: "ತಂದೆ! ನಾನೀಗ ಒಂದು ಪರಮಾದ್ಭುತವನ್ನು ಕಂಡೆ. ನೀವು ಈ ಜಗುಲಿಯ ಮೇಲೆ ನಡೆದಾಡುತ್ತ ಅತ್ತಿಂದ ಇತ್ತ ಬರುತ್ತಿರುವಾಗ ನಿಮ್ಮನ್ನು ಸಾಕ್ಷಾತ್ ಕಾಳಿಕಾದೇವಿಯಾಗಿ ಕಂಡೆ! ಹೌದು, ನಮ್ಮ ದೇವಾಲಯದ ಗರ್ಭಗೃಹದಲ್ಲಿ ಪೂಜೆಗೊಳ್ಳುತ್ತಿರುವ ಭವತಾರಿಣಿಯೇ ಅವಳು! ಬಳಿಕ ನೀವು ಹಿಂದಿರುಗಿ ಇತ್ತಿಂದ ಅತ್ತ ನಡೆದಾಗ ಸಾಕ್ಷಾತ್ ಮಹಾದೇವ ಶಿವನಾಗಿ ಕಂಡೆ! ಮೊದಲಿಗೆ

ನಾನೆಂದುಕೊಂಡೆ, ಇದೆಲ್ಲೋ ನನ್ನ ಭ್ರಮೆ ಎಂದು. ಆದ್ದರಿಂದ ಚೆನ್ನಾಗಿ ಕಣ್ಣುಜ್ಜಿ ಕೊಂಡು ನೋಡಿದೆ, ಆಗಲೂ ಅದೇ ದೃಶ್ಯ! ಅಷ್ಟೇ ಅಲ್ಲ, ನಾನು ನೋಡುತ್ತ ನಿಂತಷ್ಟು ಹೊತ್ತೂ ಆ ಅದ್ಭುತವೇ ಮತ್ತೆಮತ್ತೆ ಕಾಣಿಸುತ್ತಿತ್ತು! ನೀವೀಗ ಹೇಳಿ, ನೀವ್ಯಾರು ?"

ಮಥುರ ತಾನು ಕಂಡದ್ದನ್ನು ಪುನಃಪುನಃ ಬಣ್ಣಿಸುತ್ತ ಭಾವಾವೇಗದಿಂದ ಬಿಕ್ಕಿ ಬಿಕ್ಕಿ ಅತ್ತ. ಶ್ರೀರಾಮಕೃಷ್ಣರು ಅವನನ್ನು ಸಂತೈಸುತ್ತ ಹೇಳಿದರು:

"ಮಥುರ, ನಿಜ ಹೇಳಬೇಕೆಂದರೆ, ನನಗೊಂದೂ ತಿಳಿಯದಪ್ಪ. ನಾನು ಹಿಂದೆ ಹೇಗಿದ್ದೆನೋ ಈಗಲೂ ಹಾಗೆಯೇ ಇದ್ದೇನೆ."

ಆದರೆ ಮಥುರ ಅವರ ಮಾತನ್ನು ಕೇಳಬೇಕಲ್ಲ!

ಈ ಘಟನೆಯನ್ನು ಶ್ರೀರಾಮಕೃಷ್ಣರು ಮುಂದೆ ಭಕ್ತರಿಗೆ ವಿವರಿಸಿ ಬಳಿಕ ಹೇಳುತ್ತಾರೆ:

"ಮಥುರಬಾಬು ನನ್ನ ಪಾದವನ್ನು ಹಿಡಿದುಕೊಂಡು ಅಳುತ್ತಿರುವ ಆ ದೃಶ್ಯ ವನ್ನು ಕಂಡು ಯಾರಾದರೂ ರಾಣಿಗೆ ವರದಿ ಒಪ್ಪಿಸಿದರೇನು ಗತಿ ಎಂದು ನಾನು ಹೆದರಿದೆ. ಅವಳಾದರೂ ಏನೆಂದುಕೊಂಡಾಳು! ತನ್ನ ಅಳಿಯನ ಮೇಲೆ ನಾನು ಮಂಕುಬೂದಿ ಎರಚಿದ್ದೇನೆ ಎಂದು ತಿಳಿದರೂ ಆಶ್ಚರ್ಯವಿಲ್ಲ. ನಾನು ಬಗೆಬಗೆ ಯಾಗಿ ಸಮಾಧಾನ ಮಾಡಿದ ಮೇಲೆ ಮಥುರ ಸ್ವಲ್ಪ ಶಾಂತನಾದ.

"ಅದಿರಲಿ. ಮಥುರಬಾಬು ನನ್ನ ಮೇಲೆ ಅಂಥಾ ಭಕ್ತಿ ವಿಶ್ವಾಸವಿಟ್ಟು ನನಗಾಗಿ ಅಷ್ಟೊಂದು ಮಾಡಿದನಲ್ಲ, ಅದೆಲ್ಲ ಸುಮ್ಮಸುಮ್ಮನೆ ಎಂದುಕೊಂಡಿರಾ? ಜಗನ್ಮಾತೆ ನನ್ನ ಮೂಲಕ ಅವನಿಗೆ ಬಹಳಷ್ಟು ದರ್ಶನಗಳನ್ನು ತೋರಿಸಿಕೊಟ್ಟಿ ದ್ದಾಳೆ! ಅವನ ಜಾತಕದಲ್ಲೂ ಬರೆದಿತ್ತು, ಅವನ ಇಷ್ಟದೇವತೆಯಾದ ಭವತಾರಿಣಿ ಅವನ ಮೇಲೆ ಅದೆಷ್ಟು ಕೃಪಾಮಯಿಯಾಗಿರುತ್ತಾಳೆಂದರೆ, ಅವನಿಗಾಗಿ ಮಾನವ ಶರೀರ ಧರಿಸಿ ಬಂದು, ಸದಾ ಅವನೊಂದಿಗೇ ಇದ್ದು, ಅವನು ಹೋದೆಡೆಗೆ ಹೋಗಿ ಅವನನ್ನು ರಕ್ಷಿಸುತ್ತಾಳೆ, ಅಂತ."

ಈ ದಿವ್ಯಾನುಭವದಿಂದ ಮಥುರನಿಗೆ ಶ್ರೀರಾಮಕೃಷ್ಣರ ಮೇಲಿನ ಶ್ರದ್ಧೆ ಸುದೃಢವಾಯಿತು. ಏಕೆಂದರೆ, ಅವರು ಖಂಡಿತವಾಗಿಯೂ ಸಾಮಾನ್ಯ ಮಾನವ ರಂತಲ್ಲ ಎಂಬ ಅದ್ಭುತ ಸತ್ಯವನ್ನು ಅವನೀಗ ಪ್ರಪ್ರಥಮವಾಗಿ ಅನುಭವಿಸಿದ್ದಾನೆ. ಯಾವ ಶ್ರೀರಾಮಕೃಷ್ಣರನ್ನು ಅವನು ಮೊಟ್ಟಮೊದಲ ಬಾರಿಗೆ ಕಂಡಾಗಲೇ ಆಕರ್ಷಿತನಾದನೋ, ಅವರ ವಿಚಿತ್ರ ನಡೆವಳಿಕೆಗಳನ್ನು, ಅತಿ ವಿಚಿತ್ರ ಮಾನಸಿಕ ಸ್ಥಿತಿಯನ್ನು ಇತರರು ಹೀಗಳೆದು ದೂಷಿಸಿದರೂ ತಾನು ಅವುಗಳ ಮಹತ್ವವನ್ನು ಕೆದಕಿ ಕಂಡುಹಿಡಿದು ಅರಿತನೋ, ಅಂತಹ ಅವರು ನಿಜಕ್ಕೂ ಸಾಮಾನ್ಯರಲ್ಲ; ಕರುಣಾಮಯಿಯಾದ ಭವತಾರಿಣಿಯೇ ಕೃಪೆದೋರಿ ಅವರಲ್ಲಿ ಮೈದಳೆದು ಬಂದಿ ದ್ದಾಳೆ ಎಂಬುದನ್ನು ಇಂದು ಅವನು ಮನಗಂಡಿದ್ದಾನೆ. ಈ ಸಮಯದಿಂದಲೇ ಅವನು, ತನ್ನ ಜಾತಕಕ್ಕೆ ಅನುಸಾರವಾಗಿ ಜಗನ್ಮಾತೆಯು ರಾಮಕೃಷ್ಣರ ರೂಪದಿಂದ ತನ್ನೊಂದಿಗೆ ಸದಾ ಸಂಚರಿಸುತ್ತಿದ್ದಾಳೆ ಎಂಬುದನ್ನು ನಂಬತೊಡಗಿದ್ದಾನೆ. ರಾಮ

ಕೃಷ್ಣರೊಂದಿಗಿನ ಅವನ ಸಂಬಂಧ ಗಾಢವಾದದ್ದು, ನಿಕಟವಾದದ್ದು, ಆತ್ಮೀಯ ವಾದದ್ದು ಈ ಮುಹೂರ್ತದಿಂದಲೇ ಎನ್ನಬಹುದು.

ಈ ಅನುಭವವಾದಾಗಿನಿಂದ ರಾಮಕೃಷ್ಣರ ಬಗ್ಗೆ ಅವನ ದೃಷ್ಟಿಕೋನ ಸಂಪೂರ್ಣ ಬದಲಾಯಿತು. ಯಾವುದೋ ಮೋಡಿಯ ಪ್ರಭಾವದಿಂದಲೋ ಎಂಬಂತೆ ಅವನಲ್ಲಿ ಅಪೂರ್ವ ಭಕ್ತಿ ಶ್ರದ್ಧೆ ಉದ್ಭವಿಸಿತು. ಅವರಿರ್ವರ ಮುಂದಿನ ಸಂಬಂಧವನ್ನು ಅವಲೋಕಿಸಿದಾಗ, ಈ ಘಟನೆಯ ಮಹತ್ವ ಮನವರಿಕೆಯಾಗು ತ್ತದೆ. ನಿಜಕ್ಕೂ ಈ ದರ್ಶನವು ಮಥುರನ ಪುಣ್ಯವಿಶೇಷದ ಫಲವೇ ಸರಿ. ಈ ಅಪೂರ್ವ ದರ್ಶನದ ಮೂಲಕ ಜಗನ್ಮಾತೆಯೇ ಅವರಿಬ್ಬರನ್ನೂ ಅಭೇದ್ಯವಾದ ಪ್ರೇಮಬಂಧನದಿಂದ ಒಂದುಗೂಡಿಸಿದಳೆನ್ನಬೇಕು. ಏಕೆಂದರೆ ರಾಮಕೃಷ್ಣರ ಮುಂದಿನ ಸಾಧನೆಗಳಿಗೆ ಮಥುರನ ನೆರವು, ಬೆಂಬಲ ಅತಿಮುಖ್ಯವಾಗಿತ್ತು. ಅವರ ಲೀಲಾಕಾರ್ಯ ನೆರವೇರುವಲ್ಲಿ ಜಗನ್ಮಾತೆ ಎಂತಹ ಅದ್ಭುತ ಉಪಾಯಗಳನ್ನು ಹೂಡಿದಳೆಂಬುದಕ್ಕೆ ಈ ಮೇಲಿನ ಘಟನೆಯೊಂದು ಸಾಕ್ಷಿ.

ಶ್ರೀರಾಮಕೃಷ್ಣರು ಕಾಮಾರಪುಕುರದಿಂದ ದಕ್ಷಿಣೇಶ್ವರಕ್ಕೆ ಹಿಂದಿರುಗಿದ ಕೆಲ ಕಾಲದಲ್ಲೇ ಒಂದು ಪ್ರಮುಖ ಘಟನೆ ಸಂಭವಿಸಿತು. ಅದು ರಾಣಿ ರಾಸಮಣಿಯ ನಿಧನ. ಒಂದು ದಿನ ಆಕಸ್ಮಿಕವಾಗಿ ಬಿದ್ದುಬಿಟ್ಟ ರಾಣಿ ಮೈಕೈ ನೋವಿನಿಂದ ಹಾಸಿಗೆ ಹಿಡಿದಳು. ಈ ನೋವಿನ ಪರಿಣಾಮವಾಗಿ ಜ್ವರ ಅಜೀರ್ಣ ಇತ್ಯಾದಿ ತೊಂದರೆಗಳು ಹುಟ್ಟಿಕೊಂಡುವು. ಕಡೆಗೆ ಇದು ಆಮಶಂಕೆಗೆ ತಿರುಗಿತು. ಆಮಶಂಕೆಯೆಂದರೆ ಬಂಗಾಳದ ಒಂದು ಭಯಂಕರ ರೋಗ. ಆಮಶಂಕೆಗೆ ಗುರಿಯಾದ ರಾಸಮಣಿ ಮತ್ತೆ ಮೇಲೇಳಲೇ ಇಲ್ಲ.

ಕೊನೆಯುಸಿರೆಳೆಯುವ ಮುನ್ನ ರಾಸಮಣಿಗೆ ತನ್ನ ಎರಡು ಹೆಬ್ಬಯಕೆಗಳು ಈಡೇರುವುದನ್ನು ಕಾಣುವ ಭಾಗ್ಯವಿತ್ತು. ಒಂದನೆಯದು, ದಕ್ಷಿಣೇಶ್ವರದಲ್ಲಿ ಕಾಳೀ ದೇವಾಲಯದ ಸಂಸ್ಥಾಪನೆ. ಎರಡನೆಯದು, ಆ ದೇವಾಲಯದ ಮೇಲ್ವಿಚಾರಣೆಗೆ ಒಂದು ದತ್ತಿಯ ವ್ಯವಸ್ಥೆ.

ದೇವಿಯ ಪೂಜೆ ನೈವೇದ್ಯಾದಿಗಳು ನಿರಂತರವಾಗಿ ನಡೆದುಕೊಂಡುಹೋಗ ಬೇಕೆಂಬ ಉದ್ದೇಶದಿಂದ ಕಾಳೀ ದೇವಾಲಯದ ಪ್ರತಿಷ್ಠಾಪನೆಯಾದ ಕೆಲದಿನ ಗಳಲ್ಲೇ, ರಾಣಿ ರಾಸಮಣಿ ದಿನಜ್‌ಪುರ ಜಿಲ್ಲೆಯಲ್ಲಿ ಎರಡೂಕಾಲು ಲಕ್ಷ ರೂಪಾಯಿಗಳಷ್ಟು ಭಾರೀ ಮೊತ್ತವನ್ನು ಖರ್ಚುಮಾಡಿ ಒಂದು ದೊಡ್ಡ ಜಮೀ ನನ್ನು ಕೊಂಡುಕೊಂಡಿದ್ದಳು. ಆದರೆ ಇಷ್ಟು ವರ್ಷವೂ ಅವಳು ಅದನ್ನು ನಿಯಮ ಬದ್ಧವಾಗಿ ಒಂದು ದತ್ತಿಯನ್ನಾಗಿ ಮಾಡಿರಲಿಲ್ಲ. ಈಗ ಆಮಶಂಕೆ ತಗಲಿ ಮರಣ ಕಾಲ ವೇಗವಾಗಿ ಸಮೀಪಿಸುತ್ತಿರುವುದನ್ನು ಮನಗಂಡ ರಾಸಮಣಿ ಆ ಕಾರ್ಯ ವನ್ನು ಬೇಗ ಮಾಡಿ ಮುಗಿಸಲು ಕಾತರಳಾದಳು. ಆದರೆ ಮುಂದೆ ಈ ಆಸ್ತಿಗೆ ಸಂಬಂಧಿಸಿದಂತೆ ಯಾವ ತಕರಾರೂ ಉಂಟಾಗದಂತೆ ಸರಿಯಾದ ವ್ಯವಸ್ಥೆ ಮಾಡ ಬೇಕೆಂದು ಅವಳ ದೂರದೃಷ್ಟಿಗೆ ತೋರಿತು. ಆ ಸಮಯದಲ್ಲಿ ಅವಳ ಆಸ್ತಿಗೆ ಉತ್ತರಾಧಿಕಾರಿಗಳಾಗಿದ್ದವರೆಂದರೆ ಅವಳ ಹೆಣ್ಣುಮಕ್ಕಳಲ್ಲಿ ಮೊದಲನೆಯವಳು

ಮತ್ತು ಕೊನೆಯವಳು ಮಾತ್ರ (ಉಳಿದಿಬ್ಬರು ಆದಾಗಲೇ ಕಾಲವಶರಾಗಿದ್ದರು). ಬೇರೊಂದು ಪತ್ರದಲ್ಲಿ ಈ ದಾನಕ್ಕೆ ತಮ್ಮ ಅಂಗೀಕಾರವನ್ನು ಸೂಚಿಸಿ ಸಹಿ ಹಾಕು ವಂತೆ ರಾಸಮಣಿ ಇವರಿಬ್ಬರಿಗೂ ಹೇಳಿದಳು. ಕಿರಿಯಳೂ ಮಥುರನ ಹೆಂಡ ತಿಯೂ ಆದ ಜಗದಂಬಾದಾಸಿ ಆ ಪತ್ರಕ್ಕೆ ಸಹಿ ಹಾಕಿದಳು. ಆದರೆ ರಾಸಮಣಿ ಎಷ್ಟು ಕೇಳಿಕೊಂಡರೂ ಹಿರಿಯಳಾದ ಪದ್ಮಮಣಿದಾಸಿ ಸಹಿ ಹಾಕಲೇ ಇಲ್ಲ. ಮೃತ್ಯುಶಯ್ಯೆಯಲ್ಲೂ ರಾಣಿ ಇದೇ ಚಿಂತೆಯಿಂದ ಕೊರಗಿದಳು. ಕೊನೆಗೆ ಜಗನ್ಮಾತೆಯ ಇಚ್ಛೆಯಂತಾಗಲೆಂದು ಫೆಬ್ರವರಿ ೧೮ ರಂದು, ಎಂದರೆ ದೇಹತ್ಯಾಗ ಮಾಡುವ ಹಿಂದಿನ ದಿನ, ದಾನಪತ್ರಕ್ಕೆ ರಾಸಮಣಿ ತನ್ನ ಸಹಿ ಹಾಕಿದಳು.

ಮರಣಕ್ಕೆ ಕೆಲವು ದಿನ ಹಿಂದೆಯಷ್ಟೇ ಆವಳು ಕಾಳೀಘಾಟಿನ ಆದಿಗಂಗೆಯ ತೀರದ ತನ್ನ ಮನೆಗೆ ಬಂದಿದ್ದಳು. ಪ್ರಾಣೋತ್ಕ್ರಮಣಕ್ಕೆ ಇನ್ನೇನು ಸ್ವಲ್ಪ ಹೊತ್ತಿದೆ, ಆಗ ಆವಳಿಗೆ ಗಂಗೆಯ ಸನ್ನಿಧಿಗೆ ಹೋಗಬೇಕೆಂಬ ಮನಸ್ಸಾಯಿತು. ಅದರಂತೆ ಅವಳನ್ನು ನದೀ ತೀರಕ್ಕೆ ಕರೆದೊಯ್ದು ಮಲಗಿಸಿದರು. ಸಂಜೆಗತ್ತಲು ಮುತ್ತ ಲಾರಂಭಿಸಿದ್ದರಿಂದ ಅವಳ ಬಳಿಯಲ್ಲಿ ಬೆಳಗುವ ದೀಪಗಳನ್ನು ತಂದಿರಿಸಿದರು. ಆಗ ರಾಣಿ ಇದ್ದಕ್ಕಿದ್ದಂತೆ ಉದ್ಗರಿಸಿದಳು:

"ಆ ದೀಪಗಳನ್ನೆಲ್ಲ ಇಲ್ಲಿಂದ ತೆಗೆದುಬಿಡಿ. ಅವುಗಳ ಆಡಂಬರ ನನ್ನ ಮನಸ್ಸಿಗೆ ರುಚಿಸುತ್ತಿಲ್ಲ... ಈಗ ನನ್ನ ತಾಯಿ ಬಂದಿದ್ದಾಳೆ! ಅವಳ ದಿವ್ಯತೇಜಸ್ಸಿನಿಂದ ನಾಲ್ದೆಸೆಗಳೂ ಪ್ರಕಾಶಮಾನವಾಗಿವೆ!

"ಅಮ್ಮಾ ಬಂದೆಯಾ!... ಆದರೆ ಪದ್ಮಾ ತನ್ನ ರುಜು ಹಾಕಲಿಲ್ಲ. ಅದರಿಂದ ತೊಂದರೆಯಾಗುವುದೇನಮ್ಮ?..."

ರಾಣಿಯ ಮಾತಿಗೆ ಉತ್ತರವಾಗಿಯೋ ಎಂಬಂತೆ ದೂರದಿಂದ ನರಿಗಳು ಊಳಿಡುವ ಸದ್ದು ಜೋರಾಗಿ ಕೇಳಿಬಂದಿತು. (ಕಾಳೀ ದೇವಿಯು ನರಿಗಳಿಂದ ಸುತ್ತು ವರಿಯಲ್ಪಟ್ಟಿದ್ದಾಳೆಂದು ಪುರಾಣದಲ್ಲಿ ಹೇಳಿದೆ. ಆದ್ದರಿಂದ ಬಂಗಾಳದಲ್ಲಿ ನರಿಯ ಊಳಿಡುವಿಕೆಯನ್ನು ಶುಭಶಕುನವೆಂದು ಪರಿಗಣಿಸುತ್ತಾರೆ.) ಮರುಕ್ಷಣ ಅವಳು, ಜಗನ್ಮಾತೆಯ ಮಡಿಲಲ್ಲಿ ಶಾಶ್ವತವಾಗಿ ನಿದ್ರಾವಶಳಾದಳು. ಅವಳ ಮುಖಮಂಡಲ ಶಾಂತವಾಗಿತ್ತು, ಪ್ರಸನ್ನವಾಗಿತ್ತು.

ಕಾಲಾಂತರದಲ್ಲಿ ದೇವಾಲಯದ ಆಸ್ತಿಯ ಸಂಬಂಧವಾಗಿ ತಕರಾರುಗಳು ಉದ್ಭವಿಸಿದುವಾದರೂ, ರಾಣಿಯ ಕಿರಿಯ ಅಳಿಯನಾದ ಮಥುರಾನಾಥ ಜೀವಿಸಿರುವವರೆಗೆ ಯಾವುದೇ ತೊಂದರೆ ಉಂಟಾಗಲಿಲ್ಲ.

ನಾವು ಹಿಂದೆಯೇ ನೋಡಿದಂತೆ ದಕ್ಷಿಣೇಶ್ವರದಲ್ಲಿ ಕಾಳೀ ದೇವಾಲಯದ ಪ್ರತಿಷ್ಠಾಪನೆಯಾದಾಗಿನಿಂದ, ರಾಸಮಣಿಯ ಪಾಲಿಗೆ ಮಥುರ ಮತ್ತಷ್ಟು ಆಪ್ತ ನಾದ. ಆಸ್ತಿಪಾಸ್ತಿಯ ಮೇಲ್ವಿಚಾರಣೆಯಲ್ಲಿ ಆಕೆಯ ಬಲಗೈಯಂತಾದ. ದೇವಾಲಯದ ಆಸ್ತಿಯ ವಹಿವಾಟುಗಳನ್ನು ಚೆನ್ನಾಗಿ ತಿಳಿದಿದ್ದ ಅವನು, ದೇವಿಯ ಸೇವೆಗೆ ಸಂಬಂಧಿಸಿದ ಪ್ರತಿಯೊಂದನ್ನೂ ರಾಣಿಯ ಇಚ್ಛಾನುಸಾರ ನಿರ್ವಹಿಸುತ್ತ ಬಂದ. ಆದ್ದರಿಂದ ಆಕೆಯ ಕಾಲಾನಂತರ ಆ ಹೊಣೆಗಾರಿಕೆ ಸಹಜವಾಗಿಯೇ ಅವನ

ಪಾಲಿಗೆ ಬಂದಿತು. ಈ ವೇಳೆಗಾಗಲೇ ಅವನು ರಾಮಕೃಷ್ಣರ ಪರಮಪವಿತ್ರ ಜೀವನದ ಪ್ರಭಾವಕ್ಕೆ ಸಿಲುಕಿಕೊಂಡಾಗಿತ್ತು. ಆದ್ದರಿಂದ ರಾಣಿ ತೀರಿಹೋದಮೇಲೂ ದೇವಾಲಯದ ವಿವಿಧ ಸೇವೆಗಳ ಗುಣಮಟ್ಟ ಯಾವ ರೀತಿಯಲ್ಲೂ ಕುಸಿಯಲಿಲ್ಲ.

ಮಥುರಾನಾಥ ಕಾಳೀದೇವಾಲಯದ ನಿರ್ವಹಣೆಯ ಏಕಮೇವ ಅಧಿಕಾರಿಯಾದುದು ರಾಮಕೃಷ್ಣರ ಜೀವನಗತಿಯ ಮೇಲೆ ನೇರವಾದ ಪ್ರಭಾವವನ್ನು ಬೀರಿತು. ತನಗೆ ಈ ಅಧಿಕಾರ ದೊರೆತದ್ದರಿಂದ, ಇನ್ನು ಮುಂದೆ ರಾಮಕೃಷ್ಣರು ಕೈಗೊಂಡ ಸಾಧನೆಗಳಿಗೆ ಬೇಕಾದ ಎಲ್ಲ ನೆರವನ್ನೂ ಒದಗಿಸಲು ಮಥುರನಿಗೆ ಅವಕಾಶವಾಯಿತು. ರಾಮಕೃಷ್ಣರ ಲೀಲಾಮಯ ಜೀವನಕ್ಕೆ ಸಂಬಂಧಿಸಿದಂತೆ ನಡೆದ ನೂರಾರು ಘಟನಾವಳಿಗಳ ಅನುಕ್ರಮಣಿಕೆಯನ್ನು ಗಮನಿಸಿದಾಗ ಅವು ಅವರ ಜೀವನೋದ್ದೇಶಕ್ಕೆ ಪೂರಕವಾಗುವಂತೆ ಜೋಡಿಸಲ್ಪಟ್ಟಿರುವ ಅದ್ಭುತ ವಿನ್ಯಾಸವನ್ನು ಕಂಡು ನಾವು ಬೆರಗಾಗುತ್ತೇವೆ. ಮಥುರಾನಾಥನ ಕೈಗೆ ಇದ್ದಕ್ಕಿದ್ದಂತೆ ದೇವಾಲಯದ ಸರ್ವಾಧಿಕಾರ ಬಂದುದೂ ಕೂಡ ಈ ವರ್ಗಕ್ಕೇ ಸೇರುವ ಘಟನೆ. ಇಲ್ಲಿಂದ ಮುಂದೆ ತನ್ನ ಕಡೆಯುಸಿರಿನವರೆಗೂ ಅವನು ರಾಮಕೃಷ್ಣರ ಸೇವೆಗಾಗಿ ತನ್ನ ತನುಮನಧನಗಳನ್ನರ್ಪಿಸಿದ ರೀತಿಯನ್ನು ಕಂಡಾಗ ಇದು ಸ್ಪಷ್ಟವಾಗುತ್ತದೆ.

ಒಂದೊಂದು ವರ್ಷವೂ ಮನುಷ್ಯನ ಜೀವನದಲ್ಲಿ ಸಾಕಷ್ಟು ದೀರ್ಘ ಕಾಲಾವಧಿಯೇ. ಈ ಅವಧಿಯಲ್ಲಿ ಹಳೆಯ ಸ್ನೇಹಸಂಬಂಧಗಳೆಷ್ಟೋ ಸವೆದು ಹರಿದು ಹೋಗುತ್ತವೆ, ಹೊಸ ಸಂಬಂಧಗಳೆಷ್ಟೋ ಹುಟ್ಟಿಕೊಳ್ಳುತ್ತವೆ. ಹಾಗಿರುವಾಗ ಹನ್ನೊಂದು ವರ್ಷಗಳ ಪರ್ಯಂತ ಒಬ್ಬನು ಮತ್ತೊಬ್ಬನಲ್ಲಿ ಸಂಪೂರ್ಣ ಶ್ರದ್ಧೆಯನ್ನಿರಿಸಿ, ಆಧ್ಯಾತ್ಮಿಕ ಭಾವದಲ್ಲೇ ಜೀವನವನ್ನು ಕಳೆಯುವುದೆಂದರೆ ಅದು ಭಗವಂತನ ವಿಶೇಷ ಕೃಪೆಯಿಂದಲ್ಲದೆ ಮತ್ತೆಂತು ಸಾಧ್ಯ? ಮಥುರನಾಥನಿಗೆ ಇದ್ದಕ್ಕಿದ್ದಂತೆ ರಾಣಿಯ ಸಮಸ್ತ ಆಸ್ತಿಯ ಮೇಲೆ ಒಡೆತನ ದೊರೆತಾಗಲೂ ಕೂಡ ಅವನ ತಲೆ ತಿರುಗಿ ಹೋಗಿ, ಅವನು ಸ್ವೇಚ್ಛಾಚಾರದಲ್ಲಿ ತೊಡಗದಿದ್ದುದೂ ದೈವನಿಯಾಮಕವೇ ಎಂದು ನಾವು ಗುರುತಿಸದಿರುವಂತಿಲ್ಲ. ಮಥುರ–ಶ್ರೀರಾಮಕೃಷ್ಣರ ನಡುವಣ ಸಂಬಂಧ ಹೇಗೆ ಬೆಳೆದುಬಂದಿತೆಂಬ ಕಥೆಯನ್ನು ನಾವು ಮುಂದೆ ವಿವರವಾಗಿ ನೋಡಲಿದ್ದೇವೆ.

# ಗುರುವಾಗಿ ಬಂದ ಭೈರವಿ

ದಕ್ಷಿಣೇಶ್ವರದ ಕಾಳೀ ದೇವಾಲಯದ ಪಶ್ಚಿಮಕ್ಕೆ ಗಂಗಾತೀರದಲ್ಲಿ ವಿಶಾಲವಾದ ಪ್ರದೇಶ. ಅಲ್ಲೊಂದು ಮನೋಹರವಾದ ಹೂದೋಟ. ಎಚ್ಚರಿಕೆಯಿಂದ ಪಾಲಿಸಿ ಪೋಷಿಸಲಾದ ಆ ಉದ್ಯಾನವು ನಾನಾ ವಿಧದ ತರುಲತೆಗಳಿಂದ ಕಂಗೊಳಿಸುತ್ತಿತ್ತು. ಹಲವಾರು ಬಗೆಯ ಸುಗಂಧಭರಿತ ಕುಸುಮರಾಶಿಯಿಂದ ಶೋಭಿಸುತ್ತಿದ್ದ ಆ ಇಡೀ ಪ್ರದೇಶ ಒಂದು ವಿಶಿಷ್ಟ ಸುವಾಸನೆಯಿಂದ ಕೂಡಿತ್ತು. ಆ ದಿನಗಳಲ್ಲಿ ರಾಮಕೃಷ್ಣರು ದೇವಾಲಯದಲ್ಲಿ ಪೂಜೆ ಮಾಡುತ್ತಿರಲಿಲ್ಲವಾದರೂ, ನಿತ್ಯವೂ ತೋಟದಲ್ಲಿ ಹೂಗಳನ್ನು ಕಿತ್ತು, ಅವುಗಳಿಂದ ಮಾಲೆ ಕಟ್ಟಿ ಜಗನ್ಮಾತೆಯನ್ನು ಕೈಯಾರೆ ಸಿಂಗರಿಸಿ ಆನಂದಿಸುತ್ತಿದ್ದರು. ನದೀತೀರದಲ್ಲಿರುವ ಆ ಹೂದೋಟ ಬಹಳ ವಿಶಾಲವಾದದ್ದು. ಅದರ ನಟ್ಟನಡುವೆ ಹಲವು ಮೆಟ್ಟಲುಗಳಿಂದ ಕೂಡಿದ ಬಹುದೊಡ್ಡ ಸ್ನಾನಘಟ್ಟ. ಉದ್ಯಾನದಲ್ಲಿ ಒಂದು ವಿಶಾಲವಾದ ಬಕುಳವೃಕ್ಷವಿದ್ದುದರಿಂದ ಜನ ಆ ಘಟ್ಟವನ್ನು ಬಕುಳಘಟ್ಟ (ಬಂಗಾಳಿಯಲ್ಲಿ ಬಕುಲ್ ಘಾಟ್) ಎನ್ನುತ್ತಿದ್ದರು.

ಒಂದು ಪ್ರಾತಃಕಾಲ ರಾಮಕೃಷ್ಣರು ಅಲ್ಲಿ ಹೂ ಕೀಳುತ್ತಿದ್ದಾರೆ; ಆಗ ಗಂಗಾ ನದಿಯಲ್ಲಿ ದೋಣಿಯೊಂದು ತೇಲಿಬಂದು ಬಕುಳಘಟ್ಟದಲ್ಲಿ ನಿಂತಿತು. ಕಾಷಾಯ ವಸ್ತ್ರಧಾರಿಣಿಯಾದ ಒಬ್ಬಳು ಸುಂದರಸ್ತ್ರೀ ದೋಣಿಯಿಂದಿಳಿದಳು. ಕೆದರಿದ ದೀರ್ಘ ಕೇಶರಾಶಿ, ಕೊರಳಿನಲ್ಲಿ ರುದ್ರಾಕ್ಷಿಮಾಲೆ, ಕೈಯಲ್ಲಿ ಪುಸ್ತಕಗಳ ಒಂದು ಕಟ್ಟು. ವಯಸ್ಸು ನಲವತ್ತಕ್ಕೆ ಹತ್ತಿರ. ಯೌವನ ದಾಟಿ ಬಹುಕಾಲವಾಗಿದ್ದರೂ ಯೌವನದ ಕಳೆ ಮಾತ್ರ ಮಾಸಿರಲಿಲ್ಲ. ಒಳ್ಳೇ ತೇಜಸ್ವಿಯಾದ ಗಂಭೀರ ವ್ಯಕ್ತಿತ್ವ.

ದೋಣಿಯಿಂದಿಳಿದ ಆಕೆ ಘಟ್ಟವನ್ನೇರಿ ನೇರವಾಗಿ ದಕ್ಷಿಣೇಶ್ವರದ ಮುಖಮಂಟಪದತ್ತ ನಡೆದಳು. ರಾಮಕೃಷ್ಣರ ದೃಷ್ಟಿ ಅವಳತ್ತ ಹರಿಯಿತು. ತಕ್ಷಣ ಅವರಲ್ಲಿ ಆಪ್ತರೊಬ್ಬರನ್ನು ಕಂಡಾಗ ಉಂಟಾಗುವಂತಹ ಆಕರ್ಷಣೆಯುಂಟಾಯಿತು. ಅವರು ಸೀದಾ ತಮ್ಮ ಕೋಣೆಗೆ ಧಾವಿಸಿ ಹೃದಯನನ್ನು ಕೂಗಿ ಕರೆದು ಹೇಳಿದರು:

"ಹೃದೂ, ಅಗೋ, ಅಲ್ಲಿ ನೋಡು ಬೇಗ! ಅಲ್ಲಿ ಬರುತ್ತಿದ್ದಾಳಲ್ಲ ಆಕೆಯನ್ನು ಇಲ್ಲಿಗೆ ಕರೆದು ತಾ, ಹೋಗು."

"ಯಾರು, ಆ ಭೈರವಿಯನ್ನೆ? ಆಕೆ ಯಾರೋ ಏನೋ ತಿಳಿಯದಲ್ಲ! ಅವಳೇಕೆ ಬಂದಾಳು ಇಲ್ಲಿಗೆ? ಗುರುತಿಲ್ಲ ಪರಿಚಯವಿಲ್ಲ!"

"ನೀನೇನೂ ಚಿಂತಿಸಬೇಡ; ನನ್ನ ಹೆಸರನ್ನು ಹೇಳಿದರೆ ಬರುತ್ತಾಳೆ, ಬೇಗ ಹೋಗು."

'ಇದೇನು ಬಂತು ಮಾವನಿಗೆ ಇವತ್ತು, ಎಂದೂ ಇಲ್ಲದ ವಿಚಿತ್ರ ! ಯಾರೋ ಗತಿಗೋತ್ರವಿಲ್ಲದ ಹೆಂಗಸನ್ನು ಕರೆದುಕೊಂಡು ಬಾ ಎನ್ನುತ್ತಿದ್ದಾನಲ್ಲ! ಇದೂ ಒಂದು ಬಗೆಯ ಹುಚ್ಚೋ ಏನೋ' ಎಂದುಕೊಂಡ ಹೃದಯ. ಅನುಮಾನ ಪಡುತ್ತಲೇ ಅತ್ತ ಹೋದ. ಆಕೆ ಮಂಟಪದಡಿಯಲ್ಲಿ ಕುಳಿತಿದ್ದಳು. ಹೃದಯ ಆಕೆಗೆ ಕೈಮುಗಿದು ಹೇಳಿದ:

"ಅಮ್ಮಾ ನನ್ನ ಮಾವಯ್ಯನವರು ದೈವಭಕ್ತರು. ಅವರು ತಮ್ಮನ್ನು ಕಾಣ ಬಯಸುತ್ತಾರೆ. ದಯವಿಟ್ಟು ತಾವು ಬರಬೇಕು."

ಆಗ ಆ ಸಂನ್ಯಾಸಿನಿ "ಆಗಬಹುದು, ನಡೆ" ಎನ್ನುತ್ತ ಸೀದಾ ಎದ್ದು ಅವ ನೊಂದಿಗೆ ಹೊರಟೇಬಿಟ್ಟಳು. 'ಇದೇನು ! ಈಕೆ ಒಂದು ಪ್ರಶ್ನೆಯನ್ನೂ ಕೇಳದೆ ಬಂದುಬಿಟ್ಟಳಲ್ಲ !' ಎಂದು ಹೃದಯನಿಗೆ ಮತ್ತೂ ಆಶ್ಚರ್ಯ. ಈಗ ಇವರು ಏನು ಮಾತನಾಡಿಕೊಳ್ಳುತ್ತಾರೋ ನೋಡೋಣ ಎಂಬ ತೀವ್ರ ಕುತೂಹಲ ಬೇರೆ.

ಭೈರವಿ ರಾಮಕೃಷ್ಣರ ಕೋಣೆಯೊಳಗೆ ಬಂದಳು; ಅವರನ್ನು ನೋಡಿದಳು; ಆಶ್ಚರ್ಯಾನಂದಗಳಿಂದ ಅವಳ ಕಣ್ಣುಗಳಲ್ಲಿ ಆನಂದಬಾಷ್ಪ ತಾನೇತಾನಾಗಿ ಚಿಮ್ಮಿತು. ಹೇಳಿದಳು:

"ಮಗು, ನೀನು ಇಲ್ಲಿರುವೆಯಾ ! ನೀನು ಈ ಗಂಗಾತೀರದಲ್ಲೇ ಎಲ್ಲೋ ವಾಸವಾಗಿರುವೆ ಎಂದು ನನಗೆ ತಿಳಿದಿತ್ತು. ನಿನಗಾಗಿ ನಾನು ಬಹಳ ಕಾಲದಿಂದಲೂ ಹುಡುಕುತ್ತಲೇ ಇದ್ದೆ. ಅಂತೂ ಕೊನೆಗೀಗ ನಿನ್ನನ್ನು ಕಂಡೆ !"

"ನನ್ನ ವಿಷಯ... ನಿನಗೆ ಹೇಗೆ ತಿಳಿಯಿತು ತಾಯಿ ?"

"ನೀನೂ ಸೇರಿದಂತೆ ಮೂವರನ್ನು ನಾನು ನೋಡಬೇಕಾಗುತ್ತದೆ ಎಂಬ ಸಂಗತಿ ಜಗನ್ಮಾತೆಯ ಕೃಪೆಯಿಂದ ನನಗೆ ಹಿಂದೆಯೇ ತಿಳಿದಿತ್ತು. ಇಬ್ಬರನ್ನು ನಾನು ಆದಾಗಲೇ ಪೂರ್ವಬಂಗಾಳದಲ್ಲಿ ಸಂಧಿಸಿದೆ. ಇಂದು ಮೂರನೆಯವನಾದ ನಿನ್ನ ಭೇಟಿಯಾಯಿತು."

ಭೈರವಿಯೊಬ್ಬಳು ಅನುಭವಸ್ಥ ಸಾಧಿಕೆಯೆಂಬುದನ್ನು ಆಕೆಯ ವರ್ಚಸ್ಸೇ ಸಾರಿಹೇಳುತ್ತಿತ್ತು. ಅವಳ ಮಾತು, ನಡೆನುಡಿಗಳು ಆಧ್ಯಾತ್ಮಿಕ ಶಕ್ತಿಯನ್ನು ಪ್ರತಿ ಫಲಿಸುತ್ತಿದ್ದವು.

ತನ್ನ ಹೆಸರನ್ನು ಆಕೆ ಯೋಗೇಶ್ವರಿ ಎಂದು ಹೇಳಿಕೊಂಡಳು. ಜನ ಕರೆಯು ತ್ತಿದ್ದುದು 'ಬ್ರಾಹ್ಮಣಿ' ಎಂದು. ರಾಮಕೃಷ್ಣರ ಪಾಲಿಗೆ ಆಕೆ 'ಬಾಮ್ನಿ'.

ಈಗ, ಪುಟ್ಟ ಮಗುವೊಂದು ತಾನು ಕಂಡದ್ದು–ಕೇಳಿದ್ದನ್ನೆಲ್ಲ ಆನಂದದಿಂದ ಬಣ್ಣಿಸುವಂತೆ, ರಾಮಕೃಷ್ಣರು ಭೈರವಿಯ ಬಳಿ ಕುಳಿತು ತಮಗೆ ಇಲ್ಲಿಯವರೆಗೆ ಆದ ಎಲ್ಲ ದಿವ್ಯಾನುಭವಗಳನ್ನು ಎದೆಬಿಚ್ಚಿ ಹೇಳಲಾರಂಭಿಸಿದರು. ತಮ್ಮ ಸುಖ–ಕಷ್ಟಗಳನ್ನೆಲ್ಲ ತೋಡಿಕೊಂಡರು:

"ಅಮ್ಮಾ ನಾನು ಭಗವದ್ವಿಷಯವಾಗಿ ಮಾತನಾಡಲು ತೊಡಗಿದರೆ ಬಾಹ್ಯ

ಪ್ರಜ್ಞೆಯೇ ಕಳೆದುಹೋಗುತ್ತದೆ. ಏಕೆಂದು ನಾನರಿಯೆ. ಆಗ ನನ್ನ ಮೈಯಲ್ಲಿ ಒಂದು ಬಗೆಯ ಹೇಳಲಾರದ ಉರಿ! ರಾತ್ರಿ ನಿದ್ರೆಯೇ ಇಲ್ಲದಂತಾಗಿಬಿಟ್ಟಿದೆ. ನನ್ನ ಶರೀರದಲ್ಲಿ ಇನ್ನೂ ಅದೆಷ್ಟೋ ಬದಲಾವಣೆಗಳೆಲ್ಲ ಆದುವು. ನನ್ನ ವಿಚಿತ್ರ ನಡೆವಳಿಕೆಗಳನ್ನು ಕಂಡು ಜನ ನನ್ನನ್ನು ಹುಚ್ಚನೆಂದರು. ಅಮ್ಮಾ ನನಗೆ ಹೀಗೆಲ್ಲ ಆಗುತ್ತಿದೆಯಲ್ಲ, ಇದೆಲ್ಲ ಏನು? ನಿಜಕ್ಕೂ ನನಗೆ ಹುಚ್ಚು ಹಿಡಿದಿದೆಯೆ? ಅಥವಾ, ನಾನು ನಿರಂತರವಾಗಿ ಜಗನ್ಮಾತೆಯನ್ನೇ ಭಜಿಸಿ, ಚಿಂತಿಸಿ, ಕರೆಯುತ್ತಿದ್ದುದ ರಿಂದ ನನಗೇನಾದರೂ ಭಯಂಕರ ಕಾಯಿಲೆಯಾಗಿರಬಹುದೆ?''

ಭೈರವಿ ಬ್ರಾಹ್ಮಣಿ ಮಾತೃವಾತ್ಸಲ್ಯಭರಿತಳಾಗಿ, ಒಮ್ಮೆ ಉದ್ವೇಗಗೊಳ್ಳುತ್ತ, ಇನ್ನೊಮ್ಮೆ ಹಿಗ್ಗುತ್ತ, ಮತ್ತೊಮ್ಮೆ ಕನಿಕರದಿಂದ ಕರಗುತ್ತ, ಮಗುದೊಮ್ಮೆ ಹೆಮ್ಮೆ ಯಿಂದ ಬೀಗುತ್ತ ರಾಮಕೃಷ್ಣರ ನುಡಿಗಳನ್ನೆಲ್ಲ ಆಲಿಸಿದಳು. ಬಳಿಕ ಸಾಂತ್ವನದ ದನಿಯಲ್ಲಿ ಮತ್ತೆಮತ್ತೆ ಹೇಳಿದಳು:

''ಮಗು, ಯಾರದು ನಿನ್ನನ್ನು ಹುಚ್ಚ ಎನ್ನುವವರು? ಇದು ಹುಚ್ಚಲ್ಲ. ನೀನು 'ಮಹಾಭಾವ'ದಲ್ಲಿರುವೆ. ಆದ್ದರಿಂದಲೇ ನಿನಗೆ ಆ ಬಗೆಯ ಅನುಭವ ಗಳೆಲ್ಲ ಆಗುತ್ತಿರುವುದು. ನೀನೀಗ ಯಾವ ದಿವ್ಯ ಭಾವದಲ್ಲಿರುವೆಯೋ ಅದನ್ನು ಸಾಮಾನ್ಯರೆಲ್ಲ ಅರ್ಥಮಾಡಿಕೊಳ್ಳಬಲ್ಲರೇನು? ಅವರು ಅಜ್ಞಾನವಶರಾಗಿ ಬಾಯಿಗೆ ಬಂದಂತೆ ಮಾತನಾಡುತ್ತಾರೆ. ಇಂಥವೇ ಅನುಭವಗಳು ಹಿಂದೆ ರಾಧೆಗೂ ಮಹಾಪ್ರಭು ಚೈತನ್ಯನಿಗೂ ಆಗಿದ್ದುವು. ಭಕ್ತಿಶಾಸ್ತ್ರಗಳಲ್ಲಿ ಅವುಗಳ ನಿಖರ ವರ್ಣನೆ ಬರುತ್ತದೆ. ಆ ಗ್ರಂಥಗಳು ನನ್ನ ಬಳಿಯೇ ಇವೆ. ಅವುಗಳನ್ನು ನಿನ್ನ ಮುಂದೆಯೇ ಓದಿ ಸಾಬೀತು ಪಡಿಸುತ್ತೇನೆ—ಭಗವಂತನನ್ನು ಹೃತ್ಪೂರ್ವಕವಾಗಿ ಭಜಿಸಿ, ಪ್ರಾರ್ಥಿಸಿ ಕರೆದ ಯಾರಿಗೇ ಆದರೂ ಆ ಬಗೆಯ ದಿವ್ಯಾನುಭವಗಳೆಲ್ಲ ಆಗುವುದು ಖಂಡಿತ ಎಂದು.''

ಇವರಿಬ್ಬರ ಸಂಭಾಷಣೆಯನ್ನು ಕೇಳುತ್ತ ಮೂಲೆಯಲ್ಲಿ ನಿಂತಿದ್ದ ಹೃದಯ ರಾಮನ ಬೆರಗಿಗೆ ಪಾರವೇ ಇಲ್ಲ. 'ತೀರಾ ಅಪರಿಚಿತಳಾದ ಈ ಮಹಿಳೆಯೊಂದಿಗೆ ಅವಳು ತಮ್ಮ ಹತ್ತಿರದ ಸಂಬಂಧಿಕಳೋ ಎಂಬಷ್ಟು ಸಲಿಗೆಯಿಂದ, ಆತ್ಮೀಯತೆ ಯಿಂದ ಮಾತನಾಡುತ್ತಿರುವನಲ್ಲ ನನ್ನ ಮಾವ! ಈ ಹೆಂಗಸಾದರೂ ಅದೆಷ್ಟು ಪಾಂಡಿತ್ಯವನ್ನುಹೊಂದಿದ್ದಾಳೆ!' ಅವನ ಪಾಲಿಗೆ ಇದೊಂದು ವಿನೂತನ ಅನುಭವ.

ಹೀಗೆ ಪ್ರಥಮ ಭೇಟಿಯಲ್ಲೇ ರಾಮಕೃಷ್ಣ–ಭೈರವಿಬ್ರಾಹ್ಮಣಿಯರ ನಡುವೆ ಅತಿ ನಿಕಟ ಬಾಂಧವ್ಯವೇರ್ಪಟ್ಟಿತು. ಪರಸ್ಪರ ಭಾವವಿನಿಮಯ ಬಹುಹೊತ್ತಿನ ವರೆಗೆ ನಡೆಯಿತು. ಈ ಬಾಂಧವ್ಯ ಇಲ್ಲಿಗೇ ಮುಗಿಯುವಂಥದಲ್ಲ ಎಂಬುದು ಇಬ್ಬರಿಗೂ ಸ್ಪಷ್ಟವಾಯಿತು. ಈ ವೇಳೆಗೆ ಹೊತ್ತೇರುತ್ತ ಬಂದುದನ್ನು ಕಂಡು ರಾಮ ಕೃಷ್ಣರು, ಜಗನ್ಮಾತೆಗೆ ನೈವೇದ್ಯ ಮಾಡಿದ ಹಣ್ಣುಹಂಪಲು, ಬೆಣ್ಣೆ, ಕಲ್ಲುಸಕ್ಕರೆ ಗಳನ್ನು ತಂದು ಭೈರವಿಗೆ ಉಪಾಹಾರ ಮಾಡಲು ಕೊಟ್ಟರು. ಆದರೆ ಈಗ ಅವಳು ಅವರಿಗೆ ಅಪರಿಚಿತಳಲ್ಲ, ಹೆತ್ತ ತಾಯಿಗೆ ಸಮಾನ! ಆದ್ದರಿಂದ ಅವಳೀಗ ತನ್ನ ಮಗುವಿಗೆ ತಿನ್ನಿಸದೆ ತಾನೊಬ್ಬಳೆ ತಿಂದಾಳೆಯೆ? ಆಕೆಯ ಮನವನ್ನರಿತ ರಾಮ

ಕೃಷ್ಣರು ತಾವೂ ತಿಂಡಿಯಲ್ಲಿ ಸ್ವಲ್ಪಭಾಗವನ್ನು ಸ್ವೀಕರಿಸಿದರು. ಬಳಿಕ ಭೈರವಿ, ಜಗನ್ಮಾತೆಗೂ ಇತರ ದೇವತೆಗಳಿಗೂ ಪ್ರಣಾಮಗಳನ್ನರ್ಪಿಸಿ ಬಂದು ಉಪಾಹಾರ ಮಾಡಿದಳು.

ಭೈರವಿ ಬ್ರಾಹ್ಮಣಿಯ ಇಷ್ಟದೇವತೆ ರಘುವೀರ. ಆತನ ಸಾಲಿಗ್ರಾಮವನ್ನು ಅವಳು ತನ್ನ ಕೊರಳಲ್ಲಿ ಧರಿಸಿದ್ದಳು. ಪ್ರತಿದಿನವೂ ತನ್ನ ಇಷ್ಟದೇವತೆಗೆ ಅನ್ನ ನೈವೇದ್ಯ ನೀಡುವುದು ಆಕೆಯ ವ್ರತ. ಅಂದಿನ ನೈವೇದ್ಯಕ್ಕೆಂದು ಅವಳು ದೇವಾಲಯದ ಉಗ್ರಾಣದಿಂದ ಅಕ್ಕಿ, ಗೋಧಿಹಿಟ್ಟು ಮೊದಲಾದುವನ್ನು ಭಿಕ್ಷೆಯಾಗಿ ಪಡೆದುಕೊಂಡಳು. ಬಳಿಕ ಪಂಚವಟಿಯ ಬಳಿ ಅವುಗಳಿಂದ ಅಡಿಗೆ ಮಾಡ ತೊಡಗಿದಳು.

ಅಡಿಗೆ ತಯಾರಾಯಿತು. ಅದನ್ನು ತನ್ನ ಇಷ್ಟದೇವತೆಯ ಮುಂದಿರಿಸಿ ಧ್ಯಾನಸ್ಥಳಾಗಿ ಕುಳಿತಳು. ಆದರೆ ಅದೆಂತಹ ಗಾಢಧ್ಯಾನ! ರಘುವೀರನನ್ನು ಧ್ಯಾನಿಸುತ್ತ ಸಮಾಧಿಯಲ್ಲಿ ಮುಳುಗಿದಳು. ಆಗ ಅವಳೊಂದು ಅಪೂರ್ವ ದರ್ಶನವನ್ನು ಕಂಡಳು. ಅವಳ ಕಂಗಳಿಂದ ಪ್ರೇಮಬಾಷ್ಪ ಧಾರೆಧಾರೆಯಾಗಿ ಹರಿಯತೊಡಗಿತು.

ಇದೇ ಸಮಯಕ್ಕೆ ಇತ್ತ ತಮ್ಮ ಕೋಣೆಯಲ್ಲಿದ್ದ ರಾಮಕೃಷ್ಣರಿಗೆ ಇದ್ದಕ್ಕಿದ್ದಂತೆ ಬ್ರಾಹ್ಮಣಿಯಿರುವಲ್ಲಿಗೆ ಹೋಗಬೇಕೆಂಬ ಪ್ರಚೋದನೆಯಾಯಿತು. ಕೂಡಲೇ ಅವರು ಅರ್ಧಭಾವಾವಿಷ್ಟರಾಗಿ ಅಲ್ಲಿಗೆ ಬಂದರು; ಬ್ರಾಹ್ಮಣಿಗೆದುರಾಗಿ ಕುಳಿತರು. ಅವಳು ತನ್ನ ಇಷ್ಟದೈವಕ್ಕೆ ನೈವೇದ್ಯ ಮಾಡಲು ಇರಿಸಿದ್ದ ಆಹಾರ ಪಾನೀಯಗಳನ್ನೆಲ್ಲ ತಾವೇ ಭುಜಿಸತೊಡಗಿದರು! ತಾವೇನು ಮಾಡುತ್ತಿರುವೆವೆಂಬ ಪರಿವೆಯೇ ಅವರಿಗಿರಲಿಲ್ಲ. ಸ್ವಲ್ಪ ಹೊತ್ತಿಗೆ ಬ್ರಾಹ್ಮಣಿ ಸಾಧಾರಣ ಸ್ಥಿತಿಗೆ ಮರಳಿದಳು; ಮೆಲ್ಲಗೆ ಕಣ್ದೆರೆದು, ತಾನು ನೈವೇದ್ಯ ಮಾಡಿದುದನ್ನು ರಾಮಕೃಷ್ಣರು ಭಾವಾವಸ್ಥೆಯಲ್ಲಿ ಭುಜಿಸುತ್ತಿರುವ ಅದ್ಭುತ ದೃಶ್ಯವನ್ನು ಕಂಡಳು. ಆಗತಾನೆ ಅವಳು ಧ್ಯಾನದಲ್ಲಿ ಕಂಡ ದರ್ಶನಕ್ಕೆ ಇದು ತಾಳೆಯಾಗುತ್ತಿತ್ತು! ಆನಂದಾಶ್ಚರ್ಯಗಳಿಂದ ಬ್ರಾಹ್ಮಣಿ ರೋಮಾಂಚಿತಳಾದಳು. ರಾಮಕೃಷ್ಣರು ಬೇರೆಯಲ್ಲ, ತನ್ನ ಇಷ್ಟದೇವತೆ ಬೇರೆಯಲ್ಲ ಎಂಬ ದೃಢವಿಶ್ವಾಸ ಅವಳಲ್ಲುದಿಸಿತು. ಅವರು ತನ್ನ ನೈವೇದ್ಯವನ್ನು ಸ್ವೀಕರಿಸುವುದನ್ನೇ ಧನ್ಯತಾಭಾವದಿಂದ ಈಕ್ಷಿಸುತ್ತ ಕೈಮುಗಿದು ಕುಳಿತಳು.

ಅಷ್ಟು ಹೊತ್ತಿಗೆ ರಾಮಕೃಷ್ಣರು ಭಾವಸಮಾಧಿಯಿಂದಿಳಿದು ಬಂದರು. ತಾವು ಇಷ್ಟು ಹೊತ್ತೂ ಮಾಡಿದ್ದೇನು ಎಂದು ಆಲೋಚಿಸಿದರು. ಎದುರಿಗೆ ಕುಳಿತ ಬ್ರಾಹ್ಮಣಿಯನ್ನು ಕಂಡು, ಬೆದರಿ ನುಡಿದರು:

"ಅಮ್ಮಾ ನಾನು ಏನೇನೋ ಮಾಡಿಬಿಟ್ಟೆ! ನಾನೇಕೆ ಹೀಗೆಲ್ಲ ಮೈಮೇಲೆ ಪ್ರಜ್ಞೆಯಿಲ್ಲದವನಂತೆ ವರ್ತಿಸುತ್ತೇನೋ ನನಗೇ ತಿಳಿಯದು."

ಭೈರವಿ ಬ್ರಾಹ್ಮಣಿ ಹೆತ್ತ ತಾಯಿಯಂತೆ ರಾಮಕೃಷ್ಣರನ್ನು ಸಂತೈಸಿದಳು:

"ಇಲ್ಲ ಮಗೂ, ನೀನು ಒಳ್ಳೆಯದನ್ನೇ ಮಾಡಿದೆ. ನಿಜಕ್ಕೂ ಅದನ್ನು ಮಾಡಿದವನು ನೀನಲ್ಲ, ನಿನ್ನೊಳಗಿರುವವನು. ಮತ್ತು ಯಾವಾಗಲೂ ನಿನ್ನಿಂದ ಇಂತಹ ಕೆಲಸಗಳನ್ನು ಮಾಡಿಸುವವನು ಅವನೇ. ನಿನ್ನ ಮೂಲಕ ಈ ಕಾರ್ಯವನ್ನು

ಮಾಡಿದವರು ಯಾರೆಂಬುದನ್ನು ಇಂದು ನಾನು ನನ್ನ ಧ್ಯಾನದ ವೇಳೆಯಲ್ಲಿ ಕಂಡ ದೃಶ್ಯದಿಂದ ಖಚಿತವಾಗಿ ತಿಳಿದುಕೊಂಡೆ. ಅಲ್ಲದೆ ಇನ್ನು ನನಗೆ ಬಾಹ್ಯಪೂಜೆಯ ಆಗತ್ಯವಿಲ್ಲವೆಂದು ನನಗೆ ಗೊತ್ತಾಗಿದೆ. ಅಂತೂ ಇಷ್ಟು ದಿನದ ಮೇಲೆ ನನ್ನ ಪೂಜೆಯೆಲ್ಲ ಸಾರ್ಥಕವಾಯಿತು !"

ಹೀಗೆ ನುಡಿದ ಬ್ರಾಹ್ಮಣಿ, ರಾಮಕೃಷ್ಣರು ತಿಂದು ಮಿಗಿಸಿದ್ದನ್ನು ಸಾಕ್ಷಾತ್ ತನ್ನ ಇಷ್ಟದೇವತೆಯ ಪ್ರಸಾದವೇ ಎಂಬಂತೆ ಭಕ್ತಿಯಿಂದ ಸ್ವೀಕರಿಸಿದಳು. ರಾಮಕೃಷ್ಣರಲ್ಲಿ ರಘುವೀರನ ಜೀವಂತ ದರ್ಶನಲಾಭವನ್ನು ಹೊಂದಿದ ಬ್ರಾಹ್ಮಣಿ, ತನ್ನ ಇಷ್ಟದೈವದ ಪ್ರತೀಕವಾದ ಸಾಲಿಗ್ರಾಮವನ್ನು ಮೆಲ್ಲನೆ ಕೈಗೆತ್ತಿಕೊಂಡಳು. ಬಹು ಕಾಲದಿಂದ ತಾನು ಪ್ರೀತಿಯಿಂದ ಪೂಜಿಸಿದ ಆ ಸಾಲಿಗ್ರಾಮವನ್ನು ಅಶ್ರುಪೂರಿತ ನಯನಗಳಿಂದ ದಿಟ್ಟಿಸಿದಳು. ಬಳಿಕ, ಭಾವದುಂಬಿ, ಪ್ರೇಮಾನಂದಭರಿತಳಾಗಿ ಅದನ್ನು ಗಂಗಾಗರ್ಭ ದಲ್ಲಿ ಎಚ್ಚರಿಕೆಯಿಂದ, ಗೌರವಪೂರ್ವಕವಾಗಿ ವಿಸರ್ಜನೆ ಮಾಡಿದಳು.

ಪ್ರಥಮ ದರ್ಶನದಲ್ಲೇ ಭೈರವಿ–ರಾಮಕೃಷ್ಣರ ನಡುವೆ ಉಂಟಾದ ಪ್ರೀತಿ-ವಿಶ್ವಾಸ ದಿನೇದಿನೇ ವೃದ್ಧಿಗೊಳ್ಳುತ್ತ ಬಂದಿತು. ರಾಮಕೃಷ್ಣರ ಮೇಲೆ ತನ್ನಲ್ಲಿ ಸಹಜವಾಗಿ ಮೂಡಿದ ಪುತ್ರಪ್ರೇಮದಿಂದಾಗಿ ಭೈರವಿ ದಕ್ಷಿಣೇಶ್ವರದಲ್ಲೇ ಇದ್ದು ಬಿಟ್ಟಳು. ಪಂಚವಟಿಯಡಿಯಲ್ಲಿ ಆಧ್ಯಾತ್ಮಿಕ ವಿಚಾರವಿನಿಮಯದಲ್ಲಿ ನಿಮಗ್ನರಾದ ಇಬ್ಬರಿಗೂ ಗಂಟೆಗಳು, ದಿನಗಳು ಉರುಳುತ್ತಿರುವುದರ ಪರಿವೆಯೇ ಇರಲಿಲ್ಲ. ರಾಮಕೃಷ್ಣರು ಹಿಂದೆ ತಮಗಾದ ಎಲ್ಲ ಅನುಭವಗಳನ್ನೂ ದರ್ಶನಗಳನ್ನೂ ಮುಚ್ಚುಮರೆಯಿಲ್ಲದೆ ಆಕೆಯ ಮುಂದೆ ನಿವೇದಿಸಿದರು; ತಮಗೆದುರಾದ ಸಂದೇಹ ಗಳನ್ನೆಲ್ಲ ಮುಂದಿಟ್ಟರು. ಶಾಸ್ತ್ರಕೋವಿದೆಯಾದ ಬ್ರಾಹ್ಮಣಿ ಶಾಸ್ತ್ರವಾಕ್ಯಗಳ ನೆರವಿ ನಿಂದ ಆ ಸಂದೇಹಗಳನ್ನೆಲ್ಲ ಪರಿಹರಿಸಿದಳು. ಮತ್ತು ತನ್ನ ಅಭಿಪ್ರಾಯಗಳಿಗೆ ರುಜುವಾತಾಗಿ ಶ್ರೀಚೈತನ್ಯ ಭಾಗವತ, ಶ್ರೀಚೈತನ್ಯ ಚರಿತಾಮೃತ ಹಾಗೂ ಇತರ ಭಕ್ತಿಗ್ರಂಥಾವಳಿಯಿಂದ ಶ್ಲೋಕಗಳನ್ನು ಉದ್ಧರಿಸಿದಳು. ಭಗವತ್ಪ್ರೇಮದ ಆವೇಗ ದಿಂದಾಗಿ ಅವತಾರಪುರುಷರ ದೇಹಮನಸ್ಸುಗಳಲ್ಲಿ ಎಂತಹ ಲಕ್ಷಣಗಳು ಕಾಣಿಸಿ ಕೊಳ್ಳುತ್ತವೆ ಎಂಬುದನ್ನು ಓದಿಹೇಳಿ ಅವು ರೋಗದ, ಇಲ್ಲವೆ ಮನೋವಿಕಲ್ಪದ ಸೂಚನೆಗಳಲ್ಲ ಎಂದು ತೋರಿಸಿಕೊಟ್ಟಳು. ತಮಗೆ ಸಮಾಧಾನ, ಮಾರ್ಗದರ್ಶನ ನೀಡಬಲ್ಲ ವ್ಯಕ್ತಿಯೊಬ್ಬಳನ್ನು ಜಗನ್ಮಾತೆ ತಮ್ಮಲ್ಲಿಗೆ ಕಳಿಸಿಕೊಟ್ಟಳಲ್ಲ ಎಂಬ ಸಂತಸ ರಾಮಕೃಷ್ಣರಿಗಾದರೆ, ತಾನು ಶಾಸ್ತ್ರಗ್ರಂಥಗಳಲ್ಲಿ ಓದಿ ತಿಳಿದ ವಿಷಯಗಳನ್ನೆಲ್ಲ ಸಾಕ್ಷಾತ್ಕರಿಸಿಕೊಂಡ ಮಹಾಪುರುಷನನ್ನು—ಅಷ್ಟೇಕೆ, ತನ್ನ ಸ್ವಂತ ಇಷ್ಟದೈವ ವನ್ನು—ಕಣ್ಣಾರೆ ಕಾಣುವ ಸೌಭಾಗ್ಯ ತನಗಾಯಿತೆಂಬ ಕೃತಾರ್ಥಭಾವ ಭೈರವಿ ಯದು. ಹೀಗೆ ಆ ಪವಿತ್ರ ಪಂಚವಟಿಯ ತಲದಲ್ಲಿ ಆಧ್ಯಾತ್ಮಿಕ ಆನಂದ ಹೊಳೆಯಾಗಿ ಹರಿಯಿತು.

## ೩೬

# ಈ ಭೈರವಿ ಸಾಮಾನ್ಯಳಲ್ಲ !

ಹೀಗೆ 'ಎಲ್ಲಿಂದಲೋ' ಬಂದ ಭೈರವಿ ರಾಮಕೃಷ್ಣರನ್ನು ಸಂಧಿಸಿದುದು, ಅವರನ್ನು ಗುರುತು ಹಿಡಿದುದು, ಬಳಿಕ ದಕ್ಷಿಣೇಶ್ವರದಲ್ಲೇ ನೆಲೆನಿಂತುದು—ಇವೆಲ್ಲವೂ, ನೋಡಿದವರು ವಿಸ್ಮಯಗೊಳ್ಳುವಂತೆ ನಾಟಕದೋಪಾದಿಯಲ್ಲಿ ನಡೆದುಹೋಯಿತು. ಆದರೆ ರಾಮಕೃಷ್ಣರಿಗೆ ಮಾತ್ರ ಇವೆಲ್ಲ ಜಗನ್ಮಾತೆಯ ಇಚ್ಛೆ, ಆಕೆಯ ಲೀಲೆ. ಅವರಿಗೆ ಯಾವುದೂ ಅಸಹಜವಲ್ಲ.

ಭೈರವಿ ಬ್ರಾಹ್ಮಣಿ ತನ್ನ ಬಗ್ಗೆ ಕೆಲವು ವಿಷಯಗಳನ್ನು ಶ್ರೀರಾಮಕೃಷ್ಣರಿಗೆ ಸೂಕ್ಷ್ಮವಾಗಿ ತಿಳಿಸಿದಳು. ಮುಂದೆ ಅವರು ಆ ಕುರಿತಾಗಿ ತಮ್ಮ ಶಿಷ್ಯರ ಮುಂದೆ ಆಗೊಮ್ಮೆ ಈಗೊಮ್ಮೆ ಹೇಳುವುದಿತ್ತು.

ಪೂರ್ವ ಬಂಗಾಳದ ಜೆಸ್ಸೂರು ಜಿಲ್ಲೆ ಭೈರವಿಯ ಸ್ವಸ್ಥಳ. ಬ್ರಾಹ್ಮಣ ಕುಟುಂಬವೊಂದರಲ್ಲಿ ಜನನ. ಯೋಗೇಶ್ವರಿ ಎಂಬುದು ಆಕೆಯ ಹಿಂದಿನ ಹೆಸರು. ಆಕೆಯನ್ನು ನೋಡಿದಾಕ್ಷಣವೇ, 'ಇವಳು ಯಾವುದೋ ಶ್ರೇಷ್ಠ ಕುಲದಲ್ಲಿ ಜನಿಸಿದವಳು' ಎಂದು ಯಾರಾದರೂ ಊಹಿಸಬಹುದಾಗಿತ್ತು. ಅಂಥ ವರ್ಚಸ್ಸು ಆಕೆಯ ವ್ಯಕ್ತಿತ್ವದಲ್ಲಿ; ಅಂಥ ತೇಜಸ್ಸು ಆಕೆಯ ಮುಖದಲ್ಲಿ. ಬ್ರಾಹ್ಮಣಿ ಆಧ್ಯಾತ್ಮಿಕವಾಗಿ ತುಂಬ ಮುಂದುವರಿದ ಸಾಧಕಿ. ಭಕ್ತಿಮಾರ್ಗ ಸಾಧನೆಯಲ್ಲಿ ಅವಳಿಗೆ ಅಪಾರ ಅನುಭವ; ಶಾಸ್ತ್ರಗ್ರಂಥಗಳಲ್ಲಿ ಆಳವಾದ ಪಾಂಡಿತ್ಯ. ರಾಮಕೃಷ್ಣರನ್ನು ಪ್ರಥಮ ನೋಟದಲ್ಲೇ ಗುರುತು ಹಿಡಿದುದೇ ಆಕೆಯ ಯೋಗಶಕ್ತಿಗೊಂದು ಸಾಕ್ಷಿ. ಆದರೆ, ಆಕೆ ಈ ಪಾಂಡಿತ್ಯವನ್ನೂ ಯೋಗಶಕ್ತಿಯನ್ನೂ ಎಲ್ಲಿ ಹೇಗೆ ಗಳಿಸಿದಳು, ಯಾರ ಶಿಷ್ಯೆಯಾಗಿ ಸಾಧನೆಗೈದಳು ಎಂಬುದು ಯಾರಿಗೂ ತಿಳಿಯದು. ಅಲ್ಲದೆ, ಆಕೆ ಆಜನ್ಮಬ್ರಹ್ಮಚಾರಿಣಿಯೆ ಅಥವಾ ವಿವಾಹವಾಗಿದ್ದವಳೆ, ಆಕೆಯ ಮಾತಾಪಿತೃಗಳಾದರೂ ಯಾರು—ಎಂಬೀ ಪ್ರಶ್ನೆಗಳಿಗೂ ಯಾರ ಬಳಿಯೂ ಉತ್ತರವಿಲ್ಲ.

ಭೈರವಿ ಬ್ರಾಹ್ಮಣಿ ದಕ್ಷಿಣೇಶ್ವರಕ್ಕೆ ಬಂದು ಆರೇಳು ದಿನ ಕಳೆದಿರಬಹುದು. ಅವಳೀಗ ಕಾಳೀ ದೇವಾಲಯದ ಆವರಣದಲ್ಲೇ ವಾಸವಾಗಿದ್ದಳು. ಆಕೆಯೊಂದಿಗೆ ಮಾತುಕತೆಯಲ್ಲಿ ತೊಡಗಿ ರಾಮಕೃಷ್ಣರು ತಮ್ಮದೇ ಆದ ಉನ್ನತ ಭಾವಲೋಕದಲ್ಲಿದ್ದುದೇನೋ ನಿಜ; ಆದರೆ ಲೌಕಿಕಕ್ಕೆ ಸಂಬಂಧಿಸಿದ ಯಾವ ವಿಚಾರಗಳಲ್ಲಿ ತಾವು ಜಾಗರೂಕರಾಗಿರಬೇಕು ಎಂಬುದರ ಅರಿವು ಕೂಡ ಅವರಿಗಿದ್ದೇ ಇತ್ತು. ಬ್ರಾಹ್ಮಣಿಯೊಂದಿಗಿನ ತಮ್ಮ ಸಂಬಂಧ ಎಷ್ಟೇ ಪವಿತ್ರವಾದದ್ದಾದರೂ, ಕಾಮ–

ಕಾಂಚನಗಳನ್ನೇ ಜೀವನದ ಉಸಿರಾಗುಳ್ಳ ಪ್ರಾಪಂಚಿಕರು ಅದನ್ನು ಯಾವ ದೃಷ್ಟಿಯಿಂದ ನೋಡಿ ಅರ್ಥ ಕಲ್ಪಿಸಿಯಾರೆಂದು ಅವರಿಗೆ ಗೋಚರವಾಯಿತು. ಅವರೆಂದೂ ತಮ್ಮ ವಿಚಾರದಲ್ಲಿ ಲೋಕಾಪವಾದಕ್ಕೆ ಹೆದರಿದವರೇ ಅಲ್ಲ. ಆದರೆ ತಮ್ಮಿಂದಾಗಿ ಇನ್ನೊಬ್ಬರಿಗೆ ತೊಂದರೆಯಾಗಲು ಅವರೆಂದೂ ಬಿಡಲಾರರು. 'ಸುಮ್ಮಸುಮ್ಮನೆ ಈ ಪರಿಶುದ್ಧ ಸಂನ್ಯಾಸಿನಿ ಅಪವಾದಕ್ಕೀಡಾಗುತ್ತಾಳಲ್ಲ!' ಎಂಬ ಭಾವನೆ ಮನಸ್ಸಿನಲ್ಲಿ ಬಂದೊಡನೆಯೇ ಅವರು ಆಕೆಗೆ ಅದನ್ನು ಸೂಚ್ಯವಾಗಿ ತಿಳಿಸಿದರು. ಅವಳು ಕೂಡಲೇ ಅರ್ಥಮಾಡಿಕೊಂಡಳು. ಕಾಳೀ ದೇವಾಲಯವನ್ನು ಬಿಟ್ಟು ಬೇರೆಲ್ಲಾದರೂ ಉಳಿದುಕೊಳ್ಳುವುದು, ಪ್ರತಿದಿನವೂ ಬಂದು ರಾಮಕೃಷ್ಣರನ್ನು ಭೇಟಿಯಾಗುವುದು ಎಂದು ತೀರ್ಮಾನಿಸಿದಳು.

ದಕ್ಷಿಣೇಶ್ವರ ದೇವಸ್ಥಾನದ ಉತ್ತರಕ್ಕೆ ಎರಡು ಮೈಲಿ ದೂರದಲ್ಲಿ ಅರಿಯದಾಹ್ ಎನ್ನುವಲ್ಲಿ ದೇವಮಂಡಲ ಘಟ್ಟ ಎಂಬುದೊಂದು ಸ್ಥಳ. ಅಲ್ಲಿ ವಾಸವಾಗಿದ್ದ 'ಮಂಡಲ್' ವಂಶಸ್ಥರ ಪರಿಚಯ ರಾಮಕೃಷ್ಣರಿಗಿತ್ತು. ಅವರದು ಗೌರವಸ್ಥ ಕುಟುಂಬ. ಆ ಸ್ಥಳಕ್ಕೆ ಹೋಗಿ ವಾಸವಾಗಿರುವಂತೆ ಶ್ರೀರಾಮಕೃಷ್ಣರು ಭೈರವಿಗೆ ಸಲಹೆ ಮಾಡಿದರು. ಅದರಂತೆ ಆಕೆ ಅಲ್ಲಿಗೆ ಹೋದಾಗ, ಆ ಕುಟುಂಬದ ಯಜಮಾನನಾಗಿದ್ದ ದಿವಂಗತ ನವೀನಚಂದ್ರ ನಿಯೋಗಿಯ ಪತ್ನಿ ಅವಳನ್ನು ಗೌರವದಿಂದ ಬರಮಾಡಿಕೊಂಡಳು. ಭೈರವಿಗೆ ನದೀಘಟ್ಟದ ಮುಖಮಂಟಪದಲ್ಲಿ ಇಷ್ಟಬಂದಷ್ಟು ದಿನ ಉಳಿದುಕೊಳ್ಳಲು ಅನುವುಮಾಡಿಕೊಟ್ಟಳಲ್ಲದೆ ಅವಳಿಗೊಂದು ಮಂಚ, ಒಂದು ಮಣ ಅಕ್ಕಿ, ಧವಸಧಾನ್ಯಗಳು, ತುಪ್ಪ ಮೊದಲಾದುವನ್ನೆಲ್ಲ ಒದಗಿಸಿಕೊಟ್ಟು ಉಪಚರಿಸಿದಳು. ತನ್ನ ಗುಣನಡತೆಗಳಿಂದ ಭೈರವಿ ಅಲ್ಲಿನ ಹೆಂಗಸರೆಲ್ಲರ ಪ್ರೀತಿ ಗೌರವಗಳನ್ನು ಗೆದ್ದುಕೊಂಡಳು. ಹೀಗೆ ಅವಳ ವಸತಿಗಾಗಲಿ ಭಿಕ್ಷೆಗಾಗಲಿ ಯಾವ ತೊಂದರೆಯೂ ಉಂಟಾಗಲಿಲ್ಲ. ಅದಕ್ಕಿಂತ ಹೆಚ್ಚಾಗಿ, ಅಲ್ಲಿನ ಜನ ಸುಸಂಸ್ಕೃತರಾದ್ದರಿಂದ ಜನರ ನಾಲಿಗೆಗೆ ಹೆದರಿಕೊಂಡು ಬದುಕಬೇಕಾದ ಗತಿ ಅವಳಿಗೊದಗಲಿಲ್ಲ. ಆದ್ದರಿಂದ ಅವಳು ಪ್ರತಿದಿನವೂ ಬಂದು ರಾಮಕೃಷ್ಣರೊಡನೆ ಸ್ವಲ್ಪ ಹೊತ್ತು ಮಾತನಾಡಿಕೊಂಡು ಹೋಗಲು ಸಾಧ್ಯವಾಯಿತು.

ಭೈರವಿ ಬ್ರಾಹ್ಮಣಿ ತಂತ್ರ ಮಾರ್ಗದಲ್ಲೂ ವೈಷ್ಣವ ಶಾಸ್ತ್ರಗಳ ಪ್ರಕಾರ ಸಖ್ಯ–ವಾತ್ಸಲ್ಯಭಾವಗಳಲ್ಲೂ ಸಾಧನೆ ಮಾಡಿ ಪರಿಣತಿ ಗಳಿಸಿದ್ದವಳು. ಆದ್ದರಿಂದ ರಾಮಕೃಷ್ಣರನ್ನು ಕಂಡಾಗ ಅವಳಲ್ಲಿ ವಾತ್ಸಲ್ಯಭಾವ ಸಹಜವಾಗಿಯೇ ಸ್ಫುರಣಗೊಂಡಿತು. ರಾಮಕೃಷ್ಣರೂ ಅದಕ್ಕೆ ತಕ್ಕಂತೆ ಪ್ರತಿಸ್ಪಂದಿಸುತ್ತಿದ್ದರು. ತನ್ನ ಇಷ್ಟದೇವತೆಯನ್ನು ಸ್ವಂತ ಮಗುವಿನಂತೆ ಭಾವಿಸಿ ಪ್ರೀತಿಸುವುದೇ ವಾತ್ಸಲ್ಯಭಾವ. ಯಶೋದೆಯೇ ಈ ಭಾವದ ಆದರ್ಶ ಸಾಧಕಿ. ಕೆಲವೊಮ್ಮೆ ಬ್ರಾಹ್ಮಣಿ ತನಗೆ ಪರಿಚಿತರಾದ ಮಹಿಳೆಯರಿಂದ ಬಗೆಬಗೆಯ ತಿನಿಸುಗಳನ್ನು ಭಿಕ್ಷೆಯಾಗಿ ಪಡೆದು ತಂದು ರಾಮಕೃಷ್ಣರಿಗೆ ತಿನ್ನಲು ಕೊಡುತ್ತಿದ್ದಳು. ಒಂದೊಂದು ಸಲ ಭಾವಭರಿತಳಾಗಿ ಕೈಯಲ್ಲಿ ಬೆಣ್ಣೆಯನ್ನು ಹಿಡಿದು, ಕಣ್ಣೀರು ಹರಿಸುತ್ತ "ಗೋಪಾಲಾ! ಓ ನನ್ನ ಗೋಪಾಲಾ" ಎಂದು ವ್ಯಾಕುಲತೆಯಿಂದ ಕೂಗುತ್ತಿದ್ದಳು. ಅದೇ ಸಮಯಕ್ಕೆ

ಸರಿಯಾಗಿ, ದಕ್ಷಿಣೇಶ್ವರದಲ್ಲಿದ್ದ ರಾಮಕೃಷ್ಣರು ಇದ್ದಕ್ಕಿದ್ದಂತೆ ಆಕೆಯನ್ನು ಕಾಣಲು ಕಾತರರಾಗುತ್ತಿದ್ದರು. ಆಗ ಅವರು ಒಂದೇ ಓಟಕ್ಕೆ ಎರಡು ಮೈಲಿ ದೂರವನ್ನು ಕ್ರಮಿಸಿ, ತಾಯಿಯ ಮುಂದೆ ಮಗು ನಿಲ್ಲುವಂತೆ ಆಕೆಯೆದುರು ಬಂದು ನಿಲ್ಲುತ್ತಿದ್ದರು. ಅವಳ ಕೈಯಿಂದಲೇ ಬೆಣ್ಣೆಯನ್ನು ತಿನ್ನುತ್ತಿದ್ದರು! ಇನ್ನು ಕೆಲವೊಮ್ಮೆ ಬ್ರಾಹ್ಮಣಿ ಎಲ್ಲಿಂದಲೋ ಕೆಂಪು ರೇಶ್ಮೆ ಸೀರೆಯನ್ನೂ ಆಭರಣಗಳನ್ನೂ ತರಿಸಿ ತೊಟ್ಟುಕೊಂಡು, ಗ್ರಾಮದ ಇನ್ನು ಕೆಲವು ಹೆಂಗಸರನ್ನು ಜೊತೆ ಮಾಡಿಕೊಂಡು, ಕೈಯಲ್ಲಿ ನಾನಾ ಪ್ರಕಾರದ ತಿಂಡಿತಿನಿಸುಗಳನ್ನು ಹಿಡಿದುಕೊಂಡು, ದಾರಿಯುದ್ದಕ್ಕೂ ಕೃಷ್ಣನ ಕುರಿತಾಗಿ ಹಾಡುತ್ತ ದಕ್ಷಿಣೇಶ್ವರಕ್ಕೆ ಬರುತ್ತಿದ್ದಳು. ತಾನು ತಂದ ತಿನಿಸುಗಳನ್ನು ರಾಮಕೃಷ್ಣರಿಗೆ ವಾತ್ಸಲ್ಯದಿಂದ ತಿನ್ನಿಸುತ್ತಿದ್ದಳು. ಅವಳ ಕೆದರಿದ ತಲೆಗೂದಲು, ಭಾವೋನ್ಮತ್ತ ಅವಸ್ಥೆ—ಇವುಗಳನ್ನು ಕಂಡ ಜನ ಅವಳನ್ನು ಸಾಕ್ಷಾತ್ ಯಶೋದೆಯೆಂಬಂತೆ ಭಕ್ತಿಯಿಂದ ನೋಡುತ್ತಿದ್ದರು.

ಬ್ರಾಹ್ಮಣಿ ಅಸಾಧಾರಣ ಲಾವಣ್ಯವತಿ. ಎತ್ತರದ ದೃಢ ನಿಲುವು, ಗಂಭೀರ ಮುಖಭಾವ, ದಿಟ್ಟ ಸ್ವಭಾವ. ಅವಳ ರೂಪವನ್ನೂ ಅವಳು ಏಕಾಂಗಿಯಾಗಿ ಎಲ್ಲ ಕಡೆಯೂ ಓಡಾಡುವುದನ್ನೂ ಕಂಡು ಮಥುರನಿಗೇಕೋ ಅವಳ ಚಾರಿತ್ರ್ಯದ ವಿಷಯದಲ್ಲಿ ಸಂದೇಹ. ಲೋಕದ ಜನರಿಗೆ ಇಂತಹ ಸಂದೇಹ ಬರುವುದೂ ಸಹಜವೇ. ಅಲ್ಲದೆ ಬಂಗಾಳದಲ್ಲಿ ತಂತ್ರಸಾಧನೆ ತೀರಾ ಸಾಮಾನ್ಯ. ಇದರಲ್ಲಿ, ಗಂಡು-ಹೆಣ್ಣುಗಳು ಒಟ್ಟಾಗಿ ಸಾಧನೆ ಮಾಡುವ ಕ್ರಮವೊಂದು ಬೆಳೆದು ಬಂದಿದೆ. ಇಂಥ ಸಾಧಕರಿಗೆ ಭೈರವ-ಭೈರವಿಯರೆಂದು ಹೆಸರು. ಸರ್ವೇಸಾಧಾರಣವಾಗಿ ಭೈರವನೆಂದರೆ ಜೊತೆಗೊಬ್ಬಳು ಭೈರವಿ, ಭೈರವಿಯೆಂದರೆ ಜೊತೆಗೊಬ್ಬ ಭೈರವ ಇದ್ದೇ ಇರುತ್ತಾರೆ. ತಂತ್ರಸಾಧನೆಯಲ್ಲಿ ಜಾರುವುದು ಬೇಗ. ಆ ಸಾಧನೆಯ ಹೆಸರಿನಲ್ಲಿ ಅನಾಚಾರ, ಸ್ವಚ್ಛಂದ ವರ್ತನೆ—ಇವೇ ಹೆಚ್ಚು. ಆದ್ದರಿಂದ ಇವರನ್ನು ಕಂಡರೆ ಯಾರಿಗೂ ಗೌರವವಿಲ್ಲ. ಬ್ರಾಹ್ಮಣಿಯನ್ನು ಕಂಡು ಮಥುರ, ಈಕೆಯೂ ಅಂಥವಳೇ ಒಬ್ಬಳು ಭೈರವಿ ಎಂದು ಭಾವಿಸಿದ್ದ.

ಒಂದು ದಿನ ಬ್ರಾಹ್ಮಣಿ ಕಾಳೀ ದೇವಾಲಯದಿಂದ ಹೊರಗೆ ಬರುತ್ತಿದ್ದಾಳೆ; ತನ್ನ ಭಾವದಲ್ಲಿ ತಾನು ಮುಳುಗಿದ್ದಾಳೆ. ಅಲ್ಲಿಯೇ ನಿಂತಿದ್ದ ಮಥುರ ಅವಳನ್ನು ಕಂಡ. ಸ್ವಲ್ಪ ತಮಾಷೆ ಮಾಡೋಣವೆನಿಸಿತು. ಮುಗುಳ್ನಗುತ್ತ ವ್ಯಂಗ್ಯವಾಗಿ ಕೇಳಿದ:

"ಓ ಭೈರವಿ! ಎಲ್ಲಿ ನಿನ್ನ ಭೈರವ?"

ಮಥುರ ಹೀಗೇಕೆ ಅಂದನೆಂಬುದು ಬ್ರಾಹ್ಮಣಿಗೆ ಕ್ಷಣಮಾತ್ರದಲ್ಲಿ ಅರಿವಾಯಿತು. ಇದ್ದಕ್ಕಿದ್ದಂತೆ ಬಂದ ಇಂತಹ ಚುಚ್ಚುಮಾತನ್ನು ಕೇಳಿಯೂ ಅವಳು ಮನಸ್ಸಿನ ಸಮತೋಲವನ್ನು ಕಳೆದುಕೊಳ್ಳಲಿಲ್ಲ. ಮಥುರನನ್ನೇ ಮೌನವಾಗಿ ದಿಟ್ಟಿಸಿನೋಡಿದಳು. ಬಳಿಕ ಕಾಳೀ ಮಾತೆಯ ಪದತಲದಲ್ಲಿ ಶವದಂತೆ ಬಿದ್ದಿರುವ ಶಿವನ ಕಡೆಗೆ ಬೆರಳುಮಾಡಿ ಹೇಳಿದಳು:

"ಅಗೋ, ಅಲ್ಲಿದ್ದಾನೆ ನೋಡು!"

'ಎಲಾ ಇವಳ!' ಎಂದುಕೊಂಡ ಮಥುರ. ಆದರೆ ಅಷ್ಟಕ್ಕೇ ಬಿಡುವವನಲ್ಲ

ಅವನು. ಏಕೆಂದರೆ ಅವನ ಮನಸ್ಸಿನಲ್ಲಿ ಸಂದೇಹ ಅಷ್ಟು ಆಳವಾಗಿ ಬೇರೂರಿತ್ತು. ಆದ್ದರಿಂದ ಮತ್ತೆ ಆಕ್ಷೇಪಿಸಿದ:

"ಆದರೆ ಆ ಭೈರವ ಅಚೇತನನಾಗಿದ್ದಾನಲ್ಲ! ಅವನು ನಿನಗೆಂಥ ಜೋಡಿ!"

ಭೈರವಿ ವಿಚಲಿತಳಾಗದೆ ಧೀರಗಂಭೀರ ದನಿಯಲ್ಲಿ ಉತ್ತರಿಸಿದಳು:

"ಅಚೇತನನನ್ನು ಸಚೇತನನನ್ನಾಗಿ ಮಾಡಲು ನನ್ನಿಂದ ಸಾಧ್ಯವಾಗದಿದ್ದರೆ ನಾನು ಭೈರವಿಯಾಗಿ ತಾನೆ ಏನು ಪ್ರಯೋಜನ?"

ಮಥುರನಿಗೆ ಕೆನ್ನೆಯ ಮೇಲೆ ಹೊಡೆದಂತಾಯಿತು. ನಾಚಿಕೆಯಿಂದ ಮಾತೇ ಹೊರಡದೆ ತಲೆ ತಗ್ಗಿಸಿದ. ಆದರೆ ದಿನಗಳೆದಂತೆ ಅವನಿಗೆ ಭೈರವಿಯ ನಿಜಸ್ವಭಾವ, ಆಕೆಯ ಶುದ್ಧ ಭಕ್ತಿ, ವೈರಾಗ್ಯ ಇವೆಲ್ಲ ಮನವರಿಕೆಯಾಯಿತು. ಜೊತೆಗೇ ಅವಳ ಬಗ್ಗೆ ಪೂಜ್ಯಬುದ್ಧಿಯೂ ಬೆಳೆಯಿತು.

## ಅವತಾರನೆ ಈ ಅರ್ಚಕ !

ರಾಮಕೃಷ್ಣರ ದರ್ಶನಗಳ, ಅನುಭವಗಳ ಹಾಗೂ ಇತರ ಅವಸ್ಥೆಗಳ ಬಗ್ಗೆ ವಿವರವಾಗಿ ಕೇಳಿ ತಿಳಿದ ಬ್ರಾಹ್ಮಣಿಗೆ, ಅವೆಲ್ಲವೂ ಅಸಾಧಾರಣವಾದ ಭಗವತ್ಪ್ರೇಮ ದಿಂದಲೇ ಉಂಟಾದದ್ದೆಂಬುದರಲ್ಲಿ ಸಂದೇಹವಿರಲಿಲ್ಲ. ಕೀರ್ತನೆಯ ಸಮಯದಲ್ಲಿ ಅವರು ಪರಮಾನಂದವನ್ನು ಅನುಭವಿಸುವುದನ್ನು, ಭಗವಂತನ ವಿಷಯವಾಗಿ ಮಾತನಾಡುವಾಗ ಮತ್ತೆಮತ್ತೆ ಭಾವಸಮಾಧಿಯಲ್ಲಿ ಮುಳುಗಿ ಮೈಮರೆಯುವು ದನ್ನು ಕಣ್ಣಾರೆ ಕಂಡಾಗ ಅವಳಿಗಾದ ಆನಂದ ಆಶ್ಚರ್ಯ ಅಷ್ಟಿಷ್ಟಲ್ಲ. ಈಗ ಅವಳಿಗೆ ಬಂಗಾಳದ ವೈಷ್ಣವ ಗ್ರಂಥಗಳಲ್ಲಿ ನಿರ್ದಿಷ್ಟವಾಗಿ ಕಾಣಸಿಗುವ ಒಂದು ಅಂಶ ಮತ್ತೆ ಮತ್ತೆ ನೆನಪಿಗೆ ಬಂದಿತು. ಏನದು ? ಜೀವಕೋಟಿಯ ಉದ್ಧಾರಕ್ಕೆ ಶ್ರೀಚೈತನ್ಯ ಮಹಾಪ್ರಭುವು ಮತ್ತೊಮ್ಮೆ ದೇಹಧಾರಣೆ ಮಾಡಿ ಬರುವ ಬಗ್ಗೆ ಅವುಗಳಲ್ಲಿ ಸೂಚನೆಯಿದೆ. ಬ್ರಾಹ್ಮಣಿ ಒಬ್ಬ ಸಾಧಾರಣ ಸಂನ್ಯಾಸಿನಿಯಲ್ಲ. ಅವಳು ಬಹು ದೊಡ್ಡ ಪಂಡಿತೆ, ಶಾಸ್ತ್ರಗಳಲ್ಲಿ ಪಾರಂಗತೆ. ಶ್ರೀಚೈತನ್ಯನ ಮತ್ತು ನಿತ್ಯಾನಂದನ ಸ್ವಭಾವ ವರ್ತನೆಗಳ ಕುರಿತಾಗಿ ಆ ಗ್ರಂಥಗಳಲ್ಲಿ ಏನೇನು ಹೇಳಿದೆಯೋ ಅದನ್ನೆಲ್ಲ ಮತ್ತೊಮ್ಮೆ ವಿವರವಾಗಿ ಓದಿಕೊಂಡಳು; ರಾಮಕೃಷ್ಣರ ಸ್ವಭಾವ ವರ್ತನೆಗಳನ್ನೂ ಸೂಕ್ಷ್ಮವಾಗಿ ವಿಶ್ಲೇಷಿಸಿದಳು. ಅವುಗಳಲ್ಲಿ ಬಹಳಷ್ಟು ಸಾಮ್ಯವಿರುವುದನ್ನು ಸ್ಪಷ್ಟ ವಾಗಿ ಗುರುತಿಸಿದಳು. ಭಾವಸಮಾಧಿಯಲ್ಲಿರುವಾಗ ಸ್ಪರ್ಶಮಾತ್ರದಿಂದ ಇತರರಲ್ಲಿ ಆಧ್ಯಾತ್ಮಿಕತೆಯನ್ನು ಜಾಗೃತಗೊಳಿಸುವ ಶಕ್ತಿಯು ಚೈತನ್ಯದೇವನಲ್ಲಿದಂತೆ ರಾಮ ಕೃಷ್ಣರಲ್ಲೂ ಇರುವುದನ್ನು ಆಕೆ ಕಂಡುಕೊಂಡಳು. ಮೊದಲನೆಯ ದಿನವೇ ತಾನು ಪಂಚವಟಿಯಲ್ಲಿ ಕಂಡ ಅದ್ಭುತ ದರ್ಶನ ಅವಳ ಮನಸ್ಸಿನಲ್ಲಿನ್ನೂ ಹಸಿರಾಗಿಯೇ ಇತ್ತು. ಹಿಂದೆ ರಾಮಕೃಷ್ಣರು ಸಿಹೋರ್ ಗ್ರಾಮಕ್ಕೆ ಪಲ್ಲಕ್ಕಿಯಲ್ಲಿ ಹೋಗುತ್ತಿದ್ದಾಗ ಅವರ ಶರೀರದಿಂದ ಇಬ್ಬರು ದಿವ್ಯ ಬಾಲಕರು ಹೊರಬಂದು, ಆಟವಾಡಿ ಪುನಃ ಅವರೊಳಗೆ ಲೀನರಾದ ವೃತ್ತಾಂತವನ್ನು ಕೇಳಿದ ಮೇಲಂತೂ ಅವಳಿಗೆ ಸಂದೇಹವೇ ಉಳಿಯಲಿಲ್ಲ. ಜೀವಕೋಟಿಗಳಲ್ಲಿ ಭಗವತ್ಪ್ರೇಮವನ್ನು ಜಾಗೃತಗೊಳಿಸಲು ಶ್ರೀ ಚೈತನ್ಯ–ನಿತ್ಯಾನಂದರಿಬ್ಬರೂ ಈ ಯುಗದಲ್ಲಿ ರಾಮಕೃಷ್ಣ ದೇಹದಲ್ಲಿ ಆವಿರ್ಭವಿಸಿ ದ್ದಾರೆ ಎಂದು ತೀರ್ಮಾನಿಸಿದಳು.

ರಾಮಕೃಷ್ಣರ ನಿಜಸ್ವರೂಪವೇನು ಎಂಬುದರ ಬಗ್ಗೆ ಒಂದು ದೃಢ ನಿರ್ಧಾರಕ್ಕೆ ಬಂದ ಬ್ರಾಹ್ಮಣಿ ಅದನ್ನೇ ನಿಸ್ಸಂಕೋಚದಿಂದ ಅವರೆದುರಿಗೆ ಹೇಳಿದಳು.

ಹೃದಯನಿಗೆ ಈ ವಿಷಯ ತಿಳಿಯಲು ತಡವಾಗಲಿಲ್ಲ. ಬಳಿಕ ಇನ್ನೂ ಅನೇಕರಿಗೆ ಅವಳ ಅಭಿಪ್ರಾಯ ತಿಳಿಯಿತು. ಅವಳ ಬಗ್ಗೆ ಗೌರವ ತಾಳಿದ್ದ ಕೆಲವರು ಅವಳನ್ನೇ ಆ ಬಗ್ಗೆ ಕೇಳಿದರು. ಭೈರವಿಯೊಬ್ಬ ಸಂನ್ಯಾಸಿನಿಯಲ್ಲವೆ? ಮುಚ್ಚುಮರೆಯ ಅಭ್ಯಾಸವೇ ಅವಳಿಗಿರಲಿಲ್ಲ. ಯಾರ ಹೊಗಳಿಕೆಯಿಂದಾಗಲಿ ತೆಗಳಿಕೆಯಿಂದಾಗಲಿ ಅವಳಿಗೆ ಆಗಬೇಕಾದದ್ದೇನು? ತನಗೆ ಸತ್ಯವೆಂದು ತೋರಿದ್ದನ್ನು ಅವಳು ಘಂಟಾ ಘೋಷವಾಗಿ ಸಾರಿದಳು—"ಶ್ರೀರಾಮಕೃಷ್ಣರು ಅವತಾರಪುರುಷರು" ಎಂದು. ಆದರೆ ಅವರಿಗೇನೂ ಇದರಿಂದ ತಮ್ಮ ತಲೆಯ ಮೇಲೆ ಕಿರೀಟವಿಟ್ಟಂತೆ ಅನ್ನಿಸಲಿಲ್ಲ. ಅಷ್ಟೇ ಅಲ್ಲ, ಮುಗ್ಧ ಮಕ್ಕಳಂತೆ ಅವರದನ್ನು ಇತರರ ಮುಂದೂ ಹೇಳಿಕೊಂಡರು.

ಒಂದು ದಿನ ಅವರು ಮಥುರ ಹಾಗೂ ಹೃದಯನೊಂದಿಗೆ ಪಂಚವಟಿಯಡಿಯಲ್ಲಿ ಕುಳಿತಿದ್ದರು. ಮಾತಿನ ಸಂದರ್ಭದಲ್ಲಿ ಮಥುರನಿಗೆ ಬ್ರಾಹ್ಮಣಿಯ ವಿಷಯವಾಗಿ ಹೇಳಿದರು, "ನೋಡು, ಅವಳು ಹೇಳುತ್ತಾಳೆ, ಅವತಾರಪುರುಷರಲ್ಲಿ ಕಾಣಿಸಿಕೊಂಡಿದ್ದಂತಹ ಲಕ್ಷಣಗಳು ಈ (ತಮ್ಮ) ದೇಹಮನಸ್ಸುಗಳಲ್ಲೂ ಪ್ರಕಾಶಗೊಂಡಿವೆ ಅಂತ. ಅವಳು ಎಷ್ಟೋ ಶಾಸ್ತ್ರಗಳನ್ನೆಲ್ಲ ಓದಿಕೊಂಡಿದ್ದಾಳೆ! ಈಗಲೂ ಅವಳ ಹತ್ತಿರ ಅನೇಕ ಗ್ರಂಥಗಳಿವೆ."

ತಕ್ಷಣ ಮಥುರ ನಕ್ಕು ನುಡಿದ:

"ಅಪ್ಪಾ, ಅವಳು ಏನು ಬೇಕಾದರೂ ಹೇಳಿಕೊಳ್ಳಲಿ. ಅವತಾರಗಳಂತೂ ಹತ್ತಕ್ಕಿಂತ ಹೆಚ್ಚಿಲ್ಲವಲ್ಲ? ಹಾಗಿರುವಾಗ ಅವಳ ಮಾತು ಹೇಗೆ ಸರಿಹೋದೀತು? ಆದರೆ ಒಂದು ವಿಷಯವಂತೂ ನಿಜ—ಕಾಳೀಮಾತೆ ನಿಮ್ಮ ಮೇಲೆ ವಿಶೇಷ ಕೃಪೆ ಬೀರಿದ್ದಾಳೆ. ಅದರಲ್ಲಿ ಅನುಮಾನವೇ ಇಲ್ಲ."

ಇವರು ಹೀಗೆ ಮಾತನಾಡುತ್ತಿರುವಾಗಲೇ ಭೈರವಿ ಅತ್ತ ಬಂದಳು. ಅವಳನ್ನು ಕಂಡು ಮಥುರಾನಾಥ, "ನಿಮ್ಮನ್ನು ಅವತಾರಪುರುಷರೆಂದದ್ದು ಈಕೆಯೇ ತಾನೆ?" ಎಂದ. ರಾಮಕೃಷ್ಣರು ಹೌದೆಂದರು. ಅವಳು ಒಂದು ತಟ್ಟೆಯ ತುಂಬ ಸಿಹಿತಿನಿಸುಗಳನ್ನು ಹಿಡಿದು ಅತ್ತಲೇ ಬರುತ್ತಿದ್ದಳು. ಅವಳೊಂದು ವಿಶೇಷ ಭಾವದಲ್ಲಿದ್ದಳು. ಎದುರಿಗಿರುವ ವಸ್ತುಗಳೊಂದೂ ಅವಳಿಗೆ ಗೋಚರವಾಗುತ್ತಿರಲಿಲ್ಲ. ಗೋಪಿಕಾ ಸ್ತ್ರೀಯೊಬ್ಬಳು ಬಾಲಗೋಪಾಲನಿಗೆ ಮಧುರ ನವನೀತವನ್ನೀಯಲು ಧಾವಿಸಿ ಬರುತ್ತಿದ್ದಾಳೋ ಎಂಬಂತೆ ಆಕೆ ರಾಮಕೃಷ್ಣರಲ್ಲಿಗೆ ಬರುತ್ತಿದ್ದಳು. ಆದರೆ ಬದಿಯಲ್ಲಿ ಮಥುರನಿರುವುದನ್ನು ಕಂಡೊಡನೆ ಎಚ್ಚತ್ತಳು. ಪ್ರಯತ್ನಪೂರ್ವಕವಾಗಿ ತನ್ನ ಭಾವವನ್ನು ನಿಯಂತ್ರಿಸಿಕೊಂಡು, ರಾಮಕೃಷ್ಣರಿಗೆ ತಲುಪಿಸಲು ತಟ್ಟೆಯನ್ನು ಹೃದಯನ ಕೈಗಿತ್ತಳು. ಆಗ ಅವರು ಆಕೆಗೆ ಹೇಳಿದರು:

"ಅಮ್ಮ ನೀನು ನನ್ನ ಬಗ್ಗೆ ಹೇಳಿದೆಯಲ್ಲ, ಅದನ್ನು ಇವನಿಗೆ ಹೇಳಿದೆ. ಅದಕ್ಕೆ ಇವನೆನ್ನುತ್ತಾನೆ, 'ಅದು ಹೇಗಾದೀತು? ಅವತಾರಗಳು ಹತ್ತೇ ಅಲ್ಲವೆ?' ಅಂತ."

ಅಷ್ಟರಲ್ಲಿ ಮಥುರ ಬ್ರಾಹ್ಮಣಿಗೆ ಪ್ರಣಾಮ ಮಾಡಿ ಎದ್ದು ನಿಂತು ನುಡಿದ:

"ಹೌದು ತಾಯಿ, ನಾನು ಹಾಗೆ ಹೇಳಿದ್ದು ನಿಜ. ಶಾಸ್ತ್ರಪುರಾಣಗಳಲ್ಲೆಲ್ಲ

ಹಾಗೆಯೇ ಅಲ್ಲವೆ ಹೇಳಿರುವುದು ?"

ಭೈರವಿ ಮಥುರನನ್ನು ಆಶೀರ್ವದಿಸಿ ನುಡಿದಳು:

"ಏಕೆ, ಭಾಗವತದಲ್ಲಿ ಇಪ್ಪತ್ತನಾಲ್ಕು ಪ್ರಮುಖ ಅವತಾರಗಳ ಬಗ್ಗೆ ಪ್ರಸ್ತಾವ ವಿದೆಯಲ್ಲ? ಅಲ್ಲದೆ, ಮತ್ತೊಂದು ಸಂದರ್ಭದಲ್ಲಿ, 'ಶ್ರೀಹರಿಯು ಅಸಂಖ್ಯಾತ ಅವತಾರಗಳನ್ನೆತ್ತಿ ಬರುತ್ತಾನೆ ಎಂದು ವ್ಯಾಸ ಮಹರ್ಷಿಗಳು ಹೇಳುವುದಿಲ್ಲವೆ? ಜೊತೆಗೆ, ಚೈತನ್ಯ ಮಹಾಪ್ರಭುವು ಪುನಃ ಆಗಮಿಸುವ ಬಗ್ಗೆ ವೈಷ್ಣವ ಗ್ರಂಥಗಳಲ್ಲಿ ಸ್ಪಷ್ಟ ಉಲ್ಲೇಖವಿದೆ. ಮತ್ತು ಶ್ರೀಚೈತನ್ಯ ಹಾಗೂ ಇವರ (ರಾಮಕೃಷ್ಣರ) ನಡುವೆ ಹಲವಾರು ಪ್ರಮುಖ ಲಕ್ಷಣಗಳಲ್ಲಿ ಸಾದೃಶ್ಯವನ್ನು ಕಾಣಬಹುದು."

ಹೀಗೆ ತನ್ನನ್ನು ಸಮರ್ಥಿಸಿಕೊಂಡ ಬ್ರಾಹ್ಮಣಿ ಮತ್ತೆ ನುಡಿದಳು:

"ಶ್ರೀಮದ್ಭಾಗವತದಲ್ಲೂ ಗೌಡೀಯ ವೈಷ್ಣವಾಚಾರ್ಯರ ಗ್ರಂಥಗಳಲ್ಲೂ ಒಳ್ಳೆಯ ಪಾಂಡಿತ್ಯವಿರುವ ಯಾರೇ ಆಗಲಿ, ನನ್ನ ಈ ಮಾತನ್ನು ಒಪ್ಪಲೇಬೇಕಾಗು ತ್ತದೆ. ಮತ್ತು ಅಂತಹ ವ್ಯಕ್ತಿಗಳ ಸಮ್ಮುಖದಲ್ಲಿ ನನ್ನನ್ನು ಸಮರ್ಥಿಸಿಕೊಳ್ಳಲು ನಾನು ಸಿದ್ಧಳಿದ್ದೇನೆ."

ಬ್ರಾಹ್ಮಣಿ ಹೀಗೆಲ್ಲ ಹೇಳಿಯಾಳೆಂದು ಮಥುರ ನಿರೀಕ್ಷಿಸಿಯೇ ಇರಲಿಲ್ಲ. ಏನು ಹೇಳಲೂ ತೋಚದೆ ಸುಮ್ಮನಾದ.

ರಾಮಕೃಷ್ಣರ ವ್ಯಕ್ತಿತ್ವದಲ್ಲಿ ಅವತಾರಪುರುಷರ ಲಕ್ಷಣಗಳೆಲ್ಲ ಅಭಿವ್ಯಕ್ತ ವಾಗಿವೆ ಎಂಬ ಭೈರವಿಯ ತೀರ್ಮಾನಕ್ಕೆ ಪುಷ್ಟಿ ಕೊಡುವಂತಹ ಮತ್ತೂ ಕೆಲವು ಘಟನೆಗಳು ನಡೆದುವು. ಬಹಳ ಕಾಲದಿಂದಲೂ ರಾಮಕೃಷ್ಣರು ಅಸಹನೀಯವಾದ ಉರಿತದಿಂದ ನರಳುತ್ತಿದ್ದ ವಿಷಯವನ್ನು ಹಿಂದೆ ನೋಡಿದೆವಷ್ಟೆ. ಅದಕ್ಕೆ ಗಂಗಾ ಪ್ರಸಾದನಂತಹ ಪ್ರಸಿದ್ಧ ವೈದ್ಯನೂ ಕೂಡ ಸರಿಯಾದ ಕಾರಣವನ್ನು ಕಂಡುಹಿಡಿದು ಗುಣಪಡಿಸುವಲ್ಲಿ ವಿಫಲನಾದದ್ದರ ವಿವರಗಳನ್ನೆಲ್ಲ ತಿಳಿದೆವು. ಅಲ್ಲದೆ ಪೂರ್ವ ಬಂಗಾಳದ ವೈದ್ಯನೊಬ್ಬ, ಅವರ ಈ ತೊಂದರೆಗೆ ಕಾರಣ ಶಾರೀರಿಕವಾದದ್ದಲ್ಲ, ಬದಲಾಗಿ ಸಾಧನೆಯಿಂದ ಉಂಟಾದದ್ದು ಅದು ಎಂದು ಅಭಿಪ್ರಾಯಪಟ್ಟದ್ದನ್ನೂ ಕಂಡೆವು.

ಬರಬರುತ್ತ ಈ ಕಾಯಿಲೆ ತಗ್ಗುವುದರ ಬದಲು ಹೆಚ್ಚಾಗುತ್ತ ಬಂದಿತ್ತು. ಪ್ರತಿದಿನ ಸೂರ್ಯೋದಯದೊಂದಿಗೇ ಉರಿ ಪ್ರಾರಂಭವಾಗುತ್ತಿತ್ತು. ಅಪರಾಹ್ನದ ವೇಳೆಗೆ ಅದು ಅತೀವ ದುಸ್ಸಹವಾಗುತ್ತಿತ್ತು. ಆ ಉರಿಯನ್ನು ಕಡಿಮೆ ಮಾಡಿ ಕೊಳ್ಳಲು ಬೇರೆ ದಾರಿಕಾಣದ ರಾಮಕೃಷ್ಣರು ಕಂಠದವರೆಗೂ ಗಂಗೆಯಲ್ಲಿ ಮುಳುಗಿ ತಲೆಯ ಮೇಲೆ ಒದ್ದೆ ಬಟ್ಟೆಯನ್ನಿಟ್ಟುಕೊಂಡು ಎರಡು ಮೂರು ಗಂಟೆಗಳ ಕಾಲ ನಿಲ್ಲುತ್ತಿದ್ದರು. ಆದರೆ ಎಷ್ಟು ಹೊತ್ತೆಂದು ಹೀಗೆ ನಿಲ್ಲಲು ಸಾಧ್ಯ? ಅಲ್ಲದೆ ಅದರಿಂದ ಶೀತ ಉಂಟಾಗಿ ಇತರ ಕಾಯಿಲೆಗಳಿಗೆ ಕಾರಣವಾಗುವ ಸಾಧ್ಯತೆ ಬೇರೆ. ಆದ್ದರಿಂದ ಕಡೆಗೆ, ಇಷ್ಟವಿಲ್ಲದಿದ್ದರೂ ನೀರಿನಿಂದಾಚೆ ಬರುತ್ತಿದ್ದರು. ಬಳಿಕ ಬಳಿ ಯಲ್ಲೇ ಬಾಬುಗಳಿಗೆ ಸೇರಿದ ಮನೆಯಲ್ಲಿನ ಅಮೃತ ಶಿಲೆ ಹಾಸಿದ ನೆಲವನ್ನು ಒದ್ದೆ ಬಟ್ಟೆಯಿಂದ ಒರಸಿ, ಬಾಗಿಲುಗಳನ್ನು ಮುಚ್ಚಿಕೊಂಡು ನೆಲದ ಮೇಲೆ

ಹೊರಳಾಡುತ್ತಿದ್ದರು.

ದಕ್ಷಿಣೇಶ್ವರಕ್ಕೆ ಬಂದ ಕೆಲದಿನಗಳಲ್ಲೇ ಬ್ರಾಹ್ಮಣಿಗೆ ಈ ವಿಷಯ ತಿಳಿಯಿತು. ಕೂಡಲೇ ಅವಳು ಆ ಬಗ್ಗೆ ತನ್ನದೇ ಆದ ನಿರ್ಧಾರಕ್ಕೆ ಬಂದಳು—ಇದು ರೋಗ ಲಕ್ಷಣವಲ್ಲ; ರಾಮಕೃಷ್ಣರ ತೀವ್ರ ಭಗವದನುರಾಗದ ಪರಿಣಾಮ ಇದು ಎಂದು. ಅವಳು ಅವರನ್ನು ಸಮಾಧಾನ ಪಡಿಸುತ್ತ ಹೇಳಿದಳು:

"ರಾಮಕೃಷ್ಣ, ಈಗ ನೀನು ಅನುಭವಿಸುತ್ತಿರುವ ಯಾತನೆಯ ಅವಸ್ಥೆ ಹೊಸತೇನೂ ಅಲ್ಲ. ಹಿಂದೆ ಶ್ರೀರಾಧೆ, ಶ್ರೀಚೈತನ್ಯ—ಇವರೇ ಮೊದಲಾದವರೆಲ್ಲ ಭಗವದ್ದರ್ಶನಕ್ಕಾಗಿ ಅತ್ಯಂತ ಉತ್ಕಂಠಿತರಾಗಿದ್ದಾಗ ಅವರಿಗೂ ಇಂಥದೇ ಅನುಭವ ವಾಗಿತ್ತು. ಇದಕ್ಕೆ ನಾನು ಶಾಸ್ತ್ರಪ್ರಮಾಣ ಕೊಡಬಲ್ಲೆ. ನೀನೇನೂ ಕಳವಳಗೊಳ್ಳ ಬೇಕಾಗಿಲ್ಲ."

ಮಗುವಿನಂಥ ಮುಗ್ಧ ಸ್ವಭಾವದ ರಾಮಕೃಷ್ಣರಿಗೆ ಬ್ರಾಹ್ಮಣಿಯ ಈ ವಾಣಿ ತುಂಬ ಸಮಾಧಾನ ನೀಡಿತು.

ಸರಿ. ಕಾರಣವೇನೋ ತಿಳಿಯಿತು. ಪರಿಹಾರ? ಅಲೌಕಿಕವಾದ 'ತಾಪ'ಕ್ಕೆ ಪರಿಹಾರವೂ ಅಲೌಕಿಕವಾಗಿಯೇ ಇರಬೇಕಲ್ಲವೆ? ಹೌದು, ಬ್ರಾಹ್ಮಣಿ ಸೂಚಿಸಿದ ಚಿಕಿತ್ಸೆ ನಿಜಕ್ಕೂ ಅತಿ ವಿಚಿತ್ರ, ಆದರೆ ಅಷ್ಟೇ ಸರಳ. ಏನದು? ರಾಮಕೃಷ್ಣರ ಶರೀರಕ್ಕೆ ಚಂದನ ಲೇಪಿಸುವುದು; ಅವರ ಕೊರಳಿಗೆ ಸುಗಂಧಪೂರಿತ ಪುಷ್ಪಗಳ ಮಾಲೆ ತೊಡಿಸುವುದು!

ಭೈರವಿ ಬ್ರಾಹ್ಮಣಿ ಸೂಚಿಸಿದ ಚಿಕಿತ್ಸಾವಿಧಾನವನ್ನು ಕೇಳಿದವರಾರಿಗೂ ನಗು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಮಥುರನೇ ಮೊದಲಾದವರು ಆಲೋಚಿ ಸಿದರು, 'ಅಲ್ಲಾ, ಗಂಗಾಪ್ರಸಾದನಂತಹ ವೈದ್ಯರೆಲ್ಲ ಪರೀಕ್ಷೆ ಮಾಡಿಯಾಯಿತು; ಎಂತೆಂಥಾ ಔಷಧಿಗಳನ್ನೂ 'ಮಧ್ಯಮ ನಾರಾಯಣ'ದಂತಹ ತೈಲಗಳನ್ನೂ ಪ್ರಯೋಗಿಸಿದ್ದಾಯಿತು; ಈಗ ಈ ಭೈರವಿ ಬಂದು ಇದು ಕಾಯಿಲೆಯೇ ಅಲ್ಲ ಎನ್ನುತ್ತಾಳಲ್ಲ! ಅಲ್ಲದೆ ಅಂಥಾ ಘಟಾನುಘಟಿ ವೈದ್ಯರಿಗೇ ಜಗ್ಗದ್ದು ಈಕೆಯ ಈ ವಿಚಿತ್ರ ಉಪಾಯಕ್ಕೆ ಹೆದರಿ ಓಡಿಹೋದೀತೆ?' ಎಂದು. ಆದರೆ ಬ್ರಾಹ್ಮಣಿಯ ಸಲಹೆಯನ್ನು ಪಾಲಿಸಕೂಡದು ಎಂದು ಯಾರೂ ತಡೆಯಲಿಲ್ಲ. ಏಕೆಂದರೆ, ಅವಳ ಸಲಹೆಯಂತೆ ನಡೆಯುವುದರಿಂದ ನಷ್ಟವಾದರೂ ಏನಿಲ್ಲವಲ್ಲ! ಮಾಡಿಕೊಂಡು ಹೋಗಲಿ! ಎರಡು ಮೂರು ದಿನದಲ್ಲೇ ರಾಮಕೃಷ್ಣರು ಅದರ ನಿರರ್ಥಕತೆಯನ್ನು ಮನಗಂಡು ಅದನ್ನು ತಾನಾಗಿಯೇ ನಿಲ್ಲಿಸುತ್ತಾರೆ—ಇದು ಎಲ್ಲರ ಭಾವನೆ.

ಅಂತೂ ಭೈರವಿಯ ಮಾತಿನಂತೆ ರಾಮಕೃಷ್ಣರ ಶರೀರವನ್ನು, ತೇಯ್ದ ಚಂದನದಿಂದಲೂ ಹೂಮಾಲೆಗಳಿಂದಲೂ ಅಲಂಕೃತಗೊಳಿಸಲಾಯಿತು. ಅವ ರಂತೂ ಎಂದಿನಂತೆ ಮರುಮಾತಿಲ್ಲದೆ ಈ 'ಚಿಕಿತ್ಸೆ'ಗೂ ಒಳಗಾದರು. ಏನಾ ಶ್ಚರ್ಯ! ಪ್ರತಿಯೊಬ್ಬನೂ ಬೆರಗಾಗುವಂತೆ ಮೂರೇ ಮೂರು ದಿನಗಳಲ್ಲಿ ಉರಿತ ಮಂಗಮಾಯವಾಯಿತು! ಆದರೆ ಸಂಶಯಪಿಶಾಚಿಯಿಂದ ಪೀಡಿತರಾದವರು ಅಷ್ಟು ಸುಲಭವಾಗಿ ಇದನ್ನು ನಂಬಲುಂಟೆ? ಅಂಥವರೆಲ್ಲ ಮಾತನಾಡಿಕೊಂಡರು,

'ಇದಕ್ಕೇ ಅಲ್ಲವೆ ಕಾಕತಾಳೀಯನ್ಯಾಯ ಎನ್ನುವುದು! ಹೋದ ಸಲ ಪಂಡಿತರು ಕೊಟ್ಟಿದ್ದ 'ವಿಷ್ಣುತೈಲ' ಅತ್ಯಂತ ಪರಿಶುದ್ಧವಾದದ್ದು. ಪಂಡಿತರೇ ಸ್ವತಃ ಈ ವಿಷಯವನ್ನು ಹೇಳಿದ್ದರು. ಈಗಾಗಲೇ ಅದು ಸಾಕಷ್ಟು ಪರಿಣಾಮ ಬೀರತೊಡಗಿತ್ತು. ಹೇಗಿದ್ದರೂ ಅದರಿಂದ ಇನ್ನೆರಡು ದಿನದಲ್ಲಿ ಉರಿತವೆಲ್ಲ ನಿಂತುಹೋಗುತ್ತಿತ್ತು. ಈ ಬ್ರಾಹ್ಮಣಿಯ ಚಿಕಿತ್ಸೆ ಬೇಕಾಗಿಯೇ ಇರಲಿಲ್ಲ. ಇವಳು ಏನು ಬೇಕಾದರೂ ಹೇಳಿಕೊಳ್ಳಲಿ, ರಾಮಕೃಷ್ಣರು ಆ ತೈಲವನ್ನು ಉಪಯೋಗಿಸುವುದನ್ನಂತೂ ನಿಲ್ಲಿಸಬಾರದು.' ಈ ಮಾತನ್ನು ಕೇಳಿದ ಬ್ರಾಹ್ಮಣಿ ಸುಮ್ಮನೆ ಮುಗುಳ್ನಕ್ಕಳಷ್ಟೆ.

ಇದಾದ ಕೆಲದಿನಗಳಲ್ಲೇ ರಾಮಕೃಷ್ಣರಿಗೆ ಇನ್ನೊಂದು ತೊಂದರೆ ಶುರುವಾಯಿತು. ತೊಂದರೆಯೆಂದರೆ ಮತ್ತೇನಿಲ್ಲ, ನಿರಂತರ ಹಸಿವು! ಆದರದು ಸಾಧಾರಣ ಹಸಿವಲ್ಲ; ಏನು ತಿಂದರೂ ಎಷ್ಟು ತಿಂದರೂ ಹೋಗದ ಭಯಂಕರ ಹಸಿವು! ಬ್ರಾಹ್ಮಣಿ ಇದನ್ನೂ ಮೂರೇ ದಿನಗಳಲ್ಲಿ ಸುಲಭವಾಗಿ ಗುಣಪಡಿಸಿದಳು. ರಾಮಕೃಷ್ಣರೇ ಆ ವಿಷಯವನ್ನು ವಿವರಿಸುತ್ತಾರೆ:

"ಆ ಸಮಯದಲ್ಲಿ ಒಮ್ಮೆ ನನಗೆ ವಿಪರೀತ ಹಸಿವಾಗತೊಡಗಿತು. ಎಷ್ಟೆಷ್ಟು ತಿಂದರೂ ತೃಪ್ತಿಯಾಗುತ್ತಿರಲಿಲ್ಲ. ಹೊಟ್ಟೆ ತುಂಬ ಊಟ ಮಾಡಿ ಎದ್ದೊಡನೆಯೇ, ಉಪವಾಸ ಮಾಡಿದ್ದಂತೆ ಮತ್ತೆ ಕ್ಷುದ್ಬಾಧೆ! ಆಹಾರ ತೆಗೆದುಕೊಂಡಾಗಲೂ ತೆಗೆದುಕೊಳ್ಳದಿದ್ದಾಗಲೂ ಒಂದೇ ರೀತಿಯ ಹಸಿವು! ಹಗಲಿರುಳೂ ಇದು ಹೀಗೆಯೇ ಇರುತ್ತಿತ್ತು. 'ಇದ್ಯಾವುದೋ ಹೊಸ ರೋಗವಿರಬಹುದೆ ?' ಎಂದುಕೊಂಡೆ ನಾನು. ಬ್ರಾಹ್ಮಣಿಗೆ ಈ ವಿಷಯ ತಿಳಿಸಿದಾಗ ಅವಳೆಂದಳು, 'ಹೆದರಬೇಡ ಮಗು, ಭಗವತ್ಸಾಕ್ಷಾತ್ಕಾರದ ಪಥದಲ್ಲಿರುವ ಪ್ರಯಾಣಿಕರಿಗೆ ಆಗಿಂದಾಗ್ಗೆ ಇಂತಹ ಅವಸ್ಥೆಗಳು ಒದಗುತ್ತವೆಯೆಂದು ಶಾಸ್ತ್ರಗಳಲ್ಲಿ ತಿಳಿಸಿದೆ. ನೀನೇನೂ ಚಿಂತಿಸಬೇಡ. ನಾನಿದನ್ನು ಗುಣಪಡಿಸುತ್ತೇನೆ.' ಬಳಿಕ ಅವಳು ಮಥುರನಿಗೆ ಹೇಳಿ ಒಂದು ದೊಡ್ಡ ಕೋಣೆಯ ತುಂಬ, ಅವಲಕ್ಕಿಯಿಂದ ಹಿಡಿದು ಲೂಚಿ (ಪೂರಿ), ಸಂದೇಶ, ರಸಗುಲ್ಲ ಮುಂತಾದ ಹತ್ತಾರು ಬಗೆಯ ತಿಂಡಿತೀರ್ಥಗಳನ್ನು ತುಂಬಿಸಿ ಇರಿಸಿದಳು. ಬಳಿಕ, 'ಮಗು, ನೀನು ಹಗಲಿರುಳೂ ಇಲ್ಲಿಯೇ ಇದ್ದು ನಿನಗೆ ಯಾವಾಗ ಏನು ಬೇಕೆನಿಸುತ್ತದೆಯೋ ಅದನ್ನು ತಿನ್ನು' ಎಂದು ನನಗೆ ಹೇಳಿದಳು. ನಾನು ಆ ಕೋಣೆಯಲ್ಲಿ ಅತ್ತಿಂದಿತ್ತ ಓಡಾಡಿದೆ; ಒಂದೊಂದಾಗಿ ತಿಂಡಿಯ ರಾಶಿಗಳನ್ನು ಕೆದಕಿದೆ; ಬೇಕೆನಿಸಿದಷ್ಟನ್ನು ತಿಂದೆ. ಹೀಗೆ ಮೂರು ದಿನ ಕಳೆಯುವಷ್ಟರಲ್ಲಿ ಆ ಹಸಿವು ನನ್ನನ್ನು ಬಿಟ್ಟಿತು. ನಾನು ಸ್ವಸ್ಥಿತಿಗೆ ಮರಳಿದೆ."

ಆದರೆ ಈ 'ಚಿಕಿತ್ಸೆ'ಯಲ್ಲಿ ಅಂತಹ ವಿಶೇಷವೇನಿದೆ ? 'ಹಸಿವು' ಎಂದವರಿಗೆ ಅವಳು ತಿನಿಸುಗಳನ್ನು ಒದಗಿಸಿದಳು, ಹಸಿವು ತೀರಿತು, ಅಷ್ಟೆತಾನೆ ? ಮೇಲ್ನೋಟಕ್ಕೆ ತೋರುವುದು ಅಷ್ಟೇ ಆದರೂ ವಿಷಯ ಅಷ್ಟು ಸರಳವಲ್ಲ. ಏಕೆಂದರೆ, ಮೊದಲನೆಯದಾಗಿ ಅದು ಅಂಥಿಂಥ ಹಸಿವಲ್ಲ, ಅಮಾನುಷ ಹಸಿವು. ಇದಕ್ಕೆ ಕಾರಣವನ್ನಾಗಲಿ ಪರಿಹಾರವನ್ನಾಗಲಿ ಊಹಿಸುವುದು ಅತಿ ಕಷ್ಟ. ಅಲ್ಲದೆ, ಎರಡನೆಯದಾಗಿ, ಹಸಿವು ತೀರುವವರೆಗೆ ತಿನ್ನುತ್ತಲೇ ಇರುವುದೊಂದೇ ಉಪಾಯ

ಎಂದಾಗಲಿ, ಹಾಗೆ ತಿಂದೂ ಬದುಕುಳಿಯುತ್ತೀಯೆ ಎಂದಾಗಲಿ ಹೇಳಬಲ್ಲ ಧೈರ್ಯ ಯಾರಿಗಿದ್ದೀತು! ಆದರೆ ಬ್ರಾಹ್ಮಣಿ ಮಾತ್ರ ಅವರ ಈ ಹೊಸ 'ರೋಗ'ದ ವಿಷಯವನ್ನು ಕೇಳಿದಾಗ ಅಪ್ರತಿಭಳಾಗಲಿಲ್ಲವಷ್ಟೇ ಅಲ್ಲ, ತುಂಬು ವಿಶ್ವಾಸದಿಂದ ಅದಕ್ಕೆ ಪರಿಹಾರವನ್ನೂ ಸೂಚಿಸಿದಳು. ಇದು ಅವಳ ಶಾಸ್ತ್ರಜ್ಞಾನದ ಹಾಗೂ ಅನುಭವದ ಆಳವನ್ನು ತೋರಿಸುತ್ತದೆ.

ಅಂತೂ ರಾಮಕೃಷ್ಣರಿಗೆ ಬಂದ ಆ ಎರಡು ಕಾಯಿಲೆಗಳು ಯಾವ ಆಯುರ್ವೇದವೂ ಕಂಡರಿಯದ್ದು, ಕೇಳರಿಯದ್ದು. ಅಂಥದನ್ನೂ ಈ ಬ್ರಾಹ್ಮಣಿ ತನ್ನ ವಿಚಿತ್ರ ಚಿಕಿತ್ಸಾವಿಧಾನದಿಂದ ಗುಣಪಡಿಸಿಬಿಟ್ಟಳಲ್ಲ! ಇದು ಸುತ್ತಲಿದ್ದವರಿಗೆಲ್ಲ ಆಶ್ಚರ್ಯವನ್ನುಂಟುಮಾಡದಿರಲಿಲ್ಲ. ಮಥುರಬಾಬುವೂ ಅವಳ ಈ ಸಾಮರ್ಥ್ಯವನ್ನು ಒಪ್ಪಿಕೊಳ್ಳಲೇಬೇಕಾಯಿತು. ಅದೇನೋ ಸರಿ, ಆದರೆ ಅವಳು ರಾಮಕೃಷ್ಣರಲ್ಲಿ ಅವತಾರಪುರುಷರ ಲಕ್ಷಣಗಳನ್ನು ಗುರುತಿಸಿದಳಲ್ಲ, ಅದನ್ನೆಲ್ಲ ನಂಬುವುದು ಹೇಗೆ? ಈ ವಿಷಯ ಮಾತ್ರ ಸುತ್ತಲ ಜನರ ಬಾಯಿಯಲ್ಲಿ ನಿತ್ಯದ ಚರ್ಚೆಯ ವಸ್ತುವಾಯಿತು. ಕಾಳೀ ದೇವಾಲಯದ ಇತರ ಅರ್ಚಕರಿಗಂತೂ ಈ ವಿಷಯ ಕಿವಿಯ ಮೇಲೆ ಬಿದ್ದಾಗಿನಿಂದ ಆಶ್ಚರ್ಯದೊಂದಿಗೆ ಹೊಟ್ಟೆಯುರಿಯೂ ಹುಟ್ಟಿಕೊಂಡಿತು. ಹುಚ್ಚುಚ್ಚಾಗಿ ಪೂಜೆ ಮಾಡಿಕೊಂಡಿದ್ದ ಈ ಅರ್ಚಕ, ಅವತಾರ ಪುರುಷನ ಮಟ್ಟಕ್ಕೆ ಏರುವುದೆಂದರೇನು! ಕಾಳೀ ದೇವಾಲಯದಲ್ಲೆಲ್ಲ ಗುಲ್ಲೋ ಗುಲ್ಲು. ಮಥುರನೂ ಯೋಚಿಸಿದ, 'ಇಲ್ಲ, ಇದನ್ನು ಹೀಗೆಯೇ ಬಿಡಬಾರದು. ಪಂಡಿತರ ಸಭೆ ಸೇರಿಸಿ ಬ್ರಾಹ್ಮಣಿಯ ಭ್ರಮೆಯನ್ನು ಬಯಲಿಗೆಳೆಯಬೇಕು. ಇಲ್ಲದಿದ್ದರೆ ಅವಳು ಇಂಥ ವಿಚಿತ್ರಗಳನ್ನೆಲ್ಲ ಸೃಷ್ಟಿಸುತ್ತಲೇ ಹೋಗಬಹುದಲ್ಲ!'

ಕೂಡಲೇ ಅವನು ಭಾರೀ ಪಂಡಿತರ ಸಭೆಯೊಂದನ್ನು ಏರ್ಪಡಿಸಿದ. ಆದರೆ ಅದರ ಫಲಿತಾಂಶ ಮಾತ್ರ ಅವನ ನಿರೀಕ್ಷೆಗೆ ತದ್ವಿರುದ್ಧವಾಗಿತ್ತು. ಮಹಾ ಪಂಡಿತರೆಲ್ಲ ಭೈರವಿಯ ವಾದವನ್ನು ಅಂಗೀಕರಿಸಿದರಷ್ಟೇ ಅಲ್ಲದೆ ಅದನ್ನು ಹೃತ್ಪೂರ್ವಕವಾಗಿ ಬೆಂಬಲಿಸಿದರು. ಈ ಅದ್ಭುತ ಘಟನೆಯ ವಿವರಗಳನ್ನೆಲ್ಲ ನಾವು, ಈಗಲೇ ಅಲ್ಲ, ಮುಂದೆ ನೋಡಲಿದ್ದೇವೆ. ಆದರೆ, ಹೀಗೆ ಇದ್ದಕ್ಕಿದ್ದಂತೆ ಅವತಾರದ ಸ್ಥಾನಕ್ಕೇರಿಸಲ್ಪಟ್ಟರೂ ರಾಮಕೃಷ್ಣರನ್ನು ಅಹಂಕಾರ ಸ್ವಲ್ಪವೂ ಸೋಂಕಲಿಲ್ಲ. ಅವರ ಶಿಶು ಸಹಜ ಸ್ವಭಾವದಲ್ಲಿ ಕಿಂಚಿತ್ತೂ ಬದಲಾವಣೆಯುಂಟಾಗಲಿಲ್ಲ.

# ಕತ್ತಿಯಲಗಿನ ದಾರಿಯಲ್ಲಿ

ಭೈರವಿ ಬ್ರಾಹ್ಮಣಿ ರಾಮಕೃಷ್ಣರನ್ನು ಅವತಾರವೆಂದು ಪರಿಗಣಿಸಿದುದು ಕೇವಲ ತನ್ನ ತರ್ಕಬುದ್ಧಿಯ ಸಹಾಯದಿಂದಲ್ಲ. ಅವಳು ಆ ನಿರ್ಧಾರಕ್ಕೆ ಬರಲು ಹಲವಾರು ಬಲವಾದ ಕಾರಣಗಳಿದ್ದುವು. ಅವರನ್ನು ಮೊದಲ ಬಾರಿ ಸಂಧಿಸಿದಾಗಲೇ ಅವಳು ಹೇಳಿದ್ದಳು, 'ತಾನು ದೈವಾಜ್ಞೆಯಂತೆ ಮೂವರು ವ್ಯಕ್ತಿಗಳನ್ನು ಭೇಟಿ ಮಾಡಿ, ಅವರ ಆಧ್ಯಾತ್ಮಿಕ ಸಾಧನೆಗಳಲ್ಲಿ ನೆರವಾಗಬೇಕಾಗಿದೆ; ಈಗಾಗಲೇ ಉಳಿದಿಬ್ಬರ ಭೇಟಿಯಾಗಿದೆ; ರಾಮಕೃಷ್ಣರೇ ಆ ಮೂರನೆಯವರು' ಎಂದು. ಆದ್ದರಿಂದ, ಅವಳು ದಕ್ಷಿಣೇಶ್ವರಕ್ಕೆ ಆಗಮಿಸಿದ್ದಾಗಲಿ, ರಾಮಕೃಷ್ಣರ ನಿಜವಾದ ಮಹಿಮೆಯೇನೆಂಬುದನ್ನು ಅರಿತುಕೊಳ್ಳಲು ಪ್ರಯತ್ನಿಸಿದ್ದಾಗಲಿ, ಕೇವಲ ಆಕಸ್ಮಿಕವಲ್ಲ ಎಂಬುದು ಸುಸ್ಪಷ್ಟ. ಆಧ್ಯಾತ್ಮಿಕ ಸಾಧನೆಗಳಿಂದ ಅವಳಲ್ಲುಂಟಾಗಿದ್ದ ಅಂತರ್ದೃಷ್ಟಿಯೇ ಅವಳಿಗೆ ಮಾರ್ಗದರ್ಶಿಯಾಗಿತ್ತು.

ದಿನಕಳೆದಂತೆ ರಾಮಕೃಷ್ಣರೊಂದಿಗಿನ ಆಕೆಯ ಬಾಂಧವ್ಯ ಹೆಚ್ಚೆಚ್ಚು ನಿಕಟವಾಯಿತು. ಅವರ ಸಾಧನೆಗಳಲ್ಲಿ ತಾನು ವಹಿಸಬೇಕಾದ ಪಾತ್ರವೇನು, ತಾನು ನೀಡಬೇಕಾದ ನೆರವು ಯಾವ ರೀತಿಯದು ಎಂಬುದನ್ನು ಕ್ರಮೇಣ ಅವಳು ಕಂಡುಕೊಂಡಳು. ಬಳಿಕ ಸ್ವಲ್ಪವೂ ಕಾಲವಿಳಂಬ ಮಾಡದೆ ಮುಂದಿನ ಕಾರ್ಯವನ್ನು ಆರಂಭಿಸಿದಳು. ರಾಮಕೃಷ್ಣರು ಆಧ್ಯಾತ್ಮಿಕ ಜೀವನದಲ್ಲಿ ಪರಿಪೂರ್ಣತೆಯನ್ನು ಪಡೆದು ಜಗನ್ಮಾತೆಯ ಅನಂತ ಕೃಪೆಗೆ ಪಾತ್ರರಾಗಿ ತಮ್ಮ ದೈವತ್ವವನ್ನು ಮೆರೆಸುವಂತಾಗಬೇಕೆಂಬ ಉದ್ದೇಶ ಅವಳದಾಗಿತ್ತು. ಅದನ್ನು ಸಾಧಿಸುವುದಕ್ಕಾಗಿ ಅವಳು ಅವರನ್ನು ಶಾಸ್ತ್ರನಿರ್ದೇಶಿತವಾದ ಅನೇಕ ಕಟ್ಟುನಿಟ್ಟಿನ ಸಾಧನೆಗಳಲ್ಲಿ ತೊಡಗಿಸಿದಳು.

ಬ್ರಾಹ್ಮಣಿ ಸ್ವತಃ ನುರಿತ ಸಾಧಕಿ. ರಾಮಕೃಷ್ಣರನ್ನು ಕಂಡು ಮಾತನಾಡುತ್ತಿದ್ದಂತೆಯೇ ಅವಳಿಗೆ ಅವರ ಮಾನಸಿಕ-ಆಧ್ಯಾತ್ಮಿಕ ಸ್ಥಿತಿ ಚೆನ್ನಾಗಿ ಅರಿವಾಯಿತು. ಆಗ ಅವಳೊಂದು ವಿಷಯವನ್ನು ಗಮನಿಸಿದಳು. ಏನೆಂದರೆ, ಅವರು ತಮ್ಮ ಮಾನಸಿಕ ಸ್ಥಿತಿಯ ಬಗ್ಗೆಯೇ ಸಂದೇಹಕ್ಕೀಡಾಗಿ ಗೊಂದಲದಲ್ಲಿ ಸಿಲುಕಿದ್ದರು. ತಾವು ಕಂಡ, ಕಾಣುತ್ತಿರುವ, ವಿವಿಧ ದರ್ಶನಗಳೆಲ್ಲ ಸತ್ಯವೋ ಅಥವಾ ಮೆದುಳು ಬಿಸಿಯೇರಿದ್ದರ ಪರಿಣಾಮವೋ ? ತಮ್ಮ ದೇಹಮನಸ್ಸುಗಳಲ್ಲುಂಟಾದ ಅತಿವಿಚಿತ್ರ ಬದಲಾವಣೆಗಳೆಲ್ಲ ಆಧ್ಯಾತ್ಮಿಕ ಸಾಧನೆಯಿಂದ ಉಂಟಾದವುಗಳೋ ಅಥವಾ

ಯಾವುದೋ ವ್ಯಾಧಿಯ ಲಕ್ಷಣವೊ? ಇಂತಹ ಸಂಶಯಗಳು ಅವರನ್ನು ಆಗಾಗ ಮುತ್ತುತ್ತಿದ್ದುವು. ಇದಕ್ಕೆ ಕಾರಣವನ್ನು ಕಂಡುಕೊಳ್ಳಲು ಬ್ರಾಹ್ಮಣಿಗೆ ತಡವಾಗಲಿಲ್ಲ. ಅವರು ಆಧ್ಯಾತ್ಮಿಕ ಮಾರ್ಗದಲ್ಲಿ ಅಷ್ಟೊಂದು ಮುಂದುವರಿದಿದ್ದುದು ಕೇವಲ ತಮ್ಮ ಅಸಾಮಾನ್ಯ ಭಕ್ತಿಯ ಆಧಾರದ ಮೇಲೆ. ಇತರ ಸಾಧಕರೂ ಆಚಾರ್ಯರೂ ಅನುಸರಿಸಿರುವ ಸಂಪ್ರದಾಯಬದ್ಧವಾದ ಮಾರ್ಗವನ್ನು ಅನುಸರಿಸದೆ ತಮ್ಮದೇ ಆದ ರೀತಿಯಲ್ಲಿ ನಡೆದದ್ದೇ ಅವರ ಈ ಸಂಶಯಗಳಿಗೆ ಕಾರಣವೆಂಬುದನ್ನು ಆಕೆ ಮನಗಂಡಳು. ಇದಕ್ಕೆ ಪರಿಹಾರವೇನು ಎಂದು ಆಲೋಚಿಸಿದಳು. ಈಗ ರಾಮ ಕೃಷ್ಣರು, ತಂತ್ರಶಾಸ್ತ್ರಗಳಲ್ಲಿ ವಿವರಿಸಿರುವ ನಿಯಮಗಳನ್ನು ಪಾಲಿಸಿ ಸಾಧನೆ ನಡೆಸು ವುದೇ ಸೂಕ್ತ ಉಪಾಯವೆಂದು ಅವಳಿಗೆ ತೋರಿತು. ಈಗ, ಹಿಂದಿನ ಸಾಧಕರು ಸಾಗಿದ ಮಾರ್ಗದಲ್ಲೇ ನಡೆದು, ಅವರಂಥದೇ ಅನುಭವಗಳನ್ನು ತಾವೂ ಪಡೆದು ಕೊಂಡರೆ ತಮಗಾದ ಅನುಭವಗಳಾವುವೂ ಸುಳ್ಳಲ್ಲ ಅಥವಾ ರೋಗಲಕ್ಷಣಗಳಲ್ಲ ಎಂಬುದು ರಾಮಕೃಷ್ಣರಿಗೇ ತಿಳಿಯುತ್ತದೆ; ಅಲ್ಲದೆ ಇಂತಿಂಥ ಸಾಧನೆಯಿಂದ ಇಂತಿಂಥ ಪರಿಣಾಮವುಂಟಾಗುತ್ತದೆಂಬ ವಿಷಯ ಶಾಸ್ತ್ರಗಳಲ್ಲಿ ಆದಾಗಲೇ ದಾಖ ಲಾಗಿರುವುದನ್ನು ಅರಿತಾಗ, ಮತ್ತು ಆಯಾ ಸಾಧನೆಗಳ ಮೂಲಕ ತಾವು ಅದೇ ಫಲಿತಾಂಶಗಳನ್ನು ಕಂಡಾಗ ಅವರ ಸಂದೇಹಗಳೆಲ್ಲವೂ ಮಾಯವಾಗುತ್ತವೆ— ಇದು ಬ್ರಾಹ್ಮಣಿಯ ಆಲೋಚನೆ. ಅಷ್ಟೇ ಅಲ್ಲ, ಅಂತರ್ಲೋಕದಲ್ಲಿ ಉನ್ನತ ಸ್ತರಗಳಿಗೆ ಏರಿದಂತೆಲ್ಲ, ಸಾಮಾನ್ಯರ ದೃಷ್ಟಿಗೆ ಅಸಹಜವೆನಿಸುವ ಹಲವಾರು ಅನುಭವಗಳಾಗುತ್ತವೆ ಎಂಬ ಅರಿವು ರಾಮಕೃಷ್ಣರಲ್ಲಿ ಸ್ಪಷ್ಟವಾಗಿ ಮೂಡುತ್ತದೆ; ಆ ಬಳಿಕ ಅವರಿಗೆ ಅಂತಹ ಅನುಭವಗಳೆಷ್ಟೇ ಆದರೂ ಅವರು ಅವೆಲ್ಲ ಸತ್ಯ ಹಾಗೂ ಸಹಜ ಎಂದರಿತು ಅವುಗಳಿಂದ ವಿಚಲಿತರಾಗದೆ ಮುಂದುವರಿಯುತ್ತಾರೆ ಎಂದು ಆಕೆ ಆಲೋಚಿಸಿದಳು. ಈ ಕಾರಣಕ್ಕಾಗಿಯೇ ಸಾಧಕನು ತನ್ನ ಅನುಭವ ಗಳನ್ನು ಗುರುವಾಕ್ಯ, ಶಾಸ್ತ್ರವಾಕ್ಯಗಳೊಂದಿಗೆ ತಾಳೆ ಹಾಕಿ ನೋಡಬೇಕು ಎಂದು ಶಾಸ್ತ್ರಗಳು ವಿಧಿಸುತ್ತವೆಂಬುದನ್ನು ಅವಳು ಅರಿತಿದ್ದಳು.

ಆದರೆ ಈ ಮಾತುಗಳೆಲ್ಲ ಸಾಮಾನ್ಯ ಸಾಧಕರಿಗೆ ಅನ್ವಯವಾಗುವಂಥವು. ರಾಮಕೃಷ್ಣರಾದರೋ ಸಾಕ್ಷಾತ್ ಅವತಾರಪುರುಷ ಎಂದು ಕಂಡುಕೊಂಡಿದ್ದವಳು ಬ್ರಾಹ್ಮಣಿ. ಇಂಥವರನ್ನು ಶಾಸ್ತ್ರನಿಯಮಗಳ ಕಟ್ಟುಗಳೆಲ್ಲ ಬಂಧಿಸಲಾರವು ಎಂಬುದು ಆಕೆಗೆ ತೋಚಲಿಲ್ಲವೆ? ರಾಮಕೃಷ್ಣರ ನಿಜವಾದ ಮಹಿಮೆಯೆಂಥದು ಎಂಬುದನ್ನು ಸ್ವಲ್ಪಮಟ್ಟಿಗಾದರೂ ಅರಿತಿದ್ದವಳೆಂದರೆ ಅವಳೊಬ್ಬಳೇ. ಅಂಥವ ಳಿಗೂ ಈ ಒಂದು ವಿಷಯ ಅರಿವಾಗದೆಹೋಯಿತೆ, ಎಂಬ ಸಂದೇಹ ನಮ್ಮಲ್ಲಿ ಉದಿಸಬಹುದು. ಆದರೆ ನಾವಿಲ್ಲಿ ಮತ್ತೊಂದು ಅಂಶವನ್ನು ಗಮನಿಸಬೇಕಾಗು ತ್ತದೆ. ಅವಳು ರಾಮಕೃಷ್ಣರ ಮಾಹಾತ್ಮ್ಯವನ್ನು ಅರಿತವಳಾಗಿ ಅವರನ್ನು ಕೇವಲ ಪೂಜ್ಯದೃಷ್ಟಿಯಿಂದ ನೋಡುವವಳಾಗಿದ್ದರೆ ಆ ಕಥೆಯೇ ಬೇರೆಯಾಗುತ್ತಿತ್ತು. ಆದರೆ ವಸ್ತುಸ್ಥಿತಿ ಹಾಗಿರಲಿಲ್ಲ. ಮೊಟ್ಟಮೊದಲ ಭೇಟಿಯಿಂದಲೇ ಬ್ರಾಹ್ಮಣಿಗೆ ಅವರ ವಿಷಯದಲ್ಲಿ ಪ್ರಚಂಡ ಮಾತೃಪ್ರೇಮವುಂಟಾಗಿತ್ತೆಂಬುದನ್ನು ನಾವು ಕಂಡಿ

ದ್ದೇವೆ. ಈ ಪ್ರೇಮವೆಂಬುದೊಂದು ಅಪ್ರತಿಹತ ಶಕ್ತಿ, ಒಂದು ಅದ್ಭುತ ಸ್ಥಿತಿ. ಸಾಮಾನ್ಯವಾಗಿ ನಾವು ನಮಗೆ ಪ್ರೀತಿಪಾತ್ರರಾದವರ ಶಕ್ತಿ-ಸ್ಥಾನಮಾನಗಳನ್ನೆಲ್ಲ ಮರೆತು ಅವರ ಶ್ರೇಯಸ್ಸೊಂದನ್ನೇ ಗಮನಿಸುವಂತೆ ಮಾಡುತ್ತದೆ ಈ ಪ್ರೇಮ. ರಾಮಕೃಷ್ಣರ ಮಹಿಮೆಯ ಅರಿವಿದ್ದರೂ ಅವರಿಂದ ಆ ಸಾಧನೆಗಳನ್ನೆಲ್ಲ ಮಾಡಿಸುವಂತೆ ಬ್ರಾಹ್ಮಣಿಯನ್ನು ಪ್ರೇರೇಪಿಸಿದ್ದು ಇಂತಹ ಅವ್ಯಾಜ ಪ್ರೇಮವೇ ಎಂಬುದು ನಿಸ್ಸಂಶಯ. ಅವರ ಅಲೌಕಿಕ ಭಾವಾವಸ್ಥೆಗಳನ್ನೂ ಅದ್ಭುತ ಶಕ್ತಿಸಾಮರ್ಥ್ಯಗಳನ್ನೂ ಕಂಡು ಕೆಲವೊಮ್ಮೆ ಅವಳು ವಿಸ್ಮಿತಳಾಗುತ್ತಿದ್ದಳು. ಆದರೆ ಮರುಕ್ಷಣವಲ್ಲೇ ಮಾತೃ ವಾತ್ಸಲ್ಯವೆಂಬುದು ಅವಳ ಬುದ್ಧಿಯನ್ನು ಮಬ್ಬಾಗಿಸುತ್ತಿತ್ತು; ಅವರ ಅಲೌಕಿಕ ಭಾವಗಳನ್ನೆಲ್ಲ ಮರೆತುಬಿಡುತ್ತಿದ್ದಳು. ಆದರೆ ಈ ಪ್ರೇಮ ಕೇವಲ ಒಮ್ಮುಖವಾಗಿರಲಿಲ್ಲ. ರಾಮಕೃಷ್ಣರು ಕೂಡ ಆಕೆಯ ಮಾತೃವಾತ್ಸಲ್ಯಕ್ಕೆ ಸರಿದೂಗುವ ಶಿಶುಸಹಜ ಸರಳತೆ, ಮುಗ್ಧತೆಗಳಿಂದ ಆಕೆಯನ್ನು ಆಶ್ರಯಿಸಿಕೊಂಡಿದ್ದರು; ಅವಳಲ್ಲಿ ಸಂಪೂರ್ಣ ವಿಶ್ವಾಸವಿರಿಸಿದ್ದರು. ಮತ್ತು ಅವರ ಈ ಗುಣವೇ ಆ ಸಂನ್ಯಾಸಿನಿಯ ಅಂತರಂಗದಲ್ಲಿ ಪವಿತ್ರವಾದ ಮಾತೃಪ್ರೇಮದ ಅಲೆಗಳನ್ನೆಬ್ಬಿಸುವ ಪ್ರಚೋದನೆಯಾಗಿ ಪರಿಣಮಿಸಿತೆನ್ನಬಹುದು. ಅವರನ್ನು ಸಕಲ ವಿಧದಿಂದಲೂ ಸಂತೋಷದಿಂದಿರಿಸಲು, ಉಪದ್ರವಗಳಿಂದ ರಕ್ಷಿಸಲು, ಅವರ ಸಾಧನೆಗಳಲ್ಲಿ ನೆರವಾಗಲು ತಾನು ಅಪರಿಮಿತ ಶ್ರಮವಹಿಸುವಂತೆ ಮಾಡಿತು ಆ ಮಾತೃಪ್ರೇಮ.

ಯೋಗ್ಯನಾದ ಶಿಷ್ಯನಿಗೆ ಬೋಧಿಸುವುದೆಂದರೆ ಪ್ರತಿಯೊಬ್ಬ ಗುರುವಿಗೂ ಹಿಗ್ಗಿನ ಸಂಗತಿಯೇ ಸರಿ. ಇನ್ನು, ಸ್ವತಃ ಅಸಾಮಾನ್ಯ ಜ್ಞಾನಿಯಾದ ಗುರುವಿಗೆ ತನ್ನನ್ನೂ ಮೀರಿಸುವಂತಹ ಶಿಷ್ಯನೊಬ್ಬ ದೊರಕಿದರೆ ಪರಮ ತೃಪ್ತಿ, ಪರಮ ಸಂತೋಷ. ಭೈರವಿ ಬ್ರಾಹ್ಮಣಿಯಂತೂ, ಆಧ್ಯಾತ್ಮಿಕ ಜಗತ್ತಿನಲ್ಲಿ ರಾಮಕೃಷ್ಣರಂತೆ ಏಕಕಾಲಕ್ಕೆ ಪ್ರತಿಭಾವಂತನೂ ಸತ್ಪಾತ್ರನೂ ಆದ ವ್ಯಕ್ತಿಯೊಬ್ಬ ಇರಬಲ್ಲನೆಂದು ಕನಸಿನಲ್ಲೂ ಕಂಡವಳಲ್ಲ. ಆದ್ದರಿಂದ ಅವಳಿಗಾದ ಆನಂದವೆಷ್ಟೆಂದು ಊಹಿಸಿಯೇ ನೋಡಬೇಕು. ಅತ್ಯಲ್ಪ ಅವಧಿಯಲ್ಲೇ ತನ್ನೆಲ್ಲ ತಪಸ್ಸು ಮತ್ತು ಅಧ್ಯಯನಗಳ ಫಲವನ್ನು ಶಿಷ್ಯನಿಗೆ ಧಾರೆಯೆರೆಯಬೇಕೆಂಬ ಉತ್ಕಟೇಚ್ಛೆ ಅವಳಲ್ಲುಂಟಾಗಿದ್ದರೆ ಆಶ್ಚರ್ಯವೇನು ?

ರಾಮಕೃಷ್ಣರು ಬ್ರಾಹ್ಮಣಿಯ ಮಾರ್ಗದರ್ಶನದಲ್ಲಿ ತಂತ್ರಸಾಧನೆ ಮಾಡಲು ನಿರ್ಧರಿಸಿದ್ದೇನೊ ಸರಿಯೆ. ಆದರೆ ಅವರು ಕೇವಲ ಆಕೆಯ ವಾತ್ಸಲ್ಯ, ಸಹಾನುಭೂತಿಗಳಿಗೆ ಮಾರುಹೋಗಿ ಅದಕ್ಕೆ ಒಪ್ಪಿಕೊಂಡದ್ದಲ್ಲ. ಯಾವ ಜಗನ್ಮಾತೆಯ ಪದತಲದಲ್ಲಿ ಸರ್ವಸಮರ್ಪಣೆ ಮಾಡಿ ತಮ್ಮ ಅಹಮಿಕೆಯನ್ನೇ ಲಯಗೊಳಿಸಿಕೊಂಡಿದ್ದರೋ ಆಕೆಯ ಅನುಮತಿಯನ್ನು ಪಡೆದೇ ಅವರು ಮುಂದುವರಿದದ್ದು. ತಾವು ಈ ಸಾಧನೆಯನ್ನು ಕೈಗೊಳ್ಳಬಹುದೇ ? ತಮಗೆ ಇದರ ಅಗತ್ಯವಿದೆಯೇ ? ಎಂದು ಜಗನ್ಮಾತೆಯನ್ನೇ ಕೇಳಿ ಖಚಿತಪಡಿಸಿಕೊಂಡರು. ಶಾಸ್ತ್ರೋಕ್ತ ವಿಧಾನಗಳ ಮೂಲಕ ತಾವು ಆಕೆಯನ್ನು ಸಾಕ್ಷಾತ್ಕರಿಸಿಕೊಳ್ಳುವ ಅವಕಾಶ ಬಂದೊದಗಿದೆ ಎಂಬುದು ಅವರಿಗೆ ಗೋಚರವಾಯಿತು. ಆ ಬಳಿಕವೇ ಅವರು ತಮ್ಮ ಒಪ್ಪಿಗೆ ನೀಡಿದರು.

ಜಗನ್ಮಾತೆಯು ಆದೇಶದಂತೆ ಅವರೀಗ ಸರ್ವವನ್ನೂ ಮರೆತು ಸಾಧನೆಯಲ್ಲಿ ಮಗ್ನರಾದರು. ಅವರ ತೀಕ್ಷ್ಣ ಏಕಾಗ್ರ ಮನಸ್ಸು ಬ್ರಾಹ್ಮಣಿ ತೋರಿಸಿಕೊಟ್ಟ ಸಾಧನೆಯ ಪಥದಲ್ಲಿ ವೇಗವಾಗಿ ಮುನ್ನಡೆಯಿತು. ತಂತ್ರಸಾಧನೆಯ ಕೆಲವು ಪ್ರಕ್ರಿಯೆಗಳಿಗೆ ವಿಶಿಷ್ಟ ಉಪಕರಣಗಳ ಅಗತ್ಯವಿದೆ. ಇವುಗಳನ್ನು ಸಂಗ್ರಹಿಸಿ ತರುವುದೇ ಒಂದು ದೊಡ್ಡ ಕೆಲಸ. ಆದರೆ ಈ ಸಾಧನೆಗಳಲ್ಲಿ ತುಂಬ ಪಳಗಿದವಳಾದ ಬ್ರಾಹ್ಮಣಿ ಬಹಳಷ್ಟು ಶ್ರಮವಹಿಸಿ ಅವುಗಳು ದೊರಕಬಹುದಾದಲ್ಲೆಲ್ಲ ಓಡಾಡಿ ಅವನ್ನೆಲ್ಲ ಸಂಗ್ರಹಿಸಿ ತಂದಳು. ಮತ್ತು ಅವುಗಳ ಉಪಯೋಗವನ್ನೂ ಬಳಕೆಯ ವಿಧಾನವನ್ನೂ ಶಿಷ್ಯನಿಗೆ ವಿವರಿಸಿದಳು.

ಸಾಧನೆಗಳಿಗಾಗಿ ಅವಳೊಮ್ಮೆ ಐದು ವಿಧದ ಪ್ರಾಣಿಗಳ ತಲೆಬುರುಡೆಗಳನ್ನು ತಂದಿದ್ದಳು. ಇವುಗಳಲ್ಲಿ ಮನುಷ್ಯನದೂ ಒಂದು. ಗಂಗಾನದಿಗೆ ಬಹುದೂರದ ಸ್ಥಳವೊಂದರಿಂದ ಈ ತಲೆಬುರುಡೆಗಳನ್ನು ಅವಳು ಸಂಗ್ರಹಿಸಿ ತಂದಿದ್ದಳು. ಆಕೆಯ ನಿರ್ದೇಶನದಂತೆ ರಾಮಕೃಷ್ಣರು ಇವುಗಳನ್ನು ಬಳಸಿಕೊಂಡು ಎರಡು 'ಮುಂಡಾಸನ'ಗಳನ್ನು ನಿರ್ಮಿಸಿದರು ('ಮುಂಡ' ಎಂದರೆ ತಲೆಬುರುಡೆ). ಸಾಮಾನ್ಯವಾಗಿ ತಂತ್ರಸಾಧಕರು ಪಂಚಮುಂಡಗಳಿಂದ ಕೂಡಿದ ಒಂದು ವೇದಿಕೆಯನ್ನು ನಿರ್ಮಿಸಿಕೊಳ್ಳುತ್ತಾರೆ. ಆದರೆ ರಾಮಕೃಷ್ಣರು, ಮುಂದೆ ತಾವೇ ಹೇಳಿಕೊಂಡ ಪ್ರಕಾರ, ಇಂತಹ ಎರಡು ಆಸನಗಳನ್ನು ನಿರ್ಮಿಸಿದ್ದರು. ಬಿಲ್ವವೃಕ್ಷದ ಬುಡದಲ್ಲಿ ಮೂರು ನರಮುಂಡಗಳನ್ನೂ ಪಂಚವಟಿಯ ಬಳಿಯಲ್ಲಿ ಐದು ವಿವಿಧ ಜಾತಿಯ ಪ್ರಾಣಿಗಳ ಮುಂಡಗಳನ್ನೂ ಹುಗಿದಿಟ್ಟಿದ್ದರು. ಸಾಧನೆಗೆ ತ್ರಿಮುಂಡಾಸನವು ಪ್ರಶಸ್ತವೆಂದೋ ಅಥವಾ ಬಿಲ್ವವೃಕ್ಷದ ಪರಿಸರವು ಆಗ ಅತ್ಯಂತ ನಿರ್ಜನವಾಗಿದ್ದು ವಿಶೇಷ ಸಾಧನೆಗಳಿಗೆ ಅನುಕೂಲವಾಗಿತ್ತೆಂದೋ ಅವರು ಅಲ್ಲೂ ಒಂದು ಆಸನವನ್ನು ನಿರ್ಮಿಸಿದ್ದಿರಬೇಕು. ಬಿಲ್ವವೃಕ್ಷದ ಸಮೀಪದಲ್ಲೇ ಈಸ್ಟ್ ಇಂಡಿಯಾ ಕಂಪೆನಿಯ ದೊಡ್ಡ ಶಸ್ತ್ರಾಗಾರ ಇದ್ದುದರಿಂದ ಹೋಮದ ಅಗ್ನಿಯನ್ನು ಹೊತ್ತಿಸಲು ಅನುಮತಿಯಿರಲಿಲ್ಲ ಎಂಬುದೂ ಎರಡು ಬೇರೆ ಬೇರೆ ಆಸನಗಳನ್ನು ನಿರ್ಮಿಸಲು ಕಾರಣವಾಗಿದ್ದಿರಬಹುದು. ರಾಮಕೃಷ್ಣರು ತಮ್ಮ ಆವಶ್ಯಕತೆಗೆ ತಕ್ಕಂತೆ ಇವೆರಡರಲ್ಲಿ ಯಾವುದಾದರೊಂದು ಮುಂಡಾಸನದ ಮೇಲೆ ಕುಳಿತು ಜಪ, ಪುರಶ್ಚರಣ, ಧ್ಯಾನಗಳಲ್ಲಿ ನಿರತರಾಗುತ್ತಿದ್ದರು. ಎಷ್ಟೋ ತಿಂಗಳುಗಳಷ್ಟು ದೀರ್ಘಕಾಲ ಗುರುಶಿಷ್ಯರಿಬ್ಬರಿಗೂ ದಿನಗಳು ಹೇಗೆ ಉರುಳಿತೆಂಬುದರ ಪರಿವೆಯೇ ಇರಲಿಲ್ಲ. ಆ ದಿನಗಳ ಬಗ್ಗೆ ರಾಮಕೃಷ್ಣರು ಹೇಳುತ್ತಾರೆ:

"ಹಗಲುಹೊತ್ತಿನಲ್ಲಿ ಬ್ರಾಹ್ಮಣಿ ದೂರದೂರದ ಸ್ಥಳಗಳಿಗೆ ಹೋಗಿ, ತಂತ್ರಗಳಲ್ಲಿ ಹೇಳಿರುವ ಅನೇಕ ದುರ್ಲಭ ಪದಾರ್ಥಗಳನ್ನು ಸಂಗ್ರಹಿಸಿ ತರುತ್ತಿದ್ದಳು. ರಾತ್ರಿ ವೇಳೆಯಲ್ಲಿ ಅವುಗಳನ್ನು ತಂದು ಬಿಲ್ವವೃಕ್ಷದ ಅಥವಾ ಪಂಚವಟಿಯ ಬುಡದಲ್ಲಿರಿಸಿ, ನನ್ನನ್ನು ಕರೆಯುತ್ತಿದ್ದಳು. ಅವುಗಳನ್ನು ಬಳಸಿಕೊಳ್ಳುವುದು ಹೇಗೆಂಬುದನ್ನು ವಿವರಿಸಿ, ಬಳಿಕ ಶಾಸ್ತ್ರೋಕ್ತ ರೀತಿಯಲ್ಲಿ ಜಗನ್ಮಾತೆಯ ಪೂಜೆ ಮಾಡಲು ನೆರವಾಗುತ್ತಿದ್ದಳು. ಕಡೆಯಲ್ಲಿ ಅವಳು ನನಗೆ ಜಪ ಮಾಡುವಂತೆ

ಆದೇಶಿಸುತ್ತಿದ್ದಳು. ಅದರಂತೆ ನಾನು ಜಪಕ್ಕೆ ಕುಳಿತುಕೊಳ್ಳುತ್ತಿದ್ದೆ; ಆದರೆ ಜಪ ಎನ್ನುವುದು ನನ್ನಿಂದ ಸಾಧ್ಯವಾಗುತ್ತಲೇ ಇರಲಿಲ್ಲ. ಏಕೆಂದರೆ, ಒಮ್ಮೆ ಜಪಮಾಲೆಯನ್ನು ತಿರುಗಿಸುವಷ್ಟರಲ್ಲೇ ನಾನು ಗಾಢ ಸಮಾಧಿಯಲ್ಲಿ ಮುಳುಗಿ ಹೋಗುತ್ತಿದ್ದೆ. ಆಗ ನನಗೆ, ಶಾಸ್ತ್ರಗಳಲ್ಲಿ ಹೇಳಿರುವಂತೆಯೇ ಆ ಸಾಧನೆಯ ಪರಿಣಾಮವು ಯಥಾವತ್ತಾಗಿ ಅನುಭವಕ್ಕೆ ಬರುತ್ತಿತ್ತು. ಹೀಗೆ, ಆ ಕಾಲದಲ್ಲಿ ನನಗೆ ದರ್ಶನದ ಮೇಲೆ ದರ್ಶನ, ಅನುಭವದ ಮೇಲೆ ಅನುಭವ! ಒಂದೊಂದೂ ಅತ್ಯಂತ ಅಸಾಮಾನ್ಯ, ಅತ್ಯದ್ಭುತ! ೬೪ ಪ್ರಮುಖ ತಂತ್ರಗಳಲ್ಲಿ ಹೇಳಿರುವ ಸಕಲ ಸಾಧನೆಗಳನ್ನೂ ಬ್ರಾಹ್ಮಣಿ ನನ್ನಿಂದ ಒಂದಾದಮೇಲೊಂದರಂತೆ ಮಾಡಿಸಿದಳು. ಅವುಗಳಲ್ಲಿ ಪ್ರತಿಯೊಂದೂ ಅತ್ಯಂತ ಕಠಿಣವಾದದ್ದು; ಅವುಗಳನ್ನು ಕೈಗೊಂಡ ಅನೇಕ ಸಾಧಕರು ದಾರಿತಪ್ಪಿ ಕೆಟ್ಟು ಹೋಗುತ್ತಾರೆ. ಆದರೆ ಜಗನ್ಮಾತೆಯ ಕೃಪೆಯಿಂದ ಅವುಗಳೆಲ್ಲದರಲ್ಲೂ ನಾನು ಉತ್ತೀರ್ಣನಾದೆ."

ಈ ಸಾಧನೆಗಳ ಅಂಗವಾಗಿ ತಾವು ಎದುರಿಸಬೇಕಾಗಿಬಂದ ಒಂದು ಅಗ್ನಿಪರೀಕ್ಷೆಯನ್ನು ರಾಮಕೃಷ್ಣರೇ ಬಣ್ಣಿಸುತ್ತಾರೆ: "ಅದೊಂದು ರಾತ್ರಿ; ಎಲ್ಲಿಂದಲೋ ಏನೋ ಯೌವನಭರಿತಳಾದ ಸುಂದರಿಯೋರ್ವಳನ್ನು ಬ್ರಾಹ್ಮಣಿ ಕರೆತಂದಿದ್ದಳು. ಅವಳನ್ನು ತೋರಿಸಿ ನನಗೆ 'ಮಗು, ಇವಳನ್ನು ಜಗನ್ಮಾತೆಯೆಂಬಂತೆ ಪೂಜಿಸು' ಎಂದಳು. ಪೂಜೆ ಮುಗಿಯಿತು. ಆಗ ಅವಳು, 'ಈಗ ನೀನು ಇವಳನ್ನು ಸಾಕ್ಷಾತ್ ಜಗಜ್ಜನನಿಯೆಂದು ತಿಳಿದು, ಇವಳ ತೊಡೆಯ ಮೇಲೆ ಕುಳಿತು ತನ್ಮಯಚಿತ್ತದಿಂದ ಜಪ ಮಾಡಬೇಕು' ಎಂದಳು. ಅದನ್ನು ಕೇಳಿ ನಾನು ನಡುಗಿದೆ. ಅಳುತ್ತ ಜಗನ್ಮಾತೆಯನ್ನು ಕೇಳಿಕೊಂಡೆ, 'ಅಮ್ಮಾ ನಿನ್ನ ಮರೆಹೊಕ್ಕ ನನಗೆ ಎಂತಹ ಅಪ್ಪಣೆ ಮಾಡುತ್ತಿದ್ದೀಯೆ! ಈ ನಿನ್ನ ದುರ್ಬಲ ಶಿಶುವಿಗೆ ಅಂತಹ ಸಾಮರ್ಥ್ಯವಿದೆಯೆ?' ಆದರೆ ಹಾಗೆ ಹೇಳುತ್ತಿದ್ದಂತೆಯೇ ನನ್ನನ್ನು ಯಾವುದೋ ಅಗೋಚರ ಶಕ್ತಿ ಆವರಿಸಿದಂತೆ ಭಾಸವಾಯಿತು. ಹೃದಯದಲ್ಲಿ ಅಸಾಧಾರಣ ಶಕ್ತಿಯೊಂದು ತುಂಬಿಕೊಂಡಿತು. ನಾನೇನು ಮಾಡುತ್ತಿರುವೆನೆಂಬುದರ ಪರಿವೆಯೇ ಇಲ್ಲದೆ ವಶೀಕರಣಕ್ಕೊಳಗಾದವನಂತೆ ಮಂತ್ರವನ್ನುಚ್ಚರಿಸುತ್ತ ಆ ಯುವತಿಯ ತೊಡೆಯ ಮೇಲೆ ಕುಳಿತೆ. ಮರುಕ್ಷಣವೇ ಸಂಪೂರ್ಣ ಸಮಾಧಿಸ್ಥನಾದೆ! ಪ್ರಜ್ಞೆ ಮರಳಿದಾಗ, ಬ್ರಾಹ್ಮಣಿ ಎದುರಿನಲ್ಲೇ ಕುಳಿತು ನನ್ನನ್ನು ಸಮಾಧಿಯಿಂದ ಕೆಳಗಿಳಿಸಲು ತೀವ್ರ ಪ್ರಯತ್ನ ಮಾಡುತ್ತಿರುವುದನ್ನು ಕಂಡೆ. ಆಗ ಅವಳು, 'ಪೂಜಾ ಪ್ರಕ್ರಿಯೆ ಸಂಪೂರ್ಣವಾಯಿತು, ಮಗು. ನೀನಿದರಲ್ಲಿ ಯಶಸ್ವಿಯಾದೆ! ಇಂತಹ ಸಂದರ್ಭಗಳಲ್ಲಿ ಇತರರಾದರೆ, ಅತ್ಯಂತ ಕಷ್ಟದಿಂದ ತಮ್ಮನ್ನು ನಿಗ್ರಹಿಸಿಕೊಂಡು, ಎಲ್ಲೋ ಸ್ವಲ್ಪ ಹೊತ್ತು ಮಾತ್ರ ಜಪವನ್ನು ಮಾಡಿ, ಕರ್ಮವನ್ನು ಮುಗಿಸಿಬಿಡುತ್ತಾರೆ. ಆದರೆ ನೀನಾದರೋ ಸಂಪೂರ್ಣ ದೇಹಬೋಧೆಯನ್ನೇ ಕಳೆದುಕೊಂಡು ಸಮಾಧಿಸ್ಥನಾದೆ!' ಎಂದಳು. ಇದನ್ನು ಕೇಳಿ ನಾನು ತುಂಬ ಸಮಾಧಾನಗೊಂಡೆ. ಈ ಪರೀಕ್ಷೆಯಲ್ಲಿ ಉತ್ತೀರ್ಣನನ್ನಾಗಿಸಿದುದಕ್ಕಾಗಿ ಜಗನ್ಮಾತೆಗೆ ಕೃತಜ್ಞತೆಯಿಂದ ಮತ್ತೆ ಮತ್ತೆ ನಮಿಸಿದೆ.

"ಇನ್ನೊಂದು ಸಂದರ್ಭದಲ್ಲಿ, ಬ್ರಾಹ್ಮಣಿಯು ಒಂದು ಕಪಾಲದಲ್ಲಿ ಮೀನನ್ನು ಬೇಯಿಸಿ ತರ್ಪಣ ನೀಡಿದ್ದನ್ನು ಕಂಡೆ. ಅವಳು ನನ್ನಿಂದಲೂ ಹಾಗೆಯೇ ಮಾಡಿಸಿದಳು. ಬಳಿಕ ಆ ಮೀನನ್ನು ಸ್ವೀಕರಿಸುವಂತೆ ಹೇಳಿದಳು. ನಾನು ಅವಳೆಂದಂತೆಯೇ ಮಾಡಿದೆ. ನನಗೆ ಸ್ವಲ್ಪವೂ ಅಸಹ್ಯವುಂಟಾಗಲಿಲ್ಲ!

"ಆದರೆ ಒಂದು ದಿನ ಅವಳು ಎಲ್ಲಿಂದಲೋ ಕೊಳೆತ ಮಾನವಮಾಂಸ ವನ್ನು ತಂದಳು; ಅದರಿಂದ ತರ್ಪಣ ನೀಡಿ, ನಾಲಿಗೆಯಿಂದ ಸ್ಪರ್ಶಿಸುವಂತೆ ಆದೇಶ ನೀಡಿದಳು. ಆಗ ಮಾತ್ರ ನಾನು ಅಸಹ್ಯಗೊಂಡು, 'ಅಯ್ಯೋ, ಅದೆಂತು ಸಾಧ್ಯ!' ಎಂದುದ್ಗರಿಸಿದೆ. ಆಗ ಬ್ರಾಹ್ಮಣಿ 'ಅದರಲ್ಲೇನಿದೆ ಮಗು? ನೋಡೀಗ, ನಾನು ಮಾಡುತ್ತೇನೆ' ಎನ್ನುತ್ತ ಅದರಲ್ಲೊಂದು ತುಣುಕನ್ನು ಬಾಯಿಗೆ ಹಾಕಿಕೊಂಡಳು. ತರುವಾಯ, 'ನೋಡು, ಈ ಅಸಹ್ಯತೆಯ ಭಾವನೆಯೇ ನಮ್ಮಲ್ಲಿರಬಾರದು. ಅದನ್ನು ಮನಸ್ಸಿನಿಂದ ಕಿತ್ತುಹಾಕಬೇಕು' ಎನ್ನುತ್ತ ಮತ್ತೆ ಅದನ್ನು ನನ್ನ ಮುಂದಿರಿ ಸಿದಳು. ಆಕೆ ಮಾಡಿದ್ದನ್ನು ನೋಡಿದಾಗ ನನ್ನ ಮನದಲ್ಲಿ ಜಗನ್ಮಾತೆಯ ಬೀಭತ್ಸ ರೂಪವಾದ ಚಂಡಿಯ ಚಿತ್ರ ಮೂಡಿತು. 'ಅಮ್ಮಾ ಅಮ್ಮಾ' ಎಂದುದ್ಗರಿಸುತ್ತ ನಾನು ಭಾವಸಮಾಧಿಗೇರಿದೆ. ಆಗ ಬ್ರಾಹ್ಮಣಿ ಒಂದು ತುಣುಕು ಮಾಂಸವನ್ನು ನನ್ನ ಬಾಯಲ್ಲಿರಿಸಿದರೂ ಮನಸ್ಸಿನಲ್ಲಿ ಹೇವರಿಕೆಯ ಭಾವನೆ ಉಂಟಾಗಲೇ ಇಲ್ಲ.

"ಹೀಗೆ ನನ್ನನ್ನು ಪೂರ್ಣಾಭಿಷಿಕ್ತನನ್ನಾಗಿಸಿದ ಬಳಿಕ ನಾನು ಅಸಂಖ್ಯಾತ ಪೂಜಾಕರ್ಮಗಳನ್ನು ಕೈಗೊಳ್ಳುವಂತೆ ಮಾಡಿದಳು ಬ್ರಾಹ್ಮಣಿ. ಈಗ ನನಗೇ ಆ ವಿವರಗಳೆಲ್ಲ ನೆನಪಿಲ್ಲ; ಆದರೆ ಒಂದನ್ನು ಮಾತ್ರ ಹೇಳಬಲ್ಲೆ. ಭಗವತಿಯ ಕೃಪೆಯಿಂದ ಒಂದು ದಿನ ನಾನು ಪ್ರಣಯಿಗಳ ಉತ್ತುಂಗ ಆನಂದವನ್ನು ಪರಿಪೂರ್ಣ ನಿರ್ವಿಕಾರಚಿತ್ತದಿಂದ—ಅದೊಂದು ಭಗವಂತನ ಆಟವೆಂಬಂತೆ— ವೀಕ್ಷಿಸಲು ಸಮರ್ಥನಾದದ್ದು ನನಗೆ ನೆನಪಿದೆ. ಆಗ ನನ್ನ ಮನಸ್ಸು ಸಾಧಾರಣ ಜೀವಿಗಳ ಭಾವನೆಗಳಿಗೆ ಸಮೀಪವಾದರೂ ಇಳಿದುಬರುವುದಿರಲಿ, ಬದಲಾಗಿ ಮಲಿನಭಾವನೆಯ ಸೋಂಕನ್ನೂ ತಗುಲಿಸಿಕೊಳ್ಳದೆ ಅದು ಮೇಲುಮೇಲಕ್ಕೆ ಏರುತ್ತ ಹೋಗಿ ಕಡೆಗೆ ಗಾಢ ಸಮಾಧಿಯಲ್ಲಿ ಲೀನವಾಯಿತು. ಬಾಹ್ಯಪ್ರಜ್ಞೆ ಮರಳಿದ ಮೇಲೆ ಭೈರವಿ ಬ್ರಾಹ್ಮಣಿ, 'ನೀನು ಅತಿ ಕಠಿಣವಾದ ತಂತ್ರಸಾಧನೆ ಯೊಂದರ ಗರಿಷ್ಠಗುರಿಯನ್ನು ಮುಟ್ಟಿ, ಆಧ್ಯಾತ್ಮಭಾವದಲ್ಲಿ ಸುಸ್ಥಿತನಾಗಿದ್ದೀಯೆ. ವೀರಭಾವದಲ್ಲಿ ಇದೇ ಅಂತಿಮ ಸಾಧನೆ' ಎಂದಳು.

"ಇದಾದ ಕೆಲಕಾಲದಲ್ಲೇ ನಾನು ತಂತ್ರವಿಧಾನಗಳಿಗನುಸಾರವಾಗಿ ಓರ್ವ ಸ್ತ್ರೀಯನ್ನು ಪೂಜೆ ಮಾಡಿದೆ. ನಾನದನ್ನು ಮತ್ತೊಬ್ಬ ಭೈರವಿಯ ನೆರವಿನಿಂದ ದೇವಾಲಯದ ವಾದ್ಯಮಂಟಪದಲ್ಲಿ ಮಧ್ಯಾಹ್ನದ ಹೊತ್ತಿನಲ್ಲಿ ಎಲ್ಲರೆದುರಿಗೆ ಮಾಡಿದೆ. ಅದು ಮುಗಿದ ಬಳಿಕ ಅವಳಿಗೆ ಶಾಸ್ತ್ರರೀತ್ಯಾ ನಮಸ್ಕರಿಸಿದೆ. ವೀರಭಾವಕ್ಕೆ ಸಂಬಂಧಿಸಿದಂತೆ ನಾನು ಕೈಗೊಂಡ ಕಡೆಯ ಸಾಧನೆ ಇದೇ.

"ತಂತ್ರಸಾಧನೆಯ ಸುದೀರ್ಘ ಅವಧಿಯಲ್ಲಿ ಎಲ್ಲ ಸ್ತ್ರೀಯರ ಬಗ್ಗೆಯೂ ನನ್ನ ದೃಷ್ಟಿ ಒಂದೇ ರೀತಿಯಾಗಿ—ಮಗು ತಾಯಿಯನ್ನು ನೋಡುವಂತೆ—ಇದ್ದಿತು.

ಅಂತೆಯೇ ಆ ಅವಧಿಯಲ್ಲಿ ನನಗೆ ಬೇಕೆಂದರೂ ಕೂಡ ಒಂದು ಹನಿ ಮದ್ಯವನ್ನೂ ಬಾಯೊಳಗೆ ಹಾಕಿಕೊಳ್ಳಲು ಸಾಧ್ಯವಾಗಲಿಲ್ಲ. 'ಕಾರಣ' ಎಂಬ ಪದವನ್ನು ಕೇಳಿದರೇ ಸಾಕು, ನನ್ನೊಳಗೆ ಜಗತ್ಕಾರಣನಾದ ಭಗವಂತನ ಪ್ರಚೋದನೆಯಾಗಿ ಆದರಲ್ಲೇ ನಾನು ಮೈಮರೆಯುತ್ತಿದ್ದೆ. ಅದೇ ರೀತಿಯಲ್ಲಿ ಆ ಅರ್ಥದ ಇತರ ಶಬ್ದ ಗಳನ್ನು —ಉದಾಹರಣೆಗೆ ಜನನ, ಆದಿ, ಮೂಲ ಇತ್ಯಾದಿ ಪದಗಳನ್ನು— ಕೇಳಿ ದಾಗಲೂ ವಿಶ್ವದ ಕಾರಣವು ನನ್ನೆದುರು ಗೋಚರವಾಗಿ ನಾನು ಸಮಾಧಿಸ್ಥನಾಗಿ ಬಿಡುತ್ತಿದ್ದೆ."

ಶ್ರೀರಾಮಕೃಷ್ಣರು 'ಕಾರಣ' ಎಂಬ ಪದವನ್ನು ಕೇಳುವಷ್ಟರಿಂದಲೇ ಮೈಮರೆ ಯಲು ಕಾರಣವೇನು ? 'ಕಾರಣ'ವೆಂದರೆ ಒಂದು ಕಾರ್ಯದ ಮೂಲ ಎಂಬರ್ಥ ವಿರುವಂತೆ ಬಂಗಾಳೀ ಭಾಷೆಯಲ್ಲಿ ಅದಕ್ಕೆ 'ಮದ್ಯ' ಎಂಬ ಅರ್ಥವೂ ಇದೆ. 'ಕಾರಣ'ವೆಂದಾಕ್ಷಣ ಸಹಜವಾಗಿ ಜಗತ್ಕಾರಣ ನೆನಪಾಗುವಂತೆ, ಕಾರಣಕ್ಕೆ ಮದ್ಯ ವೆಂಬ ಅರ್ಥವಿರುವುದರಿಂದ, ಮತ್ತು ಮದ್ಯವು ಆನಂದಸೂಚಕವಾದುದರಿಂದ ಭಗವದಾನಂದದ ನೆನಪಾಗುತ್ತದೆ. ಹೀಗೆ 'ಕಾರಣ' ಎಂದಾಗ ನಿತ್ಯವಾದ ಭಗವ ದಾನಂದವೇ ಅವರ ಹೃನ್ಮನಗಳನ್ನು ತುಂಬಿಕೊಳ್ಳುತ್ತಿತ್ತು ಇನ್ನು, ಆ ತಾತ್ಕಾಲಿಕ ಆನಂದ ಕೊಡುವ ಹೆಂಡವನ್ನು ಹೀರುವ ಆವಶ್ಯಕತೆಯೇ ಬರುವುದಿಲ್ಲವಲ್ಲ!

ತಂತ್ರಸಾಧನೆಯ ಇತಿಹಾಸದಲ್ಲೇ ಯಾವೊಬ್ಬ ಸಾಧಕನಾದರೂ ಸಕಲ ಸ್ತ್ರೀಯರ ವಿಷಯದಲ್ಲಿ ಮಾತೃಭಾವವನ್ನು ಉಳಿಸಿಕೊಂಡೂ ವೀರಭಾವದ ರೀತ್ಯಾ ತಾಂತ್ರಿಕ ಸಾಧನೆಯನ್ನು ಮಾಡಿದ್ದು ಎಲ್ಲೂ ಕಂಡುಬರುವುದಿಲ್ಲ. ಸಾಧಕರೆಲ್ಲರೂ ಒಬ್ಬ ಸ್ತ್ರೀಯ ನೆರವಿನೊಂದಿಗೇ ಈ ಸಾಧನೆಯನ್ನು ಕೈಗೊಳ್ಳುವುದು ವಾಡಿಕೆಯಾಗಿ ಬಿಟ್ಟಿದೆ. ಈ ನಿಯಮಕ್ಕೆ ಹೊರತಾದವರೊಬ್ಬರೂ ಕಾಣಬರುವುದಿಲ್ಲವಾದ್ದರಿಂದ, ಸ್ತ್ರೀಸಂಪರ್ಕವಿಲ್ಲದೆ ವೀರಭಾವದ ಸಾಧನೆ ಮಾಡಿದರೆ ಅಂತಹ ಸಾಧನೆ ನಿಷ್ಫಲ ವಾಗುವುದೆಂಬ ನಂಬಿಕೆ ಸಾಧಕರಲ್ಲಿ ಬೇರುಬಿಟ್ಟಿದೆ. ಆದ್ದರಿಂದಲೇ ತಂತ್ರಗಳೆಂದು ಕರೆಯಲ್ಪಡುವ ಈ ಶಾಸ್ತ್ರಗಳು ಅಶ್ಲೀಲ, ಅನೈತಿಕ ಎಂಬ ಕುಖ್ಯಾತಿಗೊಳಗಾಗಿವೆ; ತಿರಸ್ಕಾರಕ್ಕೊಳಗಾಗಿವೆ.

ತಂತ್ರಶಾಸ್ತ್ರಗಳ ಮೇಲಿನ ಈ ಅಪವಾದವನ್ನು ತೊಡೆದುಹಾಕಿದ ಒಬ್ಬರೇ ಒಬ್ಬರೆಂದರೆ ಶ್ರೀರಾಮಕೃಷ್ಣರು. ಕನಸಿನಲ್ಲಿಯೂ ಕೂಡ ಸ್ತ್ರೀಸಂಬಂಧವನ್ನು ಮಾಡದೆ ಈ ಸಾಧನೆಯನ್ನು ಪೂರೈಸಿ ಅವರೊಂದು ಹೊಸ ಸಂಪ್ರದಾಯವನ್ನೇ ಹುಟ್ಟುಹಾಕಿದರು. ಅವರು ಈ ಬಗೆಯಾಗಿ ಮಾತೃಭಾವವನ್ನು ತೊರೆಯದೆ ತಂತ್ರ ಸಾಧನೆ ಮಾಡಿದುದು ಜಗನ್ಮಾತೆಯ ಇಚ್ಛೆಯೇ ಸರಿ ಎಂಬುದರಲ್ಲಿ ಸಂಶಯವಿಲ್ಲ.

ರಾಮಕೃಷ್ಣರೇ ಒಮ್ಮೆ ಹೇಳುತ್ತಾರೆ: "ಈ ಸಾಧನೆಗಳ ಯಾವುದೇ ಅಂಗ ದಲ್ಲಾಗಲಿ ಸಂಪೂರ್ಣ ಯಶಸ್ಸುಗಳಿಸಲು ನನಗೆ ಮೂರು ದಿನಕ್ಕಿಂತ ಹೆಚ್ಚು ಸಮಯ ಬೇಕಾಗಲಿಲ್ಲ. ನಾನು ಯಾವುದೇ ಸಾಧನೆಯನ್ನು ಕೈಗೊಂಡಾಗಲೂ ಉತ್ಕಂಠಿತನಾಗಿ ಜಗನ್ಮಾತೆಯನ್ನು 'ಅಮ್ಮಾ ನನಗೆ ಇದರ ಫಲಿತಾಂಶವನ್ನು ದೊರಕಿಸಿಕೊಡು' ಎಂದು ಪ್ರಾರ್ಥಿಸಿಕೊಳ್ಳುತ್ತಿದ್ದೆ. ಆಕೆಯ ಕರುಣೆಯಿಂದಾಗಿ ನಾನು

ಮೂರು ದಿನಗಳಲ್ಲೇ ಯಶಸ್ವಿಯಾಗುತ್ತಿದ್ದೆ'' ಎಂದು. ಹೀಗಿರುವಾಗ ಈ ಸಾಧನೆಗಳಲ್ಲಿ ಸ್ತ್ರೀಸಂಪರ್ಕವೊಂದು ಅವಿಭಾಜ್ಯ ಅಂಗವೇನಲ್ಲ ಎಂಬುದಕ್ಕೆ ಇದಕ್ಕಿಂತ ಮತ್ತಾವ ಪುರಾವೆ ಬೇಕು? ಹಾಗಾದರೆ ಅಷ್ಟೊಂದು ಜನ ಸಾಧಕರು ಅದನ್ನು ಹಾಗೆಯೇ ಮಾಡಿಕೊಂಡು ಬಂದಿದ್ದಾರಲ್ಲ? —ಎಂದರೆ ಅದಕ್ಕೆ ಅವರ ದೌರ್ಬಲ್ಯ, ಅಸಂಯಮಗಳೇ ಕಾರಣ. ಸಾಧಕನು ಸ್ತ್ರೀಸಂಗಾತಿಯೊಡಗೂಡಿ ನಿರಂತರವಾಗಿ ಸಾಧನೆ ಮಾಡಿದ್ದೇ ಆದರೆ, ಅಂತ್ಯದಲ್ಲಿ ದಿವ್ಯಭಾವವನ್ನೇ—ಎಂದರೆ ಲೈಂಗಿಕ ಪ್ರವೃತ್ತಿಯನ್ನು ಮೀರಿದ ಸ್ಥಿತಿಯನ್ನೇ—ಪಡೆದುಕೊಳ್ಳುತ್ತಾನೆ ಎಂದು ತಂತ್ರಗಳೇನೋ ಆಶ್ವಾಸನೆ ನೀಡುತ್ತವೆ. ಆದರೆ ಇದು ದುರ್ಬಲ ವ್ಯಕ್ತಿಗಳಿಗೆ ನೀಡುವ ವಿಶೇಷ ವಿನಾಯಿತಿ ಅಷ್ಟೆ. ಈ ಸಾಧನೆಗಳು ಪ್ರತಿಯೊಬ್ಬನಿಗೂ ಎಟಕುವಂತೆ ತಂತ್ರಶಾಸ್ತ್ರಗಳ ಕರ್ತೃಗಳು ತೋರಿರುವ ಉದಾರತೆಯ ಉದಾಹರಣೆ ಮಾತ್ರವಿದು. ಆದರೆ ಅದು ಸಾಧನೆಯ ಅವಿಭಾಜ್ಯ ಅಥವಾ ಪ್ರಮುಖ ಅಂಗವಲ್ಲ ಎಂಬುದು ಬಹು ಮುಖ್ಯವಾದ ಅಂಶ.

ತಂತ್ರಶಾಸ್ತ್ರಗಳ ಎಲ್ಲ ಅನುಷ್ಠಾನಗಳ ಮೂಲ ಉದ್ದೇಶ ಒಂದೇ—ಯಾವ ರೂಪರಸಾದಿ ವಿಷಯವಸ್ತುಗಳು ಮಾನವನನ್ನು ಮರಳುಗೊಳಿಸಿ ಮತ್ತೆಮತ್ತೆ ಜನನ ಮರಣಗಳಲ್ಲಿ ತೊಡಗಿಸುತ್ತವೆಯೋ ಮತ್ತು ಆತ್ಮಜ್ಞಾನವನ್ನು ಪಡೆಯುವಲ್ಲಿ ಪ್ರತಿಬಂಧಕಗಳಾಗಿ ನಿಲ್ಲುತ್ತವೆಯೋ ಆ ವಿಷಯವಸ್ತುಗಳು ಭಗವಂತನ ವಿಭೂತಿಗಳಲ್ಲವೆ ಬೇರಲ್ಲ ಎಂಬುದನ್ನು ಆತ್ಮನಿಗ್ರಹ ಮತ್ತು ಅಭ್ಯಾಸದ ಮೂಲಕ ಸಾಧಕನಿಗೆ ಅನುಭವ ಮಾಡಿಸಿ ಕೊಡುವುದು. ಶ್ರದ್ಧೆ ಮತ್ತು ಸಂಯಮಶಕ್ತಿ—ಇವು ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತದೆ. ಇವುಗಳ ತಾರತಮ್ಯದ ಆಧಾರದ ಮೇಲೆ ತಂತ್ರಗಳು ಮೂರು ವಿಧದ ಭಾವಗಳನ್ನು ವಿವರಿಸುತ್ತವೆ—ಅವು ಕ್ರಮವಾಗಿ ಪಶುಭಾವ, ವೀರಭಾವ ಹಾಗೂ ದಿವ್ಯಭಾವ ಎಂಬವು. ಈ ವಿಂಗಡಣೆಯ ಅರ್ಥ ಹೀಗಿದೆ: 'ಪಶುಭಾವ'ದ ವ್ಯಕ್ತಿಯು ಹೆಸರೇ ಸೂಚಿಸುವಂತೆ–ಹೆಚ್ಚಿನ ಸಂಯಮವಿಲ್ಲದವನು. ಇವನು ವಿಷಯವಸ್ತುಗಳ ಭೋಗ ಎದುರಾದರೆ ಬಹು ಬೇಗ ಅದಕ್ಕೆ ಬಲಿಬೀಳುವವನು. ಆದ್ದರಿಂದ ಇಂತಹ ವ್ಯಕ್ತಿ ತನ್ನನ್ನು ಪ್ರಚೋದಿಸುವಂತಹ ಭೋಗವಸ್ತುಗಳಿಂದ ರಕ್ಷಿಸಿಕೊಳ್ಳಲು ಕಟ್ಟುನಿಟ್ಟಾದ ಸಂಯಮದ ಕೋಟೆಯೊಳಗೆ ತನ್ನನ್ನು ಬಂಧಿಸಿಕೊಳ್ಳಬೇಕಾಗುತ್ತದೆ. ಇವನ ಎಲ್ಲ ಸಾಧನೆಗಳೂ ಈ ನಿಯಮಕ್ಕೆ ಅನುಗುಣವಾಗಿರುತ್ತವೆ. 'ವೀರಭಾವ'ದ ಸಾಧಕನು ಸಂಯಮಶೀಲ. ಅವನಲ್ಲಿ ನಿಗ್ರಹ ಸಾಮರ್ಥ್ಯ ಬಲವಾಗಿರುತ್ತದೆ. ಪ್ರಕೃತಿಯಲ್ಲಿ ಅಭಿವ್ಯಕ್ತವಾದ ಪ್ರತಿಯೊಂದು ವಸ್ತುವೂ—ಅದು ಸುಂದರವಾದ, ಉದಾತ್ತವಾದ, ಶ್ರೇಷ್ಠವಾದ ವಸ್ತುವಾಗಿರಬಹುದು; ಇಲ್ಲವೆ ತುಚ್ಛವಾದ, ನೀಚವಾದ, ಭಯಕಾರಿಯಾದ, ಅಸಹ್ಯಕರವಾದ ವಿಷಯವಸ್ತುವಾಗಿರಬಹುದು—ಅದೆಲ್ಲವೂ ಜಗನ್ಮಾತೆಯ ಪ್ರಕಾಶವೇ ಎಂಬ ತಂತ್ರಗಳ ಬೋಧನೆಯು ಅವನ ಮನಸ್ಸಿನಲ್ಲಿ ದೃಢವಾಗಿ ಬೇರೂರಿರುತ್ತದೆ. ಅಂತಹ ಸಾಧಕನು ವಿಷಯವಸ್ತುಗಳ ಸಂಪರ್ಕಕ್ಕೆ ಬಂದಾಗಲೂ ಅವುಗಳ ಆಕರ್ಷಣೆಗೊಳಗಾಗದೆ ಅವಿಚಲನಾಗಿರುತ್ತಾನೆ. ಇಂಥವನು

ತನ್ನ ಆತ್ಮಶಕ್ತಿಯುನ್ನು ಪರೀಕ್ಷಿಸಿಕೊಳ್ಳಲು ಮತ್ತು ಸಾಧನೆಯ ನೆಪದಲ್ಲಿ ಭೋಗ ವಸ್ತುವಿಗೆ ಬಲಿಯಾಗದಂತಿರಲು ಉದ್ದೇಶಪೂರ್ವಕವಾಗಿ ಅದರ ಸಂಪರ್ಕಕ್ಕೆ ಬರಬೇಕಾಗುತ್ತದೆ. ಇನ್ನು 'ದಿವ್ಯಭಾವ'ವನ್ನು ಅವಲಂಬಿಸುವ ವ್ಯಕ್ತಿಯ ಆತ್ಮಶಕ್ತಿ ಅಂತರ್ದೃಷ್ಟಿಗಳು ಆದಾಗಲೇ ಸುಸ್ಥಿರವಾಗಿಬಿಟ್ಟಿರುತ್ತವೆ. ಅವನಲ್ಲಿ ಭೋಗವಾಸನೆ ಯೆಂಬುದು ಸಂಪೂರ್ಣ 'ದೈವೀಕರಣ'ಗೊಂಡಿದ್ದು ಸಕಲವಸ್ತುಗಳಲ್ಲೂ ಅವನು ಭಗವದ್ದರ್ಶನ ಮಾಡಲು ಸಮರ್ಥನಾಗಿರುತ್ತಾನೆ.

ಸಾಧಕನು ತನ್ನ ಯೋಗ್ಯತೆಗೆ ಅನುಸಾರವಾಗಿ ಈ ಮೂರರಲ್ಲೊಂದು ಭಾವವನ್ನಾಶ್ರಯಿಸಬಹುದು. ಆತ್ಮಸಂಯಮದ ತಪೋಮಯ ಜೀವನವೇ ಇವು ಗಳೆಲ್ಲದರ ಮೂಲಾಧಾರ ಎಂದು ತಂತ್ರಗಳಲ್ಲಿ ತಿಳಿಯಪಡಿಸಿದೆ. ಆದರೆ ಬರ ಬರುತ್ತ ಜನ ಇದನ್ನು ಸಂಪೂರ್ಣ ಮರೆತೇಬಿಟ್ಟರು. ತಮ್ಮ ದೌರ್ಬಲ್ಯಕ್ಕೆ ಶರಣಾಗಿ ಅಧಮ ಅನೈತಿಕತೆಯಲ್ಲಿ ಮುಳುಗಿದರು. ಆದರೆ ಇತರರು ವಾಸ್ತವಿಕತೆಯನ್ನರಿ ಯದೆ ಇವರ ದುರ್ವ್ಯವಹಾರಗಳಿಗೆ ತಂತ್ರವೇ ಹೊಣೆಯೆಂದು ನಿರ್ಧರಿಸಿ ಅದರ ಮೇಲೆ ಗೂಬೆ ಕೂರಿಸಿದರು. ಶ್ರೀರಾಮಕೃಷ್ಣರು ಸಕಲ ಸ್ತ್ರೀಯರ ಬಗ್ಗೆ ಮಾತೃ ಭಾವವನ್ನುಳಿಸಿಕೊಂಡು ತಂತ್ರಸಾಧನೆಯಲ್ಲಿ ಯಶಸ್ಸು ಸಾಧಿಸಿದ್ದರಿಂದ ಬಹಳಷ್ಟು ಒಳಿತಾಯಿತು. ಪ್ರಾಮಾಣಿಕ ಸಾಧಕರಿಗೆ ಅನುಕರಣಯೋಗ್ಯವಾದ ಮಾದರಿಯೊಂ ದನ್ನು ಹಾಕಿಕೊಟ್ಟಂತಾಯಿತು. ತಂತ್ರಶಾಸ್ತ್ರಗಳ ನಿಜಮಹಿಮೆಯು ಬೆಳಕಿಗೆ ಬಂದು ಅವುಗಳ ಪ್ರಾಮಾಣ್ಯವು ಚಿರಸ್ಥಾಪಿತವಾಯಿತು.

ಹೀಗೆ ರಾಮಕೃಷ್ಣರು ಬ್ರಾಹ್ಮಣಿಯ ನಿರ್ದೇಶನದಲ್ಲಿ ಸುಮಾರು ನಾಲ್ಕು ವರ್ಷಗಳ ಕಾಲ ತಂತ್ರೋಕ್ತ ರಹಸ್ಯ ಸಾಧನೆಗಳನ್ನು ಕ್ರಮಾಗತವಾಗಿ ನೆರವೇರಿ ಸಿದರು. ಆದರೆ ಅವುಗಳನ್ನೆಲ್ಲ ಸೂಕ್ಷ್ಮವಾಗಿ ಗಮನಿಸಿ ಅರಿತುಕೊಂಡವರು ಬಹುಶಃ ಯಾರೂ ಇರಲಿಲ್ಲ. ಮತ್ತು ಅದು ಸಾಧ್ಯವೂ ಇರಲಿಲ್ಲವೆನ್ನಬಹುದು. ಇನ್ನು ರಾಮಕೃಷ್ಣರಾದರೂ ಆ ವಿವರಗಳನ್ನು ತಮ್ಮ ಶಿಷ್ಯರಾರ ಮುಂದೆಯೂ ಪ್ರಸ್ತಾಪಿಸ ಲಿಲ್ಲ. ಆದರೆ ಸಾಧನೆಯಲ್ಲಿ ಮುಂದುವರಿಯುವಂತೆ ಪ್ರೋತ್ಸಾಹಿಸಲು ಕೆಲವರಿಗೆ ಸಾಂದರ್ಭಿಕವಾಗಿ ಕೆಲವು ಅಂಶಗಳನ್ನು ತಿಳಿಸಿದ್ದುಂಟು. ಇನ್ನೂ ಅಪರೂಪವಾಗಿ ಕೆಲವು ವ್ಯಕ್ತಿಗಳ ಅಗತ್ಯಕ್ಕನುಸಾರ ಅವರಿಂದ ಕೆಲವು ಸಾಧನೆಗಳನ್ನು ತಾವೇ ಮಾಡಿ ಸಿದರು. ಆದರೆ ತಂತ್ರಸಾಧನೆಯ ಕಠಿಣತೆಯನ್ನೂ ಇತಿಮಿತಿಗಳನ್ನೂ ಚೆನ್ನಾಗಿ ಅರಿತಿದ್ದ ಅವರು, ಅವುಗಳನ್ನು ತಮ್ಮ ಶಿಷ್ಯರು ಕೈಗೊಳ್ಳುವ ವಿಷಯದಲ್ಲಿ ಅತಿ ಹೆಚ್ಚಿನ ಎಚ್ಚರವಹಿಸಿದರೆಂಬುದು ಖಂಡಿತ. ಆದರೆ ಸ್ವತಃ ರಾಮಕೃಷ್ಣರಿಗೆ ಆ ಎಲ್ಲ ವಿಷಯಗಳೂ ಆಮೂಲಾಗ್ರವಾಗಿ ತಿಳಿದಿರಬೇಕೆಂಬುದು ಜಗನ್ಮಾತೆಯ ಇಚ್ಛೆಯಾಗಿ ದ್ದಿರಬೇಕು. ಇಲ್ಲದಿದ್ದರೆ ಮುಂದೆ ತಮ್ಮ ಬಳಿಗೆ ಬಂದ ವಿಭಿನ್ನ ವ್ಯಕ್ತಿತ್ವ–ಸ್ವಭಾವಗಳ ಭಕ್ತರ ಮನಃಸ್ಥಿತಿಯನ್ನು ಅರಿತುಕೊಂಡು, ಅವರವರ ಪಥಗಳಲ್ಲಿ ಅವರವರನ್ನು ಮುನ್ನಡೆಸಲು ರಾಮಕೃಷ್ಣರಿಗೆ ಸಾಧ್ಯವಾಗುತ್ತಿರಲಿಲ್ಲವೇನೋ. ಮುಂದೆ ಇದಕ್ಕೆ ಹಲವಾರು ಉದಾಹರಣೆಗಳನ್ನು ನೋಡಲಿದ್ದೇವೆ.

೨೯

## ಅಚ್ಚರಿಯ ಅನುಭವಗಳು

ತಾಂತ್ರಿಕ ಸಾಧನೆಯ ಅವಧಿಯಲ್ಲಿ ಶ್ರೀರಾಮಕೃಷ್ಣರ ವ್ಯಕ್ತಿತ್ವದಲ್ಲಿ ಒಂದು ಸಂಪೂರ್ಣ ಪರಿವರ್ತನೆ ಕಂಡುಬಂದಿತು. ತಂತ್ರಸಾಧಕನ ಭಾವ ಅವರ ವ್ಯಕ್ತಿತ್ವದಲ್ಲಿ ಹಾಸುಹೊಕ್ಕಾಗಿ ಬೆರೆತುಹೋಗಿತ್ತು.

ಜಗನ್ಮಾತೆ ಕೆಲವೊಮ್ಮೆ ನರಿಯ ರೂಪ ತಾಳುತ್ತಾಳೆ, ಮತ್ತು ನಾಯಿ ಭೈರವನ ರೂಪ ಎಂದು ರಾಮಕೃಷ್ಣರು ಕೇಳಿತಿಳಿದಿದ್ದರು. ಆದ್ದರಿಂದ ಅವರು ನಾಯಿ-ನರಿಗಳು ತಿಂದುಳಿಸಿದ ಆಹಾರವನ್ನು ಪವಿತ್ರ ಹಾಗೂ ಪರಿಶುದ್ಧವೆಂದು ಪರಿಗಣಿಸಿದ್ದರು. ಮತ್ತು ಆ ಭಾವದಲ್ಲಿದ್ದಾಗ ಸ್ವಲ್ಪವೂ ಜುಗುಪ್ಸೆ ತಾಳದೆ ಅಂತಹ ಆಹಾರವನ್ನು ಪ್ರಸಾದವೆಂಬಂತೆ ಸ್ವೀಕರಿಸುತ್ತಿದ್ದರು.

ಜಗನ್ಮಾತೆಯ ಪಾದಪದ್ಮಗಳಲ್ಲಿ ತಮ್ಮ ತನು ಮನ ಪ್ರಾಣಗಳೆಲ್ಲವನ್ನೂ ತರ್ಪಣವಾಗಿ ನೀಡಿದ ರಾಮಕೃಷ್ಣರು ತಮ್ಮ ಒಳಹೊರಗುಗಳಲ್ಲಿ ಜ್ಞಾನಾಗ್ನಿ ನಿರಂತರವಾಗಿ ವ್ಯಾಪಿಸಿಕೊಂಡು ಪ್ರಜ್ವಲಿಸುತ್ತಿದ್ದುದನ್ನು ಕಣ್ಣಾರೆ ಕಂಡರು.

ಕುಂಡಲಿನೀ ಶಕ್ತಿಯು ಜಾಗೃತವಾಗಿ ತಲೆಯ ಕಡೆಗೆ ಏರುವಾಗ ಮೂಲಾಧಾರದಿಂದ ಹಿಡಿದು ಸಹಸ್ರಾರದವರೆಗಿನ ಪದ್ಮಗಳು ಊರ್ಧ್ವಮುಖವಾಗುತ್ತ ಪೂರ್ಣವಾಗಿ ಅರಳುತ್ತವೆ. ಮತ್ತು ಅವು ಒಂದೊಂದಾಗಿ ಅರಳಿದಂತೆ ಸಾಧಕನಿಗೆ ಅನೇಕ ಅಪೂರ್ವ ಅನುಭವಗಳಾಗುತ್ತವೆ. ರಾಮಕೃಷ್ಣರು ಈ ಅನುಭವಗಳನ್ನೆಲ್ಲ ಪಡೆದರಷ್ಟೇ ಅಲ್ಲದೆ ಕುಂಡಲಿನೀ ಶಕ್ತಿಯು ಪ್ರವಹಿಸುವುದನ್ನು ಮತ್ತು ಪದ್ಮಗಳು ಅರಳುವುದನ್ನು ಕಣ್ಣಾರೆ ಕಂಡರು. ಒಬ್ಬ ಜ್ಯೋತಿರ್ಮಯನಾದ ದಿವ್ಯ ಪುರುಷನು ಸುಷುಮ್ನೆಯ ಮಾರ್ಗವಾಗಿ ಸಾಗಿ ಆ ಪದ್ಮಗಳನ್ನು ತನ್ನ ನಾಲಿಗೆಯಿಂದ ಸ್ಪರ್ಶಿಸಿ ಅವುಗಳನ್ನು ಅರಳಿಸುತ್ತಿರುವಂತೆ ಅವರು ಕಂಡರು.

ರಾಮಕೃಷ್ಣರ ಶಿಷ್ಯಾಗ್ರಣಿ ನರೇಂದ್ರನಾಥನಿಗೆ ಒಮ್ಮೆ ಧ್ಯಾನಕ್ಕೆ ಕುಳಿತೊಡನೆಯೇ ಒಂದು ಬೃಹದಾಕಾರದ, ಜ್ಯೋತಿರ್ಮಯವಾದ ಅದ್ಭುತ ತ್ರಿಕೋನವೊಂದು ಕಾಣತೊಡಗಿತ್ತು. ಅಲ್ಲದೆ ಅದು ಜೀವಂತವಾಗಿರುವಂತೆ ಅವನಿಗೆ ಭಾಸವಾಗುತ್ತಿತ್ತು. ಇದೆಂತ ದೃಶ್ಯ, ಇದರ ಅರ್ಥವೇನು ಎಂಬುದೊಂದೂ ಅವನಿಗೆ ತಿಳಿಯಲಿಲ್ಲ. ಒಂದು ದಿನ ದಕ್ಷಿಣೇಶ್ವರಕ್ಕೆ ಬಂದಾಗ ಶ್ರೀರಾಮಕೃಷ್ಣರಿಗೆ ಈ ವಿಷಯವನ್ನು ತಿಳಿಸಿದ. ಆಗ ಅವರೆಂದರು: "ಭಲೆ, ನಿನಗೆ ಬ್ರಹ್ಮಯೋನಿಯ ದರ್ಶನವಾಯಿತು! ಬಿಲ್ವವೃಕ್ಷದ ಬುಡದಲ್ಲಿ ಸಾಧನೆ ಮಾಡುತ್ತಿದ್ದಾಗ ನನಗೂ ಆ ದರ್ಶನವಾಗಿತ್ತು.

ಅಷ್ಟಲ್ಲದೆ ಅದು ಕ್ಷಣಕ್ಷಣವೂ ಅಸಂಖ್ಯಾತ ಬ್ರಹ್ಮಾಂಡಗಳನ್ನು ಪ್ರಸವಿಸುತ್ತಿರುವುದನ್ನು ಕೂಡ ನಾನು ಕಂಡಿದ್ದೇನೆ !"

ಈ ತಂತ್ರಸಾಧನೆಯ ಅವಧಿಯಲ್ಲೇ ರಾಮಕೃಷ್ಣರು ಬ್ರಹ್ಮಾಂಡದಲ್ಲಿ ಎಲ್ಲೆಲ್ಲಿಯೂ ತಾನಾಗಿಯೇ ಉದ್ಭವಿಸುವ 'ಅನಾಹತ ಶಬ್ದ'ವನ್ನು ಕೇಳಿದರು. ಅನಾಹತ ಶಬ್ದವೆಂದರೆ ತಾನೇತಾನಾಗಿ ಕೇಳಿಬರುವ ಒಂದು ವಿರಾಟ್ ಓಂಕಾರನಾದ. ಈ ವಿಶ್ವದಲ್ಲಿ ಕೇಳಿಬರುವ ಸಕಲ ಶಬ್ದಗಳೂ ಆ ಓಂಕಾರದ ವಿಭಿನ್ನ ಅಭಿವ್ಯಕ್ತಿಗಳೇ. ರಾಮಕೃಷ್ಣರು ಈ ದಿನಗಳಲ್ಲಿ ಪಶುಪಕ್ಷಿಗಳ ಕೂಗಿನ ಅರ್ಥವನ್ನೂ ಗ್ರಹಿಸಲು ಸಮರ್ಥರಾಗಿದ್ದರು. ಈ ಸಾಧನೆಯ ಅಂತಿಮ ಭಾಗದಲ್ಲಿ ಅವರಿಗೆ ತಮ್ಮಲ್ಲಿ ಅನೇಕ ಅದ್ಭುತ ಶಕ್ತಿಗಳು ಅಡಗಿರುವ ಅನುಭವವಾಯಿತು. ಆದರೆ ಅವುಗಳನ್ನು ಕಟ್ಟಿಕೊಂಡು ತಾವೇನು ಮಾಡುವುದು, ಮತ್ತು ಅವುಗಳು ಒಳ್ಳೆಯವೋ ಕೆಟ್ಟವೋ ಎಂಬುದು ತಿಳಿಯಲಿಲ್ಲ. ಹೃದಯನ ಮುಂದೆ ಈ ವಿಷಯವನ್ನೆಲ್ಲ ಹೇಳಿಕೊಂಡರು. 'ಜಗನ್ಮಾತೆಯನ್ನೇ ಕೇಳಿಬಿಡುವುದು ಲೇಸಲ್ಲವೆ ?' ಎಂದ ಹೃದಯ. ಅವರಿಗೂ ಅದು ಹೌದೆನ್ನಿಸಿತು. ಕೂಡಲೇ ದೇವಾಲಯಕ್ಕೆ ಓಡಿಹೋಗಿ ಮಾತೆಯ ಮುಂದೆ ನಿಂತು ದಾರಿತೋರುವಂತೆ ಪ್ರಾರ್ಥಿಸಿಕೊಂಡರು. ಆಗ ಅವರಿಗೆ 'ಆಕೆಯ ಆದೇಶ ದೊರಕಿತು—ಆ ಸಿದ್ಧಿಗಳನ್ನು ಅಮೇಧ್ಯದಂತೆ ಪರಿಗಣಿಸಿ ವರ್ಜಿಸತಕ್ಕದ್ದು.' ಎಂದು. ಅಂದಿನಿಂದ ಮಂತ್ರಶಕ್ತಿ–ಮಾಯಾಶಕ್ತಿ ಎಂಬ ಶಬ್ದಗಳನ್ನು ಕೇಳಿದರೇ ಸಾಕು ರಾಮಕೃಷ್ಣರಿಗೆ ಜುಗುಪ್ಸೆಯುಂಟಾಗುತ್ತಿತ್ತು.

ಒಮ್ಮೆ ರಾಮಕೃಷ್ಣರ ಮನದಲ್ಲಿ ಜಗನ್ಮಾತೆಯ ಮಾಯಾಶಕ್ತಿಯನ್ನು, ಎಂದರೆ, ಮಾಯೆಯ ಪ್ರಭಾವವನ್ನು ದರ್ಶಿಸಬೇಕೆಂಬ ಕುತೂಹಲವುಂಟಾಯಿತು. ಈ ಜಗತ್ತಿನ ಆಗುಹೋಗುಗಳನ್ನೆಲ್ಲ ಆಕೆ ಹೇಗೆ ಸಾಧಿಸುತ್ತಾಳೋ, ಒಮ್ಮೆ ಕಣ್ಣಾರೆ ಕಾಣುವ ತವಕ ಅವರದು. ಒಂದು ದಿನ ಗಂಗಾ ತೀರದಲ್ಲಿ ಕುಳಿತಿದ್ದಾಗ ಅವರ ಈ ಇಚ್ಛೆ ತಾನಾಗಿಯೇ ಈಡೇರಿತು.

ಗಂಗೆಯ ಮಧ್ಯದಿಂದ ಪರಮಸುಂದರಿಯಾದ ತರುಣಿಯೊಬ್ಬಳು ಎದ್ದು ಬರುವುದನ್ನು ಅವರು ಕಂಡರು. ಮೆಲ್ಲನೆ ಅಡಿಯಿಡುತ್ತ ಆಕೆ ಪಂಚವಟಿಯ ಬಳಿಗೆ ಬಂದಳು. ಆವಳೊಬ್ಬಳು ಗರ್ಭವತಿಯೆಂಬಂತೆ ತೋರಿತು. ಕೆಲಕ್ಷಣಗಳಲ್ಲೇ ಆಕೆ ತುಂಬುಗರ್ಭಿಣಿಯಾದಳು; ಬಳಿಕ ಒಂದು ಚೆಲುವಾದ ಶಿಶುವಿಗೆ ಜನ್ಮವನ್ನೂ ಇತ್ತಳು. ಈಗ ಅವಳು ತನ್ನ ಕಂದನನ್ನು ಮಡಿಲಲ್ಲೆತ್ತಿಕೊಂಡು, ಅದನ್ನೇ ಅತ್ಯಂತ ವಾತ್ಸಲ್ಯದಿಂದ ಈಕ್ಷಿಸುತ್ತ ಮೊಲೆಯೂಡಿಸತೊಡಗಿದಳು.

ಆದರೆ... ಮರುಕ್ಷಣವೇ ಆ ಸುಂದರಿಯ ಮುಖ ವಿಕೃತವಾಯಿತು, ಬೀಭತ್ಸವಾಯಿತು. ಅವಳೀಗ ಭಯಂಕರ ಪಿಶಾಚಿಯಂತೆ ಕಂಡಳು. ತಾನು ಹೆತ್ತ ಮಗುವನ್ನು ಅತಿಕ್ರೂರವಾಗಿ ದುರದುರನೆ ನೋಡಿದಳು. ಮನುಷ್ಯತ್ವದ ಲವ ಲೇಶವೂ ಇಲ್ಲದವಳಂತೆ ಅದನ್ನು ತನ್ನ ಕೋರೆದಾಡೆಗಳಿಂದ ತುಂಡುತುಂಡಾಗಿಸಿ ಜಗಿದು ನುಂಗಿಬಿಟ್ಟಳು ! ತರುವಾಯ ಮತ್ತೆ ಗಂಗಾಗರ್ಭವನ್ನು ಪ್ರವೇಶಿಸಿ ಅಂತರ್ಧಾನಳಾದಳು.

ಎದೆ ತಲ್ಲಣಗೊಳಿಸುವಂಥ ಈ ದೃಶ್ಯವನ್ನು ಕಂಡ ರಾಮಕೃಷ್ಣರು 'ಆಹಾ! ಇದೇ ಅಲ್ಲವೆ ಮಾಯೆಯ ಶಕ್ತಿ !' ಎಂದು ಭಾವಿಸುತ್ತ ಆಶ್ಚರ್ಯಚಕಿತರಾದರು.

ಈ ಮೇಲೆ ಹೇಳಿದ ದರ್ಶನಗಳಲ್ಲದೆ ರಾಮಕೃಷ್ಣರು ಕಂಡ ದೇವಿಯ ಇತರ ರೂಪಗಳಿಗಂತೂ ಲೆಕ್ಕವೇ ಇಲ್ಲ. ಒಮ್ಮೆ ಅವರು ದರ್ಶನವೊಂದರಲ್ಲಿ, ಜಗನ್ಮಾತೆಯು ಸ್ತ್ರೀಶರೀರದಲ್ಲಿ ಸಾಕ್ಷಾತ್ತಾಗಿ ನೆಲಸಿರುವುದನ್ನು ಕಂಡರು. ಅಲ್ಲದೆ ದ್ವಿಭುಜಗಳಿಂದ ಹಿಡಿದು ದಶಭುಜಗಳವರೆಗೆ ಹಲವಾರು ಭುಜಗಳನ್ನು ಹೊಂದಿದ ಅನೇಕ ದೇವಿಯರನ್ನು ಅವರು ದರ್ಶಿಸಿದರು. ಈ ದೇವಿಯರಲ್ಲಿ ಕೆಲವರು ಅವರೊಂದಿಗೆ ಮಾತನಾಡಿದರು; ಸಾಧನೆಯ ಬಗ್ಗೆ ಸಲಹೆ ನೀಡಿದರು. ಈ ಎಲ್ಲ ದೇವಿಯರೂ ಅಸಾಧಾರಣ ರೂಪವತಿಯರು. ಆದರೆ ಅವರಾರನ್ನೂ ಶ್ರೀರಾಜರಾಜೇಶ್ವರಿ ಅಥವಾ ಷೋಡಶಿಯೊಂದಿಗೆ ಹೋಲಿಸಲು ಸಾಧ್ಯವಿರಲಿಲ್ಲ. "ನಾನೊಂದು ದರ್ಶನದಲ್ಲಿ ಷೋಡಶಿಯ ಸೌಂದರ್ಯವು ಆಕೆಯ ವ್ಯಕ್ತಿತ್ವದಿಂದ ಹೊರಸೂಸುತ್ತ ಸುತ್ತಲೂ ಚೆಲ್ಲುತ್ತಿರುವುದನ್ನು ಮತ್ತು ಆ ಸ್ಥಳವನ್ನೆಲ್ಲ ಬೆಳಗುವುದನ್ನು ಕಂಡೆ" ಎಂದು ರಾಮಕೃಷ್ಣರೊಮ್ಮೆ ಹೇಳುತ್ತಾರೆ. ಇವುಗಳಲ್ಲದೆ ಅವರಿಗೆ ಭೈರವನೇ ಮೊದಲಾದ ಅನೇಕ ದೇವತೆಗಳ ಹಾಗೂ ಉನ್ನತಲೋಕವಾಸಿಗಳಾದ ವ್ಯಕ್ತಿಗಳ ದರ್ಶನವಾಗಿತ್ತು. ತಾಂತ್ರಿಕ ಸಾಧನೆಯ ಈ ಸಮಯದಿಂದಾರಂಭಿಸಿ ಪ್ರತಿದಿನವೂ ಅವರಿಗಾದ ದರ್ಶನ—ಅನುಭವಗಳಿಗೆ ಲೆಕ್ಕವಿಲ್ಲ. ಇವುಗಳನ್ನೆಲ್ಲ ಬಣ್ಣಿಸಿಮುಗಿಸುವುದಂತೂ ಮನುಷ್ಯಮಾತ್ರರಿಂದ ಸಾಧ್ಯವಿಲ್ಲ.

ತಂತ್ರೋಕ್ತ ಸಾಧನೆಯ ಪ್ರಾರಂಭದಲ್ಲೇ ಶ್ರೀರಾಮಕೃಷ್ಣರ ಸುಷುಮ್ನಾ ನಾಡಿಯ ದ್ವಾರ ಸಂಪೂರ್ಣವಾಗಿ ತೆರೆಯಲ್ಪಟ್ಟಿತು. ಮತ್ತು ಅದರ ಪರಿಣಾಮವಾಗಿ ಅವರ ಸ್ವಭಾವವು ಶಾಶ್ವತವಾಗಿ ಒಬ್ಬ ಬಾಲಕನಂತಾಗಿಬಿಟ್ಟಿತು. ಆಗಿನಿಂದ ಅವರಿಗೆ, ಎಷ್ಟೇ ಪ್ರಯತ್ನಪಟ್ಟರೂ ಕೂಡ ತಮ್ಮ ಮೈಮೇಲಿನ ಬಟ್ಟೆಯನ್ನೂ ಜನಿವಾರವನ್ನೂ ಜಾರಿಹೋಗದಂತೆ ಬಹಳ ಹೊತ್ತು ಉಳಿಸಿಕೊಳ್ಳಲು ಸಾಧ್ಯವಾಗುತ್ತಲೇ ಇರಲಿಲ್ಲ. ಅವು ಯಾವಾಗ ಎಲ್ಲಿ ಜಾರಿಹೋಗುತ್ತಿದ್ದುವೋ ಅದೂ ತಿಳಿಯುತ್ತಿರಲಿಲ್ಲ! ಅವರು ಇತರ ಅನೇಕ ಪರಮಹಂಸರಂತೆ ಅಥವಾ ಸಾಧುಗಳಂತೆ ಉದ್ದಿಶ್ಯಪೂರ್ವಕವಾಗಿ ನಗ್ನರಾಗಿರಲು ಅಭ್ಯಾಸ ಮಾಡಿದ್ದಲ್ಲ. ಅವರ ಮನಸ್ಸು ಸದಾ ಜಗನ್ಮಾತೆಯ ಪಾದಪದ್ಮಗಳಲ್ಲೇ ನೆಲಸಿರುತ್ತಿದ್ದುದರಿಂದ ಅವರಿಗೆ ಸಹಜವಾಗಿ ಉಂಟಾಗಿದ್ದ ಅವಸ್ಥೆ ಅದು. ಈ ಸಾಧನೆಯ ಮುಕ್ತಾಯ ಭಾಗದಲ್ಲಿ ಅವರಿಗೆ ಸಕಲ ವಸ್ತುಗಳ ವಿಷಯದಲ್ಲಿ ತೀವ್ರವಾದ ಅದ್ವೈತಭಾವವುಂಟಾಯಿತು. ಯಾವ ವಸ್ತುಗಳನ್ನು ಅವರು ಬಾಲ್ಯದಿಂದಲೂ ಹೇಯ-ಹೀನ ವಸ್ತುಗಳೆಂದು ಪರಿಗಣಿಸಿದ್ದರೋ ಅವುಗಳೂ ಕೂಡ ಈಗ ಅತಿ ಪವಿತ್ರ ವಸ್ತುಗಳಿಗೆ ಸಮನಾಗಿ ತೋರತೊಡಗಿದುವು. ತುಲಸೀ ಪತ್ರವೂ ನುಗ್ಗೆ ಗಿಡದ ಎಲೆಯೂ ಪವಿತ್ರತೆಯಲ್ಲಿ ಸಮಸಮವಾಗಿ ತೋರುತ್ತಿದ್ದುವೆಂದು ಅವರು ಹೇಳುತ್ತಿದ್ದರು.

ತಂತ್ರಸಾಧನೆಯ ಸಮಯದಲ್ಲಿ ಶ್ರೀರಾಮಕೃಷ್ಣರ ಬಾಹ್ಯ ವ್ಯಕ್ತಿತ್ವದಲ್ಲೂ ಮಹತ್ತರ ಬದಲಾವಣೆಯುಂಟಾಗಿತ್ತು. ಆಗಿನಿಂದಾರಂಭಿಸಿ ಅನೇಕ ವರ್ಷಗಳ

ವರೆಗೂ ಅವರ ಶರೀರ ವಿಶಿಷ್ಟ ಕಾಂತಿಯಿಂದ ಕಂಗೊಳಿಸುತ್ತಿತ್ತು. ಅವರು ತಮ್ಮ ತೋಳಿನಲ್ಲಿ ಇಷ್ಟದೇವತೆಯ ಕೈಗಡಗವೊಂದನ್ನು ಧರಿಸಿದ್ದರು. ಬಂಗಾರದ ಆ ಕಡಗವು ಅವರ ಮೈಬಣ್ಣಕ್ಕೆ ಎಷ್ಟು ಚೆನ್ನಾಗಿ ಹೊಂದಿಕೆಯಾಗುತ್ತಿತ್ತೆಂದರೆ, ಅದನ್ನು ಥಕ್ಕನೆ ಗುರುತಿಸುವುದಕ್ಕೇ ಸಾಧ್ಯವಿರಲಿಲ್ಲ ಎಂದು ಶಾರದಾದೇವಿಯವರು ಹೇಳುತ್ತಿದ್ದರು. ತುಂಬು ಯೌವನದ ಆ ವಯಸ್ಸಿನಲ್ಲಿ ಈ ವಿಶಿಷ್ಟ ಕಾಂತಿಯೂ ಸೇರಿ ಅವರ ಸೌಂದರ್ಯ ಎಲ್ಲರ ಕಣ್ಸೆಳೆಯುವಂತಿತ್ತು. ಆದ್ದರಿಂದ ಅವರು ಜನಗಳಿಗೆ ಆಕರ್ಷಣೆಯ ಕೇಂದ್ರವಾಗಿ ಪರಿಣಮಿಸಿದರು. ಯಾವಾಗ ಎಲ್ಲಿಗೆ ಹೋದರೂ ಜನರು ಅವರನ್ನೇ ದಿಟ್ಟಿಸಿ ನೋಡುವುದು ಸಾಮಾನ್ಯವಾಗಿಹೋಯಿತು. ಮೊದಮೊದಲು ಅವರಿಗದು ಗೊತ್ತಾಗಲಿಲ್ಲ. ಆದರೆ ಸತ್ಯಸಂಗತಿ ತಿಳಿದಾಗ ಮಾತ್ರ ಅವರಿಗೆ ತುಂಬ ಅಸಮಾಧಾನವಾಯಿತು, ಜುಗುಪ್ಸೆಯಾಯಿತು. "ಅಮ್ಮಾ ನನಗೆ ಈ ಬಾಹ್ಯಸೌಂದರ್ಯ ಸ್ವಲ್ಪವೂ ಬೇಕಿಲ್ಲ. ದಯವಿಟ್ಟು ಅದನ್ನು ಹಿಂದೆಗೆದುಕೊಂಡುಬಿಡು. ಬದಲಾಗಿ ನನಗೆ ಒಳಗಿನ ಭಕ್ತಿಯ ಸೌಂದರ್ಯವೊಂದನ್ನೇ ಕರುಣಿಸು" ಎಂದು ಜಗನ್ಮಾತೆಯಲ್ಲಿ ಮತ್ತೆಮತ್ತೆ ಪ್ರಾರ್ಥಿಸಿಕೊಂಡರು. ಕೆಲ ವರ್ಷಗಳ ಬಳಿಕ ಅವರ ಈ ಪ್ರಾರ್ಥನೆಯೂ ನೆರವೇರಿತು.

## ರಾಮಪ್ರೇಮಿ ಜಟಾಧಾರಿ

ಭೈರವಿ ಬ್ರಾಹ್ಮಣಿ ದಕ್ಷಿಣೇಶ್ವರಕ್ಕೆ ಬಂದದ್ದು ೧೮೬೧ರ ಕಡೆಯ ಭಾಗದಲ್ಲಿ. ಆಗಿನಿಂದ ೧೮೬೩ರ ವರೆಗೂ ಶ್ರೀರಾಮಕೃಷ್ಣರು ಮುಖ್ಯವಾಗಿ ತಂತ್ರಸಾಧನೆಯಲ್ಲಿ ನಿರತರಾಗಿದ್ದರು. ಹೀಗೆ ಅವರು ಸಾಧನೆಗಳಲ್ಲಿ ಆಳವಾಗಿ ಮುಳುಗಿದ್ದ ಅವಧಿಯಲ್ಲಿ ಅವರಿಗೆ ಸಕಲ ವಿಧದಲ್ಲಿಯೂ ನೆರವಾಗಿ ಅವರ ಎಲ್ಲ ಆವಶ್ಯಕತೆಗಳನ್ನೂ ಪೂರೈಸಿಕೊಡುವ ಅಪೂರ್ವ ಸೌಭಾಗ್ಯ ಮಥುರನಿಗೆ ಒದಗಿತ್ತು. ಅಷ್ಟು ಹೊತ್ತಿಗಾಗಲೇ ಅವನು ಅವರನ್ನು ಮತ್ತೆಮತ್ತೆ ಪರೀಕ್ಷಿಸಿ ಅವರ ಅಲೌಕಿಕ ಭಗವದ್ಭಕ್ತಿ, ಅಪೂರ್ವ ಆತ್ಮಸಂಯಮ, ಉಜ್ವಲ ವೈರಾಗ್ಯಗಳ ಸ್ವಭಾವವನ್ನು ಸ್ಪಷ್ಟವಾಗಿ ಅರಿತಿದ್ದ. ಬಳಿಕ ತಾಂತ್ರಿಕ ಸಾಧನೆಯ ಸಮಯದಲ್ಲಿ ಅವರನ್ನು ಮತ್ತಷ್ಟು ಸನಿಹದಿಂದ ಗಮನಿಸಿದ. ಹೀಗೆ ಕಂಡಂತೆಲ್ಲ ಅವನಿಗೆ ಒಂದು ವಿಷಯ ಮನದಟ್ಟಾಗುತ್ತ ಬಂದಿತು, ಏನೆಂದರೆ ತನ್ನ ಇಷ್ಟದೇವತೆಯಾದ ಜಗನ್ಮಾತೆಯೇ ತನ್ನ ವಿಷಯದಲ್ಲಿ ಪ್ರಸನ್ನಳಾಗಿ ತನ್ನ ಸೇವೆಯನ್ನು ಸ್ವೀಕರಿಸಲು ಶ್ರೀರಾಮಕೃಷ್ಣರ ರೂಪದಲ್ಲಿ ಅವತರಿಸಿದ್ದಾಳೆ; ಅವಳು ತನ್ನನ್ನು ಸರ್ವವಿಷಯಗಳಲ್ಲೂ ಕಾಪಾಡುತ್ತಾಳೆ; ಅಲ್ಲದೆ ಅವಳು ತನ್ನ ಆಸ್ತಿ-ಅಧಿಕಾರಗಳನ್ನೆಲ್ಲ ಸುರಕ್ಷಿತವಾಗಿರಿಸಿ ತನ್ನನ್ನು ದಿನೇ ದಿನೇ ಗೌರವಸಂಪನ್ನನನ್ನಾಗಿ ಮಾಡುತ್ತಿದ್ದಾಳೆ, ಎಂದು. ಅವನಿಗೆ ಈ ರೀತಿಯ ನಂಬಿಕೆ ಉಂಟಾಗುವುದಕ್ಕೂ ಕಾರಣವಿತ್ತು. ಆ ಸಮಯದಲ್ಲಿ ಅವನು ಯಾವ ಯಾವ ಕಾರ್ಯಗಳನ್ನು ಕೈಗೊಂಡನೋ ಅದರಲ್ಲೆಲ್ಲ ಯಶಸ್ವಿಯಾದ. ಹೀಗೆ, ರಾಮಕೃಷ್ಣರು ತನ್ನ ವಿಷಯದಲ್ಲಿ ಪ್ರಸನ್ನರಾಗಿರುವುದರಿಂದ ದೈವ ಸಂಪೂರ್ಣ ತನ್ನ ಪರವಾಗಿದೆ ಎಂಬುದು ಅವನ ಅನುಭವಕ್ಕೆ ಬಂದಿತು. ಆದ್ದರಿಂದ ಅವರ ಸಾಧನೆಗೆ ಬೇಕಾದ ವಸ್ತುಗಳನ್ನೆಲ್ಲ ತರಿಸುವುದಕ್ಕಾಗಿ ಮತ್ತು ಅವರ ಅಪೇಕ್ಷೆಯಂತೆ ಪೂಜಾಕಾರ್ಯಗಳಿಗೂ ಇತರ ಸತ್ಕರ್ಮಗಳಿಗೂ ಅವನು ಹಣವನ್ನು ಯಥೇಷ್ಟವಾಗಿ ಖರ್ಚು ಮಾಡುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ.

ಕೆಲವೊಮ್ಮೆ ರಾಮಕೃಷ್ಣರು ತಮಗಾಗುತ್ತಿದ್ದ ಅಪೂರ್ವ ಅನುಭವಗಳನ್ನು ಮಥುರನ ಹಾಗೂ ಹೃದಯನ ಮುಂದೆ ಹೇಳುವುದಿತ್ತು. ಒಮ್ಮೆ ಅವರು ಮಥುರನೊಡನೆಂದರು:

"ನೋಡು, ಕಾಲಕ್ರಮದಲ್ಲಿ, ಆಧ್ಯಾತ್ಮಿಕ ಜ್ಞಾನವನ್ನು ಪಡೆದುಕೊಂಡು ಧನ್ಯರಾಗುವ ಉದ್ದೇಶದಿಂದ ಇಲ್ಲಿಗೆ (ತಮ್ಮ ಬಳಿಗೆ) ಅನೇಕ ಸಾಧಕರು, ಜಿಜ್ಞಾಸುಗಳು

ಬರುತ್ತಾರೆ. ಜಗನ್ಮಾತೆಯ ಕೃಪೆಯಿಂದ ಇದು ನನಗೆ ತಿಳಿದುಬಂದಿದೆ.''

ಇದನ್ನು ಕೇಳಿದ ಮಥುರ ಅಸೂಯೆ ತಾಳಲಿಲ್ಲ. ಬದಲಾಗಿ ಆತ ಆನಂದ ತುಂದಿಲನಾಗಿ ಉದ್ಗರಿಸಿದ:

''ಬಹಳ ಒಳ್ಳೆಯದಾಯಿತು! ಅಪ್ಪಾ, ನಾವೆಲ್ಲರೂ ನಿಮ್ಮ ಸತ್ಸಂಗದಲ್ಲಿ ಸಂತೋಷದಿಂದಿದ್ದುಬಿಡುತ್ತೇವೆ!''

ತಂತ್ರಸಾಧನೆಗಳ ಪರಿಣಾಮವಾಗಿ ಶ್ರೀರಾಮಕೃಷ್ಣರ ಅಧ್ಯಾತ್ಮ ಶಕ್ತಿಯ ಪ್ರಕಾಶ ದಿನದಿನಕ್ಕೂ ವೃದ್ಧಿಯಾಗುತ್ತ ಬಂದಂತೆ ಅವರ ಶ್ರೀಚರಣಗಳಲ್ಲಿ ಶರಣಾಗತನಾಗಿದ್ದ ಮಥುರನಿಗೆ, ತನ್ನ ಶಕ್ತಿ ಉತ್ಸಾಹ ಸಾಹಸಗಳೂ ಹೆಚ್ಚುತ್ತಿರುವ ಅನುಭವವಾಯಿತು. ಆದರೆ ಇದರೊಂದಿಗೆ ಅವನಲ್ಲಿ ಆಧ್ಯಾತ್ಮಿಕ ಪ್ರವೃತ್ತಿಯೂ ವೃದ್ಧಿಯಾಯಿತೆಂದು ಅರ್ಥವಲ್ಲ! ಏಕೆಂದರೆ ಮೂಲತಃ ಅವನದು ರಾಜಸಿಕ ವ್ಯಕ್ತಿತ್ವ, ಪ್ರಾಪಂಚಿಕ ಮನೋಭಾವ. ಆದ್ದರಿಂದ ಆಧ್ಯಾತ್ಮಿಕವಾಗಿ ಮುಂದುವರಿಯಬೇಕೆಂಬ ಹಂಬಲ ಅವನಲ್ಲೆಂದೂ ಉಂಟಾಗಲಿಲ್ಲ. ಶ್ರೀರಾಮಕೃಷ್ಣರ ಸೇವೆಯನ್ನೂ ಇತರ ಪುಣ್ಯಕಾರ್ಯಗಳನ್ನೂ ಮಾಡುವಷ್ಟರಿಂದಲೇ ಅವನು ಸಂಪೂರ್ಣ ತೃಪ್ತನಾಗಿದ್ದ. ಆದರೆ ಅವನ ಸ್ವಭಾವ ಅಂಥದಾದರೂ, ರಾಮಕೃಷ್ಣರೇ ತನ್ನ ಬುದ್ಧಿ, ಅವರೇ ತನ್ನ ಶಕ್ತಿ, ಅವರೇ ತನ್ನ ಭರವಸೆ, ಇಹಪರಗಳಲ್ಲಿ ಅವರೇ ತನ್ನ ಏಕಮಾತ್ರ ಆಧಾರಸ್ವರೂಪರು, ಮತ್ತು ಅವರೇ ತನ್ನ ಸಾಂಸಾರಿಕ ಶ್ರೇಯಸ್ಸಿನ ಮೂಲ ಕಾರಣರು ಎಂದು ನಿಸ್ಸಂದೇಹವಾಗಿ ತಿಳಿದಿದ್ದ. ಅವರ ಕೃಪೆಯೊಂದಿದ್ದುಬಿಟ್ಟರೆ ತನಗಿನ್ನೇನೂ ಬೇಡ ಎಂಬ ನಂಬಿಕೆ ಅವನ ಮನಸ್ಸಿನಲ್ಲಿ ಬೇರೂರಿತ್ತು.

ರಾಮಕೃಷ್ಣರ ಕೃಪಾಬಲದಿಂದ ತಾನೀಗ ಲೌಕಿಕ ವ್ಯವಹಾರಗಳಲ್ಲೆಲ್ಲ ಸುರಕ್ಷಿತನಾಗಿದ್ದೇನೆಂಬ ಭಾವವು ಈ ಸಮಯದಲ್ಲಿ ಅವನು ಕೈಗೊಂಡ ಕಾರ್ಯಗಳಲ್ಲಿ ವ್ಯಕ್ತವಾಗುತ್ತಿತ್ತು. ಉದಾಹರಣೆಗೆ, ೧೮೬೪ರಲ್ಲಿ ಅವನು ದಕ್ಷಿಣೇಶ್ವರದಲ್ಲಿ 'ಅನ್ನಮೇರು' ಎಂಬ ಒಂದು ವ್ರತವನ್ನು ನಡೆಸಿದ. ಇದೊಂದು ಭಾರೀ ಖರ್ಚಿನ ಸಮಾರಂಭ. ಮೇರು ಪರ್ವತೋಪಮವಾದ ಆಹಾರ ಪದಾರ್ಥಗಳನ್ನೂ ಇತರ ವಸ್ತುಗಳನ್ನೂ ದಾನ ಮಾಡುವುದೇ ಇದರ ಮುಖ್ಯ ಅಂಗ. ವ್ರತ ಬಹು ವೈಭವದಿಂದ ನಡೆಯಿತು. ಮಥುರನು ಬ್ರಾಹ್ಮಣರಿಗೆ ವಿಪುಲವಾಗಿ ಬೆಳ್ಳಿಬಂಗಾರಗಳನ್ನಲ್ಲದೆ ಸಾವಿರ ಮಣ ಅಕ್ಕಿಯನ್ನೂ ಸಾವಿರ ಮಣ ಎಳ್ಳನ್ನೂ ದಾನವಾಗಿ ನೀಡಿದ. ಸಹಚರಿ ಎಂಬ ಸುಪ್ರಸಿದ್ಧ ಗಾಯಕಿಯಿಂದ ಕೀರ್ತನೆಗಳನ್ನೂ ರಾಜನಾರಾಯಣ ಎಂಬವನಿಂದ ಚಂಡೀಗಾನವನ್ನೂ ಏರ್ಪಡಿಸಿದ್ದ. ಇವಲ್ಲದೆ ಇತರ ಅನೇಕ ಕಲಾವಿದರ ಸಂಗೀತ, ಭಜನೆ, ಕೀರ್ತನೆ, ಬಯಲಾಟ ಮೊದಲಾದವುಗಳಿಂದ ದಕ್ಷಿಣೇಶ್ವರವು ಕೆಲಕಾಲ ಉತ್ಸವಕೇಂದ್ರವಾಗಿ ಮಾರ್ಪಟ್ಟಿತ್ತು. ಆ ಗಾಯಕಗಾಯಕಿಯರ ಭಕ್ತಿರಸಭರಿತವಾದ ಸಂಗೀತವನ್ನು ಕೇಳಿ ರಾಮಕೃಷ್ಣರು ಮತ್ತೆ ಮತ್ತೆ ಭಾವಸಮಾಧಿಗೇರುತ್ತಿದ್ದರು. ಮಥುರನಿಗೆ ಇದಕ್ಕಿಂತ ಹೆಚ್ಚಿನ ಮನ್ನಣೆ ಇನ್ನೇನು ಬೇಕು? ರಾಮಕೃಷ್ಣರಿಗೆ ಯಾರ ಸಂಗೀತದಿಂದ ಎಷ್ಟು ಆನಂದವುಂಟಾಯಿತೆಂಬುದೇ ಆ ಕಲಾವಿದರ ಯೋಗ್ಯತೆಯ ಅಳತೆ ಎಂದು ತಿಳಿದ ಮಥುರ, ಅದಕ್ಕೆ

ತಕ್ಕಂತೆ ಅವರನ್ನು ಶಾಲು ಪೀತಾಂಬರ ಧನಕನಕಗಳಿಂದ ಸನ್ಮಾನಿಸಿದ.

ಕಾಳೀ ದೇವಾಲಯದ ನಿರ್ಮಾಣವಾದ ಮೇಲೆ ದಕ್ಷಿಣೇಶ್ವರವು ಸಾಧು ಬೈರಾಗಿ ಸಂನ್ಯಾಸಿಗಳೆಲ್ಲರ ಮೆಚ್ಚಿನ ತಂಗುದಾಣವಾಯಿತೆಂಬುದನ್ನು ಹಿಂದೆಯೇ ನೋಡಿದೆವು. ರಾಸಮಣಿಯ ಕಾಲದಲ್ಲಿ ದಕ್ಷಿಣೇಶ್ವರಕ್ಕೆ ಬಂದ ಕೀರ್ತಿ ಮಥುರಾ ನಾಥನ ಕಾಲದಲ್ಲಿ ಮತ್ತಷ್ಟು ವೃದ್ಧಿಯಾಯಿತು. ಇದಕ್ಕೆ ಶ್ರೀರಾಮಕೃಷ್ಣರ ವ್ಯಕ್ತಿತ್ವ ದಲ್ಲಿ ಅರಳಿದ ಆಧ್ಯಾತ್ಮಿಕತೆಯ ಅರವಿಂದವೇ ಕಾರಣವೆಂಬುದು ಸುಸ್ಪಷ್ಟ. ದುಂಬಿಗಳಂತೆ ಧಾವಿಸಿ ಬಂದರು ಆ ಸಾಧು ಬೈರಾಗಿ ಸಂನ್ಯಾಸಿಗಳು. ರಾಮಕೃಷ್ಣರಲ್ಲಿ ಸಂಪೂರ್ಣ ಶರಣಾದ ಮಥುರ ಅವರ ಇಚ್ಛೆಯ ಮೇರೆಗೆ ಈ ಸಾಧು ಬೈರಾಗಿಗಳಿಗೆ ಎಲ್ಲ ಬಗೆಯ ಅನುಕೂಲತೆಗಳನ್ನೂ ಮಾಡಿಕೊಟ್ಟ. ಅವರಿಗೆಲ್ಲ ಅನ್ನದಾನದ ವ್ಯವಸ್ಥೆಯಂತೂ ಇದ್ದೇ ಇತ್ತು. ಈಗ, ಅವರಿಗೆ ಉಪಯೋಗಕ್ಕೆ ಬರುವಂಥ ಬಟ್ಟೆಬರೆಗಳನ್ನು, ಕಂಬಳಿಗಳನ್ನು, ಕಮಂಡಲುವೇ ಮೊದಲಾದ ಜಲಪಾತ್ರೆಗಳನ್ನು ಸಾಕೆಂಬಷ್ಟು ತರಿಸಿ ದೇವಸ್ಥಾನದ ಒಂದು ಕೋಣೆಯಲ್ಲಿ ತುಂಬಿಸಿದ. ರಾಮಕೃಷ್ಣರ ಆದೇಶಾನುಸಾರ ಅವುಗಳನ್ನೆಲ್ಲ ವಿನಿಯೋಗಿಸಬೇಕೆಂದು ಅಧಿಕಾರಿಗಳಿಗೆ ಸೂಚನೆ ನೀಡಿದ. ಹೀಗಾಗಿ ಕಾಳೀ ದೇವಾಲಯದ ಅದ್ಭುತ ಆತಿಥ್ಯದ ವಿಷಯ ಸಾಧುಗಳ ಲ್ಲೆಲ್ಲ ಪ್ರಚಾರವಾಯಿತು. ಎಲ್ಲ ಸಂಪ್ರದಾಯಗಳಿಗೆ ಸೇರಿದ ಸಾಧುಗಳೂ ಅಲ್ಲಿಗೆ ಬಹು ಸಂಖ್ಯೆಯಲ್ಲಿ ಆಗಮಿಸತೊಡಗಿದರು. ಪ್ರತಿಯೊಬ್ಬನೂ ಅಲ್ಲಿನ ಆದರದ ಆತಿಥ್ಯವನ್ನು ಸ್ವೀಕರಿಸಿ ಸುಪ್ರೀತನಾಗಿ ದೇವಾಲಯದ ಯಜಮಾನರನ್ನು ಹೃತ್ಪೂರ್ವಕವಾಗಿ ಹರಸಿ ತೆರಳುತ್ತಿದ್ದ. ಹೀಗೆ ದಕ್ಷಿಣೇಶ್ವರಕ್ಕೆ ಆಗಮಿಸಿದ ಸಾಧು ಗಳಲ್ಲಿ ರಾಮಾಯತ ಸಂಪ್ರದಾಯಕ್ಕೆ ಸೇರಿದವನಾದ ಜಟಾಧಾರಿ ಒಬ್ಬ.

ಜಟಾಧಾರಿ ದಕ್ಷಿಣೇಶ್ವರಕ್ಕೆ ಬಂದುದು ಸುಮಾರು ೧೮೬೪ರಲ್ಲಿ. 'ರಾಮ ಲಾಲ' ಅಥವಾ ಬಾಲಕ ರಾಮ ಈತನ ಇಷ್ಟದೇವತೆ*. ಇವನು ಆಧ್ಯಾತ್ಮಿಕವಾಗಿ ಬಹುದೂರ ಮುಂದುವರಿದ ಸಾಧಕ. ರಾಮಲಾಲನ ಮೇಲೆ ಇವನಿಗಿದ್ದ ವಾತ್ಸಲ್ಯ ಅಸಾಧಾರಣವಾದುದು. ರಾಮಲಾಲನ ಪುಟ್ಟ ವಿಗ್ರಹವೊಂದನ್ನು ಇವನು ಹಲವಾರು ವರ್ಷಗಳಿಂದ ಅತೀವ ಭಕ್ತಿ ಪ್ರೇಮಗಳಿಂದ ಪೂಜಿಸುತ್ತ ಬಂದಿದ್ದ. ತಾನು ಹೋದಲ್ಲೆಲ್ಲ ಈ ವಿಗ್ರಹವನ್ನೂ ಕೊಂಡೊಯ್ಯುತ್ತಿದ್ದ. ಆ ಸುಂದರ ಮೂರ್ತಿಯ ನಿರಂತರ ಸೇವೆಯಿಂದಾಗಿ ಆತನ ಮನಸ್ಸು ದಿವ್ಯ ಪ್ರೇಮಭರಿತವಾಗಿ, ಸಂಪೂರ್ಣ ಅಂತರ್ಮುಖವಾಗಿತ್ತು. ಆ ವಿಗ್ರಹದಲ್ಲಿ ಶ್ರೀರಾಮಚಂದ್ರನು ಉಜ್ವಲ, ತೇಜೋಮಯ, ಜೀವಂತ ಶಿಶುವಾಗಿ ಕಂಗೊಳಿಸುವುದನ್ನು ಜಟಾಧಾರಿ ಕಾಣು ತ್ತಿದ್ದ; ಮತ್ತು ತನ್ನೆಲ್ಲ ಪೂಜೆ ನೈವೇದ್ಯ ಕೈಂಕರ್ಯಗಳನ್ನು ಆ ದಿವ್ಯ ಬಾಲರಾಮನು ಸ್ವೀಕರಿಸುವುದನ್ನೂ ಕಂಡು ಆನಂದಿಸುತ್ತಿದ್ದ.

ಮೊದಮೊದಲು ಅವನಿಗೆ ಯಾವಾಗಲಾದರೊಮ್ಮೆ ಇಂತಹ ಅಲೌಕಿಕ

---

* ಬಾಲಕರಾಮನ ಪೂಜೆ ದಕ್ಷಿಣ ಭಾರತದಲ್ಲಿ ಅಷ್ಟಾಗಿ ಪ್ರಚಲಿತವಾಗಿಲ್ಲ. ಆದರೆ ಉತ್ತರ ಭಾರತದಲ್ಲಿ ಅದು ತುಂಬ ಸಾಮಾನ್ಯ.

ದರ್ಶನವಾಗುತ್ತಿತ್ತು. ತೇಜೋಮಯ ಶರೀರಿಯಾಗಿ ಕಾಣಿಸಿಕೊಳ್ಳುತ್ತಿದ್ದ ಬಾಲ ರಾಮನ ಆ ಅದ್ಭುತ ದರ್ಶನ ಅವನನ್ನು ಆನಂದದ ಕಡಲಿನಲ್ಲಿ ಮುಳುಗಿಸಿಬಿಡು ತ್ತಿತ್ತು. ಆದರೆ ಸಾಧನೆಯಲ್ಲಿ ಮುಂದುವರಿದಂತೆಲ್ಲ, ಆ ದರ್ಶನವೂ ಹೆಚ್ಚುಹೆಚ್ಚು ನಿಚ್ಚಳವಾಗುತ್ತ ಬಂದಿತು; ಮತ್ತು ಅಡಿಗಡಿಗೆ, ದೀರ್ಘಾವಧಿಯವರೆಗೆ ಗೋಚರ ವಾಗತೊಡಗಿತು. ಕ್ರಮೇಣ ಅವನಿಗೆ ಇದೊಂದು ದಿನನಿತ್ಯದ ವ್ಯವಹಾರವಾಗಿ ಪರಿಣಮಿಸಿತು! ರಾಮಲಾಲನು, ಅವನ ಕಣ್ಣೆದುರಿಗಿನ ಇತರೆಲ್ಲ ವಸ್ತುಗಳಷ್ಟೇ ಸ್ಪಷ್ಟವಾಗಿ ಕಾಣಿಸಿಕೊಳ್ಳತೊಡಗಿದ! ನಿರಂತರವಾಗಿ ನಯನಾನಂದವನ್ನು ನೀಡು ತ್ತಿರುವ ರಾಮಲಾಲನು ಜಟಾಧಾರಿಯ ಹೃದಯಪುತ್ಥಳಿಯಾದ. ಹೀಗೆ ಬಾಲಕ ರಾಮ ಅವನ ಪಾಲಿಗೆ ನಿತ್ಯಸಹಚರನಾದ. ಆ ತರುವಾಯ, ಬಾಲರಾಮನೊಂದಿಗೆ ಸ್ವೇಚ್ಛೆಯಾಗಿ ಭಾರತದಲ್ಲೆಲ್ಲ ಸುತ್ತಾಡುತ್ತ, ಪುಣ್ಯಕ್ಷೇತ್ರಗಳನ್ನು ಸಂದರ್ಶಿಸುತ್ತ, ತನ್ನ ಮುದ್ದು ರಾಮನಿಗೆ ಪರಮಪ್ರೀತಿಯಿಂದ ಆಯಾ ಸ್ಥಳಮಹಿಮೆಯನ್ನು ವರ್ಣಿ ಸುತ್ತ, ತನ್ನ ವಿಶಾಲ ವಿಮಲ ನಯನಗಳನ್ನು ಮತ್ತಷ್ಟು ಅರಳಿಸಿಕೊಂಡು ಆ ವರ್ಣನೆಯನ್ನು ಕೇಳುವ ಬಾಲರಾಮನ ಆನಂದವನ್ನು ಕಂಡು ತಾನೂ ಆನಂದಿ ಸುತ್ತ, ಧನ್ಯ ಜಟಾಧಾರಿ ಇದೀಗ ದಕ್ಷಿಣೇಶ್ವರದ ದಿವ್ಯಧಾಮಕ್ಕೆ ಬಂದಿಳಿದ.

ಜಟಾಧಾರಿ ಶ್ರೀರಾಮಚಂದ್ರನೊಂದಿಗೆ ಇಂತಹ ಅದ್ಭುತವಾದ ವಾತ್ಸಲ್ಯ ಪೂರ್ಣ ಸಂಬಂಧವನ್ನು ಹೊಂದಿದ್ದನಾದರೂ ಅದನ್ನು ಅವನು ಯಾರ ಮುಂದೂ ಹೇಳಿಕೊಂಡವನಲ್ಲ. ಅವನ ಅಂತರ್ದೃಷ್ಟಿಗೆ ಗೋಚರವಾಗುವ ಆ ದೃಶ್ಯಗಳು ಇತರ ಮರ್ತ್ಯರ ಬಾಹ್ಯದೃಷ್ಟಿಗೆ ಹೇಗೆತಾನೆ ಕಂಡಾವು ? ಆದ್ದರಿಂದ ಜನರು, 'ಈ ಸಂನ್ಯಾಸಿ ಸದಾಕಾಲವೂ ಒಂದು ಬೊಂಬೆಯನ್ನಿಟ್ಟುಕೊಂಡು ಅದರ ಪೂಜೆಯಲ್ಲಿ ತೊಡಗಿರು ತ್ತಾನೆ' ಎಂದಷ್ಟೇ ಭಾವಿಸಿದ್ದರು. ಏಕೆಂದರೆ ಅವರಿಗೆ ಕಾಣುತ್ತಿದ್ದುದು ಅಷ್ಟೇ. ಆದರೆ ಶ್ರೀರಾಮಕೃಷ್ಣರು ಮಾತ್ರ ಒಂದೇ ಸಲಕ್ಕೆ ಅವನ ಮಹಿಮೆಯನ್ನು ಪತ್ತೆಹಚ್ಚಿ ಬಿಟ್ಟರು! ಭಾವರಾಜ್ಯದ ಸಾರ್ವಭೌಮರಲ್ಲವೆ ಅವರು! ಜಟಾಧಾರಿಯನ್ನು ಕಂಡೊಡನೆಯೇ ಅವರ ಸೂಕ್ಷ್ಮಾತಿಸೂಕ್ಷ್ಮ ಅಂತರ್ದೃಷ್ಟಿಯು ಸ್ಥೂಲ ಪರದೆಗಳನ್ನು ಹರಿದು, ಅವನ ಅಂತರಾಳದ ರಹಸ್ಯವನ್ನು ಕಂಡುಕೊಂಡಿತು. ಆದ್ದರಿಂದ ಮೊದಲ ದರ್ಶನದಲ್ಲೇ ಅವರಿಗೆ ಆ ಸಂನ್ಯಾಸಿಯ ವಿಷಯದಲ್ಲಿ ತಾನೇತಾನಾಗಿ ಭಕ್ತಿಗೌರವ ಗಳುಂಟಾದುವು. ಆತನಿಗೆ ರಾಮಲಾಲನ ಸೇವೆಗಾಗಿ ಅವಶ್ಯವಿದ್ದ ಸಾಮಗ್ರಿಗಳನ್ನೆಲ್ಲ ಸಂತೋಷದಿಂದ ಒದಗಿಸಿಕೊಟ್ಟರು. ಪ್ರತಿದಿನವೂ ಅವನೊಂದಿಗೆ ಬಹಳಷ್ಟು ಸಮಯವನ್ನು ಕಳೆಯುತ್ತ, ಅವನು ಗೈಯುತ್ತಿದ್ದ ರಾಮಲಾಲನ ಸೇವೆಯನ್ನು ಭಕ್ತಿಯಿಂದ ಈಕ್ಷಿಸುತ್ತಿದ್ದರು. ಬಹು ಶೀಘ್ರದಲ್ಲೇ ಜಟಾಧಾರಿ–ರಾಮಕೃಷ್ಣರ ನಡುವೆ ಪರಸ್ಪರ ಗೌರವಪೂರ್ಣವಾದ ಅತಿನಿಕಟ ಬಾಂಧವ್ಯ ಬೆಳೆದುಬಂದಿತು.

೪೧

# ಲೀಲಾಮಯ ರಾಮಲಾಲ

ಜಟಾಧಾರಿಯ ಸಂಬಂಧದಿಂದ ಶ್ರೀರಾಮಕೃಷ್ಣರಲ್ಲಿ ರಾಮಚಂದ್ರನ ಮೇಲಿನ ಪ್ರೇಮ-ಭಕ್ತಿ ಮತ್ತೆ ಮೇಲೆದ್ದಿತು. ಬಾಲ್ಯದಿಂದಲೂ ಅವರಿಗೆ ತಮ್ಮ ಮನೆದೇವರಾದ ಶ್ರೀರಾಮನ ಮೇಲಿದ್ದ ಭಕ್ತಿಯ ಆಳವನ್ನು ಈಗಾಗಲೇ ಕಂಡಿದ್ದೇವೆ. ಅಲ್ಲದೆ ಭಕ್ತಾಗ್ರಣಿಯಾದ ಆಂಜನೇಯನನ್ನೇ ಆದರ್ಶವಾಗಿಟ್ಟುಕೊಂಡು ಅವರು ದಾಸ್ಯ ಭಾವ ಸಾಧನೆಮಾಡಿ ಕೃತಕೃತ್ಯರಾದುದನ್ನೂ ನೋಡಿದ್ದೇವೆ. ಆದ್ದರಿಂದ ರಾಮನ ಪೂಜೆ-ಆರಾಧನೆಯೇನೂ ಅವರಿಗೆ ಹೊಸತಲ್ಲ. ಆದರೆ ಅದೇ ರಾಮನನ್ನು ಅವರು ಈಗ ಕಾಣುತ್ತಿದ್ದ ದೃಷ್ಟಿ, ಅವನೊಂದಿಗೆ ಅವರ ಭಾವನಾ ಸಂಬಂಧ ಮಾತ್ರ ಸಂಪೂರ್ಣ ವಿಭಿನ್ನ. ಇದು ವಾತ್ಸಲ್ಯ ಭಾವ; ಹೆತ್ತ ತಾಯಿಗೆ ತನ್ನ ಶಿಶುವಿನ ಮೇಲಿರುವಂತಹ ಅಪೂರ್ವ ಅನಿರ್ವಚನೀಯ ಪ್ರೇಮ, ಆಕರ್ಷಣೆ. ಶ್ರೀರಾಮಕೃಷ್ಣರ ಅಂತರ್ಯದಲ್ಲಿ ಆ ದಿವ್ಯ ಶಿಶುವಿನ ಬಗೆಗೆ ಈ ವಿಧದ ಮಾತೃವಾತ್ಸಲ್ಯ ಉಕ್ಕಿಹರಿಯತೊಡಗಿತು. ಆದರೆ ಸ್ತ್ರೀಸಹಜವಾದ ಈ ವಾತ್ಸಲ್ಯ ಭಾವ ಶ್ರೀರಾಮಕೃಷ್ಣರಲ್ಲಿ ಉಕ್ಕುವಂತಾದುದು ಹೇಗೆ? ಇದೊಂದು ಸ್ವಾರಸ್ಯಕರ ಅಂಶ. ಆದರೆ ಇದನ್ನರಿಯಲು ಹೆಚ್ಚೇನೂ ಕಷ್ಟವಿಲ್ಲ. ಪ್ರತಿಯೊಬ್ಬ ಪುರುಷನ ಸ್ವಭಾವದಲ್ಲೂ ಒಂದಿಷ್ಟಾದರೂ ಸ್ತ್ರೀತ್ವದ ಅಂಶ ಇದ್ದೇ ಇರುತ್ತದೆ; ಹಾಗೆಯೇ ಪ್ರತಿಯೊಬ್ಬ ಸ್ತ್ರೀಯಲ್ಲೂ ಒಂದಿಷ್ಟು ಪುರುಷತ್ವ ಇರುತ್ತದೆ. ಎಳೆಯ ಹಸುಳೆಗಳನ್ನು ಕಂಡಾಗ ಎಂತಹ ಪುರುಷನ ಹೃದಯದಲ್ಲೂ ವಾತ್ಸಲ್ಯಭಾವ ಸಂಚಾರವಾಗುವುದಿಲ್ಲವೆ? ಹಾಗೆಯೇ ಕಠಿಣ ಪ್ರಸಂಗವೊದಗಿದಾಗ ಎಂತಹ ಸ್ತ್ರೀಯೂ ಅದನ್ನು ಪೌರುಷದಿಂದ ಎದುರಿಸುವುದು ಕಂಡುಬರುತ್ತದೆ. ಶ್ರೀರಾಮಕೃಷ್ಣರಲ್ಲಂತೂ ಈ ಸ್ತ್ರೀ–ಪುರುಷ ಅಂಶಗಳು ಸಮಪ್ರಮಾಣದಲ್ಲಿ ಮಿಳಿತಗೊಂಡಿದ್ದುವು. ಪುರುಷತ್ವದ ಅಂಶ ಮೇಲ್ಮಟ್ಟದಲ್ಲಿರುವಾಗ ಅವರು ಪುರುಷಸಿಂಹರೇ ಆಗಿರುತ್ತಿದ್ದರು; ಹಿಡಿದ ಕಾರ್ಯವನ್ನು ಸಾಧಿಸುವ ಪೌರುಷ ಎದ್ದುಕಾಣುತ್ತಿತ್ತು. ಯಾವುದೇ ವಿಷಯ ಅವರ ಗಮನಕ್ಕೆ ಬಂದರೂ ಅದನ್ನು ಕೆದಕಿ ಒಳಹೊಕ್ಕು ಅದರ ತಲಸ್ಪರ್ಶ ಮಾಡದೆ ಬಿಡುತ್ತಿದ್ದವರಲ್ಲ. ಹಾಗೆಯೇ ಅವರಲ್ಲಿ ಸ್ತ್ರೀತ್ವದ ಅಂಶ ಮೇಲ್ಮೈ ಆದಾಗ ಸಂಪೂರ್ಣ ಸ್ತ್ರೀಸಹಜ ನಡೆವಳಿಕೆಗಳು ಒಡಮೂಡುತ್ತಿದ್ದುವು. ಆಗ ಅವರು ಜಗತ್ತಿನ ಜನರನ್ನು, ವ್ಯವಹಾರಗಳನ್ನು ಅರಿಯುತ್ತಿದ್ದುದು ಬುದ್ಧಿಯ ಮೂಲಕವಲ್ಲ, ಹೃದಯದ ಮೂಲಕ! ಆಗ ಅವರು ತದ್ವತ್ ಸ್ತ್ರೀಯರಂತೆ ಸುಕೋಮಲ,

ಆದರೆ ಸಮಯ ಬಂದರೆ ಸುಕರಿಣ. ಆಗ ಅವರಲ್ಲಿ ಸ್ತ್ರೀಯರಂತೆ, ತಮಗೆ ಬೇಕೆನಿಸಿದ ವಸ್ತುಗಳಲ್ಲಿ ಗಾಢ ಆಸಕ್ತಿಯನ್ನು, ಮತ್ತು ಬೇಡವೆನಿಸಿದ ವಸ್ತುಗಳ ಕಡೆ ಕಣ್ಣೆತ್ತಿಯೂ ನೋಡದ ನಿರಾಸಕ್ತಿಯನ್ನು ಕಾಣಬಹುದಾಗಿತ್ತು. ಮುಂದೆ ಅವರು ಮಧುರಭಾವ ಸಾಧನೆಯಲ್ಲಿ ತೊಡಗುವಾಗ ಸ್ತ್ರೀಸಹಜ ಲಕ್ಷಣಗಳು ಮತ್ತಷ್ಟು ಸ್ಫುಟವಾಗಿ ವ್ಯಕ್ತಗೊಳ್ಳುವುದನ್ನು ನೋಡಲಿದ್ದೇವೆ.

ದಕ್ಷಿಣೇಶ್ವರಕ್ಕೆ ಜಟಾಧಾರಿ ಆಗಮಿಸುವ ಮುನ್ನವೇ ರಾಮಕೃಷ್ಣರಲ್ಲಿ ನಿಧಾನ ವಾಗಿ ಸ್ತ್ರೀಭಾವ ಜಾಗೃತವಾಗತೊಡಗಿತ್ತು. ಮಾನಸಿಕವಾಗಿಯೂ ಶಾರೀರಿಕ ವಾಗಿಯೂ ಅವರು ತಮ್ಮನ್ನು ಹೆಂಗಸೆಂಬಂತೆ ಭಾವಿಸಿ ಅದರಂತೆ ತಮ್ಮ ವರ್ತನೆ ಯನ್ನು ಮಾರ್ಪಡಿಸಿಕೊಂಡಿದ್ದರು. ವಾತ್ಸಲ್ಯಭಾವ ಸಾಧನೆಗೆ ಇದು ವಿಶೇಷ ಸಹ ಕಾರಿ. ಇಂತಹ ಸಾಧನೆಗೆ ಅವರು ತಮಗರಿವಿಲ್ಲದಂತೆಯೇ ಸಿದ್ಧರಾಗುತ್ತಿದ್ದರು. ಅವರೇ ಹೇಳುತ್ತಿದ್ದಂತೆ, ಜಗನ್ಮಾತೆಯೇ ಅವರನ್ನು ವಿವಿಧ ಸಾಧನೆಗಳಿಗೆ ಅಣಿ ಗೊಳಿಸುತ್ತಿದ್ದಳಲ್ಲವೆ? ಈಗಲೂ ಹಾಗೆಯೇ ಆಯಿತು. ಶ್ರೀರಾಮನನ್ನು ಒಬ್ಬ ಸುಂದರ ಬಾಲಕನ ರೂಪದಲ್ಲಿ ಕಂಡೊಡನೆಯೇ ಅವರಲ್ಲಿ ಮಾತೃವಾತ್ಸಲ್ಯ ತಾನೇತಾನಾಗಿ ಉಕ್ಕೇರಿತು. ಕೂಡಲೇ ಅವರಲ್ಲಿ ತಮ್ಮ ಈ ಹೊಸಭಾವಕ್ಕೆ ತಕ್ಕುದಾದ ಮಂತ್ರವನ್ನು ಶಾಸ್ತ್ರೋಕ್ತ ರೀತಿಯಲ್ಲಿ ಪಡೆದುಕೊಂಡು ಆ ಸಾಧನೆಯ ಅತ್ಯುನ್ನತ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬೇಕೆಂಬ ಉತ್ಕಟೇಚ್ಛೆ ಉದಿಸಿತು. ಏಕೆಂದರೆ, ಯಾವುದನ್ನೇ ಆಗಲಿ ಅವರು ಅರ್ಧಂಬರ್ಧ ಮಾಡಿ ಮುಗಿಸುವವರಲ್ಲ. ಪರಿಪೂರ್ಣತೆ ಎಂಬುದು ಅವರ ಸ್ವಭಾವಕ್ಕೇ ಅಂಟಿಕೊಂಡು ಬಂದದ್ದು. ಒಂದು ಅತಿ ಸಾಮಾನ್ಯವಾದ ದಿನನಿತ್ಯದ ಕೆಲಸದಿಂದ ಹಿಡಿದು ಅತ್ಯುನ್ನತ ಆಧ್ಯಾತ್ಮಿಕ ಸಾಧನೆಗಳವರೆಗೆ ಪ್ರತಿಯೊಂದರಲ್ಲೂ ಅವರ ಈ ಗುಣ ಎದ್ದೆದ್ದು ತೋರುತ್ತಿತ್ತು.

ಶ್ರೀರಾಮಕೃಷ್ಣರ ಇಚ್ಛೆ ಜಟಾಧಾರಿಗೆ ತಿಳಿಯಿತು. ಅವನು ಸ್ವತಃ ಆ ಮಂತ್ರದಲ್ಲಿ ಅನುಭವಸ್ಥ; ಸಿದ್ಧಿಯನ್ನು ಪಡೆದವನು. ರಾಮಕೃಷ್ಣರ ಯೋಗ್ಯತೆ ಯನ್ನರಿತಿದ್ದ ಆತ, ಅವರಿಗೆ ತನ್ನ ಇಷ್ಟದೇವತೆಯಾದ ಬಾಲರಾಮನ ಮಂತ್ರವನ್ನು ಸಂತೋಷದಿಂದ ಉಪದೇಶಿಸಿದ. ಶ್ರೀರಾಮಕೃಷ್ಣರೀಗ ಜಟಾಧಾರಿಯ ನಿರ್ದೇಶನ ದಲ್ಲಿ ರಾಮಮಂತ್ರ ಜಪ ನಿರತರಾದರು. ಎಂದಿನಂತೆ ಈ ಸಾಧನೆಯನ್ನು ಅವರು ಕೆಲವೇ ದಿನಗಳ ಅವಧಿಯಲ್ಲಿ ಪೂರೈಸಿ ಅದರ ಅತ್ಯುನ್ನತ ಗಮ್ಯಸ್ಥಾನವನ್ನು ತಲುಪಿದರು. ಈ ಮೂಲಕ ಅವರು ಸಾಧಿಸಿಕೊಂಡ ಸತ್ಯ ಇದು:

**"ಜೋ ರಾಮ್ ದಶರಥ ಕಾ ಬೇಟಾ**
**ವೋ ಹಿ ರಾಮ್ ಘಟ್ ಘಟ್ ಮೇ ಲೇಟಾ ।**
**ವೋ ಹಿ ರಾಮ್ ಜಗತ್ ಪಸೇರಾ**
**ವೋ ಹಿ ರಾಮ್ ಸಬ್ ಸೇ ನಿಯಾರಾ ॥"**

ಎಂದರೆ, 'ಯಾವ ಶ್ರೀರಾಮಚಂದ್ರನು ದಶರಥನ ಪುತ್ರನೋ ಅವನೇ ಪ್ರತಿ ಯೊಂದು ಜೀವಿಯ ಹೃದಯದಲ್ಲೂ ಒರಗಿಕೊಂಡಿದ್ದಾನೆ; ಅದೇ ರಾಮನೇ ಜಗದ್ರೂಪನಾಗಿ ಪ್ರಕಾಶಿತನಾಗಿದ್ದಾನೆ; ಮತ್ತು ಅದೇ ರಾಮನೇ ಎಲ್ಲರ ಪ್ರೀತಿಗೆ

ಪಾತ್ರನಾಗಿದ್ದಾನೆ.' ಶ್ರೀರಾಮಕೃಷ್ಣರು ಈ ಹಿಂದಿ ದ್ವಿಪದಿಯನ್ನು ಆಗಾಗ ತಮ್ಮಷ್ಟಕ್ಕೆ ಹೇಳಿಕೊಳ್ಳುತ್ತ ಆನಂದಪಡುತ್ತಿದ್ದರು.

'ರಾಮಲಾಲ'ನೊಂದಿಗೆ ಶ್ರೀರಾಮಕೃಷ್ಣರ ಸಂಬಂಧ ಹೇಗೆ ಬೆಳೆದುಬಂತು ಎನ್ನುವ ರೋಮಾಂಚಕರ ಕಥೆಯನ್ನು ಅವರ ಮಾತಿನಲ್ಲೇ ಕೇಳಬೇಕು. ಅದನ್ನವರು ತಮ್ಮ ಆಪ್ತಭಕ್ತರೊಡನೆ ಹೇಳುತ್ತಿದ್ದರು:

"...ಬಾಬಾಜಿ (ಜಟಾಧಾರಿ) ಬಹುಕಾಲದಿಂದಲೂ ಆ ಮೂರ್ತಿಯ ಸೇವೆ ಮಾಡಿಕೊಂಡು ಬರುತ್ತಿದ್ದ. ಅವನು ಹೋದಲ್ಲೆಲ್ಲ ಅದನ್ನು ತೆಗೆದುಕೊಂಡು ಹೋಗುತ್ತಿದ್ದ. ತನಗೆ ಭಿಕ್ಷೆಯಾಗಿ ದೊರೆತ ಧಾನ್ಯಗಳಿಂದ ಅಡಿಗೆ ಮಾಡಿ ನೈವೇದ್ಯ ನೀಡುತ್ತಿದ್ದ. ಅದನ್ನು ರಾಮಲಾಲ ನಿಜವಾಗಿಯೂ ತಿನ್ನುವುದನ್ನು ಆತ ಕಾಣು ತ್ತಿದ್ದ! ತಿನ್ನಲು ತನಗೆ ಅದು ಬೇಕು—ಇದು ಬೇಕು, ತಿರುಗಾಡಲು ಹೋಗಬೇಕು ಎಂದೆಲ್ಲ ರಾಮನು ಹಟಮಾಡುವುದನ್ನು ಕಣ್ಣಾರೆ ಕಾಣುತ್ತಿದ್ದ. ಆತನ ಸೇವೆ ಮಾಡುತ್ತ ಬಾಬಾಜಿ ಸದಾ ಆನಂದಪರವಶನಾಗಿ ಭಾವಾವಸ್ಥೆಯಲ್ಲಿರುತ್ತಿದ್ದ. ನಾನು ಕೂಡ ರಾಮಲಾಲನ ಆ ಲೀಲೆಗಳನ್ನೆಲ್ಲ ಕಾಣುತ್ತಲಿದ್ದೆ. ಇಪ್ಪತ್ತನಾಲ್ಕು ಗಂಟೆಯೂ ಬಾಬಾಜಿಯೊಂದಿಗಿದ್ದ ರಾಮಲಾಲನನ್ನೇ ದಿಟ್ಟಿಸುತ್ತ ಕುಳಿತಿರುತ್ತಿದ್ದೆ.

"ದಿನಗಳು ಕಳೆದಂತೆಲ್ಲ ರಾಮಲಾಲ ನನ್ನನ್ನು ಹೆಚ್ಚೆಚ್ಚು ಪ್ರೀತಿಸಲಾರಂಭಿಸಿದ. ನಾನು ಬಾಬನೊಂದಿಗಿರುವಷ್ಟು ಹೊತ್ತೂ ರಾಮಲಾಲ ಖುಷಿಯಾಗಿ ಆಟವಾಡಿಕೊಂಡಿರುತ್ತಿದ್ದ. ಆದರೆ ನಾನು ಅಲ್ಲಿಂದ ಹೊರಟು ನನ್ನ ಕೋಣೆಗೆ ಬಂದನೆಂದರೆ ಅವನೂ ನನ್ನ ಹಿಂದೆಯೇ ಬಂದುಬಿಡುತ್ತಿದ್ದ! ನಾನವನಿಗೆ ನನ್ನ ಕೋಣೆಗೆ ಬರಬಾರದೆಂದು ಹೇಳಿದರೂ ಅವನು ಒಳಗೆ ಬಂದೇಬಿಡುತ್ತಿದ್ದ! ಬಾಬಾಜಿಯೊಂದಿಗೆ ಇರುತ್ತಲೇ ಇರಲಿಲ್ಲ! ನಾನು ಮೊದಮೊದಲು ಇದೆಲ್ಲೋ ನನ್ನ ಮನಸ್ಸಿನ ಭ್ರಮೆ ಎಂದು ಭಾವಿಸಿದೆ. ಅಲ್ಲದೆ ಮತ್ತೇನು? ರಾಮಲಾಲ ಅಷ್ಟು ವರ್ಷಗಳಿಂದಲೂ ತನ್ನನ್ನು ಅಷ್ಟೊಂದು ಅಕ್ಕರೆಯಿಂದ ಸಲಹಿದ ಬಾಬನಿಗಿಂತ ಹೆಚ್ಚಾಗಿ ನನ್ನನ್ನು ಪ್ರೀತಿಸುವುದೆಂದರೆ ಎಲ್ಲಾದರೂ ಸಾಧ್ಯವೇ? ಖಂಡಿತ ಇಲ್ಲ—ಎಂದು ಭಾವಿಸಿದೆ. ಆದರೆ ಸುಮ್ಮನೆ ಭಾವಿಸುವುದರಿಂದೇನಾದೀತು? ನಾನು ಅದನ್ನೆಲ್ಲ ಕಣ್ಣಾರೆ ಕಾಣುತ್ತಿದ್ದೆನಲ್ಲ, ಈಗ ನಿಮ್ಮನ್ನು ಕಾಣುತ್ತಿರುವಂತೆಯೇ!

"ರಾಮಲಾಲ ಕುಣಿಕುಣಿಯುತ್ತ ನನ್ನ ಹಿಂದೆ ಮುಂದೆ ಸುತ್ತುತ್ತ ನನ್ನೊಡನೆಯೇ ಬರುತ್ತಿದ್ದ. ಕೆಲವು ಸಲ 'ನನ್ನನ್ನು ಎತ್ತಿಕೊ' ಎಂದು ಹಟ ಮಾಡುತ್ತಿದ್ದ. ಎತ್ತಿ ಮಡಿಲ ಮೇಲೆ ಕುಳ್ಳಿರಿಸಿಕೊಂಡರೋ, ಒಂದು ನಿಮಿಷವೂ ಅಲ್ಲಿರುವವನಲ್ಲ; ಇಳಿದು ಎಲ್ಲಿಗೋ ಓಡುತ್ತಿದ್ದ! 'ಬೇಡವೋ' ಎಂದರೂ, ಹೂ ಕೊಯ್ಯಲು ಮುಳ್ಳಿನ ಪೊದೆಗಳಿಗೆ ಹೋಗುತ್ತಿದ್ದ. ಗಂಗೆಯಲ್ಲಿಳಿದು ನೀರಾಟಕ್ಕೆ ತೊಡಗುತ್ತಿದ್ದ. 'ಮಗೂ, ಬೇಡಪ್ಪ, ಬಿಸಿಲಿನಲ್ಲಿ ಓಡಾಡಿದರೆ ಕಾಲಿನಲ್ಲಿ ಬೊಕ್ಕೆಯೇಳುತ್ತದೆ; ನೀರಿನಲ್ಲಿ ಅಷ್ಟುಹೊತ್ತು ಇರಬೇಡ ನೆಗಡಿ ಜ್ವರ ಹಿಡಿದುಕೊಳ್ಳುತ್ತದೆ' ಎಂದು ಮತ್ತೆ ಮತ್ತೆ ಹೇಳುತ್ತಿದ್ದೆ. ಆದರೆ ನಾನು ಎಷ್ಟು ಹೇಳಿದರೂ ಕೇಳಿಸಿಕೊಳ್ಳುತ್ತಲೇ ಇರಲಿಲ್ಲ. ನಾನು ಹೇಳುತ್ತಿರುವುದು ಬೇರೆ ಯಾರಿಗೋ ಎಂಬಂತೆ ನಿರ್ಲಕ್ಷ್ಯದಿಂದ

ತನ್ನ ಪಾಡಿಗೆ ತುಂಟಾಟವನ್ನು ಮುಂದುವರಿಸುತ್ತಿದ್ದ. ಒಮ್ಮೊಮ್ಮೆ ಕಮಲದಳಗಳಂತಿದ್ದ ತನ್ನ ಸುಂದರ ಕಂಗಳಿಂದ ನನ್ನತ್ತ ನೋಡುತ್ತ ಹಲ್ಲು ಕಿರಿಯುತ್ತಿದ್ದ; ಇಲ್ಲವೆ, ಬೇಕೆಂದೇ ಮತ್ತಷ್ಟು ತುಂಟಾಟ ಮಾಡುತ್ತಿದ್ದ. ತುಟಿಗಳನ್ನು ಉಬ್ಬಿಸಿಕೊಂಡು ಮುಖವನ್ನು ಸೊಟ್ಟಗೆ ಮಾಡಿಕೊಂಡು ಪರಿಹಾಸ್ಯ ಮಾಡುತ್ತಿದ್ದ. ಆಗ ನಾನು ನಿಜವಾಗಿಯೂ ಸಿಟ್ಟಿಗೆದ್ದು, 'ಎಲಾ ಘಟಿಂಗ, ತಾಳು ಇವತ್ತು ನಿನಗೆ ಸರಿಯಾಗಿ ಕೊಡುತ್ತೇನೆ ಕಜ್ಜಾಯ' ಎಂದು ಬೈದು ಅವನನ್ನು ಬಿಸಿಲಿನಿಂದ ಇಲ್ಲವೆ ನೀರಿನಿಂದ ಎಳೆದು ತರುತ್ತಿದ್ದೆ. ಯಾವುದಾದರೂ ಆಟಿಕೆಯನ್ನೋ ಮತ್ತೊಂದನ್ನೋ ಕೊಟ್ಟು ಸಂತೈಸಿ ಮನೆಯೊಳಗೆ ಆಡಿಕೊಳ್ಳಲು ಹೇಳುತ್ತಿದ್ದೆ. ಆದರೆ ಕಡೆಗೂ ಅವನ ತುಂಟಾಟವನ್ನು ತಡೆಯುವುದು ಸಾಧ್ಯವೇ ಆಗದಿದ್ದಾಗ ಒಂದೆರಡು ಪೆಟ್ಟನ್ನೂ ಕೊಡುತ್ತಿದ್ದೆ. ಆಗ ಅವನು ತನ್ನ ಸುಂದರವಾದ ಆ ತುಟಿಗಳನ್ನು ಉಬ್ಬಿಸಿಕೊಂಡು ಬಿಕ್ಕಿಬಿಕ್ಕಿ ಅಳುತ್ತ ಹನಿದುಂಬಿದ ಕಣ್ಣುಗಳಿಂದ ನನ್ನತ್ತಲೇ ದಿಟ್ಟಿಸುತ್ತಿದ್ದ. ಅವನು ಅಳುವುದನ್ನು ಕಂಡಾಗ ಮಾತ್ರ ನನ್ನಲ್ಲಿ ಅಸಹನೀಯ ಯಾತನೆಯಾಗುತ್ತಿತ್ತು. ತಕ್ಷಣ ಅವನನ್ನು ಬಿಗಿದಪ್ಪಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದುಮಾಡುತ್ತಿದ್ದೆ. ನಾನು ನಿಜಕ್ಕೂ ಇದನ್ನೆಲ್ಲ ಕಂಡೆ, ಹೀಗೆಲ್ಲ ಮಾಡಿದೆ!

"ಒಂದು ದಿನ ನಾನು ಸ್ನಾನಕ್ಕೆ ಹೊರಟಿದ್ದೆ. ಆಗ ಅವನು 'ನಾನೂ ಬರುತ್ತೇನೆ' ಎಂದು ಮೊಂಡು ಹಿಡಿದ. ಸರಿ, ಮತ್ತೇನು ಮಾಡುವುದು? ಕರೆದುಕೊಂಡು ಹೋದೆ. ಆದರೆ ನೀರಿಗಿಳಿದವನು ಈಚೆಗೇ ಬರಲೊಲ್ಲ! ನಾನೆಷ್ಟೆಷ್ಟು ಕರೆದರೂ ಕೇಳಿಸದವನಂತಿದ್ದು ಬಿಟ್ಟ. ಕಡೆಗೆ ನನಗೆ ರೇಗಿಹೋಯಿತು. ಅವನ ತಲೆಯನ್ನು ನೀರಿನಲ್ಲಿ ಅಮುಕಿ ಹಿಡಿದು, 'ಸರಿ, ತುಂಟಾ! ಈಗ ನೀರಿನಲ್ಲಿ ಎಷ್ಟು ಹೊತ್ತು ಬೇಕಾದರೂ ಇರು' ಎಂದೆ. ಆದರೆ ಮರುಕ್ಷಣವೇ, ಅವನು ನೀರಿನಲ್ಲಿ ತೇಕುತ್ತ ಒದ್ದಾಡುವುದನ್ನು ಕಂಡು, 'ಅಯ್ಯೋ! ಎಂಥ ಅನ್ಯಾಯ ಮಾಡಿದೆ!' ಎಂದು ನನ್ನನ್ನೇ ಬೈದುಕೊಳ್ಳುತ್ತ ಅವನನ್ನು ನೀರಿನಿಂದೆತ್ತಿ ಅಪ್ಪಿಕೊಂಡೆ.

"ಮತ್ತೊಂದು ದಿನವಂತೂ ರಾಮಲಾಲನ ವಿಷಯದಲ್ಲಿ ನನಗೆ ಎಷ್ಟು ಸಂಕಟವಾಯಿತು, ಅದೆಷ್ಟು ಅತ್ತೆ ಎಂದು ಹೇಳಲೇ ಸಾಧ್ಯವಿಲ್ಲ. ಅಂದು ಅವನು, 'ತಿನ್ನಲು ಏನಾದರೂ ಕೊಡು' ಎಂದು ಒಂದೇ ಸಮನೆ ಪೀಡಿಸುತ್ತಿದ್ದ. ಕಡೆಗೆ ಅವನನ್ನು ಸುಮ್ಮನಾಗಿಸಲು ಒಂದಿಷ್ಟು ಅರಳು ಕೊಟ್ಟೆ. ಆದರೆ ಅದರಲ್ಲಿ ಭತ್ತದ ಸಿಪ್ಪೆಯಿನ್ನೂ ಸ್ವಲ್ಪ ಉಳಿದಿತ್ತೆಂದು ಕಾಣುತ್ತದೆ. ಆಮೇಲೆ ನೋಡುತ್ತೇನೆ—ಆ ಸಿಪ್ಪೆ ಚುಚ್ಚಿ, ಅವನ ಎಳಸಾದ ನಾಲಿಗೆ ಸೀಳಿ ರಕ್ತ ಬರುತ್ತಿದೆ! ಅಯ್ಯೋ...! ಆಗ ನನಗೆ ಅದೆಷ್ಟು ಸಂಕಟವಾಯಿತು ಅಂತ! ಅವನನ್ನು ಮಡಿಲಲ್ಲಿ ಕುಳ್ಳಿರಿಸಿಕೊಂಡು ಗಟ್ಟಿಯಾಗಿ ಅತ್ತುಬಿಟ್ಟೆ. ಅವನ ಗಲ್ಲವನ್ನು ಹಿಡಿದುಕೊಂಡು, 'ಅಯ್ಯೋ, ನಾನೆಂಥ ಮೂರ್ಖ! ಎಲ್ಲಿ ಈ ಮೃದುವಾದ ಬಾಯಿಗೆ ನೋವಾದೀತೋ ಎಂದು ನಿನ್ನ ತಾಯಿ ಕೌಸಲ್ಯಾದೇವಿ ಹಾಲಿನ ಕೆನೆ, ಬೆಣ್ಣೆಯನ್ನೂ ಕೂಡ ಎಷ್ಟು ಎಚ್ಚರದಿಂದ ತಿನ್ನಿಸುತ್ತಿದ್ದಳು! ಅಂತಹ ಬಾಯಿಗೆ ದೌರ್ಭಾಗ್ಯವಂತನಾದ ನಾನು ನಾಚಿಕೆಯಿಲ್ಲದೆ ಇಂತಹ ದರಿದ್ರ ಪದಾರ್ಥವನ್ನು ತಿನ್ನಿಸಿದೆನಲ್ಲ!' ಎಂದು ಗೋಳಾಡಿದೆ."

ಹೀಗೆ ತಮ್ಮ ಶಿಷ್ಯರೆದುರು ಹೇಳುತ್ತಹೇಳುತ್ತಲೇ ಶ್ರೀರಾಮಕೃಷ್ಣರಿಗೆ ತಮ್ಮ ಅಂದಿನ ದುಃಖ ಮರುಕಳಿಸಿತು; ಅದನ್ನು ತಾಳಲಾರದೆ ಎಲ್ಲರೆದುರಿನಲ್ಲೇ ಕಣ್ಣೀರ್ಗರೆಯುತ್ತ ಅತ್ತುಬಿಟ್ಟರು ! ಈ ಪರಮಾದ್ಭುತ ವೃತ್ತಾಂತವನ್ನು ಕೇಳಿ, ಅಂದಿನ ಆ ದಿವ್ಯ ದೃಶ್ಯವನ್ನು ಈಗ ಕಣ್ಣೆದುರಿಗೇ ಕಾಣುತ್ತಿದ್ದೇವೆಯೋ ಎಂಬಂತೆ ಅಲ್ಲಿದ್ದ ಭಕ್ತರೆಲ್ಲ ಸ್ತಂಭೀಭೂತರಾದರು. ಅವರ ಕಂಗಳಲ್ಲಿಯೂ ಅಶ್ರುಧಾರೆ ಒಸರಿತು.

ಆದರೆ ಇಂತಹ ಅತಿಮಾನುಷ ವ್ಯಾಪಾರದ ಬಗ್ಗೆ ಕೇಳಿದಾಗ ನಮ್ಮಲ್ಲಿ, ನಮ್ಮಂಥವರಲ್ಲಿ, ಏಳುವ ಭಾವನೆಯಾದರೂ ಎಂಥದು ? ಸಾಧಾರಣ ಮಾನವರು ಇದನ್ನು ಎಷ್ಟರಮಟ್ಟಿಗೆ ಅರ್ಥಮಾಡಿಕೊಂಡಾರು ? ಶ್ರೀರಾಮಕೃಷ್ಣರ ಬಾಯಿಂದ ಈ ವೃತ್ತಾಂತವನ್ನೆಲ್ಲ ನೇರವಾಗಿ ಆಲಿಸಿದ ಭಾಗ್ಯವಂತರಲ್ಲಿ ಅವರ ನೇರಶಿಷ್ಯರಲ್ಲೊಬ್ಬರಾದ ಸ್ವಾಮಿ ಶಾರದಾನಂದರೂ ಇದ್ದರು. 'ಶ್ರೀರಾಮಕೃಷ್ಣ ಲೀಲಾಪ್ರಸಂಗ' ಎಂಬ ಚರಿತ್ರಾರ್ಹ ಮೇರು ಕೃತಿಯಲ್ಲಿ ಅವರು, ತಮ್ಮನ್ನು ಕೂಡ ಸಾಮಾನ್ಯ ಮರ್ತ್ಯರಲ್ಲಿ ಒಬ್ಬನಂತೆ ಭಾವಿಸಿ, ಹೀಗೆ ಬರೆಯುತ್ತಾರೆ:

"ರಾಮಲಾಲನ ಬಗ್ಗೆ ಇಂತಹ ವಿಷಯಗಳನ್ನೆಲ್ಲ ಕೇಳಿದ ನಾವು—ಮಾಯೆಯ ಕಾರಾಗೃಹದಲ್ಲಿ ಬಂಧಿಸಲ್ಪಟ್ಟ ನಾವು—ದಂಗು ಬಡಿದು ಕುಳಿತುಬಿಟ್ಟೆವು. ನಮಗೂ ಈ ವಿಗ್ರಹದಲ್ಲಿ ಅವನೇನಾದರೂ ಜೀವಂತನಾಗಿ ಕಂಡಾನೆಯೋ ಎಂದು ಬೆರಗುಗಣ್ಣಿನಿಂದ ಅವನನ್ನೇ ದಿಟ್ಟಿಸಿದೆವು. ಆದರೆ, ಅಯ್ಯೋ ! ನಮಗಲ್ಲಿ ತಣ್ಣನೆಯ ಲೋಹವಲ್ಲದೆ ಮತ್ತಿನ್ನೇನೂ ಕಾಣಲಿಲ್ಲ. ಅದು ಹೇಗೆತಾನೆ ಕಾಣಬೇಕು ? ಅವನ ಬಗ್ಗೆ ಶ್ರೀರಾಮಕೃಷ್ಣರಿಗಿದ್ದ ಉತ್ಕಟ ಪ್ರೇಮ ನಮ್ಮಲ್ಲೆಲ್ಲಿತ್ತು ? ಜೀವಂತ ರಾಮಲಾಲನನ್ನು ನಮ್ಮ ಒಳಗೂ ಹೊರಗೂ ಕಾಣಲು ಯಾವ 'ಪ್ರೇಮದ ದೃಷ್ಟಿ' ಅವಶ್ಯವೋ ಅದನ್ನು ಶ್ರೀರಾಮಕೃಷ್ಣರು ಪಡೆದಿದ್ದರು. ಆದರೆ ನಮ್ಮಲ್ಲಿ ಆ ಪ್ರೇಮ ಅಷ್ಟರಮಟ್ಟಿಗೆ ಬಲಿತಿರಲಿಲ್ಲ. ನಮಗೆ ಕಾಣುವುದು ಆ ಪುಟ್ಟ ವಿಗ್ರಹವೊಂದೇ. ಅದನ್ನು ನೋಡಿ ನಾವಂದುಕೊಳ್ಳುತ್ತೇವೆ, 'ರಾಮಕೃಷ್ಣರು ಹೇಳಿದುದೆಲ್ಲ ನಿಜಕ್ಕೂ ನಡೆದಿರಬಹುದೆ ? ಅಥವಾ, ಎಂದಾದರೂ ನಡೆಯಲು ಸಾಧ್ಯವೆ ?' ಎಂದು. ಆಧ್ಯಾತ್ಮಿಕ ಪ್ರಪಂಚದ ಎಲ್ಲ ವಿಷಯಗಳಲ್ಲೂ ನಮ್ಮದು ಇದೇ ಕಥೆ. ಅಪನಂಬಿಕೆಯ ಹೊರೆಯನ್ನೇ ತಲೆಯ ಮೇಲೆ ಹೊತ್ತು ಕುಳಿತಿದ್ದೇವೆ."

ರಾಮಲಾಲನ ಲೀಲೆಯನ್ನು ಶ್ರೀರಾಮಕೃಷ್ಣರು ಮತ್ತೆ ಹೀಗೆ ಬಣ್ಣಿಸುತ್ತಾರೆ:

"ಕೆಲವು ದಿನ ಬಾಬಾಜಿ ಅಡಿಗೆ ಮಾಡಿ ರಾಮಲಾಲನಿಗೆ ನೈವೇದ್ಯ ನೀಡೋಣವೆಂದು ನೋಡಿದರೆ ಅವನ ಪತ್ತೆಯೇ ಇರುತ್ತಿರಲಿಲ್ಲ. ಬಾಬಾಜಿ ದುಃಖಿತನಾಗಿ ಅವನನ್ನು ಹುಡುಕುತ್ತ ಇಲ್ಲಿಗೆ (ತಮ್ಮ ಕೋಣೆಗೆ) ಬಂದರೆ ಅವನು ಇಲ್ಲಿ ಆಟವಾಡುತ್ತ ಇರುತ್ತಿದ್ದ. ಆಗ ಆತ ಖಿನ್ನಮನಸ್ಕನಾಗಿ, 'ನೋಡು, ನಾನು ನಿನಗೋಸ್ಕರ ಅಷ್ಟೆಲ್ಲ ಕಷ್ಟಪಟ್ಟು ಅಡಿಗೆ ಮಾಡಿ, ನಿನ್ನನ್ನು ಎಲ್ಲೆಲ್ಲೋ ಹುಡುಕುತ್ತಿದ್ದೇನೆ; ನೀನು ಮಾತ್ರ ಅದರ ಪರಿವೆಯೇ ಇಲ್ಲದೆ ಇಲ್ಲಿ ನಿಶ್ಚಿಂತನಾಗಿದ್ದೀಯೆ ! ಆಹ್, ನಿನ್ನ ಸ್ವಭಾವವೇ ಅಷ್ಟು. ನಿನಗೆ ಕಿಂಚಿತ್ತೂ ದಯೆಯಾಗಲಿ ಪ್ರೀತಿಯಾಗಲಿ ಇಲ್ಲ. ತಂದೆತಾಯಂದಿರನ್ನೇ ಬಿಟ್ಟು ಕಾಡಿಗೆ ಹೋದವನಲ್ಲವೆ ನೀನು ! ಪಾಪ, ನಿನ್ನ

ತಂದೆ ನಿನಗಾಗಿ ಅತ್ತು ಅತ್ತು ಪ್ರಾಣವನ್ನೇ ಬಿಟ್ಟ. ಅವನಿಗೊಮ್ಮೆ ಕಾಣಿಸಿಕೊಳ್ಳಲೂ ಕೂಡ ಹಿಂದಿರುಗದಿದ್ದವನು ನೀನು' ಎಂದು ದೂಷಿಸಿ, ಅವನನ್ನು ಎಳೆದುಕೊಂಡು ಹೋಗಿ ಊಟ ತಿನ್ನಿಸುತ್ತಿದ್ದ. ಎಷ್ಟೋ ದಿನ ಇದು ಹೀಗೆಯೇ ನಡೆಯಿತು. ಆ ಸಾಧು ಇಲ್ಲಿ ಬಹಳ ಕಾಲ ಇದ್ದ. ಏಕೆಂದರೆ ರಾಮಲಾಲ ನನ್ನನ್ನು ಬಿಟ್ಟುಹೋಗಲು ಇಷ್ಟಪಡಲಿಲ್ಲ. ಅವನನ್ನು ಬಿಟ್ಟು ಸಾಧು ಹೇಗೆ ತಾನೆ ಹೋದಾನು ?

"ಕಡೆಗೊಂದು ದಿನ ಬಾಬಾಜಿ ಅಶ್ರುನಯನನಾಗಿ ನನ್ನಲ್ಲಿಗೆ ಬಂದು ನುಡಿದ: 'ನಾನಿನ್ನು ಹೊರಟೆನಪ್ಪ. ರಾಮಲಾಲ ನನ್ನ ಮೇಲೆ ಕೃಪೆ ಮಾಡಿ ನನ್ನ ಮನದ ಇಚ್ಛೆಯ ಪ್ರಕಾರವೇ ದರ್ಶನ ನೀಡಿದ್ದಾನೆ. ತನ್ಮೂಲಕ ನನ್ನ ಜೀವಿತದ ಉದ್ದೇಶ ವನ್ನು ಈಡೇರಿಸಿದ್ದಾನೆ. ಅವನು ಇಲ್ಲಿಂದ ಇನ್ನೆಲ್ಲಿಗೂ ಬರುವುದಿಲ್ಲೆಂದು ಹೇಳಿ ಬಿಟ್ಟ. ಅವನಿಗೆ ನಿಮ್ಮನ್ನು ಬಿಟ್ಟು ಹೋಗಲು ಮನಸ್ಸಿಲ್ಲ. ಆದರೆ ಈಗ ನನ್ನ ಮನಸ್ಸಂತೂ ದುಃಖದುಗುಡಗಳಿಂದ ಮುಕ್ತವಾಗಿದೆ. ಏಕೆಂದರೆ ಅವನು ನಿಮ್ಮೊಂ ದಿಗೆ ಆಟವಾಡುತ್ತ ಸದಾ ಸಂತೋಷದಿಂದಿದ್ದಾನೆ. ಅದನ್ನು ಕಂಡೇ ನನಗೀಗ ಅತ್ಯಾನಂದವಾಗುತ್ತಿದೆ. ಈಗ ನಾನು ಎಂತಹ ಸ್ಥಿತಿಯಲ್ಲಿದ್ದೇನೆಂದರೆ, ಅವನ ಸುಖವೇ ನನ್ನ ಸುಖವೆಂಬಂತೆ ತೋರುತ್ತಿದೆ. ಆದ್ದರಿಂದ ನಾನೀಗ ಅವನನ್ನು ನಿಮ್ಮ ಬಳಿ ಬಿಟ್ಟು ಬೇರೆಡೆಗೆ ಹೋಗಬಲ್ಲೆ. ಅವನು ನಿಮ್ಮೊಂದಿಗೆ ಸಂತೋಷದಿಂದಿದ್ದಾ ನೆಂದು ಅರಿತು ನಾನು ಕೂಡ ಸಂತೋಷದಿಂದಿರುತ್ತೇನೆ.' ಹೀಗೆ ಹೇಳಿದ ಬಾಬಾಜಿ ರಾಮಲಾಲನನ್ನು ನನಗೊಪ್ಪಿಸಿ ಹೊರಟುಹೋದ. ಅಂದಿನಿಂದ ರಾಮಲಾಲ ಇಲ್ಲಿಯೇ ಇದ್ದಾನೆ."

ತನಗೆ ಪ್ರಾಣಸಮನಾಗಿದ್ದ ರಾಮಲಾಲನನ್ನು ಜಟಾಧಾರಿ, ಶ್ರೀರಾಮಕೃಷ್ಣರಿಗೆ ಕೊಟ್ಟುಬಿಟ್ಟನಲ್ಲ! ಅಲ್ಲದೆ ಅದರಿಂದಾಗಿ ತನಗೆ ಸ್ವಲ್ಪವೂ ದುಃಖವಾಗಲಿ ಸಂಕಟ ವಾಗಲಿ ಇಲ್ಲವೆಂದು ಹೇಳಿದನಲ್ಲ! ಹಾಗೆ ಕೊಟ್ಟುಬಿಡಲು ಅವನಿಗೆ ಮನಸ್ಸಾದರೂ ಹೇಗೆ ಬಂದಿರಬಹುದೊ? ಅಥವಾ, ಅವನ ಅಂತರಾಳದೊಳಗೇ ಒಂದಿನಿತು ಕೊರಗು ಇದ್ದಿರಬಹುದೆ?—ಎಂಬ ಪ್ರಶ್ನೆಗಳು ನಮ್ಮಲ್ಲೇಳಬಹುದು.

ಇದಕ್ಕೆ ಉತ್ತರ ಸ್ಪಷ್ಟವಾಗಿಯೇ ಇದೆ. 'ಇವನು ನನಗಿಂತ ಹೆಚ್ಚಾಗಿ ಈ ರಾಮಕೃಷ್ಣರನ್ನು ಪ್ರೀತಿಸುತ್ತಿದ್ದಾನಲ್ಲಾ!' ಎಂದು ಸಂಕಟ ಪಡುತ್ತ ಅವನು ರಾಮಲಾಲನನ್ನು ಬಿಟ್ಟುಹೋದದ್ದಲ್ಲ. ನಿಜಕ್ಕೂ ಅವನ ಮನಸ್ಸೀಗ ಸುಖದುಃಖ ಗಳ ಹಂತವನ್ನು ಮೀರಿ ಬಹುದೂರ ಸಾಗಿತ್ತು. ಶ್ರೀರಾಮಕೃಷ್ಣರ ದಿವ್ಯ ಸಹವಾಸ ದಲ್ಲಿ ಅವನು ಸ್ವಾರ್ಥಗಂಧರಹಿತವಾದ ಪರಮ ಪರಿಶುದ್ಧ ಪ್ರೇಮವನ್ನು ಆಸ್ವಾದಿಸಿದ್ದ. ಮತ್ತು ಅದರ ಪರಿಣಾಮವಾಗಿ, ತಾನಿನ್ನು ತನ್ನ ಪ್ರಿಯತಮ ರಾಮಲಾಲನಿಂದ ಮತ್ತೆಂದೂ ಅಗಲುವ ಭಯವಿಲ್ಲವೆಂದು ಅವನಿಗೆ ತಿಳಿಯಿತು. ಪರಿಶುದ್ಧ ಪ್ರೇಮದ ಮೂರ್ತರೂಪನಾದ ತನ್ನ ರಾಮಲಾಲ ಸದಾ ತನ್ನೊಡನೆಯೇ ಇರುತ್ತಾನೆ, ಮತ್ತು ಬೇಕೆನಿಸಿದಾಗಲೆಲ್ಲ ತನಗೆ ದರ್ಶನ ನೀಡುತ್ತಾನೆ ಎಂಬುದು ಅವನ ಮನಸ್ಸಿಗೆ ಸ್ಥಿರವಾಯಿತು. ಆದ್ದರಿಂದಲೇ ಜಟಾಧಾರಿ ತನಗೆ ಪ್ರಾಣಪ್ರಿಯ ನಾದ ರಾಮಲಾಲನನ್ನು ನಿಶ್ಚಿಂತೆಯಿಂದ ಬಿಟ್ಟುಹೋದನೆಂಬುದು ನಿಸ್ಸಂಶಯ.

# ಮಧುರಭಾವದ ಮಾಧುರ್ಯ

ಭಕ್ತಿಪಂಥದ ಆಚಾರ್ಯರು ಐದು ಪ್ರಧಾನ ಭಾವಗಳನ್ನು ಗುರುತಿಸಿದ್ದಾರೆ — ಶಾಂತ, ದಾಸ್ಯ, ವಾತ್ಸಲ್ಯ, ಸಖ್ಯ, ಮಧುರ — ಇವೇ ಆ ಐದು ಭಾವಗಳು. ಈ ಭಾವಗಳ ಮೂಲಕ ನಾವು ಸಾಧಿಸಬಹುದಾದ ಗುರಿ ಯಾವುದೆಂದರೆ ಸಗುಣ ಬ್ರಹ್ಮನ ಸಾಕ್ಷಾತ್ಕಾರ. ನಮ್ಮನಮ್ಮ ಇಷ್ಟದೇವತೆಯಾಗಿ ಆರಾಧಿಸಲ್ಪಡುವವನು ಈ ಸಗುಣಬ್ರಹ್ಮನೇ. ನಿತ್ಯ-ಶುದ್ಧ-ಬುದ್ಧ-ಮುಕ್ತ; ಅವನು ಸರ್ವಶಕ್ತಿವಂತ, ಸರ್ವ ನಿಯಾಮಕ. ಸಾಧಕನಾದವನು ಇಂತಹ ಭಗವಂತನನ್ನು ಈ ಪಂಚಭಾವಗಳ ಪೈಕಿ ಯಾವುದಾದರೊಂದರ ನೆರವಿನಿಂದ ಸಾಕ್ಷಾತ್ಕರಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಅವನ ಪ್ರಯತ್ನಕ್ಕೆ ತಕ್ಕಂತೆ ಸರ್ವಾಂತರ್ಯಾಮಿಯೂ ಸರ್ವಭಾವಗಳ ಆಧಾರ ಸ್ವರೂಪನೂ ಆದ ಭಗವಂತನೂ ಕೂಡ ಸಾಧಕನ ಏಕಭಾವವನ್ನು ಕಾಣುತ್ತಾನೆ; ಮತ್ತು ಅವನ ಭಾವವನ್ನು ಪುಷ್ಟೀಕರಿಸಲು ಆ ಭಾವಕ್ಕೆ ಅನುಗುಣವಾದ ರೂಪದಲ್ಲಿ ದರ್ಶನ ನೀಡಿ ಅವನನ್ನು ಕೃತಕೃತ್ಯನನ್ನಾಗಿಸುತ್ತಾನೆ. ಹೀಗೆ ಶುದ್ಧಚೈತನ್ಯ ಸ್ವರೂಪನಾದ ಭಗವಂತನು ವಿವಿಧ ಕಾಲಗಳಲ್ಲಿ ವಿವಿಧ ಭಾವಗಳ ಅಧಿಷ್ಠಾತೃ ದೇವತೆಯಾಗಿ ರೂಪತಾಳುತ್ತಾನೆ. ಅಲ್ಲದೆ ಭಕ್ತರ ಮನೋಭಿಲಾಷೆಗಳನ್ನು ಈಡೇರಿಸಲು ಮಾನವರೂಪದಲ್ಲೂ ಅವತರಿಸಿಬರುವನೆಂದು ಶಾಸ್ತ್ರಗಳು ಸಾರುತ್ತವೆ.

ನಾವಿಲ್ಲಿ ಒಂದು ಸ್ವಾರಸ್ಯಕರವಾದ ಸಂಗತಿಯನ್ನು ಗಮನಿಸಬಹುದು. ಭಗವಂತನ ಸಾಕ್ಷಾತ್ಕಾರಕ್ಕೆ ಉಪಾಯಗಳೆಂದು ಹೇಳಲಾಗುವ ಪಂಚಭಾವಗಳು ಮೂಲತಃ ಮನುಷ್ಯನಿಗೆ ಸ್ವಭಾವಸಹಜವಾದವುಗಳೇ ಎಂಬುದು ಆ ಅಂಶ. ಲೋಕದಲ್ಲಿ ಜನರು ಯಾವ ಲೌಕಿಕ ಭಾವಗಳನ್ನು ಅವಲಂಬಿಸಿ ಪರಸ್ಪರ ಸಂಬಂಧದಲ್ಲಿರುತ್ತಾರೋ, ಆ ಭಾವಗಳ ಸೂಕ್ಷ್ಮವೂ ಶುದ್ಧವೂ ಆದ ಪ್ರತಿರೂಪಗಳೇ ಈ ಪಂಚಭಾವಗಳು. ಸಮಾಜದಲ್ಲಿ ಯಾವುದೇ ಒಬ್ಬ ವ್ಯಕ್ತಿಗೆ, ತನ್ನ ತಂದೆ ತಾಯಿ ಪತಿ ಪತ್ನಿ ಮಗ ಮಗಳು ಸ್ನೇಹಿತ ಸ್ನೇಹಿತೆ ಒಡೆಯ ಸೇವಕ ಗುರು ಶಿಷ್ಯ ರಾಜ ಪ್ರಜೆ ಮೊದಲಾದ ಪ್ರತಿಯೊಬ್ಬರೊಡನೆಯೂ ಒಂದೊಂದು ಬಗೆಯ ವಿಶಿಷ್ಟವಾದ ಪ್ರೀತಿ-ವಿಶ್ವಾಸದ ಸಂಬಂಧವಿರುತ್ತದೆ. ಅಲ್ಲದೆ, ವೈರಿಗಳಲ್ಲದಿದ್ದರೆ, ತನಗೆ ಯಾವರೀತಿಯಲ್ಲೂ ಸಂಬಂಧಿಸದ ವ್ಯಕ್ತಿಯೊಂದಿಗೆ ಕೂಡ ಶಾಂತವೂ ಗೌರವವೂ ಆದ ರೀತಿಯಲ್ಲಿ ನಡೆದುಕೊಳ್ಳುವುದು ಲೋಕರೂಢಿ. ಭಕ್ತಿಪಂಥದ ಆಚಾರ್ಯರು ಈ ಸಂಬಂಧಗಳನ್ನೇ ಶಾಂತ ದಾಸ್ಯ ಸಖ್ಯ ವಾತ್ಸಲ್ಯ ಮಧುರ ಭಾವಗಳೆಂದು

ಪಂಚಭಾವಗಳಾಗಿ ವಿಂಗಡಿಸಿದ್ದಾರೆ. ಮತ್ತು ಪ್ರತಿಯೊಬ್ಬನೂ ಇವುಗಳಲ್ಲಿ ತನ್ನ ತನ್ನ ಮನೋಧರ್ಮಕ್ಕೆ ಒಗ್ಗುವಂತಹ ಒಂದು ಭಾವವನ್ನಾರಿಸಿಕೊಂಡು, ಭಗವಂತನೊಂದಿಗೆ ಆ ಬಗೆಯ ಪ್ರೇಮಸಂಬಂಧವನ್ನಿರಿಸಿಕೊಂಡು ಮುಂದುವರಿಯುವಂತೆ ಬೋಧಿಸಿದ್ದಾರೆ. ಏಕೆಂದರೆ ತಿಮಗೆ ಈಗಾಗಲೇ ಪರಿಚಿತವಾಗಿರುವ ಈ ಭಾವಗಳ ಮೂಲಕ ಭಗವಂತನನ್ನು ಅರಿಯಲು ಪ್ರಯತ್ನಿಸುವುದು ಜೀವರಿಗೆ ಸುಲಭಸಾಧ್ಯ. ಅಷ್ಟುಮಾತ್ರವಲ್ಲ, ಎಲ್ಲಿಯವರೆಗೆ ಈ ಭಾವಗಳು ಸ್ವಾರ್ಥಪ್ರೇರಿತವಾದ ಪ್ರಾಪಂಚಿಕ ಸಂಬಂಧಗಳ ಹಿನ್ನೆಲೆಯಲ್ಲಿರುತ್ತವೆಯೋ ಅಲ್ಲಿಯವರೆಗೆ ಅವು ಮಾನವನಲ್ಲಿ ಕೇವಲ ರಾಗದ್ವೇಷಾದಿ ವಿಕಾರಗಳನ್ನು ಉಂಟುಮಾಡುತ್ತವೆ; ತನ್ಮೂಲಕ ಅವನನ್ನು ದುಷ್ಕೃತ್ಯಗಳಲ್ಲಿ ತೊಡಗಿಸುತ್ತವೆ. ಆದರೆ ಇದೇ ಭಾವಗಳನ್ನು ಉದಾತ್ತೀಕರಿಸಿ ಭಗವಂತನೆಡೆಗೆ ತಿರುಗಿಸಿದಾಗ, ಅವು ಸಾಧಕನನ್ನು ಭಗವತ್ಸಾಕ್ಷಾತ್ಕಾರದೆಡೆಗೊಯ್ಯುವ ಪ್ರಬಲ ಸಾಧನಗಳಾಗುತ್ತವೆ. ಉದಾಹರಣೆಗೆ ಸಕಲ ದುಃಖಪರಂಪರೆಯ ಮೂಲವಾದ ಕಾಮವನ್ನು ತೆಗೆದುಕೊಳ್ಳಿ. ಒಂದು ದೃಷ್ಟಿಯಿಂದ, ಇದನ್ನು ಹೃದಯದ ಕಾಯಿಲೆ ಎನ್ನಬಹುದೇನೊ. ಈ ಕಾಮವನ್ನೇ ಭಗವಂತನೆಡೆಗೆ ಹರಿಯಿಸಿದರೆ ಅದು ಭಗವಂತನ ದರ್ಶನಕ್ಕಾಗಿ ವ್ಯಾಕುಲತೆಯಂತೆ ಪ್ರಕಟವಾಗುತ್ತದೆ. ಈಗ ಆ ಸಾಧಕನು ಭಗವತ್ಪ್ರೇಮದಿಂದ ಮತ್ತನಾಗಿ ಭಗವಂತನ ದಿವ್ಯ ಸೌಂದರ್ಯವನ್ನು ಸವಿಯಲು ಉತ್ಕಂಠಿತನಾಗುತ್ತಾನೆ. ಭಗವಂತನ ದರ್ಶನಲಾಭ ಹೊಂದಿದ ಸಾಧಕರಲ್ಲಿ ಜ್ವಲಿಸುವ ಆಧ್ಯಾತ್ಮಿಕ ತೇಜಸ್ಸನ್ನು ಕಂಡು ತಾನೂ ಅದನ್ನು ಗಳಿಸಿ ಕೃತಕೃತ್ಯನಾಗಲು ಹಂಬಲಿಸುತ್ತಾನೆ.

ಇಬ್ಬರು ಪ್ರೇಮಿಗಳ ನಡುವಣ ಸಂಬಂಧವು ವೃದ್ಧಿಯಾಗುವ ಕ್ರಮವನ್ನು ಪರಿಶೀಲಿಸಿ ನೋಡಿದಾಗ ಒಂದು ಅಂಶವನ್ನು ಗಮನಿಸಬಹುದು. ಅದೇನೆಂದರೆ ಲೌಕಿಕ ದೃಷ್ಟಿಯಿಂದ ಅವರಿಬ್ಬರ ಸ್ಥಾನಮಾನಗಳಲ್ಲಿ ಎಷ್ಟೇ ಅಂತರವಿರಲಿ, ನೈಜ ಪ್ರೇಮವು ವೃದ್ಧಿಯಾದಂತೆಲ್ಲ ಈ ತಾರತಮ್ಯ ಕಡಿಮೆಯಾಗುತ್ತ ಬಂದು ನಶಿಸಿಯೇ ಹೋಗುತ್ತದೆ. ಅಂತೆಯೇ ಒಬ್ಬ ಸಾಧಕನು ಯಾವುದೇ ಭಾವದಿಂದ ಸಾಧನೆ ಮಾಡುತ್ತಿರಬಹುದು; ಭಗವಂತನ ಮೇಲಿನ ಆತನ ಪ್ರೇಮ ಹೆಚ್ಚು ಉತ್ಕಟವಾದಂತೆಲ್ಲ, ಅವನಿಗೆ ಭಗವಂತನ ಅನಂತ ಶಕ್ತಿಸಾಮರ್ಥ್ಯದ ಕಲ್ಪನೆ ಅಳಿಸಿಯೇ ಹೋಗುತ್ತದೆ. ಬದಲಾಗಿ 'ಭಗವಂತ ನನ್ನ ಪ್ರಿಯತಮ' ಎಂಬ ಆತ್ಮೀಯತೆಯ ಭಾವ ಬೆಳಗತೊಡಗುತ್ತದೆ. ಹೀಗೆ ಈ ಭಾವಸಾಧನೆಯಲ್ಲಿ ತೊಡಗಿದ ಸಾಧಕನು ಪ್ರೇಮದ ಮೂಲಕ ಭಗವಂತನನ್ನು ತನ್ನವನನ್ನಾಗಿಯೇ ಮಾಡಿಕೊಂಡುಬಿಡುತ್ತಾನೆ. ಒಬ್ಬ ಬಾಲಕನಂತೆ ಯಾವ ಭಯ–ಸಂಕೋಚವಿಲ್ಲದೆ ಬೇಡುತ್ತಾನೆ, ಕಾಡುತ್ತಾನೆ, ಹಟ ಹಿಡಿಯುತ್ತಾನೆ; ಜಗಳವಾಡಲೂ ಹಿಂಜರಿಯುವುದಿಲ್ಲ! ಭಕ್ತನು ಭಗವಂತನ ಶಕ್ತಿ ಸಾಮರ್ಥ್ಯಗಳನ್ನು ಎಷ್ಟೆಷ್ಟು ಮರೆಯುತ್ತಾನೋ, ಮತ್ತು ಅವನ ಪ್ರೇಮ–ಮಾಧುರ್ಯಗಳನ್ನಷ್ಟೇ ಅನುಭವಿಸುತ್ತ ಹೋಗುತ್ತಾನೋ, ಅಷ್ಟಷ್ಟರ ಮಟ್ಟಿಗೆ ಅವನು ಆ ಭಾವದಲ್ಲಿ ಮುಂದುವರಿದಿದ್ದಾನೆ ಎಂದರ್ಥ. ಭಕ್ತಿಪಂಥದ ಆಚಾರ್ಯರು ಈ ಪಂಚಭಾವಗಳಲ್ಲಿ 'ಇದು ಉತ್ತಮ, ಇದು ಮಧ್ಯಮ' ಎಂಬ

ತಾರತಮ್ಯವನ್ನು ಮಾಡಿರುವುದೂ ಕೂಡ ಈ ಅಳತೆಗೋಲಿನಿಂದಲೇ. ಈ ದೃಷ್ಟಿಯಿಂದ ಪಂಚಭಾವಗಳಲ್ಲಿ ಮಧುರಭಾವಕ್ಕೆ ಅತ್ಯುನ್ನತ ಸ್ಥಾನ. ಭಕ್ತ–ಭಗವಂತರ ನಡುವೆ ಅತಿನಿಕಟ ಸಂಬಂಧವೇರ್ಪಡುವುದು ಈ ಭಾವದಲ್ಲಿ. ಆದರೆ ಸಾಧಕನನ್ನು ಭಗವತ್ಸಾಕ್ಷಾತ್ಕಾರದ ಗುರಿಯೆಡೆಗೆ ಒಯ್ಯುವಲ್ಲಿ ಯಾವ ಭಾವವೂ ಕಡಮೆಯದೇನಲ್ಲ ಎಂಬುದನ್ನು ಮರೆಯುವಂತಿಲ್ಲ.

ಸಾಧಕನ ಮನಸ್ಸು ಯಾವುದಾದರೊಂದು ಭಾವದ ಪರಿಣಾಮವಾಗಿ ಭಗವಂತನೆಡೆಗೆ ಆಕರ್ಷಿತವಾಯಿತೆಂದರೆ, ಕ್ರಮೇಣ ಅದು ಆ ಭಾವದಲ್ಲೇ ಸಂಪೂರ್ಣ ತನ್ಮಯವಾಗಿಬಿಡುತ್ತದೆ; ಬಾಹ್ಯ ಜಗತ್ತಿನಿಂದ ವಿಮುಖವಾಗಿ ಆತ್ಮನೊಳಗೆ ಮುಳುಗುತ್ತದೆ. ಆದರೆ ಇದು ಅಷ್ಟು ಸುಲಭವಾಗಿ ನಡೆಯುವ ಕಾರ್ಯವಲ್ಲ. ಮನಸ್ಸು ಹಾಗೆ ತನ್ಮಯವಾಗಲೆತ್ನಿಸಿದಾಗ, ಅದರ ಪೂರ್ವಸಂಸ್ಕಾರಗಳೆಲ್ಲ ಅಡ್ಡವಾಗಿ ನಿಂತು ಭಗವದ್ಭಾವವನ್ನು ಹೊರತಳ್ಳುತ್ತವೆ. ಆದ್ದರಿಂದ ಸಾಮಾನ್ಯ ವ್ಯಕ್ತಿಗಳ ಮನಸ್ಸಿಗೆ, ಜೀವನವಿಡೀ ಪ್ರಯತ್ನಪಟ್ಟರೂ ಒಂದು ಭಾವದಲ್ಲಿ ದೃಢವಾಗಿ ನಿಲ್ಲಲು ಸಾಧ್ಯವಾಗದಿರಬಹುದು. ಅಂಥವರು ಈ ವಿಫಲತೆಯಿಂದ ಉತ್ಸಾಹಶೂನ್ಯರಾಗಿ ಕ್ರಮೇಣ ಪ್ರಯತ್ನವನ್ನೇ ಬಿಟ್ಟುಬಿಡಲೂಬಹುದು.

ಈ ಭಾವಗಳಲ್ಲಿ ಒಂದನ್ನಾದರೂ ಅವಲಂಬಿಸಿ ಸಾಧನೆ ಮಾಡಲು ಪ್ರಯತ್ನಿಸದಿದ್ದವರಿಗೆ, ಸಾಧಕನಾದವನ ಮನದೊಳಗೆ ಈ ಸಾಧನೆಯ ಹಂತದಲ್ಲಿ ಎಂತಹ ಪ್ರಚಂಡ ಹೋರಾಟ ನಡೆಯುತ್ತದೆ ಎಂಬುದರ ಕಲ್ಪನೆ ಮೂಡುವುದು ಅಸಾಧ್ಯ. ಆದ್ದರಿಂದ ಶ್ರೀರಾಮಕೃಷ್ಣರು ಹೇಗೆ ಒಂದಾದನಂತರ ಒಂದರಂತೆ ಎಲ್ಲಭಾವಗಳಲ್ಲೂ ತಮ್ಮ ಮನಸ್ಸನ್ನು ತನ್ಮಯಗೊಳಿಸಲು ಸಮರ್ಥರಾದರು ಎಂಬುದನ್ನು ಕಂಡ ಅನುಭವಸ್ಥರಾರೂ ವಿಸ್ಮಯಮೂಕರಾಗದಿರುವುದಿಲ್ಲ. ಶ್ರೀರಾಮಕೃಷ್ಣರದು ನಿಸ್ಸಂಶಯವಾಗಿಯೂ ಅಸಾಧಾರಣ ಮನಸ್ಸು ಎಂಬುದು ಅವರಿಗೆ ಗೋಚರವಾಗುತ್ತದೆ.

'ಮಧುರ ಭಾವ'ವು ಈ ಜಗತ್ತಿಗೆ ಶ್ರೀಚೈತನ್ಯನೇ ಮೊದಲಾದ ವೈಷ್ಣವ ಆಚಾರ್ಯರ ಶ್ರೇಷ್ಠ ಕೊಡುಗೆ ಎಂದು ಹೇಳಲ್ಪಟ್ಟಿದೆ. ಆ ವಿಧಾನವನ್ನು ಅವರು ಬೋಧಿಸಿ ತೋರಿಸಿಕೊಡದಿದ್ದರೆ ಎಷ್ಟೋ ಜನರಿಗೆ ಭಗವತ್ಸಾಕ್ಷಾತ್ಕಾರಕ್ಕೆ ಉಪಾಯವೇ ಇಲ್ಲದಂತಾಗುತ್ತಿತ್ತು. ಮತ್ತು ಅವರು ಆ ಸಾಧನೆಯಿಂದ ಉಂಟಾಗುವ ಶಾಂತಿ–ಆನಂದಗಳಿಂದ ವಂಚಿತರಾಗುತ್ತಿದ್ದರು. ಶ್ರೀಕೃಷ್ಣನ ಬೃಂದಾವನ ಲೀಲೆಯು ಕೇವಲ ವ್ಯರ್ಥವಲ್ಲ; ಅದೊಂದು ಮಹತ್ತರ, ಅರ್ಥಪೂರ್ಣ ಸಂಗತಿಯೆಂಬುದನ್ನು ಅರಿತುಕೊಂಡು, ಇತರರಿಗೂ ತಿಳಿಸಿಕೊಡುವ ಪ್ರಯತ್ನ ಮಾಡಿದ ಮೊದಲಿಗರೆಂದರೆ ಈ ವೈಷ್ಣವ ಆಚಾರ್ಯರು.

ಆದರೆ ಅನೇಕರ ಮನದಲ್ಲಿ ಒಂದು ಸಂಶಯವೇಳುತ್ತದೆ—'ಶ್ರೀಕೃಷ್ಣನ ಬೃಂದಾವನ ಲೀಲೆ ನಿಜಕ್ಕೂ ನಡೆಯಿತೆಂಬುದಕ್ಕೆ ಸಾಕ್ಷ್ಯವಾದರೂ ಏನಿದೆ? ಈಗ ಅದೇನಾದರೂ ಸುಳ್ಳೆಂದಾದರೆ, ಅದಕ್ಕೆ ಸಂಬಂಧಿಸಿದ ಆನಂದ, ಭಾವ, ವಿರಹ—ಈ ಪ್ರತಿಯೊಂದೂ ಅರ್ಥಹೀನವಾಗಿಬಿಡುವುದಿಲ್ಲವೆ?' ಎಂದು. ನಡೆಯಿತು ಎನ್ನು

ವುದಕ್ಕೆ ಪುರಾವೆಯಿಲ್ಲದಿದ್ದರೆ ನಡೆಯಲಿಲ್ಲ ಎನ್ನುವುದಕ್ಕಾದರೂ ಪುರಾವೆಯೇನಿದೆ ? — ಎನ್ನುವುದು ಒಂದು ಬಗೆಯ ಉತ್ತರ. ಇನ್ನೊಂದು ಅಂಶವೇನೆಂದರೆ, ಬೃಂದಾವನದಲ್ಲಿ ಲೀಲೆ ನಡೆದದ್ದು ಸುಳ್ಳು ಎಂದು ಸಾಬೀತಾದರೂ ಅದರಿಂದ ಭಕ್ತರ ಶ್ರದ್ಧೆ ಕಿಂಚಿತ್ತೂ ಸಡಿಲವಾಗಬೇಕಿಲ್ಲ. ಬೃಂದಾವನದಲ್ಲಿ ಭಗವಂತನ ನಿತ್ಯಲೀಲೆಯೇನೂ ಅದರಿಂದ ನಿಲ್ಲುವುದಿಲ್ಲ. ಭಾವರಾಜ್ಯದಲ್ಲಿ ಆ ಲೀಲೆ ಚಿರಕಾಲ ಮುಂದುವರಿಯುತ್ತಲೇ ಇರುತ್ತದೆ. ರಾಧಾಕೃಷ್ಣರ ಈ ಅಪೂರ್ವ ಲೀಲೆಯನ್ನು ಕಾಣಬೇಕೆಂಬುವರು ಅದನ್ನು ತಮ್ಮ ಚಿನ್ಮಯಧಾಮದಲ್ಲೇ—ಎಂದರೆ ಅಂತರಂಗದಲ್ಲೇ—ಕಾಣಬಹುದು. ಆದರೆ ಅದಕ್ಕೆ ಮೊದಲು ತಮ್ಮ ಮನೋವಾಕ್ಕಾಯಗಳನ್ನು ಕಾಮಗಂಧವಿಲ್ಲದಂತೆ ಶುದ್ಧಗೊಳಿಸಿಕೊಳ್ಳಬೇಕು. ರಾಧೆಯ ಸಖಿಯರಲ್ಲೊಬ್ಬಳಂತೆ ನಿಷ್ಕಾಮಸೇವೆಯ ಅಭ್ಯಾಸ ಮಾಡಬೇಕು. ಆಗ ಶ್ರೀಹರಿಯ ಲೀಲಾಸ್ಥಾನವಾದ ವೃಂದಾವನವು ತಮ್ಮ ಮನಸ್ಸಿನಲ್ಲೇ ಶಾಶ್ವತವಾಗಿ ನೆಲಸಿರುವುದನ್ನು ಮತ್ತು ಆ ಲೀಲೆಯು ತಮ್ಮ ಅಂತರಂಗದಲ್ಲೇ ನಿತ್ಯವೂ ನಡೆವುದನ್ನು ಕಾಣಬಹುದು. ಈ ಮಾತಿಗೆ ಸಂತರ ಸರ್ವಾನುಮತವಿದೆ.

ಶ್ರೀಕೃಷ್ಣನ ಬೃಂದಾವನಲೀಲೆಯ ಸೌಂದರ್ಯವನ್ನೂ ಮಾಧುರ್ಯವನ್ನೂ ಅರಿತು ಆಸ್ವಾದಿಸುವುದು ಎಲ್ಲರಿಗೂ ಸಾಧ್ಯವಾಗುವಂಥದಲ್ಲ. ಹಾಗೆ ಅದನ್ನು ಅರಿತುಕೊಳ್ಳಬೇಕಾದರೆ ಮೊದಲಿಗೆ ಭಾವರಾಜ್ಯವನ್ನು ಸಂಪೂರ್ಣಸತ್ಯವೆಂದು ಒಪ್ಪಿ ಭಕ್ತಿಭಾವಗಳ ಇತಿಹಾಸವನ್ನು ಪರಿಶುದ್ಧ ಹೃದಯದಿಂದ ಅಧ್ಯಯನ ಮಾಡಬೇಕಾಗುತ್ತದೆ. ಮುಂದೊಮ್ಮೆ ಶ್ರೀರಾಮಕೃಷ್ಣರು ತಮ್ಮ ಶಿಷ್ಯರ ಮುಂದೆ ಆ ದಿವ್ಯಲೀಲೆಯನ್ನು ಭಾವಪೂರ್ಣವಾಗಿ ಉತ್ಸಾಹದಿಂದ ಬಣ್ಣಿಸುತ್ತಾರೆ. ಆದರೆ ಆಂಗ್ಲ ವಿದ್ಯಾಭ್ಯಾಸ ಪಡೆದ ಆ ನವಯುವಕರಿಗೆ ಅದು ಅಷ್ಟೊಂದು ರುಚಿಸಿದಂತೆ ಕಾಣಲಿಲ್ಲ. ಸೂಕ್ಷ್ಮಮತಿಗಳಾದ ರಾಮಕೃಷ್ಣರಿಗೆ ಅದಕ್ಕೆ ಕಾರಣ ತಿಳಿಯದಿದ್ದೀತೆ ? ಭಾಗವತದಲ್ಲಿ ಬಣ್ಣಿಸಿರುವ ಆ ರಾಸಲೀಲೆಯೆಂಬುದು ಕೇವಲ ಅರ್ಥವಿಲ್ಲದ ಗೊಡ್ಡು ಪುರಾಣ, ಅನೈತಿಕ ಸಂಬಂಧದ ಅಶ್ಲೀಲ ಬಣ್ಣನೆ ಎಂಬುದು ಆ ಯುವಕರ ಅಭಿಪ್ರಾಯ. ಮೇಲ್ನೋಟಕ್ಕೇ ಜುಗುಪ್ಸೆಯುಂಟುಮಾಡುವಂತಿರುವ ಈ ಕಥೆಯನ್ನು ಇವರು ದಿವ್ಯಾದ್ಭುತವೆಂದು ಬಣ್ಣಿಸುತ್ತಾರಲ್ಲ ಎಂದು ಆಶ್ಚರ್ಯ ಕೂಡ. ಇದನ್ನರಿತ ಶ್ರೀರಾಮಕೃಷ್ಣರು ತಾವಾಗಿಯೇ ಹೇಳುತ್ತಾರೆ:

"ಆ ಲೀಲೆಯಲ್ಲಿನ ಇತರ ವರ್ಣನೆಗಳನ್ನೆಲ್ಲ ಮರೆತು ನೀವು ಶ್ರೀಕೃಷ್ಣನ ಮೇಲೆ ರಾಧೆಯ ಹೃದಯದ ಸೆಳೆತವನ್ನು ಮಾತ್ರ ಗಮನಿಸಿ ಹಿಡಿದುಕೊಳ್ಳಬಾರದೇಕೆ ? ಒಬ್ಬ ವ್ಯಕ್ತಿಗೆ ಭಗವಂತನ ಮೇಲೆ ಅಂತಹ ಆಕರ್ಷಣೆಯಿದ್ದುದೇ ಆದರೆ ಅವನು ಖಂಡಿತವಾಗಿಯೂ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಆ ಗೋಪಿಕಾ ಸ್ತ್ರೀಯರು ತಮ್ಮ ಗಂಡ, ಮಕ್ಕಳು, ಕುಲ, ಶೀಲ, ಮಾನಾಪಮಾನ, ಲಜ್ಜೆ, ಜುಗುಪ್ಸೆ, ಲೋಕಭಯ, ಸಮಾಜಭಯ ಮುಂತಾದುವನ್ನೆಲ್ಲ ತೊರೆದು ಕೃಷ್ಣನಿಗಾಗಿ ಹೇಗೆ ಹುಚ್ಚರಾಗಿದ್ದರೆಂಬುದನ್ನು ನೋಡಿ ! ಹಾಗೆ ಮಾಡಲು ಸಾಧ್ಯವಾದರೆ ಮಾತ್ರ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು."

ಬಳಿಕ ಮತ್ತೆ ಹೇಳುತ್ತಾರೆ: "ಸಂಪೂರ್ಣ ಕಾಮಗಂಧರಹಿತನಾಗಿರದಿದ್ದರೆ ಮಹಾಭಾವದ ಮೂರ್ತರೂಪಿಣಿಯಾದ ರಾಧೆಯ ಆಧ್ಯಾತ್ಮಿಕ ಭಾವವನ್ನು ಅರಿಯುವುದು ಸಾಧ್ಯವೇ ಇಲ್ಲ. ಸಚ್ಚಿದಾನಂದಘನನಾದ ಕೃಷ್ಣನನ್ನು ಕಂಡೊಡನೆಯೇ ಗೋಪಿಕೆಯರ ಹೃದಯದಲ್ಲಿ ಸುರತಸುಖಕ್ಕಿಂತ ಕೋಟಿಕೋಟಿ ಪಾಲು ಹೆಚ್ಚಿನ ಆನಂದವುಂಟಾಗುತ್ತಿತ್ತು; ಆಗ ಅವರು ದೇಹಪ್ರಜ್ಞಾಶೂನ್ಯರಾಗುತ್ತಿದ್ದರು. ಆಹ್! ಈ ತುಚ್ಛವಾದ ಸುರತಸುಖದ ಆಲೋಚನೆ ಅವರ ಮನಸ್ಸಿನಲ್ಲಿ ಸುಳಿಯಲಾದರೂ ಸಾಧ್ಯವಿತ್ತೆ? ಶ್ರೀಕೃಷ್ಣನಿಂದ ಹೊರಹೊಮ್ಮುತ್ತಿದ್ದ ದಿವ್ಯ ಜ್ಯೋತಿ ಅವರನ್ನು ಸ್ಪರ್ಶಿಸಿ, ಅವರ ಶರೀರದಿಂದ ಪ್ರತಿಯೊಂದು ರೋಮಕೂಪದಲ್ಲೂ ವರ್ಣನಾತೀತವಾದ ಆನಂದವನ್ನುಂಟುಮಾಡುತ್ತಿತ್ತು."

ಅವರಿವರ ವಿಷಯವೇಕೆ? ಸ್ವತಃ ಸ್ವಾಮಿ ವಿವೇಕಾನಂದರು ಯುವಕರಾಗಿದ್ದಾಗ, ಎಂದರೆ ನರೇಂದ್ರನಾಗಿದ್ದಾಗ, ರಾಧಾ–ಕೃಷ್ಣರ ಲೀಲೆಯ ಕಥೆಯನ್ನು ನಂಬದೆ ತಿರಸ್ಕಾರದಿಂದ ನೋಡುತ್ತಿದ್ದರು. ಒಮ್ಮೆ ಆ ವಿಷಯದ ಪ್ರಸ್ತಾವ ಬಂದಾಗ ಶ್ರೀರಾಮಕೃಷ್ಣರ ಸಮ್ಮುಖದಲ್ಲಿ ನರೇಂದ್ರ ರಾಸಲೀಲೆಯ ಐತಿಹಾಸಕತೆಯ ಬಗ್ಗೆ ತೀವ್ರ ಆಕ್ಷೇಪವನ್ನೆತ್ತಿ ಅದು ಸುಳ್ಳೆಂದು ಸಾಬೀತು ಮಾಡಲು ಪ್ರಯತ್ನಿಸಿದ. ಆಗ ರಾಮಕೃಷ್ಣರೆನ್ನುತ್ತಾರೆ, "ಆಯಿತು, ಆಯಿತು; ರಾಧೆ ಎನ್ನುವವಳು ಎಂದೂ ಇರಲಿಲ್ಲವೆಂದೇ ಇಟ್ಟುಕೊಳ್ಳೋಣ. ಮತ್ತು ರಾಧೆಯ ವ್ಯಕ್ತಿತ್ವವು ಯಾರೋ ಒಬ್ಬ ಪ್ರೇಮೀ ಸಾಧಕನ ಕಲ್ಪನೆಯೆಂದೇ ಭಾವಿಸೋಣ. ಆದರೆ ಆ ವ್ಯಕ್ತಿತ್ವವನ್ನು ಕಲ್ಪಿಸಿದಾಗ ಆ ಸಾಧಕನು ರಾಧೆಯ ದಿವ್ಯ ಭಾವದಲ್ಲೇ ತನ್ಮಯನಾಗಿ ತನ್ಮೂಲಕ ಆತ ರಾಧೆಯೇ ಆಗಿರಬೇಕು ಎಂದು ನೀನು ಒಪ್ಪುವೆಯಲ್ಲವೆ? ಎಂದ ಮೇಲೆ ಬೃಂದಾವನ ಲೀಲೆಯು ಬಾಹ್ಯ ಪ್ರಪಂಚದಲ್ಲಿ ಕೂಡ ನಡೆದದ್ದು ನಿಜವೆಂದಾಗುತ್ತದೆಯಲ್ಲವೆ?" ಇದನ್ನು ನರೇಂದ್ರ ಅನುಮೋದಿಸಲೇ ಬೇಕಾಯಿತು.

ನಿಜ; ಶ್ರೀಕೃಷ್ಣ ಪರಮಾತ್ಮನ ಆ ವೃಂದಾವನ ಲೀಲೆಯ ವಿಷಯದಲ್ಲಿ ಎಷ್ಟೇ ಆಕ್ಷೇಪಣೆಗಳು ಎದ್ದರೂ ಶ್ರೀಚೈತನ್ಯ ಮಹಾಪ್ರಭುವೂ ಮತ್ತಿತರ ಮಹಾ ಆಚಾರ್ಯರೂ ಅನ್ವೇಷಿಸಿ, ತಮ್ಮ ಪವಿತ್ರ ಜೀವನಗಳಲ್ಲಿ ಆಚರಿಸಿ ತೋರಿಸಿ ಕೊಟ್ಟ ಮಧುರಭಾವ ಸಂಬಂಧವು ಎಂದೆಂದಿಗೂ ಸತ್ಯವಾಗಿ ಉಳಿಯುತ್ತದೆ.

## ಪುರುಷದೇಹ – ಸ್ತ್ರೀಭಾವ

ಮಧುರಭಾವ! ಪತಿ-ಪತ್ನಿಯರ ಸಂಬಂಧದಲ್ಲಿ ಕಂಡುಬರುವ ಪ್ರಧಾನ ಭಾವ ಈ ಮಧುರ ಭಾವ. ಈ ಭಾವ ಲೌಕಿಕ ಮಟ್ಟದಲ್ಲಿಯೇ ಉಳಿದರೆ ಇದರಿಂದ ದೊರೆಯುವುದು ತಾತ್ಕಾಲಿಕ ಭೋಗಸುಖ. ಇದನ್ನೇ ಅಲೌಕಿಕವಾಗಿ ಬಳಸಿ ಕೊಂಡಾಗ ಪ್ರಾಪ್ತವಾಗುವುದೇ ಶಾಶ್ವತವಾದ ಯೋಗಸುಖ; ಅದುವೇ ಪರಮಾತ್ಮನ ಪರಮಾನಂದ. ನಾವು ಈಗಾಗಲೇ ತಿಳಿದಂತೆ ಮಧುರಭಾವ ಸಾಧನೆ ಯೆಂಬುದು ಭಕ್ತಿಪಂಥದ ಮಹಾಚಾರ್ಯರು ಕಂಡುಹುಡುಕಿದ ಒಂದು ದಿವ್ಯೋಪಾಯ.

ಪರಮಾತ್ಮನನ್ನೇ ಪತಿಯೆಂದು ಭಾವಿಸಿ ಸಾಧನೆಗೈಯುವ ಈ ವಿಧಾನ ಸ್ತ್ರೀಯರಿಗೆ ಸಹಜವಾದದ್ದು; ಆದ್ದರಿಂದ ಅವರಿಗದು ಸುಲಭಸಾಧ್ಯ. ಆದರೆ ಪುರುಷಶರೀರಿಯಾದ ಶ್ರೀರಾಮಕೃಷ್ಣರು ಈ ಬಗೆಯ ಸಾಧನೆಯನ್ನೆಸಗುವ ಸಾಹ ಸಕ್ಕೆ ತೊಡಗುತ್ತಾರೆ. ಹಿಡಿದ ಪ್ರತಿಯೊಂದು ಕಾರ್ಯವನ್ನೂ ಜಗನ್ಮಾತೆಯ ಅಪಾರ ಕೃಪೆಯಿಂದ ಎರಡುಮೂರು ದಿನಗಳಲ್ಲೇ ಮುಗಿಸಿ ಯಶಸ್ವಿಯಾದವರಲ್ಲವೆ ಅವರು! ಅಲ್ಲದೆ ಅವರ ವ್ಯಕ್ತಿತ್ವದಲ್ಲಿ ಸ್ತ್ರೀ-ಪುರುಷ ಅಂಶಗಳು ಸಮಾನವಾಗಿ ಮಿಳಿತಗೊಂಡಿರುವ ವಿಷಯವನ್ನು ನಾವು ಈ ಹಿಂದೆಯೇ ಕಂಡಿದ್ದೇವೆ. ಆದ್ದರಿಂದ ಅವರು ಈ ಅಪೂರ್ವ ಸಾಧನೆಗೆ ನಿಶ್ಶಂಕೆಯಿಂದ ಮುಂದಾಗಿಯೇಬಿಟ್ಟರು.

ಶ್ರೀರಾಮಕೃಷ್ಣರ ಸ್ವಭಾವ ಎಂತಹದೆಂದರೆ, ಅವರ ಪರಿಶುದ್ಧವಾದ ಏಕಾಗ್ರ ಮನಸ್ಸಿನಲ್ಲಿ ಯಾವುದೇ ಹೊಸ ಆಧ್ಯಾತ್ಮಿಕ ಭಾವ ಮೂಡಲಿ, ಕೂಡಲೇ ಅವರು ಆ ಭಾವದಲ್ಲಿ ಮುಳುಗಿಹೋಗುತ್ತಿದ್ದರು. ತಾತ್ಕಾಲಿಕವಾಗಿ ಆ ಒಂದು ಭಾವವೇ ಅವರ ಮನಸ್ಸನ್ನು ಸಂಪೂರ್ಣ ಆಕ್ರಮಿಸಿ ಇತರೆಲ್ಲ ಭಾವಗಳನ್ನೂ ಅಳಿಸಿಹಾಕು ತ್ತಿತ್ತು; ಮತ್ತು ಅವರ ಶರೀರವು ಆ ಭಾವದ ಸಾಧನೆಗೆ ಅತ್ಯಂತ ಸೂಕ್ತವಾದ ಸಾಧನವಾಗಿ ತನ್ನಷ್ಟಕ್ಕೇ ಮಾರ್ಪಡುತ್ತಿತ್ತು! ಅವರು ಒಂದು ಹಾಡನ್ನು ಹಾಡು ತ್ತಲೋ, ಆಲಿಸುತ್ತಲೋ ಯಾವುದಾದರೊಂದು ಭಾವದಲ್ಲಿ ಮುಳುಗಿದ್ದಾಗ, ಆ ಭಾವಕ್ಕೆ ಹೊಂದದ ಮತ್ತೊಂದು ಹಾಡನ್ನು ಯಾರಾದರೂ ಹಾಡಿದಲ್ಲಿ ಅವರಿಗೆ ಅತೀವ ವೇದನೆಯಾಗುತ್ತಿತ್ತು. ಮನಸ್ಸು ಒಂದೇ ವಸ್ತುವಿನಲ್ಲಿ ಏಕಾಗ್ರಗೊಂಡು ಆ ಭಾವದಲ್ಲಿಯೇ ಲೀನವಾಗಿರುವ ಇಂತಹ ಸ್ಥಿತಿಯನ್ನು ಪತಂಜಲಿ ಮಹರ್ಷಿಗಳು 'ಸವಿಕಲ್ಪ ಸಮಾಧಿ' ಎಂದು ಕರೆದಿದ್ದಾರೆ. ಇದನ್ನೇ ಭಕ್ತಿಗ್ರಂಥಗಳಲ್ಲಿ

'ಭಾವಸಮಾಧಿ' ಎಂದು ಕರೆಯಲಾಗಿದೆ.

ಬಾಲ್ಯದಿಂದಲೇ ರಾಮಕೃಷ್ಣರ ಮನಸ್ಸು ಅಂತಹ ಸ್ಥಿತಿಯಲ್ಲಿ ನೆಲೆನಿಲ್ಲಲು ಸಮರ್ಥವಾಗಿತ್ತೆಂಬುದನ್ನು ಕಂಡಿದ್ದೇವೆ. ಅವರು ಆಧ್ಯಾತ್ಮಿಕ ಸಾಧನೆಗಳನ್ನು ಮಾಡಲು ತೊಡಗಿದಾಗ ಅವರ ಈ ಸ್ವಭಾವದಲ್ಲೊಂದು ಹೊಸ, ಅದ್ಭುತ ತಿರುವು ಮೂಡಿತು. ಅಲ್ಲಿಯವರೆಗೂ ಅವರ ಮನಸ್ಸು ಯಾವುದಾದರೊಂದು ಭಾವದಲ್ಲಿ ಸ್ವಲ್ಪಹೊತ್ತು ವಿಲಗ್ನವಾಗಿದ್ದು ಬಳಿಕ ಮತ್ತೊಂದು ಭಾವದೆಡೆಗೆ ತಿರುಗುತ್ತಿತ್ತು. ಆದರೆ ಈಗ ಅವರ ಮನಸ್ಸಿನಲ್ಲಿ ಒಂದು ಭಾವ ಮೂಡಿತೆಂದರೆ ಅದು ಅತ್ಯುನ್ನತ ಹಂತದವರರೆಗೂ ಏರಿ, ಅದರಾಚೆಗಿನ ಅದ್ವೈತಭಾವದ ಪ್ರಕಾಶವನ್ನು ಕಾಣುವ ವರೆಗೂ ನಿರಂತರವಾಗಿ ವೃದ್ಧಿಗೊಳ್ಳುತ್ತ ಹೋಗುತ್ತಿತ್ತು.

ಭೈರವಿ ಬ್ರಾಹ್ಮಣಿ ದಕ್ಷಿಣೇಶ್ವರಕ್ಕೆ ಆಗಮಿಸಿದ ವೇಳೆಯಲ್ಲಿ ಶ್ರೀರಾಮಕೃಷ್ಣರ ಮನಸ್ಸು ಭಗವಂತನ ಮಾತೃಸ್ವರೂಪದ ಚಿಂತನೆಯಲ್ಲಿ ಮುಳುಗಿತ್ತು. ಆಗ ಅವರು ಸಕಲ ಚರಾಚರ ವಸ್ತುಗಳಲ್ಲಿ, ವಿಶೇಷವಾಗಿ ಸ್ತ್ರೀಯರಲ್ಲಿ, ಜಗನ್ಮಾತೆಯ ಆವಿರ್ಭಾವವನ್ನು ಕಣ್ಣಾರೆ ಕಾಣುತ್ತಿದ್ದರು. ಹಾಗಿರುವಾಗ ಅವರು ಬ್ರಾಹ್ಮಣಿಯನ್ನು ಕಂಡೊಡನೆ ಆಕೆಯನ್ನು 'ಅಮ್ಮಾ' ಎಂದು ಸಂಬೋಧಿಸಿದ್ದರಲ್ಲೇನು ಆಶ್ಚರ್ಯ? ಅಷ್ಟೇ ಅಲ್ಲ, ಅವರು ತಮ್ಮನ್ನು ಆಕೆಯ ಮಗನೆಂದೇ ದೃಢವಾಗಿ ನಂಬಿದರು; ಕೆಲವೊಮ್ಮೆ ಶಿಶುಭಾವದಿಂದ ಆಕೆಯ ಮಡಿಲಲ್ಲಿ ಕುಳಿತು ಆಕೆಯ ಕೈಯಿಂದಲೇ ತಿಂಡಿತಿನಿಸನ್ನು ತಿನ್ನುತ್ತಿದ್ದರು. ಯಾವಾಗಲಾದರೊಮ್ಮೆ ಅವಳು ಗೋಪಿಕಾಭಾವದಿಂದ ಸ್ಫೂರ್ತಿಗೊಂಡು ಮಧುರ ಶೃಂಗಾರಾತ್ಮಕ ಹಾಡುಗಳನ್ನು ಹಾಡತೊಡಗುತ್ತಿದ್ದಳು. ತಕ್ಷಣ ಅವರಿಗೆ ರಸಭಂಗವಾದಂತಾಗಿ ಆಕೆಯನ್ನು ತಡೆದು, "ಆ ಭಾವದ ಹಾಡು ಈಗ ನನಗೆ ಸರಿಹೋಗುವುದಿಲ್ಲ; ಬದಲಾಗಿ ಮಾತೃಭಾವವನ್ನು ಸ್ಫುರಿಸುವಂತಹ ಯಾವುದಾದರೂ ಹಾಡು ಹೇಳು" ಎಂದು ವಿನಂತಿಸಿಕೊಳ್ಳುತ್ತಿದ್ದರು. ಭೈರವಿಯೂ ಅವರ ಮಾನಸಿಕ ಸ್ಥಿತಿಯನ್ನು ಅರಿತುಕೊಂಡು ಕೂಡಲೇ ಅವರಿಗೋಸ್ಕರ ಜಗನ್ಮಾತೆಯ ಸಖಿಯ ಭಾವವನ್ನು ನಿರೂಪಿಸುವಂತಹ ಹಾಡನ್ನು ಹಾಡಲಾರಂಭಿಸುತ್ತಿದ್ದಳು. ಇವೆಲ್ಲ ನಡೆದದ್ದು ಶ್ರೀರಾಮಕೃಷ್ಣರು ಮಧುರಭಾವ ಸಾಧನೆಯನ್ನು ಕೈಗೊಳ್ಳುವುದಕ್ಕಿಂತ ಬಹಳ ಹಿಂದೆಯೇ. ಅವರ ಅಕಳಂಕ ಪ್ರಾಮಾಣಿಕತೆ ಇದರಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಅವರೇ ಹೇಳುತ್ತಿದ್ದಂತೆ 'ಭಾವರಾಜ್ಯದಲ್ಲಿ ಕಳ್ಳತನ' ಎನ್ನುವುದು ಅವರಲ್ಲಿ ಲವಲೇಶವೂ ಇರಲಿಲ್ಲ.

ಶ್ರೀರಾಮಕೃಷ್ಣರು ಮೊಟ್ಟಮೊದಲು ಸಾಧನೆಗೈದದ್ದು ಶಿಶುಭಾವದಿಂದ; ಬಳಿಕ ದಾಸ್ಯಭಾವದಿಂದ. ಅನಂತರ ವಾತ್ಸಲ್ಯಭಾವದ ಮೂಲಕ ಬಾಲರಾಮನನ್ನು ಒಲಿಸಿಕೊಂಡರು. ಈಗ ಅವರು ಇಳಿದಿರುವುದು ಮಧುರಭಾವ ಸಾಧನೆಗೆ.

ಈ ಸಂದರ್ಭದಲ್ಲಿ ನಾವು ಶ್ರೀರಾಮಕೃಷ್ಣರ ಸಾಧನೆಯ ವೈಶಿಷ್ಟ್ಯಗಳಲ್ಲೊಂದನ್ನು ಗಮನಿಸಬೇಕು. ಅವರು ನಿರಕ್ಷರಕುಕ್ಷಿಗಳಲ್ಲದಿದ್ದರೂ, ಶಾಸ್ತ್ರಪಾಂಡಿತ್ಯವಿಲ್ಲದವರೆಂಬುದಂತೂ ನಿಜವೇ. ಆದರೆ ಅವರು ತಮ್ಮ ಜೀವನದುದ್ದಕ್ಕೂ 'ಶಾಸ್ತ್ರಮರ್ಯಾದೆ'ಯನ್ನು ಯಶಸ್ವಿಯಾಗಿ ಎತ್ತಿಹಿಡಿದರೆಂಬುದೊಂದು ಬಹಳ

ಮುಖ್ಯವಾದ ಅಂಶ. ಅವರು ಮೊಟ್ಟಮೊದಲಿಗೆ ಯಾವ ಗುರುವಿನ ಸಹಾಯವೂ ಇಲ್ಲದೆ ಕೇವಲ ಅಂತಃಪ್ರೇರಣೆಯಿಂದ ಕೈಗೊಂಡ ಸಾಧನೆಗಳೂ ಕೂಡ ಶಾಸ್ತ್ರವಾಕ್ಯಗಳಿಗೆ ವಿರುದ್ಧವಾಗಿರಲಿಲ್ಲ. 'ಭಾವರಾಜ್ಯದಲ್ಲಿ ಕಳ್ಳತನ' ಮಾಡದೆ, ಪರಿಶುದ್ಧ ಹೃದಯದಿಂದ, ವ್ಯಾಕುಲತೆಯಿಂದ ಸಾಧನೆ ಮಾಡಿದರೆ ಎಂಥವನಿಗಾದರೂ ಯಶಸ್ಸು ಲಭಿಸುವುದು ಖಂಡಿತವೆಂಬ ಶಾಸ್ತ್ರವಾಕ್ಯಕ್ಕೆ ಇದು ಸಾಕ್ಷಿಯಂತಿದೆ. ಮತ್ತು ಇದರಲ್ಲಿ ಅತಿಶಯವಾದರೂ ಏನಿಲ್ಲ. ಏಕೆಂದರೆ ಶಾಸ್ತ್ರಗಳಾದರೂ ಆಧಾರಿತವಾಗಿರುವುದು ಇಂತಹ ನೈಜ ಅನುಭವಗಳ ಮೇಲೆಯೇ ಅಲ್ಲವೆ ? ಶ್ರೀರಾಮಕೃಷ್ಣರಂತಹ ಶ್ರೇಷ್ಠ ಸಾಧಕರ ಅನುಭವಗಳೇ ಲಿಖಿತ ರೂಪದಲ್ಲಿ ದಾಖಲಾಗಿ ಶಾಸ್ತ್ರಗಳೆಂದು ಕರೆಯಲ್ಪಟ್ಟಿದೆ. ಅವು ಅವರ ಸತ್ಯಸಂಶೋಧನೆಯ ಪ್ರಯತ್ನಗಳ ಫಲಿತಾಂಶಗಳು.

ಶ್ರೀರಾಮಕೃಷ್ಣರು ತಮಗರಿವಿಲ್ಲದಂತೆಯೇ ಶಾಸ್ತ್ರಮರ್ಯಾದೆಯನ್ನು ಹೇಗೆ ಎತ್ತಿಹಿಡಿದರು ಎಂಬುದಕ್ಕೆ ಉದಾಹರಣೆಯಾಗಿ ಅವರು ವಿವಿಧ ಸಾಧನೆಗಳ ಸಮಯದಲ್ಲಿ ಬೇರೆಬೇರೆ ವೇಷಭೂಷಣಗಳನ್ನು ಧರಿಸಿದ್ದು ಗಮನೀಯ. ಈ ಬಾಹ್ಯಾಚರಣೆಗಳ ಮಹತ್ವವನ್ನು ಉಪನಿಷತ್ತುಗಳೂ ಎತ್ತಿಹಿಡಿದಿವೆ. ಉದಾಹರಣೆಗೆ, ತ್ಯಾಗ ವೈರಾಗ್ಯಗಳು ಅಂತರಂಗಕ್ಕೆ ಸಂಬಂಧಪಟ್ಟ ವಿಷಯಗಳೆಂಬುದು ಸರ್ವವಿದಿತ. ಆದರೆ ಸರ್ವಸಂಗಪರಿತ್ಯಾಗಿಯಾದ ಸಂನ್ಯಾಸಿಯೆನಿಸಬೇಕಿದ್ದರೆ ಕೇವಲ ಆಂತರಿಕ ತ್ಯಾಗವೈರಾಗ್ಯಗಳಿದ್ದರೆ ಸಾಲದು; ಅವುಗಳ ಚಿಹ್ನೆಯಾದ ಗೈರಿಕ ವಸನವನ್ನು ಧರಿಸಬೇಕು, ಮುಂಡನ ಮಾಡಿಕೊಳ್ಳಬೇಕು, ದಂಡಕಮಂಡಲು ಹಿಡಿಯಬೇಕು ಎನ್ನುತ್ತವೆ ಉಪನಿಷತ್ತುಗಳು. ಹಾಗೆಯೇ ಶ್ರೀರಾಮಕೃಷ್ಣರು ಯಾವುದೇ ಆಧ್ಯಾತ್ಮಿಕ ಭಾವದ ಸಾಧನೆಯನ್ನು ಕೈಗೊಂಡಿರಲಿ, ಆಯಾ ಕಾಲದಲ್ಲಿ ಅದದಕ್ಕೆ ತಕ್ಕಂಥ ಮತ್ತು ಅನುಕೂಲಕರವಾದಂಥ ವೇಷಭೂಷಣಗಳನ್ನೂ ಚಿಹ್ನೆಗಳನ್ನೂ ತಮ್ಮ ಅಂತಃಪ್ರೇರಣೆಯಿಂದಲೇ ಧರಿಸಿದರು. ಉದಾಹರಣೆಗೆ, ಅವರು ಭಗವಂತನನ್ನು ತಾಯಿಯಂತೆ ಕಂಡು ತಂತ್ರೋಕ್ತ ರೀತಿಯಲ್ಲಿ ಸಾಧನೆ ಮಾಡುತ್ತಿದ್ದಾಗ ಕೆಂಪು ಬಟ್ಟೆಯನ್ನುಟ್ಟು ವಿಭೂತಿ, ಸಿಂದೂರ ಮತ್ತು ರುದ್ರಾಕ್ಷಿಮಾಲೆಗಳನ್ನು ಧರಿಸಿದ್ದರು. ವೈಷ್ಣವ ಶಾಸ್ತ್ರಗಳ ರೀತಿಯಲ್ಲಿ ಸಾಧನೆ ಮಾಡುವಾಗ ವೈಷ್ಣವ ಪರಂಪರೆಯಲ್ಲಿ ರೂಢಿಯಲ್ಲಿದ್ದ ವೇಷಭೂಷಣಗಳನ್ನು—ಎಂದರೆ ಶ್ವೇತವಸ್ತ್ರ ಶ್ವೇತ ಚಂದನ, ತುಳಸೀ ಮಾಲೆ ಮೊದಲಾದುವನ್ನು ಧರಿಸಿದ್ದರು. ಮುಂದೆ ಅದ್ವೈತಸಾಧನೆಯ ಸಮಯದಲ್ಲಿ ಜುಟ್ಟು-ಜನಿವಾರಗಳನ್ನು ತ್ಯಜಿಸಿ ಕಾಷಾಯ ವಸ್ತ್ರ ಧರಿಸುವುದನ್ನು ನೋಡಲಿದ್ದೇವೆ. ಹೀಗೆ ಪುರುಷಭಾವಗಳಲ್ಲಿದ್ದಾಗ ಪುರುಷರ ವೇಷಭೂಷಣಗಳನ್ನು ಧರಿಸಿದಂತೆಯೇ ಸ್ತ್ರೀಭಾವಗಳಲ್ಲಿದ್ದಾಗ ಸ್ತ್ರೀಯರಿಗೆ ತಕ್ಕ ವಸ್ತ್ರಾಭರಣಗಳಿಂದ ಅಲಂಕರಿಸಿಕೊಳ್ಳಲೂ ಅವರು ಹಿಂಜರಿಯಲಿಲ್ಲ. ಮಾನವನು ತನಗೆ ಜನ್ಮಗತವಾಗಿ ಬರುವ ಲಜ್ಜೆ ಜುಗುಪ್ಸೆ ಭಯ ಮೊದಲಾದ ಅಷ್ಟಪಾಶಗಳನ್ನು ಸಂಪೂರ್ಣವಾಗಿ ಕಡಿದುಕೊಳ್ಳದಿದ್ದರೆ ಭಗವತ್ಸಾಕ್ಷಾತ್ಕಾರ ಸಾಧ್ಯವೇ ಇಲ್ಲ ಎಂದು ಬಾರಿಬಾರಿಗೂ ಸಾರಿದವರು ಅವರು. ತಮ್ಮ ಈ ಮಾತನ್ನು ಅವರೇ ಎಷ್ಟರ

ಮಟ್ಟಿಗೆ ಪಾಲಿಸಿದರೆಂಬುದಕ್ಕೆ ಇದೊಂದು ಉದಾಹರಣೆಯಷ್ಟೆ.

ಶ್ರೀರಾಮಕೃಷ್ಣರು ಮಧುರಭಾವದ ಸಾಧನೆಯಲ್ಲಿ ತೊಡಗುತ್ತಿದ್ದಂತೆಯೇ ಸ್ತ್ರೀಯರಿಗೆ ಸೂಕ್ತವಾದ ವಸ್ತ್ರಾಭರಣಗಳನ್ನು ಧರಿಸಲು ಮುಂದಾದರು. ಅವರ ಪರಮಭಕ್ತನಾದ ಮಥುರನಿಗೆ ಈ ವಿಷಯ ತಿಳಿದದ್ದೇ ತಡ, ಅವರಿಗೆ ಬೇಕಾದು ದೆಲ್ಲವನ್ನೂ ಒದಗಿಸಿಕೊಡಲು ಸಂತೋಷದಿಂದ ಸಿದ್ಧನಾದ. ಬೇರೆಬೇರೆ ಸಮಯ ಗಳಲ್ಲಿ ಅವರಿಗೆ ಅತ್ಯಂತ ಬೆಲೆಬಾಳುವ ಜರತಾರಿಯ ಹಾಗೂ ಇತರ ಸೀರೆಗಳನ್ನು, ಲಂಗ, ಜಾಲರಿ ಅಂಗವಸ್ತ್ರ, ದಾವಣಿ, ರವಿಕೆ ಮೊದಲಾದುವನ್ನು ಕೊಡಿಸಿದ. ಅಷ್ಟೇ ಅಲ್ಲ, ಅವರ ಸ್ತ್ರೀವೇಷಭೂಷಣವನ್ನು ಸರ್ವಾಂಗಸುಂದರವನ್ನಾಗಿಸುವುದಕ್ಕಾಗಿ ಉದ್ದನೆಯ ಗುಂಗುರು ಕೂದಲಿನ ಚೌರಿಯಿಂದಲೂ ವಿಧವಿಧದ ಸ್ವರ್ಣಾಭರಣ ಗಳಿಂದಲೂ ಅವರನ್ನು ಅಲಂಕರಿಸಿದ. ಮಥುರ ನೀಡಿದ ವಸ್ತ್ರಾಭರಣಗಳನ್ನು ಕಂಡು ಅನೇಕರು ಹುಬ್ಬೇರಿಸಿದರು. ಶ್ರೀರಾಮಕೃಷ್ಣರ ವಿಚಿತ್ರ ಭಾವವನ್ನು ಕಂಡು ಯಾರು ಯಾರಿಗೆ ಏನೇನೆನ್ನಿಸಿರಬಹುದೋ! ಅವರು ಅಂತಹ ಬೆಲೆಬಾಳುವ ಆಭರಣಗಳ ನ್ನೆಲ್ಲ ಪಡೆದುಕೊಂಡದ್ದನ್ನು ಕಂಡು ಸಣ್ಣಬುದ್ಧಿಯ ಜನ ಬಾಯಿಗೆ ಬಂದಂತೆ ಮಾತನಾಡಿಕೊಂಡರು. ಆದರೆ ಮಥುರ ಆ ಮಾತುಗಳಿಗೆ ಯಾವ ಬೆಲೆಯನ್ನೂ ಕೊಡಲಿಲ್ಲ. ಇನ್ನು ಶ್ರೀರಾಮಕೃಷ್ಣರ ಕಿವಿಗಳಿಗೆ ಆ ಮಾತುಗಳು ತಲುಪಿದುವೋ ಇಲ್ಲವೋ. ತಲುಪಿದ್ದರೂ ಅವರೇನೂ ಅದಕ್ಕೆಲ್ಲ ಕಿವಿಗೊಡುವವರಲ್ಲ. ಅಂತೂ, ಸರ್ವವಿಧದಿಂದಲೂ ಸ್ತ್ರೀಯಂತೆ ಅಲಂಕೃತರಾದ ಶ್ರೀರಾಮಕೃಷ್ಣರು ಕೃಷ್ಣಪ್ರೇಮೋ ನ್ಮತ್ತರಾದ ಗೋಪಿಕಾ ಸ್ತ್ರೀಯರ ಭಾವದಲ್ಲಿ ತನ್ಮಯರಾಗಿಯೇಬಿಟ್ಟರು! ಕ್ರಮೇಣ ಅವರ ಆಲೋಚನೆ, ಮಾತು, ಚಲನವಲನಗಳು ಎಲ್ಲ ರೀತಿಯಲ್ಲೂ ತದ್ವತ್ ಸ್ತ್ರೀಯರಂತೆಯೇ ಆಗಿಬಿಟ್ಟುವು. ಸ್ತ್ರೀಯರ ವೇಷ ಭೂಷಣಗಳನ್ನೇ ಧರಿಸುತ್ತ ತಾವು ಭಗವಂತನ ಲೀಲಾಸಂಗತಿಯೆಂಬ ಭಾವದಲ್ಲಿ ಸುಮಾರು ಆರು ತಿಂಗಳ ಕಾಲ ಮುಳುಗಿದ್ದುದಾಗಿ ಅವರೇ ಮುಂದೆ ಹೇಳುತ್ತಿದ್ದರು.

ಸ್ತ್ರೀವೇಷಭೂಷಣಗಳಲ್ಲಿ ಅಲಂಕೃತರಾದ ಕೂಡಲೇ ಶ್ರೀರಾಮಕೃಷ್ಣರಲ್ಲಿ ಸ್ತ್ರೀಭಾವ ತಾನೇತಾನಾಗಿ ಜಾಗೃತವಾದುದರಲ್ಲೇನೂ ಆಶ್ಚರ್ಯವಿಲ್ಲ. ಆದರೆ ಅವರು ಆ ಭಾವದಲ್ಲಿದ್ದಾಗ ಅವರ ಆಲೋಚನಾ ವಿಧಾನ, ನಡೆನುಡಿ, ಮಾತುಕತೆ, ಹಾವಭಾವ, ನಗು ಮತ್ತಿತರ ಎಲ್ಲ ಪ್ರಕ್ರಿಯೆಗಳೂ ಅಷ್ಟರ ಮಟ್ಟಿಗೆ ಸ್ತ್ರೀಸಹಜವಾಗ ಬಹುದೆಂದು ಮಾತ್ರ ಯಾರಿಗೂ ಊಹಿಸಲೂ ಸಾಧ್ಯವಿರಲಿಲ್ಲ! ಕಣ್ಣಾರೆ ಕಂಡ ಹೊರತು ಇಂಥದೊಂದು ಸಂಗತಿಯನ್ನು ನಂಬುವುದೂ ಕಷ್ಟ. ಆದರೆ ಆಗ ಅದು ಎಷ್ಟರಮಟ್ಟಿಗೆ ಸಹಜವಾಗಿದ್ದಿರಬಹುದು ಎಂಬುದಕ್ಕೆ ಮುಂದೆಯೂ ಹಲವಾರು ಉದಾಹರಣೆಗಳು ಸಿಗುತ್ತಿದ್ದುವು. ಕೆಲವೊಮ್ಮೆ ಅವರು ತಮ್ಮ ಶಿಷ್ಯರ ಮುಂದೆ ತಮಾಷೆಗಾಗಿ ಸ್ತ್ರೀಯರ ಹಾವಭಾವಗಳನ್ನು ಅಭಿನಯಿಸಿ ತೋರಿಸುತ್ತಿದ್ದರು. ಅವೆಲ್ಲ ಎಷ್ಟು ಸಹಜವಾಗಿ ಪರಿಪೂರ್ಣವಾಗಿರುತ್ತಿದ್ದುವೆಂದರೆ, ಗಂಡಸರ ಮಾತಂ ತಿರಲಿ, ಹೆಂಗಸರೂ ಕೂಡ ಅತ್ಯಾಶ್ಚರ್ಯ ಪಡುತ್ತಿದ್ದರು.

ಮಧುರಭಾವ ಸಾಧನೆಯ ಈ ವೇಳೆಗಾಗಲೇ ಶ್ರೀರಾಮಕೃಷ್ಣರು ರಾಣಿ

ರಾಸಮಣಿಯ ಕುಟುಂಬವರ್ಗಕ್ಕೆಲ್ಲ ಪರಮ ಆತ್ಮೀಯರೂ ಗುರುಸ್ವರೂಪರೂ ಆಗಿದ್ದರು. ಮಥುರನಂತೂ ಅವರನ್ನು 'ಬಾಬಾ' (ಅಪ್ಪ) ಎಂದೇ ಕರೆಯುತ್ತಿದ್ದುದು. ಅವರು ಅವನ ಮನೆಯವರೊಂದಿಗೆ ನಿರ್ಭಿಡೆಯಿಂದ ಬೆರೆತು ಮಾತುಕತೆಗಳಲ್ಲಿ ತೊಡಗುತ್ತಿದ್ದರು. ಆಗಾಗ ಜಾನ್‌ಬಜಾರಿನಲ್ಲಿದ್ದ ರಾಣಿಯ ಮನೆಗೆ ಹೋಗಿ ಅಲ್ಲಿನ ಅಂತಃಪುರದ ಸ್ತ್ರೀಯರೊಂದಿಗೆ ಇರುತ್ತಿದ್ದರು. ಅವರ ಪರಮ ಪರಿಶುದ್ಧ, ಕಾಮ ಗಂಧರಹಿತ ಚಾರಿತ್ರ್ಯದ ಪರಿಚಯವಿದ್ದ ಆ ಸ್ತ್ರೀಯರು ಅವರನ್ನು ಭಗವತ್ಸ್ವರೂಪಿ ಗಳೆಂದು ತಿಳಿದಿದ್ದರು. ಈಗ ಅವರು ಆ ಸ್ತ್ರೀಯರ ಮನೋಧರ್ಮಕ್ಕೆ ತುಂಬ ಹಿತ ವಾಗಿ ಒಗ್ಗುವಂತಹ ಭಾವದಲ್ಲಿ, ಸ್ತ್ರೀಸಹಜ ವೇಷಭೂಷಣಗಳನ್ನೇ ಧರಿಸತೊಡಗಿ ದಾಗ ಅವರೆಲ್ಲ ಮುಗ್ಧರಾದರು. ಶ್ರೀರಾಮಕೃಷ್ಣರು ತಮ್ಮಲ್ಲೇ ಒಬ್ಬರು ಎಂಬ ಭಾವನೆ ಅಂತಃಪುರದ ಸ್ತ್ರೀಜನರಲ್ಲಿ ಕ್ರಮೇಣ ನೆಲೆಯೂರಿತು. ಅವರು ಸಮೀಪ ದಲ್ಲಿದ್ದಾಗ ಆ ಸ್ತ್ರೀಯರು ನಾಚಿಕೆ ಪಟ್ಟುಕೊಳ್ಳುವುದು ನಿಂತುಹೋಯಿತು.

ರಾಸಮಣಿಯ ಕುಟುಂಬದ ಸ್ತ್ರೀಜನರು ಶ್ರೀರಾಮಕೃಷ್ಣರೊಂದಿಗೆ ನಿಸ್ಸಂ ಕೋಚದಿಂದಿರುತ್ತಿದ್ದ ಆ ವಿಸ್ಮಯಕರ ದೃಶ್ಯವನ್ನು ಹೃದಯ ಹೀಗೆ ಬಣ್ಣಿಸುತ್ತಾನೆ: "ಶ್ರೀರಾಮಕೃಷ್ಣರನ್ನು ಮಹಿಳೆಯರು ಸುತ್ತುವರಿದಿದ್ದಾಗ ಅವರ ಅತಿ ಸಮೀಪದ ಬಂಧುಗಳಿಗೂ ಅವರನ್ನು ಬೇಗ ಗುರುತಿಸುವುದು ಸಾಧ್ಯವಿರಲಿಲ್ಲ. ಒಂದು ದಿನ ಮಥುರಬಾಬು ನನ್ನನ್ನು ಒಳ ಕೋಣೆಗೆ ಕರೆದೊಯ್ದು 'ಇಲ್ಲಿರುವವರಲ್ಲಿ ನಿಮ್ಮ ಮಾವ ಯಾರೆಂದು ಗುರುತಿಸಬಲ್ಲಿರಾ ?' ಎಂದ. ಅಷ್ಟು ವರ್ಷಗಳಿಂದ ಅವರೊಂ ದಿಗೇ ಇದ್ದು ಪ್ರತಿದಿನವೂ ಅವರ ಸೇವೆ ಮಾಡಿದ್ದ ನಾನೇ ಅವರನ್ನು ಗುರುತಿಸ ಲಾಗದೆ, 'ಇಲ್ಲಿ ಅವರು ಇಲ್ಲವೇ ಇಲ್ಲ' ಎಂದುಬಿಟ್ಟೆ! ಆ ದಿನಗಳಲ್ಲಿ ನಿತ್ಯವೂ ಬೆಳಗ್ಗೆ ಶ್ರೀರಾಮಕೃಷ್ಣರು ಕೈಯಲ್ಲಿ ಬುಟ್ಟಿ ಹಿಡಿದು ತೋಟದಲ್ಲಿ ಹೂ ಕೀಳು ತ್ತಿದ್ದರು. ಆಗ ಅವರು ಒಂದು ಗಿಡದಿಂದ ಹೂ ಕಿತ್ತು ಇನ್ನೊಂದು ಗಿಡದೆಡೆಗೆ ಹೊರಡುವಾಗ ಹೆಂಗಸರಂತೆ ಎಡಗಾಲನ್ನೇ ಮೊದಲು ಮುಂದಿಡುತ್ತಿದ್ದುದನ್ನು ನಾವು ಗಮನಿಸಿದೆವು. 'ಅವರು ಹಾಗೆ ಹೂ ಕೀಳುತ್ತಿದ್ದಾಗ ಎಷ್ಟೋ ಸಲ ನಾನು ಅವರನ್ನು ಶ್ರೀ ರಾಧೆಯೆಂದೇ ಭ್ರಮಿಸಿದ್ದೆ!' ಎಂದು ಭೈರವಿ ಹೇಳುತ್ತಿದ್ದಳು. ಹೀಗೆ ಕಿತ್ತ ಹೂಗಳಿಂದ ಅವರು ಸುಂದರವಾದ ಮಾಲೆಗಳನ್ನು ತಯಾರಿಸಿ ಪ್ರತಿದಿನವೂ ರಾಧಾಗೋವಿಂದ ಸ್ವಾಮಿಯನ್ನು ಅಲಂಕರಿಸುತ್ತಿದ್ದರು. ಇನ್ನು ಕೆಲವೊಮ್ಮೆ ಜಗ ನ್ಮಾತೆಯನ್ನೂ ಅಲಂಕರಿಸಿ, ಗೋಪಿಕಾಸ್ತ್ರೀಯರು ಕಾತ್ಯಾಯನಿಯನ್ನು ಪ್ರಾರ್ಥಿಸಿ ದಂತೆ, ತಮಗೆ ಕೃಷ್ಣನನ್ನು ಆಧ್ಯಾತ್ಮಿಕ ಪತಿಯನ್ನಾಗಿ ಅನುಗ್ರಹಿಸಬೇಕೆಂದು ಮೊರೆಯಿಡುತ್ತಿದ್ದರು."

# ಮಹಾಭಾವದ ಅನುಭಾವ

ಮಧುರಭಾವ ಸಾಧನೆಯನ್ನು ಪ್ರಾರಂಭಿಸಿದಂದಿನಿಂದ ಶ್ರೀರಾಮಕೃಷ್ಣರಲ್ಲಿ ಕೃಷ್ಣನ ದರ್ಶನ ಪಡೆಯುವ ಮತ್ತು ಆತನನ್ನು 'ಆಧ್ಯಾತ್ಮಿಕ ಪತಿ'ಯನ್ನಾಗಿ ಪಡೆಯುವ ತೀವ್ರ ವ್ಯಾಕುಲತೆಯುಂಟಾಯಿತು. ಆ ಅಭಿಲಾಷೆಯಿಂದ ಅವರು ಜಗನ್ಮಾತೆಯ ಪೂಜೆ ಸೇವೆಗಳಲ್ಲಿ ನಿರತರಾದರು. ಅಲ್ಲದೆ ದೇವಿಯ ಪೂಜೆಯ ಬಳಿಕ ಏಕಚಿತ್ತದಿಂದ ಶ್ರೀಕೃಷ್ಣನ ಸೇವೆಯನ್ನು ಕೈಗೊಂಡು ವ್ಯಾಕುಲಹೃದಯದಿಂದ ಪ್ರಾರ್ಥನೆ ಮಾಡುತ್ತ ದಿನಗಳನ್ನು ಕಳೆದರು. ಹಗಲಾಗಲಿ ಇರುಳಾಗಲಿ, ಅವರ ಹೃದಯದಲ್ಲಿ ಈ ಹಂಬಲ-ಪ್ರಾರ್ಥನೆ ನಿರಂತರವಾಗಿ ತುಡಿಯುತ್ತಿತ್ತು. ದಿನಗಳುರುಳಿ ತಿಂಗಳುಗಳಾದುವು. ಆದರೂ ಯಶಸ್ಸಿನ ಲಕ್ಷಣವೇ ಕಾಣಲಿಲ್ಲ. ಅವರ ಉತ್ಸಾಹ ಮಾತ್ರ ತಗ್ಗಲಿಲ್ಲ, ಶ್ರದ್ಧೆ ಕುಗ್ಗಲಿಲ್ಲ; ಹತಾಶೆಯಾಗಲಿ ಅವಿಶ್ವಾಸವಾಗಲಿ ಎದುರಾಗಲಿಲ್ಲ. ಬದಲಾಗಿ ಅವರ ವ್ಯಾಕುಲತೆ, ಉದ್ವೇಗ ಮತ್ತಷ್ಟು ಹೆಚ್ಚಿತು. ಅವರ ಅಂತರಂಗದ ಪ್ರಾರ್ಥನೆ ಅಶ್ರುಧಾರೆಯಾಗಿ ವ್ಯಕ್ತವಾಗುತ್ತಿತ್ತು. ಪ್ರಿಯತಮ ಶ್ರೀಕೃಷ್ಣನ ಹಂಬಲದಲ್ಲಿ ಆಹಾರ ನಿದ್ರೆಗಳ ಬಯಕೆಗಳೆಲ್ಲ ಎಲ್ಲೋ ಹಾರಿಹೋಗಿತ್ತು. ಆ ವಿರಹವೇದನೆಯನ್ನೆಂತು ಬಣ್ಣಿಸುವುದು? ಹೃದಯವನ್ನು ಮಥಿಸಿ, ಬುದ್ಧಿಯನ್ನು ದಿಕ್ಕೆಡಿಸಿ, ದೇಹವನ್ನೂ ಅಂಗೋಪಾಂಗಗಳನ್ನೂ ದಹಿಸುವಂತಹ ಆ ದುಸ್ಸಹ ದುಃಖವನ್ನು, ತನ್ನ ಹೃದಯೇಶ್ವರನೊಂದಿಗೆ ನಿರಂತರ ಸಮಾಗಮ ಹೊಂದಿರಬೇಕೆಂದು ಹಂಬಲಿಸುವವಳ ವೇದನೆಯನ್ನು, ಹೇಗೆ ವಿವರಿಸುವುದು? ಅಲ್ಲದೆ ಈ ವಿರಹವೇದನೆ ಕೇವಲ ಮಾನಸಿಕ ಭಾವಾವೇಗಗಳ ರೂಪದಲ್ಲಿ ಪ್ರಕಟವಾಗಿ ಅಷ್ಟಕ್ಕೇ ಮುಗಿಯಲಿಲ್ಲ; ಹಿಂದೆ ಅವರು ಅನುಭವಿಸಿದ್ದ ಆ ಭಯಂಕರ ಉರಿತದ ಮತ್ತು ಅಸಹನೀಯ ನೋವಿನ ತೊಂದರೆ ಪುನರಾರಂಭವಾಯಿತು. ಒಂದೊಂದು ಸಲವಂತೂ ಶ್ರೀಕೃಷ್ಣನ ಅಗಲುವಿಕೆಯ ತೀವ್ರ ಬಾಧೆಯಿಂದ ತಮ್ಮ ಶರೀರದ ರೋಮಕೂಪಗಳಿಂದ ರಕ್ತವು ಹನಿಹನಿಯಾಗಿ ಜಿನುಗುತ್ತಿತ್ತು ಎಂದು ಶ್ರೀರಾಮಕೃಷ್ಣರೇ ಹೇಳುತ್ತಾರೆ! ದೇಹದ ಕೀಲುಗಳೆಲ್ಲ ಕಳಚಿ ಹೋದಂತಾಗಿತ್ತು. ಸಮಸ್ತಜ್ಞಾನೇಂದ್ರಿಯಗಳೂ ಕರ್ಮೇಂದ್ರಿಯಗಳೂ ಜಡವಾದಂತಾಗಿ, ಕೆಲವೊಮ್ಮೆ ಶರೀರವು ಮೃತಪ್ರಾಯವಾಗಿ, ನಿಶ್ಚೇಷ್ಟಿತವಾಗಿ ಬಿದ್ದಿರುತ್ತಿತ್ತು. ಶ್ರೀರಾಮಕೃಷ್ಣರು ಸ್ತ್ರೀಭಾವದಿಂದಿದ್ದ ಈ ದಿನಗಳ ಅವರ ತಳಮಳದ ವೇಳೆಯಲ್ಲಿ ಸ್ತ್ರೀಸಹಜ ರೀತಿಯಿಂದಲೇ ಅವರನ್ನು ಸಂಭಾಳಿಸಿ ನೋಡಿಕೊಳ್ಳಲು ಭೈರವಿ

ಬ್ರಾಹ್ಮಣಿ ಅಲ್ಲಿಯೇ ಇದ್ದುದು ದೈವನಿಯಾಮಕವೇ ಸರಿ.

ಕಲ್ಪನಾತೀತವಾದ ಆ ಅವಸ್ಥೆಯನ್ನು ಬಣ್ಣಿಸುತ್ತ, ಶ್ರೀ ಸ್ವಾಮಿ ಶಾರದಾನಂದರು 'ಲೀಲಾಪ್ರಸಂಗ'ದಲ್ಲಿ ಬರೆಯುತ್ತಾರೆ: "ನಮ್ಮನ್ನು ಕೇವಲ ದೇಹಗಳೆಂದು ತಿಳಿದುಕೊಂಡಿರುವ, ಮತ್ತು ಅದರ ಹೊರತಾಗಿ ಬೇರಾವ ಕಲ್ಪನೆಯೂ ಇಲ್ಲದಿರುವ ಮನುಷ್ಯರು ನಾವು, ಒಂದು ದೇಹದ ಕಡೆಗೆ ಮತ್ತೊಂದು ದೇಹಕ್ಕಿರುವ ಆಕರ್ಷಣೆಯನ್ನೇ ಪ್ರೇಮ ಎಂದು ತಿಳಿಯುತ್ತೇವೆ. ಅಥವಾ ಬಹಳ ಕಷ್ಟಪಟ್ಟು ಹೇಗೋ ಮಾಡಿ ಈ ಶರೀರಬುದ್ಧಿಯನ್ನು ಸ್ವಲ್ಪಮಾತ್ರ ಮೀರಿಹೋದೆವೆನ್ನಿ; ಆಗ 'ಪ್ರೇಮ'ವೆಂದರೆ ಒಬ್ಬನ ಎಲ್ಲ ಶ್ರೇಷ್ಠ ಸದ್ಗುಣಗಳ ಬಗೆಗೆ ಮತ್ತೊಬ್ಬನಲ್ಲಿ ಮೂಡಿದ ಆಕರ್ಷಣೆ ಎಂದು ವಿಶ್ಲೇಷಿಸಿ, ಅದಕ್ಕೆ 'ಇಂದ್ರಿಯಾತೀತ ಪ್ರೇಮ'ವೆಂಬ ಹೆಸರನ್ನು ಬೇರೆ ಕೊಟ್ಟು, ಅದನ್ನು ಹಾಡಿ ಹೊಗಳುತ್ತೇವೆ. ಆದರೆ ಲೋಕಸಮ್ಮಾನಿತವಾದ, ಕವಿಗಳಿಂದ ಹೊಗಳಲ್ಪಟ್ಟ ಈ ಬಗೆಯ 'ಇಂದ್ರಿಯಾತೀತ ಪ್ರೇಮ'ದ ಹಿಂದೆಯೂ ಅಡಗಿರುವುದು ಅದೇ ದೇಹಪ್ರಜ್ಞೆ ಮತ್ತು ಭೋಗಲಾಲಸೆಗಳೇ ಎಂಬುದನ್ನು ಮರೆಮಾಚಲಾಗದು. ಆಹ್, ಶ್ರೀರಾಮಕೃಷ್ಣರಲ್ಲಿ ನಾವು ಕಾಣುವ ಆ ನಿಜವಾದ 'ಅತೀಂದ್ರಿಯ ಪ್ರೇಮ'ದ ಮುಂದೆ ಈ ಪ್ರೇಮ ಎಷ್ಟು ತುಚ್ಛವಾಗಿ, ಟೊಳ್ಳಾಗಿ ಕಾಣುತ್ತದೆ !..."

ಇಂಥ ದಿವ್ಯ ಪ್ರೇಮವು ಪರಿಪೂರ್ಣವಾಗಿ ಆವಿರ್ಭಾವಗೊಂಡಿದ್ದುದು ರಾಧೆಯೊಬ್ಬಳಲ್ಲಿ ಮಾತ್ರವೇ ಎಂದು ಭಕ್ತಿಶಾಸ್ತ್ರಗಳು ಸಾರುತ್ತವೆ. ಅತೀಂದ್ರಿಯ ಪ್ರೇಮದ ಅತ್ಯುನ್ನತ ಆದರ್ಶವೇ ರಾಧೆ. ಆಕೆಗೆ ಸರಿಸಮಾನರಾದವರೊಬ್ಬರನ್ನೂ ಆ ಶಾಸ್ತ್ರಗಳಲ್ಲಿ ನಾವು ಕಾಣಲಾರೆವು. ಆ ವೈಷ್ಣವ ಗ್ರಂಥಗಳ ಪ್ರಕಾರ ಇತರ ಯಾವ ಜೀವಿಗಾದರೂ ಪ್ರೇಮದ ಈ ಪರಾಕಾಷ್ಠೆಯನ್ನು ತಲುಪಲು ಸಾಧ್ಯವೇ ಇಲ್ಲ. ಸಾಧಕನು ಈ ಪ್ರೇಮವನ್ನು ಕೇವಲ ಭಾಗಶಃ—ಅದೂ ಕೂಡ ರಾಧೆಯ ಕೃಪಾವಿಶೇಷದಿಂದ ಮಾತ್ರವೇ—ಅನುಭವಿಸಲು ಸಾಧ್ಯ ! ಏಕೆಂದರೆ ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣನು ರಾಧೆಯ ಕಾಮಗಂಧವಿಹೀನವಾದ ಪ್ರೇಮದಿಂದ ಕಟ್ಟಿಹಾಕಲ್ಪಟ್ಟಿದ್ದಾನೆ; ಮತ್ತು ಆಕೆಯ ಇಚ್ಛೆಗೆ ಅನುಗುಣವಾಗಿ ಅವನು ತನ್ನ ಭಕ್ತರಿಗೆ ದರ್ಶನಭಾಗ್ಯವನ್ನು ಕರುಣಿಸುತ್ತಾನೆ.

ಶ್ರೀರಾಧೆಯ ಈ ಅಸಾಧಾರಣ ಪ್ರೇಮವನ್ನು, ಮಹರ್ಷಿಗಳಲ್ಲಿ ಅಗ್ರಗಣ್ಯನಾದ ಶುಕದೇವನೇ ಮೊದಲಾದ ಅನೇಕರು ಕೊಂಡಾಡಿದ್ದರೂ, ಹೆಚ್ಚಿನ ಜನರಿಗೆ ಅದನ್ನು ತಾವೂ ಪಡೆದುಕೊಳ್ಳುವುದು ಹೇಗೆ ಎಂಬುದು ಬಹುದೀರ್ಘಕಾಲದವರೆಗೂ ತಿಳಿದಿರಲಿಲ್ಲ. ಇದನ್ನು ಜನರಿಗೆ ತಿಳಿಯಪಡಿಸಬೇಕೆಂದೇ ಶ್ರೀಕೃಷ್ಣನು ರಾಧಾಸಮೇತನಾಗಿ ಒಂದೇ ಶರೀರವನ್ನು ಧರಿಸಿ ಅವತರಿಸಿದನೆಂದು ವೈಷ್ಣವ ಗುರುಗಳು ಹೇಳುತ್ತಾರೆ. ಅದೇ ಶ್ರೀಚೈತನ್ಯನ ಅವತಾರ. ಶ್ರೀಚೈತನ್ಯನು ಅಂತರಂಗದಲ್ಲಿ ಶ್ರೀಕೃಷ್ಣನಾಗಿಯೂ ಬಹಿರಂಗದಲ್ಲಿ ರಾಧೆಯಾಗಿಯೂ ವ್ಯಕ್ತಗೊಂಡ. ಹೀಗೆ ಭಗವಂತನೇ ಪ್ರಿಯತಮನಾಗಿ ಜೀವನೇ ಪ್ರಿಯತಮೆಯಾಗಿ ಆಧ್ಯಾತ್ಮಿಕ ಸಾಮ್ರಾಜ್ಯದ ಅತೀಂದ್ರಿಯ ಪ್ರೇಮವನ್ನು ಬೋಧಿಸಿ ಮಾನವತೆಗೆ ಒಳಿತನ್ನುಂಟುಮಾಡಲು

ಗೌರಾಂಗನು ಧರೆಯಲ್ಲಿ ಅವತರಿಸಿದ. ಶ್ರೀರಾಧೆಯ ದೇಹದಲ್ಲಿ ಶ್ರೀಕೃಷ್ಣಪ್ರೇಮದ ಪರಿಣಾಮವಾಗಿ ಯಾವಯಾವ ಲಕ್ಷಣಗಳು ಕಾಣಿಸಿಕೊಂಡುವೋ ಅದೇ ಲಕ್ಷಣ ಗಳು ಪುರುಷನಾದ ಶ್ರೀಚೈತನ್ಯನ ದೇಹದಲ್ಲೂ ಕಾಣಿಸಿಕೊಂಡುವು.

ಹೀಗೆ, ರಾಧೆಯ ಕೃಪೆಯಿಲ್ಲದೆ ಶ್ರೀಕೃಷ್ಣನ ದರ್ಶನಭಾಗ್ಯವನ್ನು ಪಡೆಯು ವುದು ಅಸಾಧ್ಯವೆಂದರಿತ ಶ್ರೀರಾಮಕೃಷ್ಣರು, ಈಗ ಆಕೆಯ ಕೃಪಾಲಾಭವನ್ನು ಗಳಿಸುವ ಯತ್ನದಲ್ಲಿ ನಿರತರಾದರು. ಆಕೆಯ ಪ್ರೇಮಘನಮೂರ್ತಿಯ ನಿರಂತರ ಚಿಂತನೆ-ಧ್ಯಾನಗಳಲ್ಲಿ ತೊಡಗಿ, ಆಕೆಯ ಚರಣಾರವಿಂದಗಳಲ್ಲಿ ಹೃದಯದಾಳದ ಭಾವಗಳನ್ನು ನಿವೇದಿಸಿಕೊಂಡರು. ಕೆಲಕಾಲದಲ್ಲೇ ಅವರ ಮನೋರಥ ಈಡೇ ರಿತು; ಅವರು ಕಾಮದ ಕಿಲುಬೂ ಇಲ್ಲದವಳಾದ ಶ್ರೀರಾಧೆಯ ದಿವ್ಯದರ್ಶನವನ್ನು ಪಡೆದು ಕೃತಾರ್ಥರಾದರು. ಇತರ ದೇವದೇವಿಯರ ದರ್ಶನವನ್ನು ಪಡೆದಾಗ ಅವರೆಲ್ಲ ತಮ್ಮಲ್ಲಿ ಲೀನರಾದಂತೆಯೇ ರಾಧೆಯ ಮೂರ್ತಿಯೂ ತಮ್ಮ ಶರೀರ ದೊಳಗೆ ಲೀನವಾದಂತೆ ಅವರು ಅನುಭವ ಪಡೆದರು. ರಾಧಾರಾಣಿಯ ಸೌಂದ ರ್ಯದ ಬಗ್ಗೆ ಶ್ರೀರಾಮಕೃಷ್ಣರು ಹೇಳುತ್ತಿದ್ದರು:

"ಶ್ರೀಕೃಷ್ಣಪ್ರೇಮದಿಂದಾಗಿ ಸರ್ವಸ್ವವನ್ನೂ ತ್ಯಾಗಮಾಡಿದ ಆ ಪವಿತ್ರಳೂ ಉಜ್ವಲಳೂ ಅಸದೃಶಳೂ ಆದ ಶ್ರೀರಾಧೆಯ ಮಹಿಮೆ ಮಾಧುರ್ಯಗಳನ್ನು ಊಹಿಸಲಾದರೂ ಸಾಧ್ಯವೇನು ? ಆಕೆಯ ಶರೀರದ ಕಾಂತಿ ನಾಗಕೇಸರ ಪುಷ್ಪದ ಕೇಸರಗಳಂತೆ ಸುವರ್ಣವರ್ಣದ್ದಾಗಿತ್ತು !"

ಶ್ರೀರಾಧೆಯ ದರ್ಶನವನ್ನು ಪಡೆದಾಗಿನಿಂದ ಶ್ರೀರಾಮಕೃಷ್ಣರು ತಮ್ಮನ್ನು ರಾಧೆಯೆಂದೇ ಭಾವಿಸತೊಡಗಿದರು. ಈ ಭಾವ ತೀವ್ರವಾಯಿತು, ತೀವ್ರತರವಾ ಯಿತು. ಆಕೆಯ ಪವಿತ್ರ ಸ್ವರೂಪ—ಪವಿತ್ರ ಚರಿತೆಗಳ ಗಾಢ ಧ್ಯಾನದಿಂದಾಗಿ ಮತ್ತು ತಮ್ಮನ್ನು ಆಕೆಯೊಂದಿಗೆ ಒಂದೆಂದು ಬಗೆದುದರಿಂದಾಗಿ ಅವರು ತಮ್ಮ ಸ್ವಂತ ಅಸ್ತಿತ್ವದ ಬೋಧೆಯನ್ನೇ ಸಂಪೂರ್ಣ ಕಳೆದುಕೊಂಡುಬಿಟ್ಟರು. ಅವರಲ್ಲಿ ಸ್ವಭಾವ ಸಹಜವಾಗಿದ್ದ ಭಗವದ್ಭಕ್ತಿ ಈಗ ಶ್ರೀರಾಧೆಯ ಪ್ರೇಮಾಭಕ್ತಿಯ ರೂಪತಾಳಿತು; ಅದು ಬೆಳೆಯಿತು, ಉತ್ಕಟಾವಸ್ಥೆಗೆ ಏರಿತು. ಆಗ ಅವರ ವ್ಯಕ್ತಿತ್ವದಲ್ಲಿ ಶ್ರೀರಾಧೆ ಹಾಗೂ ಶ್ರೀಚೈತನ್ಯರಲ್ಲಿ ಪ್ರಕಟಗೊಂಡಿದ್ದ ಮಹಾಭಾವದ ಎಲ್ಲ ಲಕ್ಷಣಗಳೂ ವ್ಯಕ್ತವಾಗತೊಡಗಿದುವು. ಭೈರವಿ ಬ್ರಾಹ್ಮಣಿ ಹಾಗೂ ಇತರ ನುರಿತ ಸಾಧಕರನೇಕರು ಇಂತಹ ಅತ್ಯುನ್ನತ ಸಾಕ್ಷಾತ್ಕಾರದ ಲಕ್ಷಣಗಳನ್ನು ಗುರುತಿಸಿ ಪರಮಾಶ್ಚರ್ಯ ಗೊಂಡರು, ಮತ್ತು ಅವರಿಗೆ ಭಕ್ತಿಶ್ರದ್ಧೆಗಳಿಂದ ಪ್ರಣಾಮ ಸಲ್ಲಿಸಿದರು.

ಮುಂದೆ ಮಹಾಭಾವದ ಪ್ರಸ್ತಾಪ ಬಂದಾಗ ಶ್ರೀರಾಮಕೃಷ್ಣರೇ ತಮ್ಮ ಆಪ್ತಶಿಷ್ಯರ ಮುಂದೆ ಹೇಳುತ್ತಾರೆ: "ಹತ್ತೊಂಬತ್ತು ರೀತಿಯ ಭಾವಗಳು ಒಂದೇ ಶರೀರದಲ್ಲಿ ಏಕಕಾಲಕ್ಕೆ ವ್ಯಕ್ತವಾಗುವುದನ್ನೇ ಭಕ್ತಿಶಾಸ್ತ್ರಗಳಲ್ಲಿ ಮಹಾಭಾವವೆಂದು ಬಣ್ಣಿಸಲಾಗಿದೆ. ಇವುಗಳಲ್ಲಿ ಯಾವುದಾದರೂ ಒಂದೇ ಒಂದು ಭಾವವನ್ನಾಶ್ರಯಿಸಿ ಸಾಧನೆ ಮಾಡಿ ಅದನ್ನು ಸಿದ್ಧಿಸಿಕೊಳ್ಳುವುದಕ್ಕೇ ಒಬ್ಬ ವ್ಯಕ್ತಿಗೆ ಒಂದು ಇಡೀ ಜನ್ಮ ಬೇಕಾಗುತ್ತದೆ. ಅಂತಹ ಹತ್ತೊಂಬತ್ತು ಭಾವಗಳೂ (ತಮ್ಮ ಶರೀರವನ್ನು ತೋರಿಸಿ)

ಇದರಲ್ಲಿ ಸಂಪೂರ್ಣ ಪ್ರಕಾಶಕ್ಕೆ ಬಂದಿದ್ದುವು."

ಶ್ರೀಕೃಷ್ಣವಿರಹದ ತೀವ್ರ ದುಃಖದ ಪರಿಣಾಮವಾಗಿ ಶ್ರೀರಾಮಕೃಷ್ಣರ ಪ್ರತಿಯೊಂದು ರೋಮಕೂಪದಿಂದಲೂ ರಕ್ತ ಒಸರಿತು ಎಂಬುದನ್ನು ಹಿಂದೆಯೇ ನೋಡಿದೆವಷ್ಟೆ. ಆ ಘಟನೆ ಸಂಭವಿಸಿದ್ದು ಮಹಾಭಾವದ ಪರಾಕಾಷ್ಠೆಯ ಸಂದರ್ಭದಲ್ಲಿಯೇ. ತಾವೊಬ್ಬ ಸ್ತ್ರೀಯೇ ಹೊರತು ಪುರುಷನಲ್ಲ ಎಂಬ ಭಾವದಲ್ಲಿ ಅವರು ಎಷ್ಟರ ಮಟ್ಟಿಗೆ ನಿರಂತರವಾಗಿ ತನ್ಮಯರಾಗಿದ್ದರೆಂದರೆ ಅವರಿಗೆ ಕನಸಿನಲ್ಲಿಯೂ ಸಹ ತಾವೊಬ್ಬ ಪುರುಷನೆಂಬ ಭಾವನೆ ಕ್ಷಣಮಾತ್ರವಾದರೂ ಮೂಡಲಿಲ್ಲ. ಮತ್ತು ಆಗ ಅವರ ಶರೀರದ ಸಕಲ ಇಂದ್ರಿಯಗಳೂ ಸ್ತ್ರೀಶರೀರದಂತೆಯೇ ವರ್ತಿಸಿದುವು.

ಒಬ್ಬ ವ್ಯಕ್ತಿಯ ಶರೀರವು ಆ ರೂಪದಲ್ಲಿ ಸೃಷ್ಟಿಯಾಗುವುದಕ್ಕೆ ಆತನ ಮನಸ್ಸೇ ಕಾರಣ, ಮತ್ತು ಅವನ ಮನಸ್ಸು ಆತನ ಇಚ್ಛೆಗಳಿಗೆ ಮತ್ತು ಕಾಮನೆಗಳಿಗೆ ಅನುಸಾರವಾಗಿ ಶರೀರವನ್ನು ನಿರಂತರವಾಗಿ ಪುನರ್ನಿರ್ಮಿಸುತ್ತಿರುತ್ತದೆ ಎಂದು ವೇದಾಂತವು ತಿಳಿಸುತ್ತದೆ. ಮನಸ್ಸಿಗೆ ಶರೀರದ ಮೇಲಿರುವ ಹತೋಟಿ ಇಂಥದು ಎಂಬ ವಿಷಯವನ್ನು ಕೇಳಿದಾಗಲೂ ನಾವು ಅದರ ಮಹತ್ತ್ವವನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲಾರೆವು, ಅಥವಾ ಒಪ್ಪಲಾರೆವು. ಏಕೆಂದರೆ ನಮಗೆ ಅಂತಹ ಅನುಭವವಾಗಿಲ್ಲವಲ್ಲ! ನಮ್ಮ ಮನಸ್ಸನ್ನು ಹಾಗೆ ಇತರೆಲ್ಲ ವಸ್ತುಗಳಿಂದ ವಿಮುಖವಾಗಿಸಿ ತನ್ನೆಡೆಗೇ ಸೆಳೆದು, ತನ್ನಲ್ಲಿಯೇ ಆ ಮನಸ್ಸು ಏಕಾಗ್ರಗೊಳ್ಳುವಂತೆ ಮಾಡುವ ಮತ್ತು ತನ್ಮೂಲಕ ಮನಸ್ಸಿನ ಅಪಾರ ಶಕ್ತಿಗಳು ವ್ಯಕ್ತಗೊಳ್ಳುವಂತೆ ಮಾಡುವ ವಸ್ತುವಾದರೂ ನಮ್ಮ ಪಾಲಿಗೆ ಯಾವುದಿದೆ? ಆದರೆ ಶ್ರೀರಾಮಕೃಷ್ಣರ ಮನಸ್ಸಿನಲ್ಲಿ ಉದಿಸಿದ ಪ್ರಬಲ ಕಾಮನೆಯಿಂದಾಗಿ ಕೆಲಕಾಲದಲ್ಲೇ ಅವರ ಶರೀರ ಆ ರೀತಿಯಾಗಿ ಪರಿವರ್ತಿತವಾದುದು ವೇದಾಂತದ ವಾಕ್ಯಕ್ಕೊಂದು ಸಾಕ್ಷ್ಯ. ಅವರ ಆಧ್ಯಾತ್ಮಿಕ ಅನುಭವಗಳನ್ನು, ಹಿಂದಿನ ಯುಗಗಳ ಸಾಧಕರ ಹಾಗೂ ಸಿದ್ಧಪುರುಷರ ಅನುಭವಗಳೊಂದಿಗೆ ಹೋಲಿಸಿ ನೋಡುವ ಉದ್ದೇಶದಿಂದ ಮುಂದೆ ಪದ್ಮಲೋಚನನೇ ಮೊದಲಾದ ಪಂಡಿತಶ್ರೇಷ್ಠರು ಅವರನ್ನು ಆ ಬಗ್ಗೆ ಪ್ರಶ್ನಿಸುತ್ತಾರೆ. ಆಗ ಅವರು ತಿಳಿಸಿದ ಪರಮಾದ್ಭುತ ಸಂಗತಿಗಳನ್ನು ಕೇಳಿ ಆ ಪಂಡಿತರು, "ಸ್ವಾಮಿ, ನಿಮ್ಮ ಅನುಭವಗಳು ವೇದ ಪುರಾಣಗಳನ್ನೂ ಅತಿಕ್ರಮಿಸಿ ಬಹುದೂರ ಸಾಗಿವೆ!" ಎಂದುದ್ಗರಿಸುತ್ತಾರೆ. ಆ ಸಂಗತಿಗಳನ್ನು ಕೇಳಿದಾಗ ನಾವಾದರೂ ಕೂಡ ಅವು ಶರೀರಶಾಸ್ತ್ರಜ್ಞಾನದ ಸದ್ಯದ ಪರಿಮಿತಿಯನ್ನು ದಾಟಿಹೋಗಿವೆಯೆಂದು ಒಪ್ಪಲೇಬೇಕು!

ಶ್ರೀರಾಮಕೃಷ್ಣರು ರಾಧಾಭಾವವನ್ನು ತಳೆದು ಹಗಲಿರುಳೂ ಆಕೆಯ ಧ್ಯಾನದಲ್ಲೇ ಮುಳುಗಿಹೋಗಿದ್ದುದು ಮಧುರಭಾವಸಾಧನೆಯ ಮೂಲಕ ಭಗವತ್ಸಾಕ್ಷಾತ್ಕಾರ ಪಡೆದುಕೊಳ್ಳಲೆಂದೇ ಅಲ್ಲವೆ? ಅವರು ಶ್ರೀಕೃಷ್ಣನನ್ನು ತಮ್ಮ ಆಧ್ಯಾತ್ಮಿಕ ಪತಿ ಎಂಬ ಭಾವದಿಂದ ಸಾಧನೆ ಮಾಡುತ್ತ ಸಾಧನೆಯ ತುತ್ತತುದಿಯನ್ನು ಮುಟ್ಟಿದ ಮೇಲೆ ಅವರಿಗೆ ರಾಧಾರಾಣಿಯ ಕೃಪೆ ದೊರಕಿತು. ಇದಾದ ಕೆಲಕಾಲದಲ್ಲೇ ಅವರಿಗೆ ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣ ಭಗವಂತನ ಪವಿತ್ರ ದರ್ಶನವೂ ಲಭಿಸಿತು. ಹಿಂದಿನ ದರ್ಶನಗಳಂತೆಯೇ, ಈ ದರ್ಶನದಲ್ಲಿ ಗೋಚರ

ವಾದ ಶ್ರೀಕೃಷ್ಣನ ಚಿನ್ಮಯಮೂರ್ತಿ ಅವರ ಶರೀರದಲ್ಲಿ ಬೆರೆತು ಲೀನವಾಯಿತು.

ಹೀಗೆ ಮಧುರಭಾವದ ಚರಮಾವಸ್ಥೆಯನ್ನು ತಲುಪಿ ಕೃತಕೃತ್ಯರಾದ ಶ್ರೀರಾಮಕೃಷ್ಣರು ಕೆಲಕಾಲ ಆ ಅಲೌಕಿಕ ಆನಂದವನ್ನು ಸವಿಯುತ್ತ ಉನ್ಮತ್ತರಾಗಿದ್ದರು; ಶ್ರೀಕೃಷ್ಣನ ಭಾವದಲ್ಲೇ ಸಂಪೂರ್ಣ ಮೈಮರೆತಿದ್ದರು. ಪರಬ್ರಹ್ಮದಿಂದ ಹಿಡಿದು ಒಂದು ಹುಲ್ಲುಕಡ್ಡಿಯವರೆಗೆ ಸಕಲ ಚರಾಚರ ವಸ್ತುಗಳೂ ಶ್ರೀಕೃಷ್ಣನ ಆವಿರ್ಭಾವಗಳೆಂದು ಮತ್ತು ಸ್ವತಃ ತಮ್ಮನ್ನೂ ಶ್ರೀಕೃಷ್ಣನೆಂದು ಪರಿಭಾವಿಸುತ್ತಿದ್ದರು. ಮುಂದೆ ಅವರು ತೋತಾಪುರಿಯ ನೆರವಿನಿಂದ ಅದ್ವೈತಸಾಧನೆಯನ್ನು ಕೈಗೊಳ್ಳುವವರೆಗೂ ಈ ಮಧುರಭಾವ ಮುಂದುವರಿಯಿತು.

ಶ್ರೀರಾಮಕೃಷ್ಣರು ಮಧುರಭಾವದ ಆನಂದದಲ್ಲಿ ಮುಳುಗಿದ್ದ ಸಮಯದಲ್ಲಿ ಅವರಿಗೆ ಮತ್ತೊಂದು ಮಹತ್ವದ ದರ್ಶನವಾಯಿತು. ಒಂದು ದಿನ ಅವರು ವಿಷ್ಣು ದೇವಾಲಯದ ಮುಂದೆ ಕುಳಿತು ಪಂಡಿತರೊಬ್ಬರ ಭಾಗವತ ವಾಚನವನ್ನು ಆಲಿಸುತ್ತಿದ್ದರು. ಆಗ ಇದ್ದಕ್ಕಿದ್ದಂತೆ ಅವರಿಗೆ ಶ್ರೀಕೃಷ್ಣನ ಜ್ಯೋತಿರ್ಮಯ ರೂಪದ ದರ್ಶನವಾಯಿತು. ತಕ್ಷಣ ಅವರು ಭಾವಸಮಾಧಿಗೇರಿದರು. ಆ ಸ್ಥಿತಿಯಲ್ಲಿ ಅವರು, ಶ್ರೀಕೃಷ್ಣನ ಪಾದಪದ್ಮಗಳಿಂದ ಹಗ್ಗದ ರೂಪದಲ್ಲಿ ಜ್ಯೋತಿಯೊಂದು ಹೊಮ್ಮಿ ಮೊದಲು ಭಾಗವತ ಗ್ರಂಥವನ್ನೂ ಬಳಿಕ ತಮ್ಮ ಹೃದಯವನ್ನೂ ಸ್ಪರ್ಶಿಸಿ ಕೆಲಕಾಲ ಮೂರನ್ನೂ ಒಟ್ಟುಗೂಡಿಸಿದಂತೆ ಕಂಡರು.

ಈ ದರ್ಶನದಿಂದ ಶ್ರೀರಾಮಕೃಷ್ಣರಿಗೆ ಒಂದು ವಿಷಯ ಮನದಟ್ಟಾಯಿತು. ಅದೇನೆಂದರೆ ಭಾಗವತ, ಭಕ್ತ ಮತ್ತು ಭಗವಂತ—ಈ ಮೂರೂ ಬೇರೆ ಬೇರೆ ವಸ್ತುಗಳಾಗಿ ಕಂಡರೂ ನಿಜಕ್ಕೂ ಅವು ಒಂದೇ ಪದಾರ್ಥ; ಅರ್ಥಾತ್ ಈ ಮೂರೂ ಒಂದೇ ಸತ್ಯದ ವಿವಿಧ ರೂಪಗಳು ಮಾತ್ರ, ಎಂದು. ಆದ್ದರಿಂದ ಅವರು ಮುಂದೆ ಆಗಾಗ ಹೇಳುತ್ತಿದ್ದರು, "ಭಾಗವತ, ಭಕ್ತ ಮತ್ತು ಭಗವಾನ್—ಈ ಮೂರೂ ಒಂದೇ ಮತ್ತು ಒಂದೇ ಮೂರೂ ಆಗಿದೆ" ಎಂದು.

೪೫

## ಧನ್ಯೆ ನೀ ಚಂದ್ರಮಣಿ !

ಶ್ರೀರಾಮಕೃಷ್ಣರು ಆಧ್ಯಾತ್ಮಿಕ ಸಾಧನೆಗಳನ್ನು ವಿಧ್ಯುಕ್ತವಾಗಿ ಪ್ರಾರಂಭಿಸಿ ಸುಮಾರು ಒಂಬತ್ತು ವರ್ಷವಾಗಿತ್ತು. ಪ್ರಾಪಂಚಿಕ ಸುಖದ ಆಕರ್ಷಣೆಯನ್ನು ಸಂಪೂರ್ಣವಾಗಿ ಕಡಿದುಕೊಂಡು, ನಿರಂತರವಾಗಿ ಭಗವತ್ಸಾಕ್ಷಾತ್ಕಾರದ ಪ್ರಯತ್ನ ದಲ್ಲಿಯೇ ನಿರತರಾಗಿದ್ದುದರಿಂದ ಅವರ ಮನಸ್ಸೀಗ ಎಂತಹ ಸ್ಥಿತಿಗೆ ತಲುಪಿತ್ತೆಂದರೆ, ಭಗವಂತನಿಗೆ ಸಂಬಂಧ ಪಡದ ಯಾವುದೇ ವಿಚಾರವಾದರೂ ಅವರಿಗೆ ವಿಷಪ್ರಾಯವಾಗಿ ತೋರುತ್ತಿತ್ತು. ಭಗವಂತನೇ ಈ ಸೃಷ್ಟಿಯ ಸಕಲ ಸಾರ, ಪರಾತ್ಪರ ವಸ್ತು ಎಂಬ ನಂಬಿಕೆ ಅವರಲ್ಲಿ ಹೆಚ್ಚು ಆಳವಾದಂತೆಲ್ಲ ಇಹದಲ್ಲಾಗಲಿ ಪರದಲ್ಲಾಗಲಿ ಭಗವಂತನಲ್ಲದೆ ಬೇರೆಲ್ಲ ವಸ್ತುಗಳ ಬಗ್ಗೆಯೂ ಅವರು ಹೆಚ್ಚೆಚ್ಚು ಉದಾಸೀನರಾಗುತ್ತ, ವಿಮುಖರಾಗುತ್ತ ಬಂದರು.

ಸಕಲ ಲೌಕಿಕ ವಿಷಯಗಳನ್ನೂ ಮರೆತು ಸ್ವಂತ ದೇಹದ ಸುಖದುಃಖಗಳನ್ನೂ ನಿರ್ಲಕ್ಷಿಸಿದ ಶ್ರೀರಾಮಕೃಷ್ಣರಿಗೆ ತಮ್ಮ ಇಷ್ಟವಸ್ತುವಾದ ಭಗವಂತನ ಮೇಲೆ ಮನಸ್ಸನ್ನು ಏಕಾಗ್ರಗೊಳಿಸುವುದೆಂದರೆ ಲೀಲಾಜಾಲ. ಎಷ್ಟರಮಟ್ಟಿಗೆಂದರೆ, ಕ್ಷಣಮಾತ್ರದಲ್ಲಿ ಆ ಮನಸ್ಸು ಬಾಹ್ಯಪ್ರಪಂಚದ ವಸ್ತುಗಳಿಂದ ತನ್ನನ್ನು ಹಿಂದೆಳೆದುಕೊಂಡು, ತನ್ನ ಇಷ್ಟದೇವತೆಯಲ್ಲಿ ಲಯಗೊಂಡು ದಿವ್ಯಾನಂದವನ್ನು ಸವಿಯ ಬಹುದಾಗಿತ್ತು. ಹೀಗೆಯೇ ದಿನಗಳು ತಿಂಗಳುಗಳು ವರ್ಷಗಳು ಸರಿಯುತ್ತಿದ್ದರೂ ಅವರ ಆ ಅಪೂರ್ವ ಅಲೌಕಿಕ ಆನಂದ ಮಾತ್ರ ಅವರನ್ನು ಅರೆಘಳಿಗೆಯಾದರೂ ಬಿಡಲಿಲ್ಲ; ಅಥವಾ ಭಗವಂತನನ್ನುಳಿದು ಈ ಜಗತ್ತಿನಲ್ಲಿ ಬಯಸಲು ಯೋಗ್ಯವಾದಂತಹ ವಸ್ತು ಯಾವುದಾದರೂ ಇರಬಹುದೆಂಬ ಆಲೋಚನೆಯೂ ಅವರ ಮನಸ್ಸಿನಲ್ಲಿ ಸುಳಿಯಲಿಲ್ಲ. ಅಲ್ಲದೆ, 'ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಃ ಶರಣಂ ಸುಹೃತ್' ಎಂದು ಗೀತೆಯಲ್ಲಿ ಹೇಳಿದಂತೆ, ಜಗನ್ಮಾತೆಯೇ ತಮ್ಮ ಏಕೈಕ ಆಧಾರ, ಒಡತಿ, ಸಾಕ್ಷಿ, ಆಶ್ರಯ, ಸ್ನೇಹಿತೆ ಎಂದು ನಂಬಿದ್ದ ಶ್ರೀರಾಮಕೃಷ್ಣರು ಆಕೆಯಲ್ಲಿ ಅನಂತ ಭಕ್ತಿಶ್ರದ್ಧೆಗಳನ್ನಿರಿಸಿ ಆಕೆಯಲ್ಲಿಯೇ ಶರಣಾಗತರಾಗಿದ್ದರು. ತಾವು ಮಾಡಬೇಕಾಗಿ ಬಂದ ಪ್ರತಿಯೊಂದು ಕಾರ್ಯವನ್ನೂ—ಅದು ದೊಡ್ಡದಿರಲಿ, ಸಣ್ಣದಿರಲಿ—ಜಗನ್ಮಾತೆಯ ಆಜ್ಞೆಯ, ಇಲ್ಲವೆ ಸೂಚನೆಯ ಅನುಸಾರವೇ ನಡೆಸುತ್ತಿದ್ದರು. ಏಕೆಂದರೆ ಸಾಧಕನು ಜಗನ್ಮಾತೆಯನ್ನು ಶಿಶುಸಹಜ ಸರಳತೆಯಿಂದ ಆಶ್ರಯಿಸಿದ್ದೇ ಆದರೆ ಅವನು ಆಕೆಯ ನಿರಂತರ ಸಾನ್ನಿಧ್ಯವನ್ನು ಅನುಭವಿಸ

ಬಹುದು, ಅವಳ ಮಧುರ ನುಡಿಗಳ ಸವಿಯನ್ನುಣ್ಣಬಹುದು, ಆಕೆಯ ಅಭಯ ಹಸ್ತಗಳ ರಕ್ಷಣೆಯನ್ನು ಪಡೆಯಬಹುದು ಎಂಬುದನ್ನವರು ಕಂಡುಕೊಂಡಿದ್ದರು.

ಆದರೆ ಜಗತ್ಕಾರಣಳಾದ ದೇವಿಯು ಸದಾ ತಮ್ಮ ಸ್ವಂತ ತಾಯಿಯಂತೆ ಸನಿಹದಲ್ಲೇ ಇರುತ್ತಾಳೆಂದು ಅರಿತ ಮೇಲೆಯೂ ಅವರು ಸಾಧನೆಗಳಲ್ಲಿ ತೊಡಗಿದ ರೇಕೆ ? ಮುಮುಕ್ಷುಗಳು ಎಲ್ಲ ಬಗೆಯ ಜಪತಪಸಾಧನೆಗಳನ್ನು ಕೈಗೊಳ್ಳುವುದೇ ಭಗವತಿಯ ಸಾಕ್ಷಾತ್ಕಾರ ಪಡೆದುಕೊಳ್ಳುವ ಅತ್ಯುನ್ನತ ಅಭಿಲಾಷೆಯಿಂದ. ಅಂತಹ ಆಕೆಯನ್ನು ಶ್ರೀರಾಮಕೃಷ್ಣರು ಪರಮ ಆತ್ಮೀಯ ರೂಪದಲ್ಲಿ ಪಡೆದುಕೊಂಡಾಗಿತ್ತು. ಹಾಗಿರುವಾಗ ಅವರು ಮತ್ತೂ ಸಾಧನೆ ಕೈಗೊಳ್ಳುವ ಆವಶ್ಯಕತೆಯೇನಿತ್ತು ? ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಹಿಂದೆಯೇ ಒಮ್ಮೆ ಈ ಪ್ರಶ್ನೆಯನ್ನು ಒಂದು ದೃಷ್ಟಿಕೋನದಿಂದ ಪರಿಶೀಲಿಸಿದ್ದೇವೆ. ಈಗ ಅದರ ಬಗ್ಗೆ ಇನ್ನೊಂದೆರಡು ಅಂಶಗಳನ್ನು ನೋಡಬಹುದು.

ಶ್ರೀರಾಮಕೃಷ್ಣರ ಸಾಧನಾಮಯ ಜೀವನದ ಬಗ್ಗೆ ತಿಳಿದ ಅವರ ಶಿಷ್ಯರಲ್ಲೂ ಹಲವರಿಗೆ ಇದೇ ಪ್ರಶ್ನೆ ಎದುರಾಗಿತ್ತು. ಆ ಸಂಶಯವನ್ನವರು ನೇರವಾಗಿ ಶ್ರೀರಾಮಕೃಷ್ಣರ ಮುಂದಿಟ್ಟರು. ಅದಕ್ಕೆ ಅವರು ನೀಡಿದ ಉತ್ತರ ಸರಳವಾಗಿದೆ, ಮನಮುಟ್ಟುವಂತಿದೆ:

"ಇಲ್ಲಿ ನೋಡಿ, ಸಮುದ್ರದ ತೀರದಲ್ಲಿಯೇ ವಾಸಮಾಡುವವನ ಮನಸ್ಸಿನಲ್ಲಿ ಕೆಲವೊಮ್ಮೆ ಕುತೂಹಲ ಹುಟ್ಟುತ್ತದೆ—'ರತ್ನಾಕರನೆಂದು ಕರೆಯಲ್ಪಡುವ ಈ ಸಮುದ್ರದ ಗರ್ಭದಲ್ಲಿ ಎಷ್ಟೆಷ್ಟು ಬಗೆಯ, ಎಷ್ಟೆಷ್ಟು ಸಂಖ್ಯೆಯ ಅದ್ಭುತ ರತ್ನಗಳೆಲ್ಲ ಇರಬಹುದು ! ಅವುಗಳನ್ನೆಲ್ಲ ನಾನು ನೋಡಲೇಬೇಕು' ಎಂದು. ಹಾಗೆಯೇ ನನ್ನ ವಿಷಯದಲ್ಲೂ ಕೂಡ. ನಾನು ಜಗನ್ಮಾತೆಯನ್ನು ಸಾಕ್ಷಾತ್ಕರಿಸಿಕೊಂಡಿದ್ದೆ. ಸದಾ ಕಾಲವೂ ಆಕೆ ನನ್ನ ಸನಿಹದಲ್ಲೇ ಇರುವುದನ್ನು ಅನುಭವಿಸುತ್ತಿದ್ದೆ. ಆದರೂ ಕೂಡ ಅನಂತರೂಪಿಣಿಯೂ ಅನಂತಭಾವಮಯಿಯೂ ಆದ ಆಕೆಯನ್ನು, ಆಕೆ ಕೃಪೆಮಾಡಿ ಎಷ್ಟೆಷ್ಟು ಭಾವ-ರೂಪಗಳಿಂದ ವ್ಯಕ್ತಳಾಗಲು ಇಚ್ಛಿಸುತ್ತಾಳೋ, ಅಷ್ಟೂ ರೀತಿಗಳಿಂದ ನೋಡಬೇಕೆಂಬ ಹಂಬಲ ನನ್ನ ಮನದಲ್ಲಿ ಉದಿಸುತ್ತಿತ್ತು. ಆದ್ದರಿಂದ, ಆಕೆಯನ್ನು ಯಾವುದಾದರೊಂದು ವಿಶಿಷ್ಟಭಾವದಿಂದ ಕಂಡು ಆನಂದಿಸಬೇಕೆಂಬ ಇಚ್ಛೆಯುಂಟಾದಾಗಲೆಲ್ಲ ಅದಕ್ಕಾಗಿ ಅವಳನ್ನು ವ್ಯಾಕುಲತೆಯಿಂದ ಪ್ರಾರ್ಥಿಸುತ್ತಿದ್ದೆ. ಕೃಪಾಮಯಿಯಾದ ಜಗನ್ಮಾತೆಯೂ ಕೂಡ, ಆಗ ತನ್ನನ್ನು ಆ ರೂಪದಲ್ಲಿ ನೋಡಲು ಬೇಕಾದುದನ್ನೆಲ್ಲ ಒದಗಿಸಿಕೊಟ್ಟು, ಅಗತ್ಯವಾದ ಸಾಧನೆಗಳನ್ನೆಲ್ಲ ನನ್ನಿಂದ ಮಾಡಿಸಿ, ಬಳಿಕ ನನಗೆ ಆ ರೂಪದಲ್ಲೇ ದರ್ಶನಕೊಡುತ್ತಿದ್ದಳು. ನಾನು ಹಲವಾರು ಮತಗಳ ಸಾಧನೆಗಳನ್ನು ಕೈಗೊಂಡದ್ದು ಆ ಒಬ್ಬಳೇ ಭಗವತಿಯ ನಾನಾ ರೂಪಗಳನ್ನು, ನಾನಾ ಭಾವಗಳನ್ನು ಅನುಭವಿಸಲೆಂದೇ."

ಆದ್ದರಿಂದಲೇ ಅವರು ದಾಸ್ಯಭಾವದಿಂದ ಸಾಧನೆಗೈದು ಸೀತಾದರ್ಶನ ಮಾಡಿದರು; ವಾತ್ಸಲ್ಯಭಾವದಿಂದ ಸಾಧನೆಗೈದು ಬಾಲರಾಮನ ದಿವ್ಯ ಸಹವಾಸವನ್ನು ಅನುಭವಿಸಿದರು; ಮಧುರಭಾವದಿಂದ ಸಾಧನೆಗೈದು ಶ್ರೀಕೃಷ್ಣನ ದಿವ್ಯ

ಮಿಲನವನ್ನನುಭವಿಸಿದರು.

ಈ ವೇಳೆಗೆ ಶ್ರೀರಾಮಕೃಷ್ಣರ ವೃದ್ಧಮಾತೆ ಚಂದ್ರಮಣಿದೇವಿ ಕಾಮಾರ ಪುಕುರದಿಂದ ದಕ್ಷಿಣೇಶ್ವರಕ್ಕೆ ಆಗಮಿಸಿ ಮಗನೊಂದಿಗೆ ವಾಸಿಸತೊಡಗಿದ್ದಳು. ಹಿರಿಯ ಮಗ ರಾಮಕುಮಾರ ತೀರಿಕೊಂಡಮೇಲೆ ಅವಳ ಪಾಲಿಗೆ ಈ ಜಗತ್ತಿನಲ್ಲಿನ್ನು ಯಾವ ಆಕರ್ಷಣೆಯೂ ಉಳಿದಿರಲಿಲ್ಲ. ಯಾರ್ಯಾರಿಗಾಗಿ ತಾನು ಜೀವಿಸಿದ್ದಳೋ ಅವರೇ ಒಬ್ಬೊಬ್ಬರಾಗಿ ತನ್ನನ್ನೂ ಈ ಲೋಕವನ್ನೂ ಬಿಟ್ಟುಹೋಗುತ್ತಿರುವಾಗ, ತಾನು ಈ ಇಳಿವಯಸ್ಸಿನಲ್ಲಿ ಸಂಸಾರಕ್ಕೆ ಅಂಟಿಕೊಂಡಿರುವುದರಿಂದೇನು ಪ್ರಯೋಜನ? ಆದ್ದರಿಂದ ತನ್ನ ಉಳಿದ ಜೀವಿತಾವಧಿಯನ್ನು ಭಗವಚ್ಚಿಂತನೆ ಮಾಡುತ್ತ ಪವಿತ್ರ ಗಂಗಾತೀರದಲ್ಲಿ ಕಳೆಯುವುದೆಂದು ನಿರ್ಧರಿಸಿ ದಕ್ಷಿಣೇಶ್ವರಕ್ಕೆ ಹೊರಟು ಬಂದುಬಿಟ್ಟಳು. ಅವಳು ಅಲ್ಲಿಗೆ ಬಂದದ್ದು ೧೮೬೭ರಲ್ಲಿ. ಮಥುರ ಬಾಬು ಅನ್ನಮೇರು ವ್ರತವನ್ನು ನಡೆಸಿದ ಸಮಯದಲ್ಲಿ ಆಕೆ ಅಲ್ಲಿಯೇ ಇದ್ದಳು. ಇದಾದ ಮೇಲೆ ಆಕೆ ಹನ್ನೆರಡು ವರ್ಷಗಳ ಕಾಲ ಜೀವಿಸಿದಳು. ಶ್ರೀರಾಮಕೃಷ್ಣರು ಜಟಾಧಾರಿಯಿಂದ ರಾಮಲಾಲನ ವಿಗ್ರಹವನ್ನು ಸ್ವೀಕರಿಸಿದ್ದು, ವಾತ್ಸಲ್ಯ-ಮಧುರ ಭಾವಗಳಲ್ಲಿ ಸಾಧನೆ ಮಾಡಿದ್ದು, ಬಳಿಕ ತೋತಾಪುರಿಯಿಂದ ಸಂನ್ಯಾಸ ಸ್ವೀಕರಿಸಿ ಅದ್ವೈತ ಸಾಧನೆ ಮಾಡಿದ್ದು—ಈ ಎಲ್ಲಕ್ಕೂ ಅವಳು ಸಾಕ್ಷಿಯಾಗಿದ್ದಳು.

ನಾವು ಈಗಾಗಲೇ ನೋಡಿರುವಂತೆ ಚಂದ್ರಮಣಿದೇವಿ ಧರ್ಮಭೀರು, ದೈವಭಕ್ತೆ. ಅವಳೆಂದೂ ಶ್ರೀಮಂತ ಜೀವನವನ್ನು ನಡೆಸಿದವಳೇ ಅಲ್ಲ. ಬಡ ಕ್ಷುದಿರಾಮನ ಹೆಂಡತಿಯಾಗಿ ಅವಳು ಏನನ್ನು ತಾನೆ ನಿರೀಕ್ಷಿಸಲು ಸಾಧ್ಯ? ಒಡವೆ ವಸ್ತ್ರಗಳ ವಿಚಾರ ಹಾಗಿರಲಿ, ಎರಡು ಹೊತ್ತಿನ ತುತ್ತು ತಪ್ಪದಿದ್ದರೆ ಅದೇ ದೊಡ್ಡ ಮಾತು. ಆದರೆ ಅವಳು ಅದರಲ್ಲೇ ತೃಪ್ತಿ ಕಂಡುಕೊಂಡಿದ್ದಳು. ಮನಸ್ಸಿನ ಆಳದಲ್ಲಿಯೂ ಕೂಡ ಆಸೆಯ ಕಿಲುಬಿರಲಿಲ್ಲ. ಅದು ಅಭಾವವೈರಾಗ್ಯವಲ್ಲ, ನೈಜ ವಿರಕ್ತಿ. ಇದಕ್ಕೆ ನಿದರ್ಶನವಾಗಿ ಒಂದು ಘಟನೆಯನ್ನು ಹೇಳಬಹುದು.

ಶ್ರೀರಾಮಕೃಷ್ಣರ ಬಗ್ಗೆ ಮಥುರನಿಗೆ ಮೊದಲಿನಿಂದಲೂ ಇದ್ದ ಆದರವು ಗೌರವವಾಗಿ, ಪೂಜ್ಯಭಾವಕ್ಕೆ ತಿರುಗಿ, ಬರಬರುತ್ತ ಅವರೇ ತನ್ನ ಗುರು, ಇಷ್ಟದೈವ, ಸಖ, ಸರ್ವಸ್ವ ಎಂದು ಭಾವಿಸುವ ಸ್ಥಿತಿಗೆ ಬಂದಿದ್ದ. ಅವರಿಗಾಗಿ ತಾನೇನು ಮಾಡಿಯೇನು?—ಎಂಬ ಒಂದೇ ಚಿಂತೆ ಅವನಿಗೆ. ಅವರಿಗೆ ಬೇಕಾದುದನ್ನೆಲ್ಲ ಒದಗಿಸಿಕೊಡಲು ಸದಾ ತುದಿಗಾಲಿನ ಮೇಲೆ ನಿಂತಿದ್ದ. ಆದರೆ ಅವರಿಗಾದರೂ ಏನು ಬೇಕು? ಅವರ ಸಾಧನಾದಿಗಳಿಗೆ ಅಗತ್ಯವಾದ ಒಂದೆರಡು ವಸ್ತುಗಳನ್ನು ಬಿಟ್ಟರೆ ಇನ್ನೇನು ಕೊಡಲೂ ಮಥುರನಿಗೆ ಅವಕಾಶವಿರಲಿಲ್ಲ. ತನ್ನ ಕಾಲಾನಂತರವೂ ಅವರಿಗೆ ಅನುಕೂಲವಾಗುವಂತೆ ಏನಾದರೂ ಭೂಮಿ ಕಾಣಿಯನ್ನು ಅವರ ಹೆಸರಿಗೆ ಬರೆದಿಡಬೇಕೆಂಬ ಆಸೆ ಆತನಿಗೆ. ಆದರೆ ಅವರ ಪ್ರಖರ ವೈರಾಗ್ಯವನ್ನು ಕಂಡು ಅವರೊಂದಿಗೆ ಆ ವಿಷಯವನ್ನು ಪ್ರಸ್ತಾಪಿಸಲು ದಿಗಿಲು. ಅದು ಬೆಂಕಿಯೊಡನೆ ಆಟವಾಡಿದಂತೆ ಎಂದು ಅವನಿಗೆ ಗೊತ್ತು. ಆದರೂ... ಆ ಬಗ್ಗೆ ಶ್ರೀರಾಮಕೃಷ್ಣರು ಏನು ಹೇಳಿಯಾರು? ಏನೋ ಒಂದು ವೇಳೆ ಒಪ್ಪಿದರೂ

ಒಪ್ಪಬಹುದು! ಹೀಗೆ ಆಲೋಚಿಸಿದ ಮಥುರ. ಒಂದು ದಿನ ಅವರು ಸನಿಹದಲ್ಲೇ ನಿಂತಿದ್ದಾಗ ಅವರ ಕಿವಿಗೆ ಬೀಳುವಂತೆ ಆ ವಿಷಯವಾಗಿ ಹೃದಯನೊಂದಿಗೆ ಮಾತ ನಾಡಲಾರಂಭಿಸಿದ. ಶ್ರೀರಾಮಕೃಷ್ಣರಿಗೆ ಅವನ ಮಾತು ಕೇಳಿಸಿತೋ ಇಲ್ಲವೋ, ಕ್ರುದ್ಧರಾಗಿ ಅವನ ಮೇಲೇರಿ ಬಂದರು. "ಎಲಾ ದುರುಳ! ನನ್ನನ್ನೊಬ್ಬ ಪ್ರಾಪಂಚಿಕ ನನ್ನಾಗಿ ಮಾಡಲು ನೋಡುತ್ತಿದ್ದೀಯಾ?" ಎಂದು ಕೂಗುತ್ತ ಹುಚ್ಚನಂತೆ ಅವ ನನ್ನು ಅಟ್ಟಿಸಿಕೊಂಡು ಹೋದರು! ಇದಾದ ಮೇಲೆ ಮಥುರನಿಗೆ ಮತ್ತೆ ಆ ವಿಷಯವನ್ನೆತ್ತಲು ಧೈರ್ಯ ಸಾಲಲಿಲ್ಲ. ಆದರೆ ಮನದಲ್ಲಿ ಆ ಅಭಿಲಾಷೆ ಇದ್ದೇ ಇತ್ತು.

ಚಂದ್ರಮಣಿ ದಕ್ಷಿಣೇಶ್ವರಕ್ಕೆ ಬಂದು ನೆಲಸಿದಾಗ ಮಥುರನ ಆಸೆ ಮತ್ತೆ ಚಿಗುರಿತು. ಶ್ರೀರಾಮಕೃಷ್ಣರು ಬೇಡವೆಂದರೆ ಇವಳೂ ಬೇಡವೆನ್ನಬೇಕಾದ ಕಾರಣ ವಿಲ್ಲವಲ್ಲ! ಆದ್ದರಿಂದ ಉಪಾಯವಾಗಿ ಆಕೆಯ ಮನವೊಲಿಸಿಕೊಳ್ಳುವ ಪ್ರಯತ್ನ ನಡೆಸಿದ. ಅವಳನ್ನು 'ಅಜ್ಜೀ, ಅಜ್ಜೀ' ಎಂದು ಕರೆಯುತ್ತ ಪ್ರತಿದಿನವೂ ಬಂದು ನೋಡಿಕೊಂಡು ಹೋಗತೊಡಗಿದ. ಆ ವಿಷಯ ಈ ವಿಷಯ ಮಾತನಾಡುತ್ತ ಸ್ವಲ್ಪ ಹೊತ್ತು ಕಳೆಯುತ್ತಿದ್ದ. ಒಂದು ದಿನ ಒಳ್ಳೆಯ ಸಮಯ ನೋಡಿಕೊಂಡು, ಮೆಲ್ಲನೆ ತನ್ನ ಮನದಿಂಗಿತವನ್ನು ವ್ಯಕ್ತ ಪಡಿಸಿದ—

"ಅಜ್ಜೀ, ನೀವಿಲ್ಲಿಗೆ ಬಂದು ಇಷ್ಟು ದಿನವಾಯಿತು. ಆದರೆ ಒಂದುಸಲವೂ ನನ್ನಿಂದ ನೀವು ಯಾವ ಸೇವೆಯನ್ನೂ ಸ್ವೀಕರಿಸಲಿಲ್ಲ. ನೀವು ನಿಜವಾಗಿಯೂ ನನ್ನನ್ನು ನಿಮ್ಮವನೇ ಎಂದು ಭಾವಿಸುವುದಾದರೆ ನಿಮಗೆ ಬೇಕಾದ ಏನನ್ನಾದರೂ ದಯವಿಟ್ಟು ನನ್ನಿಂದ ಸ್ವೀಕರಿಸಬೇಕು."

ಇದನ್ನು ಕೇಳಿ, ಸರಳ ಹೃದಯದ ವೃದ್ಧೆ ಚಂದ್ರಮಣಿ ಪೇಚಾಟಕ್ಕೆ ಸಿಕ್ಕಿಕೊಂಡಳು. ಇವನಿಂದ ಏನು ತೆಗೆದುಕೊಳ್ಳುವುದು? ತನಗಾದರೂ ಏನು ತಾನೆ ಬೇಕು? ಯೋಚಿಸಿದಳು, ಯೋಚಿಸಿದಳು; ಆದರೆ ಏನೂ ತೋಚಲಿಲ್ಲ! ಕಡೆಗೆ ಅವಳು, "ಮಗೂ, ನಿನ್ನನ್ನು ದೇವರು ಚೆನ್ನಾಗಿಟ್ಟಿರಲಪ್ಪ. ನಿನ್ನ ಪ್ರೀತಿ-ವಿಶ್ವಾಸಗಳಿಂ ದಾಗಿ ಸದ್ಯಕ್ಕೆ ನನಗೆ ಯಾವುದಕ್ಕೂ ಕೊರತೆಯಿಲ್ಲ. ನನಗೆ ಏನಾದರೂ ಬೇಕಾದಾಗ ನಾನಾಗಿಯೇ ನಿನ್ನನ್ನು ಕೇಳುತ್ತೇನೆ" ಎನ್ನುತ್ತ ತನ್ನ ಪೆಟ್ಟಿಗೆಯನ್ನು ತೆಗೆದು ತೋರಿಸಿ ಹೇಳಿದಳು: "ನೋಡು, ಉಡಲು ನನಗೆ ಇಷ್ಟೊಂದು ಸೀರೆಗಳಿವೆ! ಇನ್ನು ನಿನ್ನ ದಯೆಯಿಂದ ಇಲ್ಲಿ ಊಟೋಪಚಾರಕ್ಕಂತೂ ಕೊರತೆಯೇ ಇಲ್ಲ. ಏನೇನು ಬೇಕೋ ಎಲ್ಲಕ್ಕೂ ನೀನೇ ವ್ಯವಸ್ಥೆ ಮಾಡಿಕೊಟ್ಟಿದ್ದೀಯೆ; ಈಗಲೂ ಮಾಡು ತ್ತಿದ್ದೀಯೆ. ಹಾಗಿರುವಾಗ ಮತ್ತಿನ್ನೇನು ಕೇಳಲಿ?"

ಆದರೆ ಮಥುರನಿಗೆ ಇದರಿಂದ ಸಮಾಧಾನವಾಗಲಿಲ್ಲ. ಅವನು ಅಷ್ಟಕ್ಕೇ ಸುಮ್ಮನಾಗುವವನೂ ಅಲ್ಲ. ಪಟ್ಟು ಬಿಡದೆ ಕಾಡಿದ:

"ಇಲ್ಲ ಅಜ್ಜಿ, ನೀವು ಹಾಗೆನ್ನಬಾರದು. ನನ್ನಿಂದ ಏನನ್ನಾದರೂ ಸ್ವೀಕರಿಸಲೇ ಬೇಕು ನೀವು. ಯೋಚಿಸಿ ನೋಡಿ. ಏನನ್ನಾದರೂ ಸರಿಯೆ."

ಚಂದ್ರಮಣಿ ಈಗ ಯೋಚಿಸಲೇಬೇಕಾಯಿತು. ಏಕೆಂದರೆ ಹಿಡಿದ ಪಟ್ಟು

ಬಿಡುವವನಲ್ಲ ಈ ಭಕ್ತ. ಯೋಚಿಸಿ ಯೋಚಿಸಿ, ಕಡೆಗೆ ತನಗೆ ಬೇಕಾದ ವಸ್ತುವೊಂದು ನೆನಪಾಯಿತು. ನಗುಮೊಗದಿಂದ ಹೇಳಿದಳು:

"ಹ್ಹಾ, ನೋಡಪ್ಪ! ನೀನು ನನಗೇನಾದರೂ ತರಿಸಿಕೊಡಲೇಬೇಕು ಎನ್ನುವುದಾದರೆ, ದಯವಿಟ್ಟು ನನಗೆ ಒಂದಾಣೆಯ ಹೊಗೆಸೊಪ್ಪು ತರಿಸಿಕೊಡು. ಹಲ್ಲುಜ್ಜಲು ನನಗೆ ಅದರ ಬೂದಿ ಬೇಕಾಗಿದೆ."

ಇದನ್ನು ಕೇಳಿ ಥಟಕ್ಕನೆ ಮಥುರನ ಕಣ್ಣಲ್ಲಿ ನೀರು ಚಿಮ್ಮಿತು.

"ಅಮ್ಮಾ ಧನ್ಯೆ ನೀವು! ಧನ್ಯ ನಿಮ್ಮ ಮಗ! ಅಂತಹ ತ್ಯಾಗಶೀಲನಾದ ಮಗನಿಗೆ ನಿಮ್ಮಂತಹ ತಾಯಿಯಲ್ಲದೆ ಬೇರಾರು ಜನ್ಮಕೊಟ್ಟಾರು?" ಎನ್ನುತ್ತ ಆಕೆಗೆ ಮತ್ತೆ ಮತ್ತೆ ಪ್ರಣಾಮ ಮಾಡಿ ಅಲ್ಲಿಂದ ಹೊರಟ. ಬಳಿಕ ಆಕೆಗೆ ಬೇಕಾದ ಹೊಗೆಸೊಪ್ಪನ್ನು ತರಿಸಿಕೊಟ್ಟ.

ಶ್ರೀರಾಮಕೃಷ್ಣರು ಅದ್ವೈತ ಸಾಧನೆಯಲ್ಲಿ ತೊಡಗಿದ ಸಮಯದಲ್ಲಿ ಅವರ ಚಿಕ್ಕಪ್ಪನ ಮಗ ಹಲಧಾರಿ ರಾಧಾಗೋವಿಂದನ ಅರ್ಚಕನಾಗಿದ್ದ. ಇವನು ತನ್ನ ಶಾಸ್ತ್ರಪಾಂಡಿತ್ಯದ ಅಹಂಕಾರದಿಂದ ಕೊಬ್ಬಿ ಆಗಾಗ ಶ್ರೀರಾಮಕೃಷ್ಣರನ್ನು ಅಪಹಾಸ್ಯ ಮಾಡುತ್ತಿದ್ದುದು, ಆಗ ಅವರು ಜಗನ್ಮಾತೆಯ ಮರೆಹೊಕ್ಕು ಮತ್ತೆಮತ್ತೆ ಆಕೆಯಿಂದ ಸಮಾಧಾನ ಪಡೆಯುತ್ತಿದ್ದುದು ಇವುಗಳನ್ನೆಲ್ಲ ಹಿಂದೆಯೇ ನೋಡಿದೆವು. ಮತ್ತು ಇಂತಹ ಒಂದು ಸಂದರ್ಭದಲ್ಲಿ ಹಲಧಾರಿಯ ಮೂದಲಿಕೆ ವಿಪರೀತಕ್ಕೆ ಹೋದದ್ದು, ಆಗ ಶ್ರೀರಾಮಕೃಷ್ಣರು ಭಾವಾವಸ್ಥೆಗೇರಿದ್ದು, ಜಗನ್ಮಾತೆಯಿಂದ 'ಭಾವಮುಖದಲ್ಲಿರು' ಎಂಬ ಆದೇಶವನ್ನು ಪಡೆದದ್ದು—ಇದನ್ನೂ ನೋಡಿದೆವು. ಮತ್ತೆ, ಶ್ರೀರಾಮಕೃಷ್ಣರು ಸ್ತ್ರೀಯರಂತೆ ವೇಷಭೂಷಣಧರಿಸಿ ಸ್ತ್ರೀಯರಂತೆಯೇ ವರ್ತಿಸುತ್ತ ಮಧುರಭಾವ ಸಾಧನೆಯಲ್ಲಿ ನಿರತರಾಗಿದ್ದಾಗ ಅವರನ್ನು ಗೇಲಿ ಮಾಡಿದವರಲ್ಲಿ ಈ ಹಲಧಾರಿಯೂ ಒಬ್ಬ. ಪ್ರಾಮಾಣಿಕ ಭಾವದಿಂದ ಸಾಧನೆಗೈದು ಭಗವದ್ದರ್ಶನ ಪಡೆದು ಪರಮಾನಂದವನ್ನು ಅನುಭವಿಸುವುದು ಶ್ರೀರಾಮಕೃಷ್ಣರ ಹವ್ಯಾಸವಾದರೆ ಅವರನ್ನು ಹೀಯಾಳಿಸುವುದು ಹಲಧಾರಿಯ ಹವ್ಯಾಸ. ಒಂದು ದಿನ ತೋತಾಪುರಿ ಹಾಗೂ ಹಲಧಾರಿ ಅಧ್ಯಾತ್ಮರಾಮಾಯಣದ ಕುರಿತಾಗಿ ಚರ್ಚಿಸುತ್ತಿದ್ದರು. ಶ್ರೀರಾಮಕೃಷ್ಣರು ಅಲ್ಲೇ ಸಮೀಪದಲ್ಲಿ, ಮೌನವಾಗಿ ಅದನ್ನು ಆಲಿಸುತ್ತ ಕುಳಿತಿದ್ದರು; ಆಲಿಸುತ್ತ ಆ ಭಾವದಲ್ಲೇ ತನ್ಮಯರಾದರು. ಆಗ ಅವರಿಗೆ ಸೀತಾ ಲಕ್ಷ್ಮಣ ಸಮೇತನಾದ ಶ್ರೀರಾಮಚಂದ್ರ ಪ್ರಭುವಿನ ದರ್ಶನವಾಯಿತು. ಪಾಂಡಿತ್ಯದ ಮದದಿಂದ ಮತ್ತನಾದ ಹಲಧಾರಿಯ ಪಾಲಿಗೆ ಕೇವಲ ರಾಮಚರಿತೆಯ ಪಠನ; ತಪಸ್ಸಿನಿಂದ ವಿನೀತರಾದ ಶ್ರೀರಾಮಕೃಷ್ಣರ ಪಾಲಿಗೆ ದಿವ್ಯ ಸುಂದರ ರಾಮಚಂದ್ರನ ದರ್ಶನ! ಅಂತೂ ಹಲಧಾರಿಯ ಜೀವನ ಹಾಗೇ ಕಳೆಯಿತು. ಈ ವೇಳೆಗೆ ಅವನು ಅನಾರೋಗ್ಯಕ್ಕೆ ತುತ್ತಾದ ಕಾರಣ ಅರ್ಚಕವೃತ್ತಿಯಿಂದ ನಿವೃತ್ತನಾಗಬೇಕಾಯಿತು. ಅವನ ಸ್ಥಾನದಲ್ಲಿ ರಾಮಕುಮಾರನ ಮಗನಾದ ಅಕ್ಷಯಕುಮಾರ ನೇಮಕಗೊಂಡ.

## ಸಂನ್ಯಾಸಕ್ಕೆ ಸನ್ನಾಹ

ಪಶ್ಚಿಮ ಭಾರತದವನಾದ ತೋತಾಪುರಿ ಪೂರ್ವಭಾರತದ ದಕ್ಷಿಣೇಶ್ವರಕ್ಕೆ ಬಂದದ್ದು ಒಂದು ದೈವನಿಯಾಮಕವೇ ಸರಿ. ಈತ ಪರಿವ್ರಾಜಕ ಪರಮಹಂಸ ಸಂನ್ಯಾಸಿ. ಪವಿತ್ರ ನರ್ಮದಾ ತೀರದಲ್ಲಿ ಬಹುದೀರ್ಘಕಾಲದ ವರೆಗೆ ಆಧ್ಯಾತ್ಮಿಕ ಸಾಧನೆಗಳಲ್ಲಿ ತೊಡಗಿ, ಕಠಿಣ ತಪಸ್ಸನ್ನಾಚರಿಸುತ್ತ ನಿರ್ವಿಕಲ್ಪ ಸಮಾಧಿಯನ್ನು ಹೊಂದಿದ್ದವನು ಈತ. ಬ್ರಹ್ಮಜ್ಞಾನಿಯಾದ ಪರಮಹಂಸ ಈತನೆಂದು ಆ ಪ್ರಾಂತದ ಸಾಧುಸಂನ್ಯಾಸಿಗಳೆಲ್ಲ ಅರಿತಿದ್ದರು. ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ ಬಳಿಕ, ಪರಿವ್ರಾಜಕನಂತೆ ಅಲೆದಾಡಬೇಕೆಂಬ ಇಚ್ಛೆ ಆತನ ಮನದಲ್ಲುದಿಸಿತು. ಮತ್ತು ಅದರ ಪ್ರೇರಣೆಯಿಂದಲೇ ಆತನೀಗ ಪೂರ್ವಭಾರತದ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತ ನಡೆದಿದ್ದ. ಬ್ರಹ್ಮಜ್ಞಾನಿಯಾದವನು ಸದಾ ಆತ್ಮತೃಪ್ತ. ಸಮಾಧಿಯಲ್ಲಿರುವಾಗ ಅವನು ಬ್ರಹ್ಮದಲ್ಲಿ ಲೀನವಾಗಿ ಆನಂದವನ್ನು ಅನುಭವಿಸುತ್ತಿರುತ್ತಾನೆ; ಸಮಾಧಿಯಿಂದ ಇಳಿದು ಬಂದಾಗ, ಸಮಸ್ತ ಜಗತ್ತನ್ನು ಮಾಯೆಯ ಮೂಲಕ ವ್ಯಕ್ತವಾಗಿರುವ ಅದೇ ಪರಬ್ರಹ್ಮವೇ ಎಂಬಂತೆ ಕಾಣುತ್ತಾನೆ; ದೇವಾಲಯ-ತೀರ್ಥಕ್ಷೇತ್ರಗಳನ್ನೂ ಸಾಧುಸಂತರನ್ನೂ ಸಂದರ್ಶಿಸುತ್ತ ಅವುಗಳಲ್ಲಿ ಬ್ರಹ್ಮವನ್ನನುಭವಿಸುತ್ತ ಕಾಲಯಾಪನೆ ಮಾಡುತ್ತಾನೆ. ಬ್ರಹ್ಮಜ್ಞಾನಿಯಾದ ತೋತಾಪುರಿಯೂ ಈ ಪ್ರಕಾರವಾಗಿ ಸಂಚಾರ ಮಾಡುತ್ತ, ಗಂಗಾ-ಸಾಗರ ಸಂಗಮವನ್ನೂ ಪುರೀಜಗನ್ನಾಥನನ್ನೂ ಸಂದರ್ಶಿಸಿದ. ಅಲ್ಲಿಂದ ಭಾರತದ ವಾಯುವ್ಯ ಪ್ರಾಂತದ ಕ್ಷೇತ್ರಗಳನ್ನು ಸಂದರ್ಶಿಸುವ ಉದ್ದೇಶದಿಂದ ದಕ್ಷಿಣೇಶ್ವರದ ಮಾರ್ಗವಾಗಿ ಬಂದು ಅಲ್ಲಿ ಇಳಿದುಕೊಂಡ. ಸಾಮಾನ್ಯವಾಗಿ ಯಾವ ಸ್ಥಳದಲ್ಲಿಯೂ ಅವನು ಮೂರು ದಿನಗಳಿಗಿಂತ ಹೆಚ್ಚುಕಾಲ ನಿಂತವನೇ ಅಲ್ಲ. ಅಂತೆಯೇ ಕಾಳೀ ದೇವಾಲಯದಲ್ಲೂ ಹೆಚ್ಚೆಂದರೆ ಮೂರು ದಿನಗಳ ಕಾಲ ಉಳಿದುಕೊಳ್ಳುವ ಉದ್ದೇಶದಿಂದಲೇ ಅವನು ಬಂದು ಇಳಿದುಕೊಂಡದ್ದು. ಆದರೆ ಆತನ ನೆರವಿನಿಂದ ತನ್ನ ಪುತ್ರನನ್ನು ಅದ್ವೈತ ಸಾಧನೆಯಲ್ಲಿ ಪರಿಪೂರ್ಣನನ್ನಾಗಿಸಲೆಂದು ಲೀಲಾಮಯಿ ಜಗನ್ಮಾತೆಯೇ ಆತನನ್ನು ಅಲ್ಲಿಗೆ ಕರೆಯಿಸಿಕೊಂಡದ್ದು ಎಂಬುದು ತೋತಾಪುರಿಗೆ ಆಗ ಗೊತ್ತಾಗಲಿಲ್ಲ.

ಕಾಳೀ ದೇವಾಲಯದ ಬಳಿಗೆ ಬಂದ ತೋತಾಪುರಿ ನದೀ ಘಟ್ಟದ ಆವರಣದಲ್ಲಿ ವಿಶ್ರಮಿಸುತ್ತಿದ್ದಾನೆ; ಸಮೀಪದಲ್ಲೇ ಶ್ರೀರಾಮಕೃಷ್ಣರು ಮೈಮೇಲೆ ಒಂದೇ ಒಂದು ವಸ್ತ್ರವನ್ನುಟ್ಟು ಅನ್ಯಮನಸ್ಕರಾಗಿ ಒಬ್ಬ ಸಾಮಾನ್ಯ ವ್ಯಕ್ತಿಯಂತೆ

ಕುಳಿತಿದ್ದಾರೆ. ಆದರೆ ಅವರ ಮುಖ ಮಾತ್ರ ತಪೋದೀಪ್ತವಾಗಿದೆ; ಭಕ್ತಿಭಾವದ ಕಳೆ ಎದ್ದುಕಾಣುತ್ತಿದೆ. ತೋತಾಪುರಿಯ ದೃಷ್ಟಿ ಆಕಸ್ಮಾತ್ತಾಗಿ ರಾಮಕೃಷ್ಣರ ಮೇಲೆ ಬಿದ್ದಿತು. ತಕ್ಷಣ ಅವನು ಆಶ್ಚರ್ಯದಿಂದ ಅವರನ್ನೇ ದಿಟ್ಟಿಸತೊಡಗಿದ. ಅರೆ! ಆ ಮುಖದಲ್ಲಿ ಅದೇನು ಆಕರ್ಷಣೆ ! ಅದೆಂಥ ದೈವೀ ತೇಜಸ್ಸು! ಇವನೊಬ್ಬ ಸಾಧಾರಣ ವ್ಯಕ್ತಿಯಲ್ಲ ಎಂಬುದು ಅವನಿಗೆ ತಕ್ಷಣ ಗೋಚರವಾಯಿತು. ಅಲ್ಲದೆ ಅದ್ವೈತಸಾಧನೆಗೆ ಈತನಷ್ಟು ಯೋಗ್ಯರಾದ ವ್ಯಕ್ತಿಗಳು ಸಿಗುವುದು ದುರ್ಲಭವೆಂದೂ ಅವನಿಗನ್ನಿಸಿತು. ಅಚ್ಚರಿ ಕುತೂಹಲಗಳಿಂದ ತೋತಾಪುರಿ ಎದ್ದು ನಿಂತ. 'ಆಹ್, ತಂತ್ರಸಾಧನೆಯಿಂದ ತುಂಬಿಹೋಗಿರುವ ಈ ಬಂಗಾಳದಲ್ಲಿ ವೇದಾಂತ ಸಾಧನೆಗೆ ಇಷ್ಟು ಯೋಗ್ಯನಾದವನೊಬ್ಬ ಇರಲು ಸಾಧ್ಯವೆ?' ಎಂದು ಆಲೋಚಿಸುತ್ತ ಮುಂದೆ ಬಂದ. ಶ್ರೀರಾಮಕೃಷ್ಣರನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತ ತನಗೆ ಸಹಜವಾದ ಗಡಸು ದನಿಯಲ್ಲಿ ಮಾತನಾಡಿಸಿದ:

"ಏನಯ್ಯಾ, ನಿನ್ನನ್ನು ನೋಡಿದರೆ ತುಂಬ ಸಮರ್ಥನಾದ ಸಾಧಕನಂತೆ ಕಾಣುತ್ತೀಯೆ. ನಿನಗೆ ವೇದಾಂತದ ಸಾಧನೆ ಮಾಡಲು ಇಚ್ಛೆಯಿದೆಯೆ? ಏನೆನ್ನುವೆ?"

ಜಟೆಗಟ್ಟಿದ್ದ ದೀರ್ಘದೇಹಿಯತ್ತ ತಿರುಗಿ ಶ್ರೀರಾಮಕೃಷ್ಣರು ಮೆಲುದನಿಯಲ್ಲಿ ನುಡಿದರು:

"ನಾನು ಏನು ಮಾಡಬೇಕೊ ಏನು ಮಾಡಬಾರದೊ, ನನಗೊಂದೂ ತಿಳಿಯದು. ನನ್ನ ತಾಯಿಗೆ ಅದೆಲ್ಲ ಗೊತ್ತು. ಅವಳು 'ಹ್ಞೂ' ಎಂದರೆ ಮಾಡುತ್ತೇನೆ."

ಈ ಯುವಕ ತನ್ನ ಹೆತ್ತ ತಾಯಿಯನ್ನುದ್ದೇಶಿಸಿ ಹಾಗೆಂದನೆಂದು ತಿಳಿದು ತೋತಾಪುರಿ ಹೇಳಿದ :

"ಹೂಂ, ಸರಿ ಹಾಗಾದರೆ; ಬೇಗ ಹೋಗಿ ಕೇಳಿಕೊಂಡು ಬಾ. ನಾನಿಲ್ಲಿ ಹೆಚ್ಚು ಹೊತ್ತು ಇರುವುದಿಲ್ಲ."

ಶ್ರೀರಾಮಕೃಷ್ಣರು ಅದಕ್ಕೇನೂ ಹೇಳದೆ, ಎದ್ದು ಮೆಲ್ಲನೆ ಕಾಳೀ ದೇವಾಲಯದತ್ತ ಹೆಜ್ಜೆ ಹಾಕಿದರು. ಕಾಳಿಯ ಮುಂದೆ ನಿಂತು ಭಾವಾವಿಷ್ಟರಾಗಿ ಕೇಳಿದರು:

"ಅಮ್ಮಾ, ನಾನೀಗ ಏನು ಮಾಡಬೇಕು ?"

ಕೂಡಲೇ ಜಗನ್ಮಾತೆಯ ಆದೇಶ ದೊರೆಯಿತು:

"ಹೋಗು, ಅವನು ಹೇಳಿಕೊಡುವುದನ್ನು ಕಲಿತುಕೊ; ನಿನಗೆ ಅದ್ವೈತವನ್ನು ಕಲಿಸಲೆಂದೇ ಅವನಿಲ್ಲಿಗೆ ಬಂದಿರುವುದು."

ಅರ್ಧಬಾಹ್ಯಾವಸ್ಥೆಯಲ್ಲಿ ಶ್ರೀರಾಮಕೃಷ್ಣರು ನದೀಘಟ್ಟಕ್ಕೆ ಮರಳಿದರು. ಅವರ ಮುಖ ಆನಂದದಿಂದ ಬೆಳಗುತ್ತಿತ್ತು. ಮಂದಹಾಸಭರಿತರಾಗಿ ತೋತಾಪುರಿಯ ಬಳಿಗೆ ಬಂದು, "ತಾಯಿ ಅನುಮತಿ ನೀಡಿದ್ದಾಳೆ. ನಾನು ನಿಮ್ಮ ಬಳಿ ವೇದಾಂತ ಸಾಧನೆ ಮಾಡಬೇಕಂತೆ !" ಎಂದರು. ಇವನು 'ತಾಯಿ' ಎನ್ನುತ್ತಿರುವುದು ತನ್ನ ಹೆತ್ತಮ್ಮನನ್ನಲ್ಲ, ಗುಡಿಯಲ್ಲಿರುವ ವಿಗ್ರಹವನ್ನು ಎಂದು ಆಗ

ಗೊತ್ತಾಯಿತು ಅವನಿಗೆ. ತುಟಿಯಂಚಿನಲ್ಲಿ ಪರಿಹಾಸದ ಕಿರುನಗೆ ಮೂಡಿತು. ಅವರ ಶಿಶುಸಹಜ ಸರಳತೆಯನ್ನು ಕಂಡು ಸಂತೋಷವಾಯಿತಾದರೂ 'ಇದು ಈತನ ಅಜ್ಞಾನದ ಪರಿಣಾಮ, ಅಷ್ಟೆ' ಎಂದುಕೊಂಡ ಮನದಲ್ಲೇ. ಏಕೆಂದರೆ ವೇದಾಂತೋಕ್ತವಾದ ಪರಬ್ರಹ್ಮವನ್ನಲ್ಲದೆ ಬೇರಾವ ದೇವದೇವಿಯರನ್ನೂ ಒಪ್ಪಿ ಕೊಳ್ಳುವವನಲ್ಲ ಅವನು. ಸಾಧಕನು ಧ್ಯಾನಪರಾಯಣನೂ ಸಂಯಮಿಯೂ ಆಗಿದ್ದು ಪರಬ್ರಹ್ಮನಲ್ಲಿ ಶ್ರದ್ಧೆಹೊಂದಿರಬಹುದೇ ಹೊರತು ಆ ಪರಬ್ರಹ್ಮದ ಕೃಪೆ ಯನ್ನು ಕೋರುತ್ತ ಪ್ರಾರ್ಥನೆ-ಉಪಾಸನೆ ಮಾಡುವುದು ಮೌಢ್ಯವೆಂಬುದು ಆತನ ಖಚಿತ ಅಭಿಪ್ರಾಯ. ಬ್ರಹ್ಮನ ಶಕ್ತಿ ಎಂದು ಕರೆಯಲ್ಪಡುವ ಹಾಗೂ ತ್ರಿಗುಣ ಸ್ವರೂಪವಾದ ಮಹಾಮಾಯೆಯಂತೂ ಅವನ ದೃಷ್ಟಿಯಲ್ಲಿ ಕೇವಲ ಭ್ರಮೆ. ಮಾಯೆಯ ಅಸ್ತಿತ್ವವನ್ನೇ ಒಪ್ಪಿಕೊಳ್ಳದವನು ಆಕೆಯ ಉಪಾಸನೆಯನ್ನು, ಆಕೆ ಯಲ್ಲಿ ಕೃಪಾಯಾಚನೆ ಮಾಡುವುದನ್ನು ಸಹಿಸಿಯಾನೆ?

ಆದರೂ ಅವನು ಶ್ರೀರಾಮಕೃಷ್ಣರಿಗೆ ಆಗ ಆ ಬಗ್ಗೆ ಏನೂ ಹೇಳಲಿಲ್ಲ. ತನ್ನಿಂದ ದೀಕ್ಷೆ ಪಡೆದು ಜ್ಞಾನಮಾರ್ಗ ಸಾಧನೆಯಲ್ಲಿ ತೊಡಗಿದೊಡನೆ, ಇವನ ಈ ಮೌಢ್ಯವೆಲ್ಲ ತೊಲಗಿಹೋಗುತ್ತವೆ ಎಂದು ಆಲೋಚಿಸಿ, ಬೇರೆ ವಿಷಯ ಪ್ರಸ್ತಾಪಿಸಿದ. ಶ್ರೀರಾಮಕೃಷ್ಣರಿಗೆ ವಿವಾಹವಾಗಿದೆಯೆ ಎಂದು ಕೇಳಿ ತಿಳಿದುಕೊಂಡ. ಬಳಿಕ ಹೇಳಿದ :

"ನೋಡು ಅದ್ವೈತಸಾಧನೆ ಮಾಡಬೇಕೆಂದರೆ, ಗುರುವಿನಿಂದ ಉಪದೇಶ ತೆಗೆದುಕೊಳ್ಳುವ ಮೊದಲು ಜುಟ್ಟು–ಜನಿವಾರಗಳನ್ನೆಲ್ಲ ತೊರೆದು ಶಾಸ್ತ್ರೋಕ್ತವಾಗಿ ಸಂನ್ಯಾಸ ತೆಗೆದುಕೊಳ್ಳಬೇಕಾಗುತ್ತದೆ. ಇದಕ್ಕೆ ನೀನು ಸಿದ್ಧನಿರುವೆಯಾ? ಹಾಗಿ ದ್ದಲ್ಲಿ ಮಾತ್ರ ಮುಂದಿನ ಕೆಲಸ."

ಸಂನ್ಯಾಸ ಸ್ವೀಕರಿಸಲು ಶ್ರೀರಾಮಕೃಷ್ಣರೇನೋ ಸಂತೋಷದಿಂದ ಸಮ್ಮತಿ ಸಿದರು. ಆದರೆ ಮಗ ಸಂನ್ಯಾಸಿಯಾದನೆಂದು ತಿಳಿದರೆ ಅವರ ತಾಯಿಯ ಗತಿಯೇನಾದೀತು? ಈಗಾಗಲೇ ಸಾಕಷ್ಟು ನೊಂದಿರುವ ಜೀವಕ್ಕೆ ಇದೊಂದು ಮರ್ಮಾಘಾತವಾದೀತು. ಇದನ್ನು ಆಲೋಚಿಸಿ ಅವರು ತೋತಾಪುರಿಗೆ ಪರಿಸ್ಥಿತಿ ಯನ್ನು ವಿವರಿಸಿದರು. ಆದರೆ ಸಂನ್ಯಾಸದೀಕ್ಷೆಯನ್ನು ರಹಸ್ಯವಾಗಿ ನೀಡುವುದಾದರೆ ತಾವು ಅದಕ್ಕೆ ಸಿದ್ಧ ಎಂದರು. ತೋತಾಪುರಿಗೆ ವಿಷಯ ಅರ್ಥವಾಯಿತು. "ಆಗಲಿ, ಒಂದು ಶುಭ ಮುಹೂರ್ತದಲ್ಲಿ ನಾನು ನಿನಗೆ ಗುಟ್ಟಾಗಿ ದೀಕ್ಷೆ ಕೊಡುತ್ತೇನೆ" ಎಂದು ಆಶ್ವಾಸನೆ ನೀಡಿದ. ಅಲ್ಲಿಯವರೆಗೂ ದಕ್ಷಿಣೇಶ್ವರದಲ್ಲೇ ಇರಲು ನಿರ್ಧರಿಸಿ, ಪಂಚವಟಿಗೆ ಹೋಗಿ ತನ್ನ ಆಸನವನ್ನು ಹರಡಿದ.

ಸಂನ್ಯಾಸದೀಕ್ಷೆಗೆ ಒಂದು ಶುಭದಿನವನ್ನು ಗೊತ್ತುಪಡಿಸಲಾಯಿತು. ಅದರ ಮುನ್ನಾದಿನ ಶ್ರಾದ್ಧವೇ ಮೊದಲಾದ ಪೂರ್ವಭಾವೀ ಕರ್ಮಗಳನ್ನು ಈಡೇರಿಸ ಬೇಕು. ಮೊದಲಿಗೆ ಪೂರ್ವಜರ ಆತ್ಮಗಳ ತೃಪ್ತಿಗಾಗಿ ಶ್ರಾದ್ಧಾದಿಗಳನ್ನು ನೆರವೇರಿಸು ವಂತೆ ನಗ್ನ ಸಂನ್ಯಾಸಿ ಆದೇಶಿಸಿದ. ಅದಾದ ಬಳಿಕ, ಶಿಷ್ಯನು ತನ್ನ ಸ್ವಂತ ಆತ್ಮತೃಪ್ತಿಗಾಗಿ ಮಾಡಿಕೊಳ್ಳುವ ಶ್ರಾದ್ಧಕರ್ಮ. ಏಕೆಂದರೆ ಸಂನ್ಯಾಸದೀಕ್ಷೆಯನ್ನು

ತೆಗೆದುಕೊಳ್ಳುವಾಗ ಸಾಧಕನು ಭೂಲೋಕ ಭುವರ್ಲೋಕವೇ ಮೊದಲಾದ ಯಾವುದೇ ಲೋಕಗಳನ್ನು ಪಡೆದುಕೊಳ್ಳುವ ಇಚ್ಛೆಯನ್ನು ಸಂಪೂರ್ಣವಾಗಿ ತೊರೆಯಬೇಕು ಮತ್ತು ಅದಕ್ಕೆ ಮೊದಲು ತನ್ನ ಪ್ರೇತಕ್ಕೆ ತಾನೇ ಪಿಂಡಪ್ರದಾನ ಮಾಡಿಕೊಳ್ಳಬೇಕು ಎಂದು ಶಾಸ್ತ್ರ ಹೇಳುತ್ತದೆ. ತೋತಾಪುರಿಯ ಆದೇಶಗಳನ್ನೆಲ್ಲ ಶ್ರೀರಾಮಕೃಷ್ಣರು ನೆರವೇರಿಸಿದರು. ಶ್ರಾದ್ಧವೇ ಮೊದಲಾದ ಪೂರ್ವಭಾವೀ ಕರ್ಮಗಳೆಲ್ಲ ಮುಗಿದುವು. ದೀಕ್ಷಾಪ್ರದಾನದ ಅತಿ ಮುಖ್ಯವಾದ ಕಾರ್ಯ ಮರುದಿನ ಬ್ರಾಹ್ಮೀ ಮುಹೂರ್ತದಲ್ಲಿ. ಆ ರಾತ್ರಿ ಶ್ರೀರಾಮಕೃಷ್ಣರು ಶಾಸ್ತ್ರವಿಧಿಯಂತೆ ಉಪವಾಸವಿದ್ದು ಮರುದಿನದ ಕರ್ಮಗಳಿಗೆ ಬೇಕಾದ ಪದಾರ್ಥಗಳನ್ನೆಲ್ಲ ಸಂಗ್ರಹಿಸಿ, ಪಂಚವಟಿಯ ಆಲದ ಮರದ ಬಳಿಯಲ್ಲಿದ್ದ ಸಾಧನಾ ಕುಟೀರದಲ್ಲಿಟ್ಟು ಕೊಂಡು, ದೀಕ್ಷಾಮುಹೂರ್ತವನ್ನು ನಿರೀಕ್ಷಿಸುತ್ತ ಆನಂದದಿಂದ ಕುಳಿತರು.

# ಅದ್ವಿತೀಯ ಅದ್ವೈತ ಸಿದ್ಧಿ

ಬೆಳಕು ಹರಿಯಲು ಇನ್ನೂ ಎರಡು ಗಂಟೆಗಳಿರುವಾಗ—ಬ್ರಾಹ್ಮೀ ಮುಹೂರ್ತದ ಶುಭ ಸಂಧಿಯಲ್ಲಿ—ಗುರುಶಿಷ್ಯರಿಬ್ಬರೂ ಸಾಧನಾ ಕುಟೀರದಲ್ಲಿ ಸೇರಿದರು. ಆರಂಭದ ವಿಧಿಗಳೆಲ್ಲ ಮುಗಿದು, ಪವಿತ್ರವಾದ ಹೋಮಾಗ್ನಿಯನ್ನು ಹೊತ್ತಿಸಲಾಯಿತು. ಸರ್ವತ್ಯಾಗದ ಮಹಾವ್ರತವನ್ನು ಕೈಗೊಳ್ಳುವ ಮುನ್ನ ಘೋಷಿಸಲಾದ ಪವಿತ್ರ ಮಂತ್ರಗಳ ಗಂಭೀರ ನಿನಾದದಿಂದ ಪಂಚವಟಿಯ ಸುತ್ತಲಿನ ವೃಕ್ಷ ಸಮೂಹವು ಅನುರಣಿತವಾಯಿತು. ಅದೆಂತಹ ವ್ರತ ಅದು! ಅನಾದಿಕಾಲದಿಂದ ಇಂದಿನವರೆಗೂ ಗುರು-ಶಿಷ್ಯಪರಂಪರೆಯಲ್ಲಿ ಅವಿಚ್ಛಿನ್ನವಾಗಿ ಹರಿದು ಬಂದು, ಭಾರತವನ್ನು ಇಂದಿಗೂ ಬ್ರಹ್ಮಸಾಕ್ಷಾತ್ಕಾರದ ಕ್ಷೇತ್ರದಲ್ಲಿ ಸುಪ್ರತಿಷ್ಠಿತವನ್ನಾಗಿಟ್ಟಿರುವ ಸರ್ವಸಂಗ ಪರಿತ್ಯಾಗವೆಂಬ ವ್ರತ! ಪಾವನಕರ ಭಾಗೀರಥೀ ನದಿಯು ಸ್ನೇಹಮಯ ಮಡಿಲಲ್ಲಿ ಯುಗಯುಗಾಂತರಗಳ ಬಳಿಕ ಭಾರತದ ಒಬ್ಬ ನಿಷ್ಠಾವಂತ ಸಾಧಕನು, ಸಮಸ್ತ ಜಗತ್ತಿನ ಜನರ ಹಿತಾರ್ಥವಾಗಿ ಈ ವ್ರತವನ್ನು ಕೈಗೊಳ್ಳುತ್ತಿರುವನೆಂಬ ವಾರ್ತೆಯನ್ನು ಎಲ್ಲರಿಗೂ ತಲುಪಿಸುವುದಕ್ಕೋ ಎಂಬಂತೆ ಆ ಭಾಗೀರಥಿಯು ಆನಂದದ ಕಲರವದಿಂದ ಪ್ರವಹಿಸುತ್ತಿರುವಂತೆ ತೋರಿತು.

ಗುರುವು ಮಂತ್ರಗಳನ್ನುಚ್ಚರಿಸಲು, ಶಿಷ್ಯನು ಅವುಗಳನ್ನು ಪುನರುಚ್ಚರಿಸುತ್ತ ಅಗ್ನಿಯಲ್ಲಿ ಆಹುತಿಯನ್ನು ಕೊಡಲು ಅಣಿಯಾದರು. ಮೊದಲಿಗೆ ಪ್ರಾರ್ಥನಾ ಮಂತ್ರಗಳನ್ನುಚ್ಚರಿಸಿದರು. ಆ ಮಂತ್ರಗಳ ಅರ್ಥ ಹೀಗಿದೆ:

"ನನಗೆ ಪರಬ್ರಹ್ಮ ತತ್ತ್ವವು ಪ್ರಾಪ್ತವಾಗಲಿ. ಪರಮಾನಂದದಿಂದ ಕೂಡಿದ ಆ ಪರಮ ಸತ್ಯವು ನನ್ನದಾಗಲಿ; ಅಖಂಡೈಕರಸವೂ ಮಧುಮಯವೂ ಆದ ಪರಬ್ರಹ್ಮವಸ್ತುವು ನನ್ನಲ್ಲಿ ಪ್ರಕಾಶಿತವಾಗಲಿ. ದೇವ-ಮಾನವರೇ ಮೊದಲಾದ ನಿನ್ನೆಲ್ಲ ಮಕ್ಕಳಲ್ಲಿಯೂ ಬ್ರಹ್ಮಜ್ಞಾನವನ್ನುಂಟು ಮಾಡಬಲ್ಲ ಬ್ರಹ್ಮವಿದ್ಯಾಶಕ್ತಿಯನ್ನು ನಿರಂತರವಾಗಿ ಪ್ರಕಾಶಿಸುತ್ತಲಿರುವ ಹೇ ಪರಮಾತ್ಮನೇ, ನಿನ್ನ ಮಗನೂ ಸೇವಕನೂ ಆದ ನಾನು ನಿನ್ನ ವಿಶೇಷ ಕೃಪೆಗೆ ಪಾತ್ರನಾಗುವಂತಾಗಲಿ. ಹೇ ಸಂಸಾರದುಃಸ್ವಪ್ನ ಹಾರಿಯಾದ ಪರಮೇಶ್ವರನೇ, ದ್ವೈತದೃಷ್ಟಿಯಿಂದುಂಟಾದ ದುಃಸ್ವಪ್ನಗಳನ್ನೆಲ್ಲ ನಾಶ ಮಾಡು! ಹೇ ಪರಮಾತ್ಮನೇ, ನನ್ನ ಪ್ರಾಣಶಕ್ತಿಗಳನ್ನೆಲ್ಲ ಸಂಪೂರ್ಣವಾಗಿ ನಿನ್ನಲ್ಲಿ ಆಹುತಿಯನ್ನಾಗಿ ಕೊಟ್ಟು, ನನ್ನ ಇಂದ್ರಿಯಗಳನ್ನೆಲ್ಲ ನಿಗ್ರಹಿಸಿ ನಿನ್ನಲ್ಲಿ ಏಕಚಿತ್ತನಾಗುತ್ತಿದ್ದೇನೆ. ಸರ್ವಪ್ರೇರಕನಾದ ತೇಜೋಮಯ ದೇವನೆ, ಜ್ಞಾನಪ್ರತಿಬಂಧಕ

ವಾದ ಮಲಿನತೆಯನ್ನೆಲ್ಲ ನನ್ನಿಂದ ದೂರಮಾಡು; ಮತ್ತು ಅಸಂಬದ್ಧತೆಯೂ ವಿರೋಧಾಭಾಸವೂ ಇಲ್ಲದಂತಹ ಜ್ಞಾನವು ನನ್ನಲ್ಲಿ ಉಂಟಾಗುವಂತೆ ಮಾಡು! ಸೂರ್ಯ, ವಾಯು, ನದಿಗಳ ಸ್ನಿಗ್ಧ ನಿರ್ಮಲ ಜಲ, ಗೋಧಿ-ಜವೆಯಂತಹ ಸಸ್ಯ-ವನಸ್ಪತಿಗಳು ಮೊದಲಾದ ಜಗತ್ತಿನ ಪದಾರ್ಥಗಳೆಲ್ಲ ನಿನ್ನ ಆದೇಶದ ಪ್ರಕಾರ ನನಗೆ ಅನುಕೂಲಕರವಾಗಿದ್ದು ಜ್ಞಾನಸಂಪಾದನೆಯಲ್ಲಿ ನನಗೆ ನೆರವಾಗಲಿ! ಹೇ ಬ್ರಹ್ಮನ್, ನೀನೇ ಈ ಜಗತ್ತಿನಲ್ಲಿ ವಿಶೇಷ ಶಕ್ತಿಯುತನಾಗಿ ನಾನಾ ರೂಪಗಳಲ್ಲಿ ಪ್ರಕಾಶಿತನಾಗಿರುವೆ. ಶರೀರ ಮನಸ್ಸುಗಳ ಶುದ್ಧತೆಯ ಮೂಲಕ ತತ್ತ್ವಜ್ಞಾನ ಸಾಧನೆಯ ಯೋಗ್ಯತೆಯನ್ನು ಹೊಂದುವ ಸಲುವಾಗಿ ಅಗ್ನಿಸ್ವರೂಪನಾದ ನಿನ್ನಲ್ಲಿ ಆಹುತಿ ಕೊಡುತ್ತೇನೆ; ನನ್ನಲ್ಲಿ ಪ್ರಸನ್ನನಾಗು!"

ಈ ಪ್ರಾರ್ಥನಾ ಮಂತ್ರಗಳ ಘೋಷಣೆಯಾದ ಬಳಿಕ ದೀಕ್ಷೆ ನೀಡುವ ಕಾರ್ಯದ ಅಂತಿಮ ಹಾಗೂ ಅತಿಮುಖ್ಯ ಅಂಗವಾದ ವಿರಜಾ ಹೋಮ. ಗುರು ಶಿಷ್ಯರಿಬ್ಬರೂ ಆ ಮಂತ್ರಗಳನ್ನುಚ್ಚರಿಸತೊಡಗಿದರು:

"ಪೃಥ್ವಿ, ನೀರು, ಅಗ್ನಿ, ವಾಯು, ಆಕಾಶ—ಈ ಎಲ್ಲ ರೂಪಗಳಿಂದ ನನ್ನಲ್ಲಿರುವ ಪಂಚಭೂತಗಳು ಶುದ್ಧವಾಗಲಿ; ಈ ಆಹುತಿಯ ಪ್ರಭಾವದಿಂದಾಗಿ, ನಾನು ರಜೋಗುಣಜನ್ಯವಾದ ಮಲಿನತೆಯಿಂದ ವಿಮುಕ್ತನಾಗಿ ಜ್ಯೋತಿಃ ಸ್ವರೂಪನೇ ಆಗಲಿ—ಸ್ವಾಹಾ!

"ನನ್ನಲ್ಲಿರುವ ಪ್ರಾಣ ಅಪಾನ ಸಮಾನ ಉದಾನ ವ್ಯಾನಗಳೆಂಬ ವಾಯುಗಳೆಲ್ಲ ಶುದ್ಧವಾಗಲಿ; ಈ ಆಹುತಿಯ ಪ್ರಭಾವದಿಂದಾಗಿ, ರಜೋಗುಣಜನ್ಯವಾದ ಮಲಿನತೆಯು ನಾಶವಾಗಿ ನಾನು ಜ್ಯೋತಿಃಸ್ವರೂಪನೇ ಆಗಲಿ—ಸ್ವಾಹಾ!

"ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯ ಎಂಬೀ ನನ್ನ ಪಂಚಕೋಶಗಳು ಶುದ್ಧವಾಗಲಿ; ಈ ಆಹುತಿಯ ಪ್ರಭಾವದಿಂದಾಗಿ ನನ್ನೊಳಗಿರುವ ರಜೋಗುಣಜನ್ಯವಾದ ಮಲಿನತೆಯು ನಾಶವಾಗಿ ನಾನು ಜ್ಯೋತಿಃಸ್ವರೂಪನೇ ಆಗಲಿ—ಸ್ವಾಹಾ!

"ಶಬ್ದ ಸ್ಪರ್ಶ ರೂಪ ರಸ ಗಂಧ ಇವುಗಳಿಂದ ಹುಟ್ಟಿದ, ನನ್ನಲ್ಲಿರುವ ವಿಷಯಸಂಸ್ಕಾರಗಳೆಲ್ಲ ಶುದ್ಧವಾಗಲಿ; ಈ ಆಹುತಿಯ ಪ್ರಭಾವದಿಂದಾಗಿ ನನ್ನೊಳಗಿರುವ ರಜೋಗುಣಜನ್ಯವಾದ ಮಲಿನತೆಯು ನಾಶವಾಗಿ ನಾನು ಜ್ಯೋತಿಃ ಸ್ವರೂಪನೇ ಆಗಲಿ—ಸ್ವಾಹಾ!

"ನನ್ನ ಮನಸ್ಸು ವಾಕ್ಕು ದೇಹ ಕರ್ಮಾದಿಗಳು ಶುದ್ಧವಾಗಲಿ; ಈ ಆಹುತಿಯ ಪ್ರಭಾವದಿಂದ ನನ್ನೊಳಗಿರುವ ರಜೋಗುಣಜನ್ಯವಾದ ಮಲಿನತೆಯು ನಾಶವಾಗಿ ನಾನು ಜ್ಯೋತಿಃಸ್ವರೂಪನೇ ಆಗಲಿ—ಸ್ವಾಹಾ!

"ಹೇ, ಅಗ್ನಿಶರೀರದಲ್ಲಿ ನೆಲಸಿದ್ದು, ಪ್ರತಿಬಂಧಕಗಳನ್ನು ನಿರ್ಮೂಲನಗೊಳಿಸುವುದರಲ್ಲಿ ದಕ್ಷನೂ ಕೆಂಗಣ್ಣುಳ್ಳವನೂ ಆದ ಪುರುಷನೇ, ಜಾಗೃತನಾಗು! ಹೇ ಅಭೀಷ್ಟದಾಯಕನೇ, ಜ್ಞಾನಲಾಭದ ಮಾರ್ಗದಲ್ಲಿರುವ ಪ್ರತಿಬಂಧಕಗಳನ್ನೆಲ್ಲ ನಾಶ ಮಾಡು! ನನ್ನ ಚಿತ್ತದ ಸಂಸ್ಕಾರಗಳೆಲ್ಲ ಸಂಪೂರ್ಣ ಶುದ್ಧವಾಗಿ ಗುರುಮುಖದಿಂದ

ಕೇಳಿದ ಜ್ಞಾನವು ನನ್ನ ಅಂತರ್ಯದಲ್ಲಿ ಬೆಳಗುವಂತೆ ಮಾಡು ! ಈ ಆಹುತಿಯ ಪರಿಣಾಮದಿಂದ ನನ್ನೊಳಗಿರುವ ರಜೋಗುಣಜನ್ಯವಾದ ಮಲಿನತೆಯು ನಾಶ ವಾಗಿ ನಾನು ಜ್ಯೋತಿಃಸ್ವರೂಪನೇ ಆಗಲಿ—ಸ್ವಾಹಾ !

"ಚಿದಾಭಾಸನೂ (ಚೈತನ್ಯದ ಪ್ರತಿಬಿಂಬವಾದವನು) ಬ್ರಹ್ಮಸ್ವರೂಪನೂ ಆದ ನಾನು ಪತ್ನೀ ಪುತ್ರ ಸಂಪತ್ತು ಲೋಕಮಾನ್ಯತೆ ಶರೀರಸೌಂದರ್ಯ ಮೊದ ಲಾದುವುಗಳನ್ನು ಪಡೆಯುವ ಇಚ್ಛೆಗಳನ್ನು ಅಗ್ನಿಯಲ್ಲಿ ಆಹುತಿ ಕೊಟ್ಟು ಸಂಪೂರ್ಣವಾಗಿ ತ್ಯಾಗಮಾಡುತ್ತೇನೆ—ಸ್ವಾಹಾ !"

ಹೀಗೆ ಅಗ್ನಿಗೆ ಅನೇಕ ಆಹುತಿಗಳನ್ನು ನೀಡಿದ ಬಳಿಕ ಕಡೆಯಲ್ಲಿ ಶಿಷ್ಯನು ಹೀಗೆ ಘೋಷಿಸಿದನು—"ಭೂಮಿಯೇ ಮೊದಲಾದ ಸಮಸ್ತ ಲೋಕಗಳನ್ನು ಹೊಂದುವ ಇಚ್ಛೆಯನ್ನು ನಾನು ಈ ಕ್ಷಣದಿಂದಲೇ ತ್ಯಾಗ ಮಾಡುತ್ತೇನೆ; ಜಗತ್ತಿನ ಸರ್ವಜೀವಿಗಳಿಗೂ ನನ್ನಿಂದ ಯಾವುದೇ ಭಯವುಂಟಾಗಲಾರದೆಂದು ಆಶ್ವಾಸನೆ ನೀಡುತ್ತೇನೆ." ಈ ಅರ್ಥದ ಮಂತ್ರದೊಂದಿಗೆ ಹೋಮವು ಮುಕ್ತಾಯಗೊಂಡಿತು. ಅನಂತರ ಶ್ರೀರಾಮಕೃಷ್ಣರು ಬ್ರಾಹ್ಮಣ್ಯದ ಚಿಹ್ನೆಯಾದ ಜುಟ್ಟು–ಜನಿವಾರಗಳನ್ನು ವಿಧಿವತ್ತಾಗಿ ಆಹುತಿ ನೀಡಿದರು. ಅನಾದಿಕಾಲದಿಂದ ಸಾಧಕ ಪರಂಪರೆಯಲ್ಲಿ ಬಂದಿರುವ ಸಂಪ್ರದಾಯದಂತೆ ಗುರು ನೀಡಿದ ಕೌಪೀನ ಕಾಷಾಯ ವಸ್ತ್ರಧಾರಣೆ ಮಾಡಿ ಉಪದೇಶವನ್ನು ಸ್ವೀಕರಿಸುವುದಕ್ಕಾಗಿ ತೋತಾಪುರಿಯ ಇದಿರಿನಲ್ಲಿ ಕುಳಿತು ಕೊಂಡರು. ಬ್ರಹ್ಮಜ್ಞಾನಿಯಾದ ತೋತಾಪುರಿ ಈಗ ಶ್ರೀರಾಮಕೃಷ್ಣರನ್ನು ವೇದಾಂತ ಪ್ರಸಿದ್ಧವಾದ 'ನೇತಿ, ನೇತಿ' ಮಾರ್ಗದಲ್ಲಿ ಮುಂದುವರಿದು ಬ್ರಹ್ಮಸ್ವರೂಪದಲ್ಲಿ ನೆಲಸುವಂತೆ ನಿರ್ದೇಶಿಸತೊಡಗಿದ. ಅವನು ಕ್ರಮಾಗತವಾಗಿ ನೀಡಿದ ಸೂಚನೆಗಳು ಇಂತಿದ್ದುವು:

"ನಿತ್ಯ ಶುದ್ಧ ಬುದ್ಧ ಮುಕ್ತ ಸ್ವರೂಪದ್ದಾದ, ಎಂದೆಂದೂ ದೇಶಕಾಲಗಳಿಗೆ ಅತೀತವಾದ, ನಿತ್ಯಜಾಗ್ರತವಾದ ಬ್ರಹ್ಮವಸ್ತುವೊಂದೇ ಸತ್ಯವಾದುದು. ಅಸಾಧ್ಯ ವಾದುದನ್ನು ಸಾಧ್ಯವನ್ನಾಗಿಸುವ ಮಾಯೆಯು ನಾಮರೂಪಗಳ ಮೂಲಕ ಆ ಏಕೈಕ ಬ್ರಹ್ಮವನ್ನು ವಿವಿಧವೆಂಬಂತೆ ವ್ಯಕ್ತವಾಗಿಸುತ್ತದೆ. ಆದರೆ ನಿಜವಾಗಿಯೂ ಬ್ರಹ್ಮವು ಅವಿಭಾಜ್ಯವಾದುದು. ಏಕೆಂದರೆ ಸಮಾಧಿಸ್ಥಿತಿಯಲ್ಲಿರುವಾಗ, ಮಾಯೆ ಯಿಂದ ಉದ್ಭವಿಸಿದ ಈ ನಾಮರೂಪಗಳಾಗಲಿ ಕಾಲದೇಶಗಳಾಗಲಿ ಕಿಂಚಿತ್ತೂ ಅನುಭವಕ್ಕೆ ಬರುವುದಿಲ್ಲ. ಆದ್ದರಿಂದ ನಾಮರೂಪಗಳ ಮಿತಿಯೊಳಗಿರುವ ಯಾವುದೇ ವಸ್ತುವಾದರೂ ನಿತ್ಯಸತ್ಯವಾಗಲಾರದು. ಅವುಗಳನ್ನು ದೂರವಾಗಿಸು. ನಾಮರೂಪಗಳ ಪಂಜರವನ್ನು ಸಿಂಹಪರಾಕ್ರಮದಿಂದ ಭೇದಿಸಿ ಹೊರಗೆ ಬಾ. ನಿನ್ನೊಳಗಿರುವ ಆತ್ಮತತ್ತ್ವದಾಳದಲ್ಲಿ ಮುಳುಗು. ಸಮಾಧಿಯಲ್ಲಿ ಅದರೊಂದಿಗೆ ಐಕ್ಯನಾಗು. ಆಗ ನೀನು ಈ ನಾಮರೂಪಗಳ ಜಗತ್ತು ಶೂನ್ಯದಲ್ಲಿ ಲಯವಾಗು ವುದನ್ನು ಕಾಣುವೆ. ಕ್ಷುದ್ರವಾದ 'ನಾನು' ಎಂಬುದು ವಿರಾಟ್ 'ನಾನು' ಎಂಬ ಬೋಧೆಯಲ್ಲಿ ಕರಗಿ ಮಾಯವಾಗುವುದು; ಆಗ ನಿನ್ನ ಸ್ವರೂಪವು ಅಖಂಡವಾದ ಸಚ್ಚಿದಾನಂದವೆಂಬುದನ್ನು ನೀನು ಪ್ರತ್ಯಕ್ಷ ಕಾಣುವೆ."

ಬಳಿಕ, ಬೃಹದಾರಣ್ಯಕ ಉಪನಿಷತ್ತಿನ ವಾಕ್ಯಗಳನ್ನುದ್ಧರಿಸುತ್ತ ತೋತಾಪುರಿ ನುಡಿದ: "ಯಾವ ಜ್ಞಾನವನ್ನು ಹೊಂದುವುದರಿಂದ ಒಬ್ಬ ವ್ಯಕ್ತಿಯು ಇತರರನ್ನು ತನಗಿಂತ ಬೇರೆ ಎಂಬಂತೆ ಕಾಣುತ್ತಾನೋ ಮತ್ತು ಇತರರ ಮಾತನ್ನು ತನ್ನದಲ್ಲದೆ ಬೇರೆ ಎಂದು ಕೇಳುತ್ತಾನೋ ಅದು ಅಲ್ಪವಾದುದು; ಯಾವುದು ಅಲ್ಪವಾದುದೋ ಅದು ತುಚ್ಛವಾದುದು. ಏಕೆಂದರೆ ಅದರಿಂದ ಪರಮಾನಂದವು ದೊರಕದು. ಆದರೆ ಯಾವ ಜ್ಞಾನವನ್ನು ಹೊಂದುವುದರಿಂದ ಒಬ್ಬ ವ್ಯಕ್ತಿಯು ಇತರರನ್ನು ಬೇರೆ ಯೆಂಬಂತೆ ಕಾಣುವುದಿಲ್ಲವೋ ಮತ್ತು ಇತರರ ಮಾತನ್ನು ಬೇರೆಯವರದೆಂಬಂತೆ ಕೇಳುವುದಿಲ್ಲವೋ ಅದೇ ಭೂಮಾ—ಮಹತ್ತಾದುದು, ಅನಂತವಾದುದು. ಆ ಜ್ಞಾನದ ನೆರವಿನಿಂದ ವ್ಯಕ್ತಿಯು ಪರಮಾನಂದದಲ್ಲಿ ನೆಲೆಗೊಳ್ಳುತ್ತಾನೆ. ಯಾವುದು ಸರ್ವ ಜೀವಿಗಳಲ್ಲೂ ಜ್ಞಾನವನ್ನು ಗ್ರಹಿಸುವ ಶಕ್ತಿಯಾಗಿರುತ್ತದೆಯೋ ಮತ್ತು ಯಾವುದರ ಬೆಳಕು ಸರ್ವವಸ್ತುಗಳನ್ನೂ ಗ್ರಾಹ್ಯವಾಗಿಸುತ್ತದೆಯೋ ಆ ಮಹ ತ್ತಾದ, ಅನಂತವಾದ ಜ್ಞಾನವನ್ನು ಅಲ್ಪವಾದ ಬುದ್ಧಿ ಮನಸ್ಸುಗಳಿಂದ ಗ್ರಹಿಸಲು ಸಾಧ್ಯವೇ? ವಿಜ್ಞಾತನನ್ನೇ, ಎಂದರೆ, ಅರಿತುಕೊಳ್ಳುವವನನ್ನೇ ಅರಿತುಕೊಳ್ಳಲು ಎಲ್ಲಾದರೂ ಸಾಧ್ಯವೆ?"

ಹೀಗೆ ವೇದೋಪನಿಷತ್ತುಗಳ ವಾಕ್ಯಗಳನ್ನು ಉದ್ಧರಿಸುತ್ತ ತೋತಾಪುರಿ ನಾನಾ ಪರಿಯಾಗಿ ಶ್ರೀರಾಮಕೃಷ್ಣರ ಮನವನ್ನು ಅಣಿಗೊಳಿಸಿದ. ಸಂನ್ಯಾಸದೀಕ್ಷೆ ನೀಡಿ ಅದ್ವೈತ ಸಾಧನೆಯಲ್ಲಿ ತೊಡಗಿಸಿದಂದೇ ಅವರನ್ನು ನಿರ್ವಿಕಲ್ಪ ಸಮಾಧಿ ಗೇರಿಸಬೇಕು ಎಂದು ಅವನು ನಿಶ್ಚಯಿಸಿಬಿಟ್ಟಿದ್ದ. ಆತ ಸಾಧಾರಣದವನಲ್ಲ; ಮಹಾ ಛಲವಾದಿ. ಶಿಷ್ಯನಿಗೆ ತಕ್ಕ ಗುರು! ಅದಾಗಲೇ ಅವನು ತನ್ನ ಶಿಷ್ಯನ ಸಾಮರ್ಥ್ಯ-ಯೋಗ್ಯತೆ ಏನೆಂಬುದನ್ನು ಸ್ವಲ್ಪ ಮಟ್ಟಿಗೆ ಕಂಡುಕೊಂಡಿದ್ದ. ಆದ್ದರಿಂದ ತನ್ನ ಈ ಶಿಷ್ಯನಿಗೆ ನೇರವಾಗಿ ಸಮಾಧಿಗೇರಲು ಸಾಧ್ಯವಿದೆ ಎಂಬುದನ್ನು ಆತ ಚೆನ್ನಾಗಿಯೇ ಅರಿತಿದ್ದ. ಆತನ ಪ್ರಯತ್ನ ಯಶಸ್ವಿಯಾದ ಪರಿಯನ್ನು ಮತ್ತು ತಾವು ಅಂದು ಪರಮೋನ್ನತ ಅನುಭವವನ್ನು ಗಳಿಸಿದ ಘಟನೆಯನ್ನು ಶ್ರೀರಾಮಕೃಷ್ಣರೇ ಹೀಗೆ ಬಣ್ಣಿಸುತ್ತಾರೆ:

"ನನಗೆ ದೀಕ್ಷೆ ನೀಡಿದ ಬಳಿಕ ಆ ನಗ್ನ ಸಂನ್ಯಾಸಿ ನನಗೆ ನಾನಾ ಸಿದ್ಧಾಂತವಾಕ್ಯಗಳನ್ನು ಬೋಧಿಸತೊಡಗಿದ. ಮನಸ್ಸನ್ನು ಸಂಪೂರ್ಣ ವಿಕಲ್ಪರಹಿತ ವನ್ನಾಗಿ ಮಾಡಿ ಆತ್ಮಧ್ಯಾನದಲ್ಲಿ ಲೀನನಾಗುವಂತೆ ಆದೇಶಿಸಿದ. ಆದರೆ, ಕುಳಿತು ಧ್ಯಾನಮಾಡಲು ಎಷ್ಟೆಷ್ಟು ಪ್ರಯತ್ನಿಸಿದರೂ ನನ್ನ ಮನಸ್ಸನ್ನು ಈ ನಾಮರೂಪಗಳ ಮೇರೆಯಿಂದಾಚೆಗೆ ಒಯ್ದು ಅದನ್ನು ನಿರ್ವಿಕಲ್ಪವನ್ನಾಗಿ ಮಾಡಲು ನನಗೆ ಸಾಧ್ಯವೇ ಆಗಲಿಲ್ಲ. ಇತರ ವಸ್ತುವಿಷಯಗಳಿಂದಲೇನೋ ಮನಸ್ಸನ್ನು ಸುಲಭವಾಗಿಯೇ ಹಿಂದೆಗೆದುಕೊಂಡೆ. ಆದರೆ ಮರುಕ್ಷಣವೇ ಈ ಮನಸ್ಸಿಗೆ ಚಿರಪರಿಚಿತವಾದ ಜಗನ್ಮಾತೆಯ ಚಿದ್ಘನ ಮೂರ್ತಿಯು ದೇದೀಪ್ಯಮಾನವಾಗಿ, ಜೀವಂತವಾಗಿ ಕಾಣಿಸಿಕೊಂಡು ಅದನ್ನು ಆವರಿಸಿಬಿಟ್ಟಿತು. ನಾಮರೂಪಗಳಿಂದಾಚೆಗೆ ಹೋಗ ಬೇಕೆಂಬ ಆಲೋಚನೆಯೇ ನನ್ನಿಂದ ಮರೆಯಾಯಿತು! ಆಗ ಅದ್ವೈತವೇದಾಂತದ

ನಿರ್ಧಾರಾತ್ಮಕವಾದ ಸಿದ್ಧಾಂತಗಳನ್ನು ನೆನಪಿಗೆ ತಂದುಕೊಂಡೆ. ಮತ್ತೊಮ್ಮೆ ಮನಸ್ಸನ್ನು ಗಟ್ಟಿಮಾಡಿಕೊಂಡು ಧ್ಯಾನಲೀನನಾಗಲೆತ್ನಿಸಿದೆ. ಆದರೆ ಮತ್ತೆ ಜಗನ್ಮಾತೆಯ ಆ ಮೂರ್ತಿಯೇ ಮನಃಪಟಲದಲ್ಲಿ ಮೂಡಿ ನಿಂತಿತು ! ಅದನ್ನು ಮೀರಿ ಮುಂದಕ್ಕೆ ಹೋಗಲು ಸಾಧ್ಯವೇ ಆಗಲಿಲ್ಲ. ಎಷ್ಟೆಷ್ಟು ಬಾರಿ ಪ್ರಯತ್ನಿಸಿದರೂ ಮತ್ತೆಮತ್ತೆ ಹೀಗೆಯೇ ಆಗುತ್ತಿತ್ತು. ಕಡೆಗೆ ನಾನು ಹತಾಶನಾಗಿ ಕಣ್ತೆರೆದು ಆ ನಗ್ನಸಂನ್ಯಾಸಿಗೆ ಹೇಳಿದೆ, 'ಇಲ್ಲ, ನನಗದು ಸಾಧ್ಯವಿಲ್ಲ. ಮನಸ್ಸನ್ನು ನಿರ್ವಿಕಲ್ಪವನ್ನಾಗಿ ಮಾಡಿ ಆತ್ಮಧ್ಯಾನದಲ್ಲಿ ತೊಡಗಿಸಲು ನನ್ನಿಂದಾಗುತ್ತಿಲ್ಲ.' ಅದನ್ನು ಕೇಳಿದ ಆ ನಗ್ನಸಂನ್ಯಾಸಿ ತೀವ್ರ ತಿರಸ್ಕಾರ ಕೋಪಗಳಿಂದ ಉದ್ರಿಕ್ತನಾಗಿ, 'ಕ್ಯಾ ? ಹೋಗಾ ನಹೀಂ ? ಏ ಕೈಸೀ ಮೂರ್ಖತಾ ಹೈ ?' 'ಏನು ! ಸಾಧ್ಯವಿಲ್ಲವೆ ? ಎಂಥ ಮೂರ್ಖತನ !' ಎಂದು ಗುಡುಗಿದ. ಬಳಿಕ ಗುಡಿಸಲಿನಲ್ಲಿ ಅತ್ತಿತ್ತ ನೋಡಿ ಅಲ್ಲಿ ಬಿದ್ದಿದ್ದ ಒಂದು ಗಾಜಿನ ಚೂರನ್ನು ಹೆಕ್ಕಿ ಕೈಗೆತ್ತಿಕೊಂಡ. ಅದರ ಚೂಪಾದ ತುದಿಯನ್ನು ನನ್ನ ಭ್ರೂಮಧ್ಯದಲ್ಲಿ ಬಲವಾಗಿ ಚುಚ್ಚಿ, 'ಇಗೋ, ಈ ಬಿಂದುವಿನಲ್ಲಿ ಮನಸ್ಸನ್ನು ಏಕಾಗ್ರಗೊಳಿಸು' ಎಂದ. ನಾನು ದೃಢ ಸಂಕಲ್ಪ ಮಾಡಿ ಮತ್ತೊಮ್ಮೆ ಧ್ಯಾನಕ್ಕೆ ಕುಳಿತೆ. ಹಿಂದಿನಂತೆಯೇ ಜಗನ್ಮಾತೆಯ ಪವಿತ್ರ ಮೂರ್ತಿ ನನ್ನ ಮನಸ್ಸಿನಲ್ಲಿ ಮೂಡಿತು. ತಕ್ಷಣವೇ ನಾನು, ಜ್ಞಾನವನ್ನು ಒಂದು ಹರಿತವಾದ ಖಡ್ಗವೆಂಬಂತೆ ಭಾವಿಸಿ, ಅದರಿಂದ ಆ ಮೂರ್ತಿಯನ್ನು ಎರಡಾಗಿ ತುಂಡರಿಸಿಬಿಟ್ಟೆ. ಆಗ ಮನಸ್ಸಿನಲ್ಲಿ ಇನ್ನಾವ ವಿಕಲ್ಪವೂ ಉಳಿಯಲಿಲ್ಲ; ಕೂಡಲೇ ಅದು ಸಕಲ ನಾಮರೂಪಗಳ ಎಲ್ಲೆಯನ್ನೂ ಮೀರಿ ಮೇಲೇರುತ್ತ ಹೋಯಿತು, ನಾನು ಸಮಾಧಿಲೀನನಾದೆ.''

ಶ್ರೀರಾಮಕೃಷ್ಣರು ಅತ್ಯಪೂರ್ವವಾದ ನಿರ್ವಿಕಲ್ಪ ಸಮಾಧಿಯಲ್ಲಿ ಮುಳುಗಿ ಹೋದರು. ಪರಮಾನಂದದ ಆ ಸ್ಥಿತಿಯಲ್ಲಿ ಅವರ ಮನಸ್ಸೂ ಇಂದ್ರಿಯಗಳೂ ನಿಶ್ಚೇಷ್ಟಿತವಾದುವು. ಶರೀರವು ಶವದಂತೆ ಚಲನರಹಿತವಾಯಿತು. ಸಮಸ್ತ ಬ್ರಹ್ಮಾಂಡವೇ ಅವರ ಕಣ್ಣೆದುರು ಉರುಳುರುಳಿ ಮಾಯವಾಯಿತು. ಆಕಾಶವೂ ಕರಗಿ ಕಣ್ಮರೆಯಾಯಿತು. ಹೀಗೆ ಜಡವಸ್ತುಗಳೆಲ್ಲ ಮಾಯವಾಗಿ ಕೇವಲ ಭಾವನೆಗಳಷ್ಟೇ ಉಳಿದುಕೊಂಡುವು. ಅವು ಅವರ ಮನಸ್ಸಿನ ಹಿನ್ನೆಲೆಯಲ್ಲಿ ನೆರಳಿನಂತೆ ತೇಲಾಡಿದುವು. 'ಅಹಂ' 'ನಾನು' ಎಂಬ ಪ್ರಜ್ಞೆಯೊಂದೇ ಕುಟುಕು ಜೀವದಿಂದ ಬದುಕಿತ್ತು. ಆದರೆ ಕೆಲಕ್ಷಣಗಳಲ್ಲೇ ಅದೂ ಮಾಯವಾಯಿತು. ಈಗ ಉಳಿದದ್ದು ಸದ್ವಸ್ತುವೊಂದೇ. ಅವರ ಜೀವಾತ್ಮವು ಪರಬ್ರಹ್ಮದಲ್ಲಿ ಲೀನವಾಯಿತು. ಆಗ ಕಾರ್ಯಕಾರಣಗಳ ಸಕಲ ದ್ವಂದ್ವಗಳೂ ಲಯವಾದುವು. ಶ್ರೀರಾಮಕೃಷ್ಣರು ಮಾತು ಭಾವನೆ ಅನುಭವಗಳಾಚೆ ಸಾಗಿ ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಂಡಿದ್ದರು, ಬ್ರಹ್ಮದಲ್ಲಿ ಒಂದಾಗಿದ್ದರು !

ಶ್ರೀರಾಮಕೃಷ್ಣರು ಧ್ಯಾನಸ್ಥರಾಗುವುದನ್ನೇ ಗಮನಿಸುತ್ತ ತೋತಾಪುರಿ ಬಹಳ ಹೊತ್ತು ಅವರೆದುರಿಗೆ ಕುಳಿತಿದ್ದ. ಅವರು ಧ್ಯಾನದಲ್ಲಿ ಮುಳುಗಿದುದು ಖಚಿತವಾದ ಮೇಲೆ ಮೆಲ್ಲನೆ ಮೇಲೆದ್ದು ಹೊರ ಹೊರಟ. ಸ್ವಲ್ಪ ಹೊತ್ತು ಅವರಿಗೆ ಯಾರೂ ತೊಂದರೆ ಕೊಡದಿರಲೆಂದು ಕುಟೀರದ ಬಾಗಿಲಿಗೆ ಬೀಗ ಹಾಕಿದ. ಅವರು

ತಾವಾಗಿಯೇ ಕೂಗಿ ಕರೆಯಲೆಂದು ಕಾಯುತ್ತ ಅಲ್ಲೇ ಸಮೀಪದಲ್ಲಿ ಪಂಚವಟಿಯ ಅಡಿಯಲ್ಲಿ ಕುಳಿತ.

ಗಂಟೆಗಳುರುಳಿ ಮಧ್ಯಾಹ್ನವಾಯಿತು, ಮಧ್ಯಾಹ್ನ ಕಳೆದು ಸಂಜೆಯಾಯಿತು; ಸಂಜೆ ಕರಗಿ ರಾತ್ರಿಯಾಯಿತು. ತೋತಾಪುರಿ ಹೊರಗೆ ಕಾಯುತ್ತಲೇ ಇದ್ದಾನೆ; ಶ್ರೀರಾಮಕೃಷ್ಣರು ಕುಳಿತಲ್ಲಿಂದ ಏಳಲೂ ಇಲ್ಲ, ತೋತಾಪುರಿಯನ್ನು ಕರೆಯಲೂ ಇಲ್ಲ. ಈಗ ಅವನು ಕುತೂಹಲ ತಾಳಲಾರದೆ ತಾನಾಗಿಯೇ ಹೋಗಿ ನೋಡಿದ. ಶ್ರೀರಾಮಕೃಷ್ಣರು ಅದೇ ಭಂಗಿಯಲ್ಲಿ ಕುಳಿತಿರುವುದನ್ನು ಕಂಡ. 'ಇರಲಿ, ಎಷ್ಟು ಹೊತ್ತು ಧ್ಯಾನಮಗ್ನನಾಗಿರುತ್ತಾನೋ ಇರಲಿ' ಎಂದುಕೊಂಡ. ಹೀಗೆಯೇ ಮಾರನೆಯ ದಿನವೂ ಕಳೆಯಿತು, ಅದರ ಮಾರನೆಯ ದಿನವೂ ಕಳೆಯಿತು. ಆದರೆ ಶ್ರೀರಾಮಕೃಷ್ಣರು ಮಾತ್ರ ಎಚ್ಚರಗೊಂಡಂತೆ ಕಾಣಲೇ ಇಲ್ಲ! ತೋತಾಪುರಿಗೆ ವಿಸ್ಮಯ, ಕುತೂಹಲ! ತನ್ನ ಶಿಷ್ಯನಿಗೆ ಏನಾಗಿರಬಹುದು? ಇನ್ನೂ ಧ್ಯಾನಮಗ್ನ ನಾಗಿಯೇ ಇರಬಹುದೆ? ಅದು ಸಾಧ್ಯವೆ?... ಇನ್ನು ಅವನ ಮನಸ್ಸು ತಡೆಯ ಲಿಲ್ಲ. ತಾನೇ ನೋಡಲು ಹೊರಟ. ಹೋಗಿ ಬೀಗ ತೆರೆದು ನೋಡುತ್ತಾನೆ— ಶ್ರೀರಾಮಕೃಷ್ಣರನ್ನು ತಾನು ಯಾವ ಸ್ಥಿತಿಯಲ್ಲಿ ಬಿಟ್ಟು ಹೊರಟನೋ ಅದೇ ರೀತಿಯಲ್ಲಿ ಅದೇ ಭಂಗಿಯಲ್ಲಿ ಕುಳಿತಿದ್ದಾರೆ! ಉಸಿರಾಟವಿಲ್ಲ, ಎದೆ ಬಡಿಯುತ್ತಿಲ್ಲ; ಶರೀರದಲ್ಲಿ ಜೀವವಿರುವ ಯಾವುದೇ ಕುರುಹೂ ಇಲ್ಲ! ಆದರೆ ಮುಖದಲ್ಲಿ ಮಾತ್ರ ಶಾಂತಿ-ಪ್ರಸನ್ನತೆ-ಗಾಂಭೀರ್ಯ ನೆಲೆಸಿದೆ; ವರ್ಣನಾತೀತವಾದ ಅಲೌಕಿಕ ತೇಜಸ್ಸು ಸುಮ್ಮನೆ ಹೊರಹೊಮ್ಮುತ್ತಿದೆ!

ಈ ದೃಶ್ಯವನ್ನು ಕಂಡು ತೋತಾಪುರಿ ರೋಮಾಂಚಿತನಾದ. ಕ್ಷಣ ಮಾತ್ರ ದಲ್ಲಿ ಅವನಿಗೆ ಅರಿವಾಯಿತು—ತನ್ನ ಶಿಷ್ಯ ಬಾಹ್ಯಜಗತ್ತಿನ ಪಾಲಿಗೆ ಮೃತನಾಗಿ ದ್ದಾನೆ; ಆದರೆ ಅವನ ಮನಸ್ಸು ಬ್ರಹ್ಮದಲ್ಲಿ ಲೀನವಾಗಿ, ಗಾಳಿ ಬೀಸದ ಸ್ಥಳದಲ್ಲಿ ನಿಶ್ಚಲವಾಗಿ ಮಿನುಗುವ ದೀಪದಂತೆ, ಶಾಂತ ನಿರ್ವಿಕಲ್ಪ ಸ್ಥಿತಿಯಲ್ಲಿದೆ ಎಂದು.

ಸಮಾಧಿಯ ರಹಸ್ಯವನ್ನು ಆಮೂಲಾಗ್ರವಾಗಿ ಬಲ್ಲವನು ತೋತಾಪುರಿ. ಆದರೆ ತನ್ನ ಶಿಷ್ಯನ ಸಾಧನೆಯನ್ನು ಕಂಡು ಅವನೂ ದಿಗ್ಭ್ರಾಂತನಾಗಿಬಿಟ್ಟ. 'ಆಹ್, ಏನದ್ಭುತ! ನಾನು ನನ್ನ ಕಂಗಳನ್ನು ಹೇಗೆ ನಂಬಲಿ? ನಾನು ನಲವತ್ತು ವರ್ಷಗಳ ಕಠಿಣ ತಪಸ್ಸಿನಿಂದ ಗಳಿಸಿದ್ದನ್ನು, ಈ ಮಹಾಪುರುಷ ಒಂದೇ ದಿನದಲ್ಲಿ ಪಡೆದು ಕೊಂಡುಬಿಟ್ಟನೆ? ಇದು ನಿಜವೆ?' ಎಂದು ತನ್ನೊಳಗೇ ಮತ್ತೆಮತ್ತೆ ಪ್ರಶ್ನಿಸಿ ಕೊಂಡ. ಉತ್ತರ ಎದುರಿಗೇ ಇದೆ! ಆದರೂ ಏನೋ ಸಂಶಯ, ಏನೋ ಅನು ಮಾನ. ಅಥವಾ ಇದೇನು ತನ್ನ ಚಿತ್ತಭ್ರಮೆಯೊ? ಮತ್ತೆ ಸರಿಯಾಗಿ ಪರೀಕ್ಷಿಸಿ ನೋಡಲು ನಿರ್ಧರಿಸಿದ. ಚೆನ್ನಾಗಿ ಗಮನವಿತ್ತು ತನ್ನ ಶಿಷ್ಯನ ದೇಹಲಕ್ಷಣಗಳನ್ನೆಲ್ಲ ಎಚ್ಚರಿಕೆಯಿಂದ ಬಹಳ ಹೊತ್ತು ಗಮನಿಸಿದ. ಶರೀರವನ್ನು ಮುಟ್ಟಿ ನೋಡಿದ, ಒತ್ತಿ ನೋಡಿದ; ಅದು ಮರದ ಕೊರಡಿನಂತೆ ಗಟ್ಟಿಯಾಗಿ ಒಂದೇ ರೀತಿಯಾಗಿತ್ತು. ಅಲುಗಿಸಿ ನೋಡಿದ; ಆದರೂ ಪ್ರತಿಕ್ರಿಯೆಯೇನೂ ಕಾಣಲಿಲ್ಲ; ಪ್ರಜ್ಞೆ ಮರಳುವ ಲಕ್ಷಣಗಳೂ ಗೋಚರವಾಗಲಿಲ್ಲ. ಹಾಗಾದರೆ... ಇದು ನಿರ್ವಿಕಲ್ಪ ಸಮಾಧಿ

ಯಲ್ಲದೆ ಮತ್ತೇನು ? ಆಶ್ಚರ್ಯಾನಂದಗಳಿಂದ ತೋತಾಪುರಿ, "ಓ ಇದೆಂಥ ದೈವೀಮಾಯೆ ! ಇದು ನಿಜವಾಗಿಯೂ ಸಮಾಧಿಯೇ ಹೌದು ! ವೇದಾಂತೋಕ್ತ ಜ್ಞಾನಮಾರ್ಗದ ಅಂತಿಮಫಲವಾದ ನಿರ್ವಿಕಲ್ಪ ಸಮಾಧಿಯೇ ಖಂಡಿತ ! ಆದರೆ ಇದು ಒಂದೇ ದಿನದಲ್ಲಿ ಸಾಧ್ಯವಾಯಿತೆ ? ಇದೆಂಥ ವಿಚಿತ್ರ ! ಅದ್ಭುತ !" ಎಂದು ಕೂಗಿಕೊಂಡ.

ಆ ಅತ್ಯುನ್ನತ ಸ್ಥಿತಿಯಿಂದ ಶ್ರೀರಾಮಕೃಷ್ಣರು ತಾವಾಗಿಯೇ ಇಳಿದುಬರುವುದು ಅಸಂಭವವೆಂಬುದನ್ನು ತೋತಾಪುರಿ ಕಂಡುಕೊಂಡ. ಆದ್ದರಿಂದ ತಾನೀಗ ಅವರನ್ನು ಲೌಕಿಕ ಭೂಮಿಕೆಗೆ ಇಳಿಸುವ ಪ್ರಯತ್ನದಲ್ಲಿ ತೊಡಗಿದ. ಇದಕ್ಕೆ ಅವನು ಕೈಗೊಂಡ ಉಪಾಯವೆಂದರೆ 'ಹರಿ ಓಂ ತತ್ ಸತ್' ಮಂತ್ರೋಚ್ಚಾರಣೆ. ಪಂಚವಟಿಯ ಮರಗಿಡಗಳೂ ಜಲಾಶಯಗಳೂ ಓಂಕಾರದ ಗಂಭೀರ ನಿನಾದದಿಂದ ಅನುರಣಿತವಾದುವು. ಆ ಮಧುರ ಹಿನ್ನೆಲೆಯಲ್ಲಿ ಶ್ರೀರಾಮಕೃಷ್ಣರ ಮನಸ್ಸು ತುರೀಯಾವಸ್ಥೆಯಿಂದ ಮೆಲ್ಲನೆ ಕೆಳಗಿಳಿಯಿತು. ಬಾಹ್ಯಪ್ರಜ್ಞೆ ಹಿಂದಿರುಗಲಾರಂಭಿಸಿತು. ತೋತಾಪುರಿ ಪ್ರೇಮಪೂರ್ಣ ನಯನಗಳಿಂದ ಶಿಷ್ಯನ ಮುಖವನ್ನೇ ದಿಟ್ಟಿಸುತ್ತಿದ್ದ.

ಮೂರು ದಿನಗಳಿಂದ ಮುಚ್ಚಿಕೊಂಡಿದ್ದ ಶ್ರೀರಾಮಕೃಷ್ಣರ ಕಣ್ಣುಗಳು ಸಾವಕಾಶವಾಗಿ ಅರೆಬಿರಿಯತೊಡಗಿದುವು. ಬಳಿಕ ಪೂರ್ಣ ತೆರೆದಾಗ ಅವುಗಳಿಂದ ಬ್ರಹ್ಮಾನಂದದ ಅಮೃತೋಪಮ ಅಲೆಗಳು ತಾನೇತಾನಾಗಿ ಹೊರಹೊಮ್ಮಿದುವು. ಬ್ರಹ್ಮವರ್ಚಸ್ಸಿನಿಂದ ದೇದೀಪ್ಯಮಾನವಾದ ಅವರ ಮುಖಮಂಡಲವನ್ನು ಕಂಡ ತೋತಾಪುರಿಯ ಆನಂದಕ್ಕೆ ಪಾರವಿದೆಯೆ ! ಅತ್ಯಂತ ವಾತ್ಸಲ್ಯದಿಂದ ಶಿಷ್ಯನನ್ನು ಗಾಢವಾಗಿ ಆಲಿಂಗಿಸಿದ ಆ ಸಿದ್ಧ ಗುರು. ಪರಿಪೂರ್ಣ ಕೃತಜ್ಞತಾ ಭಾವದಿಂದ ಗುರುವನ್ನು ವಂದಿಸಿದ ಆ ಪರಮ ಶಿಷ್ಯ. ದಕ್ಷಿಣೇಶ್ವರದ ಆ ದಿವ್ಯ ಪಂಚವಟಿ ಏನು ಪುಣ್ಯ ಮಾಡಿದೆಯೋ ! ವೇದೋಪನಿಷತ್ತುಗಳು ವರ್ಣಿಸುವ ಅಖಂಡ ಸಚ್ಚಿದಾನಂದ ಪರಬ್ರಹ್ಮವು ಮೂರು ದಿನಗಳ ಕಾಲ ಆ ದಿವ್ಯ ಶರೀರದಲ್ಲಿ ಆವಿರ್ಭಾವಗೊಂಡಿದ್ದಾಗ ಅದನ್ನು ಹೊತ್ತು ನಿಂತಿದ್ದ ಆ ಭೂಭಾಗದ ಸೌಭಾಗ್ಯಕ್ಕೆ ಎಣೆಯಿದೆಯೆ ?

## ಯಾರೀ ತೋತಾಪುರಿ ?

ತೀರ್ಥಯಾತ್ರೆಯ ಹೆಸರಿನಲ್ಲಿ ತಿರುಗಾಡುತ್ತ ಬಂದ ತೋತಾಪುರಿಯೊಡನೆ ಶ್ರೀರಾಮಕೃಷ್ಣರಿಗೆ ಸಂಪರ್ಕವೂ ಆಯಿತು; ಸಾಧನೆಯೂ ನಡೆಯಿತು, ಸಿದ್ಧರೂ ಆಗಿಬಿಟ್ಟರು. ಆದರೆ ಅವರು, ಗುರು ತೋತಾಪುರಿ ಯಾವ ಊರಿನವನು ಎಂಬುದನ್ನು ಕೇಳಲೂ ಇಲ್ಲ, ಆತ ತಾನಾಗಿ ಹೇಳಲೂ ಇಲ್ಲ. ಸಂನ್ಯಾಸಿಯ ಊರು ಕುಲ ಗೋತ್ರಗಳನ್ನು ಕೇಳಲೂ ಬಾರದು, ಆತ ಹೇಳಲೂ ಬಾರದು ಎಂದು ಶಾಸ್ತ್ರ ವಿಧಿಯೇ ಇದೆ. ಆತ್ಮಶ್ರಾದ್ಧ ಮಾಡಿಕೊಂಡು ಕುಲಗೋತ್ರಗಳನ್ನು ಕಡಿದುಕೊಂಡ ಸರ್ವಸಂಗ ಪರಿತ್ಯಾಗಿಗೆ ಊರಾವುದು, ಕೇರಿ ಯಾವುದು? ತನ್ನವರಾರು, ಪರಕೀಯರಾರು ? ಆದರೂ ಕುತೂಹಲ ತಾಳಲಾರದ ಕೆಲವರು, ತೋತಾಪುರಿಯ ಸ್ವಸ್ಥಳ ಪಂಜಾಬಿನ ಸಮೀಪದ ಒಂದೂರು ಎಂದು ಪತ್ತೆಹಚ್ಚಿದ್ದರು. ಅಲ್ಲದೆ ಅವನೂ ಕೂಡ ಕೆಲವೊಮ್ಮೆ ಶ್ರೀರಾಮಕೃಷ್ಣರೊಂದಿಗೆ ಮಾತನಾಡುತ್ತ ಸಾಂದರ್ಭಿಕ ವಾಗಿ ಹಲವಾರು ವಿಷಯಗಳನ್ನು ತಿಳಿಸಿದ್ದ. ಅವನ ಗುರುಗಳ ಮಠ ಇದ್ದದ್ದು ಲೂಧಿಯಾನಾ ಎಂಬಲ್ಲಿ. ಮಹಾಯೋಗಿಯಾಗಿದ್ದ ಅವನ ಗುರು ಆ ಮಠವನ್ನು ಊರ್ಜಿತಗೊಳಿಸಿದ್ದ. ಅವನೇ ಆ ಮಠದ ಮಹಂತನೂ ಆಗಿದ್ದ. ಅವನ ಮಾರ್ಗದರ್ಶನದಲ್ಲಿ ಸುಮಾರು ಏಳುನೂರು ಶಿಷ್ಯರು ವಿವಿಧ ಹಂತದ ಸಾಧನೆ ಗಳಲ್ಲಿ ನಿರತರಾಗಿದ್ದರು. ಅವನು ಆ ಊರಿನಲ್ಲಿ ಎಷ್ಟು ಪ್ರಭಾವ ಬೀರಿದ್ದನೆಂದರೆ ಪ್ರತಿವರ್ಷವೂ ಅಲ್ಲಿ ಅವನ ಗೌರವಾರ್ಥವಾಗಿ ಉತ್ಸವ ನಡೆಯುತ್ತಿತ್ತು. ಅವನು ದೇಹತ್ಯಾಗ ಮಾಡಿದ ಮೇಲೆ ಆ ಮಠದ ಮಹಂತ ಸ್ಥಾನವನ್ನು ಅಲಂಕರಿಸಿದವನೇ ತೋತಾಪುರಿ.

ದೈಹಿಕವಾಗಿ ತೋತಾಪುರಿ ಆಜಾನುಬಾಹು; ಆಧ್ಯಾತ್ಮಿಕವಾಗಿ ಯೋಗಸಿದ್ಧ ಪುರುಷ. ನಲವತ್ತು ವರ್ಷಗಳ ಕ್ರಮಬದ್ಧ ಸಾಧನೆಯ ಫಲವಾಗಿ ನಿರ್ವಿಕಲ್ಪ ಸಮಾಧಿಯ ಸವಿಯನ್ನುಂಡವನು ಅವನು. ದಿನದ ಹೆಚ್ಚಿನ ಸಮಯ ಧ್ಯಾನ–ಸಮಾಧಿಯ ಆನಂದದಲ್ಲೇ ತನ್ಮಯನಾಗಿರುವುದು ಅವನ ಪರಿಪಾಠ. ಮಗುವಿ ನಂತೆ ದೇಹಭಾವನೆಯೇ ಇಲ್ಲದಿದ್ದ ಅವನ ಮೈಮೇಲೆ ಬಟ್ಟೆ ಇದ್ದರಿತ್ತು, ಇಲ್ಲದಿದ್ದರಿಲ್ಲ. ಶ್ರೀರಾಮಕೃಷ್ಣರು ಅವನನ್ನು ನ್ಯಾಂಗ್ಟಾ ಎಂದೇ ಕರೆಯುತ್ತಿದ್ದರು. 'ನ್ಯಾಂಗ್ಟಾ' ಎಂದರೆ ನಗ್ನ ಎಂದರ್ಥ. ಅವರು ಅವನನ್ನು ಹಾಗೆ ಕರೆಯುತ್ತಿದ್ದುದಕ್ಕೆ ಇನ್ನೊಂದು ಕಾರಣವೂ ಇರಬಹುದು—ಶಿಷ್ಯನಾದವನು ಗುರುವಿನ ಹೆಸರನ್ನು

ನೇರವಾಗಿ ಹೇಳಬಾರದು, ಹೆಸರು ಹಿಡಿದು ಕರೆಯಲೂ ಬಾರದು ಎಂಬ ಮಾತಿದೆ. ಇದನ್ನು ಪಾಲಿಸುವುದಕ್ಕಾಗಿ ಅವರು ನ್ಯಾಂಗ್ಟಾ ಎಂದು ಕರೆಯುತ್ತಿದ್ದಿರಬಹುದು. ಅವನು ನಾಗಾ ಸಂಪ್ರದಾಯದವನಾದ್ದರಿಂದ ಯಾವಾಗಲೂ ಅಗ್ನಿಯನ್ನು ಪೂಜಿಸು ತ್ತಿದ್ದ. ನಾಗಾ ಸಾಧುಗಳ ಪಾಲಿಗೆ ಅಗ್ನಿ ಅತ್ಯಂತ ಪವಿತ್ರ. ಆದ್ದರಿಂದ ಅವರು ಹೋದಲ್ಲಿ ಬಂದಲ್ಲಿ ಕಟ್ಟಿಗೆ ಸಂಗ್ರಹಿಸಿಟ್ಟುಕೊಂಡು ಸದಾ ಅಗ್ನಿಯನ್ನು ಉರಿಸು ತ್ತಿರುತ್ತಾರೆ. ಆ ಅಗ್ನಿಗೆ 'ಧುನಿ' ಎಂದು ಹೆಸರು. ನಾಗಾ ಸಾಧುಗಳು ಧುನಿಗೆ ಪ್ರತಿದಿನ ಪ್ರಾತಃಕಾಲ-ಸಾಯಂಕಾಲ ಆರತಿ ಬೆಳಗುತ್ತಾರೆ; ಭಿಕ್ಷೆಬೇಡಿ ತಂದ ಆಹಾರವನ್ನು ನೈವೇದ್ಯ ಮಾಡಿ ಪ್ರಸಾದರೂಪವಾಗಿ ಸ್ವೀಕರಿಸುತ್ತಾರೆ. ನಾಗಾ ಸಾಧುಗಳು ಎಂದೂ ಮನೆಯೊಳಗೆ ವಾಸಿಸುವುದಿಲ್ಲ. ಆದ್ದರಿಂದಲೇ ತೋತಾಪುರಿ ದಕ್ಷಿಣೇಶ್ವರದಲ್ಲಿ ಪಂಚವಟಿಯ ತರುತಲದಲ್ಲಿ ವಾಸವಾಗಿದ್ದದ್ದು. ಅಲ್ಲಿ ಅವನು ಧುನಿ ಹೊತ್ತಿಸಿಕೊಂಡು ಇರುತ್ತಿದ್ದ. ಅವನ ಆ ಧುನಿ ಮಳೆಗಾಲದಲ್ಲೂ ಬಿಸಿಲ್ಗಾಲ ದಲ್ಲೂ ಏಕಪ್ರಕಾರವಾಗಿ ಉರಿಯುತ್ತಿತ್ತು. ತೋತಾಪುರಿ ಭಿಕ್ಷಾನ್ನವನ್ನು ಸೇವಿಸು ತ್ತಿದ್ದುದು, ಮಲಗುತ್ತಿದ್ದುದು ಎಲ್ಲವೂ ಆ ಧುನಿಯ ಮುಂದೆ. ರಾತ್ರಿ ಗಾಢ ವಾದಂತೆಲ್ಲ ಹೊರಗಿನ ಇಡೀ ಜಗತ್ತು ವಿಶ್ರಾಂತಿದಾಯಿನಿಯಾದ ನಿದ್ರಾದೇವಿಯ ಮಡಿಲಲ್ಲಿ ಮಲಗಿ ನಿಶ್ಚೇಷ್ಟಿತವಾಗಿರುವಾಗ ತೋತಾಪುರಿ ಜಾಗೃತನಾಗಿ ಧುನಿಯ ಅಗ್ನಿಯನ್ನು ಇನ್ನಷ್ಟು ಪ್ರಜ್ವಲಗೊಳಿಸಿಕೊಂಡು ಸುಮೇರುಪರ್ವತದಂತೆ ಸ್ಥಿರವಾಗಿ ಕುಳಿತುಬಿಡುತ್ತಿದ್ದ. ಆಗ ಅವನ ಮನಸ್ಸು ಏಕಮುಖವಾಗಿ ಪರಬ್ರಹ್ಮದೆಡೆಗೆ ಹರಿ ಯುತ್ತ ಸಮಾಧಿಮಗ್ನವಾಗಿಬಿಡುತ್ತಿತ್ತು. ಅವನು ಹಗಲು ಹೊತ್ತು ಕೂಡ ಬಹು ಪಾಲು ಧ್ಯಾನನಿರತನಾಗಿಯೇ ಇರುತ್ತಿದ್ದ. ಆದರೆ ಇತರರಾರೂ ತಿಳಿಯದಂತೆ ಧ್ಯಾನ ಮಾಡುವುದು ಅವನ ಕ್ರಮ. ಆದ್ದರಿಂದಲೇ ಅವನು ಮೈ ತುಂಬ ಒಂದು ಶಲ್ಯ ವನ್ನು ಹೊದೆದುಕೊಂಡು ಶವದಂತೆ ನೆಲದ ಮೇಲೆ ಉದ್ದಕ್ಕೆ ಬಿದ್ದುಕೊಂಡಿರುತ್ತಿದ್ದ. ನೋಡುವವರಿಗೆ ಈತ ಯಾವಾಗಲೂ ಗೊರಕೆ ಹೊಡೆಯುತ್ತಿರುತ್ತಾನೆ ಎನ್ನಿಸ ಬೇಕು. ಆದರೆ ಅವನು ಮಗ್ನನಾಗಿರುತ್ತಿದ್ದುದು ಧ್ಯಾನಾನಂದದಲ್ಲಿ.

ತೋತಾಪುರಿಯ ಬಳಿ ಒಂದು ತಂಬಿಗೆ ಹಾಗೂ ಒಂದು ಚಿಮಟಗೆ ಇರುತ್ತಿತ್ತು. ಅವೆರಡನ್ನೂ ಅವನು ದಿನವೂ ಉಜ್ಜಿ ತೊಳೆದಿಡುತ್ತಿದ್ದ. ಅಲ್ಲದೆ ಅವನ ಹತ್ತಿರ ಒಂದು ಪುಟ್ಟ ಕೃಷ್ಣಾಜಿನವೂ ಇತ್ತು. ಕುಳಿತು ಧ್ಯಾನಮಾಡುವಾಗ ಅದು ಅವನ ಆಸನ. ಅವನು ಪ್ರತಿದಿನವೂ ತಪ್ಪದೆ ಧ್ಯಾನಾನುಷ್ಠಾನ ಮಾಡುವುದನ್ನು ಕಂಡ ಶ್ರೀರಾಮಕೃಷ್ಣರು ಒಮ್ಮೆ ಅವನನ್ನು ಕೇಳಿದರು:

"ನಿಮಗೆ ಬ್ರಹ್ಮಸಾಕ್ಷಾತ್ಕಾರವಾಗಿದೆ, ನೀವು ಸಿದ್ಧಪುರುಷರು. ಹೀಗಿರುವಾಗ ನೀವು ನಿತ್ಯವೂ ಧ್ಯಾನಾಭ್ಯಾಸ ಮಾಡುವ ಅಗತ್ಯವೇನಿದೆ!"

ತೋತಾಪುರಿ ಶಿಷ್ಯನನ್ನೇ ನೆಟ್ಟದೃಷ್ಟಿಯಿಂದ ನೋಡುತ್ತ, ಅಲ್ಲೇ ಬಳಿಯಲ್ಲಿದ್ದ ತಂಬಿಗೆಯನ್ನು ಕೈಬೆರಳಿನಿಂದ ತೋರಿಸುತ್ತ ಹೇಳಿದ:

"ನೋಡಿದೆಯಾ ಈ ನನ್ನ ತಂಬಿಗೆಯನ್ನು ? ಇದು ಹೇಗೆ ಥಳಥಳಿಸುತ್ತಿದೆ ನೋಡು ! ನಾನಿದನ್ನು ದಿನವೂ ಉಜ್ಜಿ ತೊಳೆಯದಿದ್ದರೆ ಇಷ್ಟು ಚೊಕ್ಕಟವಾಗಿರಲು

ಸಾಧ್ಯವಿತ್ತೆ? ಹಾಗೆಯೇ ಮನಸ್ಸೂ ಕೂಡ. ನಿತ್ಯವೂ ಧ್ಯಾನಮಾಡದಿದ್ದರೆ ಅದು ಮಲಿನಮಯವಾಗಿಬಿಡುತ್ತದೆ.''

ಸೂಕ್ಷ್ಮಬುದ್ಧಿಯ ಶ್ರೀರಾಮಕೃಷ್ಣರು ಈ ಮಾತನ್ನು ಕೂಡಲೇ ಒಪ್ಪಿಕೊಂಡರು. ಆದರೆ ಮರುಕ್ಷಣವೇ ಒಂದು ಪ್ರಶ್ನೆ ಹಾಕಿದರು:

''ತಂಬಿಗೆ ಬಂಗಾರದ್ದಾಗಿಬಿಟ್ಟರೆ? ಪ್ರತಿದಿನ ತೊಳೆಯದಿದ್ದರೂ ಕೊಳೆಯಾಗುವ ಸಂಭವವಿಲ್ಲ, ಅಲ್ಲವೆ?''

ತೋತಾಪುರಿ ಮುಗುಳ್ನಕ್ಕು, ''ಹೌದು, ಅದು ನಿಜ'' ಎಂದು ಸಮ್ಮತಿಸಿದ.

ಆದರೆ 'ನಿತ್ಯವೂ ಧ್ಯಾನಮಾಡದಿದ್ದರೆ ಮನಸ್ಸು ಮಲಿನಮಯವಾಗಿ ಬಿಡುತ್ತದೆ' ಎಂಬ ನ್ಯಾಂಗ್ಟನ ಮಾತನ್ನು ರಾಮಕೃಷ್ಣರು ಆಜೀವಪರ್ಯಂತ ನೆನಪಿಟ್ಟುಕೊಂಡಿದ್ದರು; ಅಲ್ಲದೆ ಮುಂದೆ ತಮ್ಮ ಶಿಷ್ಯರಿಗೂ ಅದನ್ನು ಹೇಳುತ್ತಿದ್ದರು. ಹಾಗೆಯೇ 'ತಂಬಿಗೆ ಬಂಗಾರದ್ದಾಗಿಬಿಟ್ಟರೆ? ಕೊಳೆಯಾಗುವ ಸಂಭವವಿಲ್ಲ, ಅಲ್ಲವೆ?' ಎಂಬ ತನ್ನ ಶಿಷ್ಯನ ಮಾತು ತೋತಾಪುರಿಯ ಮನದಲ್ಲಿ ಮತ್ತೆಮತ್ತೆ ಮರುಧ್ವನಿಸದೆ ಇದ್ದಿರಲಾರದು. ಅವನ ಮನಸ್ಸಿಗೆ ಖಚಿತವಾಗಿತ್ತು, ಶ್ರೀರಾಮಕೃಷ್ಣರ ಮನಸ್ಸು ಅಪರಂಜಿಯಂತೆ ಶುದ್ಧ ಎಂದು.

ನಲವತ್ತು ವರ್ಷಗಳ ನಿರಂತರ ಸಾಧನೆಯ ಫಲವಾಗಿ ಜೀವನ್ಮುಕ್ತಿಯ ಸ್ಥಿತಿಯನ್ನು ಮುಟ್ಟಿದವನು ತೋತಾಪುರಿ. ಆದ್ದರಿಂದ ಸಹಜವಾಗಿಯೇ ಅವನ ಆಹಾರ ವಿಹಾರ ಆಸನ ಶಯನ ಮೊದಲಾದ ಎಲ್ಲ ಕಾರ್ಯಕಲಾಪಗಳೂ ಸಾಮಾನ್ಯ ಮಾನವರಿಗಿಂತ ಭಿನ್ನವಾಗಿದ್ದುವು. ಅಡೆತಡೆಯಿಲ್ಲದೆ ಬೀಸುವ ಗಾಳಿಯಂತೆ ಊರಿಂದೂರಿಗೆ ಸಂಚರಿಸುತ್ತಿದ್ದವನು ಅವನು. ಗಾಳಿಯು ಪರಿಸರದ ಯಾವ ದೋಷವನ್ನೂ ಅಂಟಿಸಿಕೊಳ್ಳುವುದಿಲ್ಲ. ಹಾಗೆಯೇ ಪ್ರಾಪಂಚಿಕತೆಯ ಕಿಲುಬು ಕಿಂಚಿತ್ತೂ ಸೋಂಕದವನು ಅವನು. ಗಾಳಿಗೆ ಒಂದೇ ಸ್ಥಳದಲ್ಲಿ ನಿಲ್ಲುವ ಸ್ವಭಾವವಿಲ್ಲ. ಹಾಗೆಯೇ ಒಂದೇ ಊರಿಗೆ ಕಟ್ಟುಬೀಳದವನು ಅವನು. ಮೂರು ದಿನಗಳಿಗೆ ಮೀರಿ ಎಲ್ಲಿಯೂ ಇರುತ್ತಿರಲಿಲ್ಲ ಅವನು. ಆದರೆ ಶ್ರೀರಾಮಕೃಷ್ಣರ ಆಕರ್ಷಣೆಯ ಜೋರು ಎಂಥದೆಂದರೆ ಆ ಗಾಳಿಯಂತಹ ಮನುಷ್ಯನನ್ನೂ ಒಂದಲ್ಲ, ಎರಡಲ್ಲ, ಹನ್ನೊಂದು ತಿಂಗಳ ದೀರ್ಘಕಾಲ ದಕ್ಷಿಣೇಶ್ವರದ ದಿವ್ಯ ವಲಯದೊಳಗೆ ಕಟ್ಟಿಹಾಕಿತು!

ತೋತಾಪುರಿ ಮಹಾ ಧೈರ್ಯಶಾಲಿ. ಪರಬ್ರಹ್ಮವನ್ನೇ ಸಾಕ್ಷಾತ್ಕರಿಸಿಕೊಂಡವನಿಗೆ ಭಯವೆಲ್ಲಿಯದು ಎಂಬುದೇನೋ ನಿಜವೆ. ಆದರೆ ಇದ್ದಕ್ಕಿದ್ದಂತೆ ಭೀಕರ ರೂಪವೊಂದು ಇದಿರಿಗೆ ಬಂದು ನಿಂತರೆ ಆಗ? ತೋತಾಪುರಿ ಅಂಥದಕ್ಕೂ ಜಗ್ಗುವವನಲ್ಲ ಎನ್ನುತ್ತ ಶ್ರೀರಾಮಕೃಷ್ಣರು ಅವನ ಸಂಬಂಧವಾಗಿ ಒಂದು ಘಟನೆಯನ್ನು ಹೇಳುತ್ತಿದ್ದರು:

''ಒಂದಾನೊಂದು ರಾತ್ರಿ. ಎಲ್ಲೆಲ್ಲೂ ಕಾರ್ಗತ್ತಲು. ನ್ಯಾಂಗ್ಟಾ ಧುನಿಯ ಅಗ್ನಿಯನ್ನು ಇನ್ನಷ್ಟು ಪ್ರಜ್ವಲಿಸಿಕೊಂಡು ಧ್ಯಾನಕ್ಕೆ ಕುಳಿತುಕೊಳ್ಳಲು ಅಣಿಯಾಗುತ್ತಿದ್ದ. ಪ್ರಕೃತಿ ಪರಮ ಪ್ರಶಾಂತವಾಗಿತ್ತು. ಅಲ್ಲಲ್ಲಿ ಕೆಲವು ಕೀಟಗಳ ಕೀಚಲು ದನಿ,

ದೇವಾಲಯದ ಗೋಪುರದ ಮೇಲೆ ಕುಳಿತಿದ್ದ ಗೂಬೆಯು ಕೂಗಿನ ದನಿ—ಇವು ಗಳನ್ನು ಬಿಟ್ಟರೆ ಮತ್ತಾವ ಶಬ್ದವೂ ಇಲ್ಲ. ಗಾಳಿಯೂ ಕೂಡ ಬೀಸದೆ ವಿಶ್ರಮಿಸಿ ಕೊಳ್ಳುತ್ತಿತ್ತು. ಆಗ ಅನಿರೀಕ್ಷಿತವಾಗಿ ಪಂಚವಟಿಯ ಮರದ ಕೊಂಬೆಗಳು ಅಲುಗಾಡ ತೊಡಗಿದುವು. ಮರದ ಮೇಲಿಂದ ಉದ್ದನೆಯ ಮಾನವಾಕೃತಿ ಯೊಂದು ಕೆಳಗಿಳಿದು ಬಂದಿತು. ನ್ಯಾಂಗ್ಟನನ್ನೇ ದುರುಗುಟ್ಟಿಕೊಂಡು ನೋಡುತ್ತ ಧುನಿಯ ಪಕ್ಕದಲ್ಲಿಯೇ ಬಂದು ಕುಳಿತುಕೊಂಡಿತು. ನ್ಯಾಂಗ್ಟನೂ ಅದನ್ನು ದಿಟ್ಟಿಸಿದ. 'ಎಲಾ, ಇವನೂ ನನ್ನಂತೆಯೇ ನಗ್ನನಾಗಿದ್ದಾನಲ್ಲ!' ಎಂದು ಆಶ್ಚರ್ಯ ಗೊಂಡ. ಬಳಿಕ ಕೇಳಿದ, 'ಯಾರು ನೀನು ?'

"ಆ ವ್ಯಕ್ತಿ ಹೇಳಿತು: 'ನಾನೊಬ್ಬ ಭೈರವ. ಈ ಮಂದಿರದ ರಕ್ಷಣೆಯ ಕಾರ್ಯ ಮಾಡುತ್ತ ಈ ಮರದ ಮೇಲೆ ವಾಸವಾಗಿರುವವನು.'

"ನ್ಯಾಂಗ್ಟಾ ಸ್ವಲ್ಪವೂ ದಿಗಿಲುಗೊಳ್ಳದೆ ಅತ್ಯಂತ ಸಹಜವಾಗಿ ಹೇಳಿದ: 'ಒಳ್ಳೆಯದು. ನೀನು ಏನಾಗಿರುವೆಯೋ ನಾನೂ ಅದೇ ಆಗಿದ್ದೇನೆ. ಅದೇ ಪರಬ್ರಹ್ಮದ ಒಂದು ರೂಪ ನೀನು, ಇನ್ನೊಂದು ರೂಪ ನಾನು. ಬಾ, ಕುಳಿತುಕೊ, ಧ್ಯಾನಮಾಡು.'

"ಆಗ ಆ ಭೈರವ ನಗುತ್ತ, ಗಾಳಿಯಲ್ಲಿ ಕರಗಿಯೇ ಹೋದನೋ ಎಂಬಂತೆ ಮಾಯವಾದ. ಈ ಘಟನೆಯಿಂದ ನ್ಯಾಂಗ್ಟಾ ಸ್ವಲ್ಪವೂ ವಿಚಲಿತನಾಗದೆ, ತನ್ನಷ್ಟಕ್ಕೆ ಧ್ಯಾನಮಗ್ನನಾಗಿಬಿಟ್ಟ ! ಮರುದಿನ ಅವನು ನನ್ನ ಬಳಿಗೆ ಬಂದು ಈ ಘಟನೆಯನ್ನು ಹೇಳಿದ. ಆಗ ನಾನೆಂದೆ: 'ಹೌದು, ಭೈರವ ಅಲ್ಲಿರುವುದು ನಿಜ. ನಾನೂ ಅವನನ್ನು ಅನೇಕ ಸಲ ಕಂಡಿದ್ದೆ. ಅವನು ಆಗಾಗ ನನಗೆ ಮುಂದೆ ಸಂಭವಿಸಲಿರುವ ಘಟನೆಯ ಕುರಿತು ಸೂಚನೆ ಕೊಡುತ್ತಿದ್ದುದುಂಟು. ಒಮ್ಮೆ ಈಸ್ಟ್ ಇಂಡಿಯಾ ಕಂಪನಿ ಈ ದಕ್ಷಿಣೇಶ್ವರದ ಎಲ್ಲ ಭೂಮಿಯನ್ನೂ ಕೊಂಡುಕೊಂಡು ಇಲ್ಲಿ ಇನ್ನೊಂದು ದೊಡ್ಡ ಶಸ್ತ್ರಾಗಾರವನ್ನು ಕಟ್ಟುವ ಯೋಜನೆ ಹಾಕಿತ್ತು. ಅದನ್ನು ಕೇಳಿ ನನಗೆ, ಜಗತ್ತಿನ ಜಂಜಾಟದಿಂದ ದೂರವಿರುವ ಈ ಸ್ಥಳದಲ್ಲಿ ಕುಳಿತುಕೊಂಡು ಜಗನ್ಮಾತೆಯ ಸ್ಮರಣೆ ಮಾಡುವ ಭಾಗ್ಯ ಎಲ್ಲಿ ತಪ್ಪಿಹೋಗುವುದೋ ಎಂದು ಚಿಂತೆಯಾಗಿಬಿಟ್ಟಿತು. ಮಥುರಬಾಬುವೇನೋ ಕಂಪೆನಿಯ ವಿರುದ್ಧವಾಗಿ ಮೊಕದ್ದಮೆ ಹೂಡಿದ್ದ. ಆದರೆ ಗೆಲುವು ಯಾರ ಕಡೆಗೊ ಯಾರಿಗೆ ಗೊತ್ತು? ಒಂದು ದಿನ ನಾನು ಎಂದಿನಂತೆ ಪಂಚವಟಿಗೆ ಹೋದಾಗ ಆ ಭೈರವ ಮರದ ಮೇಲೆ ಕುಳಿತಿರುವುದನ್ನು ಕಂಡೆ. ಅವನು ನನಗೆ ಸಂಕೇತದ ಮೂಲಕ, 'ಮೊಕದ್ದಮೆಯಲ್ಲಿ ಕಂಪನಿ ಸೋತುಹೋಗು ತ್ತದೆ; ಜಮೀನು ಕಂಪೆನಿಗೆ ಸಿಗಲಾರದು' ಎಂದು ತಿಳಿಸಿದ. ಕೊನೆಗೂ ಅದು ಹಾಗೆಯೇ ಆಯಿತು !' "

# ಅದ್ವೈತಿಗೊಂದು ದ್ವೈತದ ಪಾಠ

ತೋತಾಪುರಿ ನೆಲೆ ನಿಂತಿದ್ದುದು ಅದ್ವೈತಭಾವದಲ್ಲಾದರೆ, ಭೈರವಿ ಬ್ರಾಹ್ಮಣಿಯು ನೆಲೆ ದ್ವೈತಭಾವ. ಶ್ರೀರಾಮಕೃಷ್ಣರು ತೋತಾಪುರಿಯನ್ನು ಗುರುವಾಗಿ ಸ್ವೀಕರಿಸಿ, ಆತನೊಂದಿಗೆ ಅದ್ವೈತವಿಚಾರ ಮಾಡುವುದನ್ನು ಕಂಡು ಬ್ರಾಹ್ಮಣಿಗೆ ಏನೋ ತಳಮಳ, ಚಡಪಡಿಕೆ. ಅವಳು ತನ್ನ ಪ್ರಿಯ ಶಿಷ್ಯನನ್ನು ಕರೆದು ಮತ್ತೆಮತ್ತೆ ಎಷ್ಟೋ ರೀತಿಯಾಗಿ ಹೇಳಿದಳು, 'ಅಪ್ಪಾ, ನೀನು ಆ ಸಂನ್ಯಾಸಿಯೊಂದಿಗೆ ಅಷ್ಟೊಂದು ಬೆರೆಯಬೇಡ. ಅವನ ಮಾರ್ಗ ಬಲು ನೀರಸ, ಸತ್ವಹೀನ. ಭಕ್ತಿ-ಭಾವವನ್ನೇ ಒಪ್ಪದವನು ಅವನು. ಆತನೊಂದಿಗೆ ಬೆರೆತರೆ, ನೀನು ಕಷ್ಟಪಟ್ಟು ಗಳಿಸಿಕೊಂಡಿರುವಂಥ ಭಕ್ತಿಧನವನ್ನು ಕಳೆದುಕೊಂಡುಬಿಡುತ್ತೀಯೆ; ನನ್ನ ಮಾತು ಕೇಳು' ಎಂದು. ಆದರೆ ಶ್ರೀರಾಮಕೃಷ್ಣರು ಆಕೆಯ ಮಾತು ಕೇಳಿ ಮುಗುಳ್ನಕ್ಕರು ಅಷ್ಟೆ. ತಮ್ಮಷ್ಟಕ್ಕೆ ತಾವು ತಮ್ಮ ಆಂತರ್ಯದ ನಿರ್ದೇಶನದಂತೆ ಮುನ್ನಡೆದರು. ಬ್ರಾಹ್ಮಣಿ ತಮ್ಮ ಗುರುವೇ ಆದರೂ, ಅವಳ ಇತಿಮಿತಿಗಳೇನು ಎಂಬುದನ್ನವರು ಚೆನ್ನಾಗಿ ಬಲ್ಲರು. ಅಲ್ಲದೆ ತಮ್ಮ ಕುರಿತಾದ ಮೋಹ, ಮತ್ತು ಕೆಲಮಟ್ಟಿನ ಅಸೂಯೆ—ಇವುಗಳಿಂದಾಗಿಯೇ ಅವಳು ತಮ್ಮನ್ನು 'ರಕ್ಷಿಸಲು' ಹೊರಟಿರುವುದು ಎನ್ನುವುದನ್ನು ಸ್ಫುಟವಾಗಿ ಕಾಣುತ್ತಿದ್ದರು.

ಆದರೂ ಇದೊಂದು ಆಶ್ಚರ್ಯವಲ್ಲವೆ? —ಶ್ರೀರಾಮಕೃಷ್ಣರು ಸಾಕ್ಷಾತ್ ಅವತಾರಪುರುಷ, ತನ್ನ ಇಷ್ಟದೈವ ಎಂದು ದೃಢವಾಗಿ ನಂಬಿದ್ದ ಭೈರವಿ, ಅವರಿಗೇ ಬುದ್ಧಿಹೇಳಲು ಹೊರಟದ್ದು; 'ಭಕ್ತಿಯನ್ನು ಕಳೆದುಕೊಂಡು ಶುಷ್ಕನಾಗುತ್ತೀಯೆ!' ಎಂದು ಎಚ್ಚರಿಸಿದ್ದು ವಿಚಿತ್ರವಲ್ಲವೆ? ಹೌದು, ಕೆಲಮಟ್ಟಿಗೆ ವಿಚಿತ್ರವಾಗಿಯೇ ತೋರುತ್ತದೆ. ಆದರೆ ಮೋಹವೆಂಬುದೊಂದಿದೆಯಲ್ಲ! ಶ್ರೀರಾಮಕೃಷ್ಣರನ್ನು ಅವಳು ಭಗವದವತಾರವೆಂದು ಅರಿತಿದ್ದರೂ ಪ್ರತಿಕ್ಷಣವೂ ಅವರು ಅವಳಿಗೆ ತೋರುತ್ತಿದ್ದುದು ಹಸುಳೆಯಾಗಿ, ಅಸಹಾಯಕ ಶಿಶುವಾಗಿ. ಯಶೋದೆ ಕೃಷ್ಣನ ಬಾಯಲ್ಲಿ ಹದಿನಾಲ್ಕು ಲೋಕಗಳನ್ನು ಕಂಡದ್ದು, ಮೈಮರೆತು ನಿಂತದ್ದು ನಿಜವೇ. ಆದರೆ ಎಲ್ಲ ಕ್ಷಣಿಕ! ಮರುಘಳಿಗೆಯೇ ಅವನನ್ನು ಕಂದನಂತೆ ಕಂಡು, ಎತ್ತಿ ಮುದ್ದಿಸಿದಳು! ಹಾಗೆಯೇ ಬ್ರಾಹ್ಮಣಿಯ ವಿಚಾರದಲ್ಲೂ ಸಹ. ಮೋಹದ ಮುಸುಕು ಸರಿದಾಗ ಮಾತ್ರ—ಯಾವಾಗಲಾದರೊಮ್ಮೆ—ಅವರನ್ನು ಭಗವಂತನಾಗಿ ಕಂಡರೂ ಉಳಿದಂತೆ ಅವರು ಆಕೆಗೆ ತನ್ನ ಮುದ್ದಿನ ಮಗುವೇ!

'ಅದ್ವೈತಿಯೊಡನೆ ಸೇರಿ ಈತ ಶುಷ್ಕನಾಗುತ್ತಾನಲ್ಲ!' ಎಂಬ ಕಳವಳ ಬ್ರಾಹ್ಮಣಿಗಾದರೆ, ತೋತಾಪುರಿಯ ಚಿಂತೆ ಮತ್ತೊಂದು ರೀತಿಯದು. ಶ್ರೀರಾಮಕೃಷ್ಣರು ಅದ್ವೈತ ಮಾರ್ಗದಲ್ಲಿ ಪರಮಸಿದ್ಧಿಯನ್ನೇ ಗಳಿಸಿಕೊಂಡರೂ, ತರುವಾಯ ಅವರ ಭಕ್ತಿ-ಭಾವಗಳೇನೂ ಮಾಯವಾಗಲಿಲ್ಲ. ತಮ್ಮ 'ತಾಯಿ' ಜಗನ್ಮಾತೆಯನ್ನೇನೂ ಅವರು ಮರೆಯಲಿಲ್ಲ. ಆದರೆ ಅವರ ಈ ಶಿಶುಸಹಜ ಭಾವವೆಲ್ಲ ತೋತಾಪುರಿಗೆ ಸಹ್ಯವಾಗದು. ಅವನು ಆಗಾಗ ಹೇಳುತ್ತಿದ್ದ, "ನಿನ್ನ ಈ ಭಕ್ತಿ-ಗಿಕ್ತಿಯೆಲ್ಲ ಹಾಸ್ಯಾಸ್ಪದವಾದದ್ದು" ಎಂದು. ಅವನೋ ಜ್ಞಾನಮಾರ್ಗವನ್ನವಲಂಬಿಸಿ ಕಠೋರ ಸಾಧನೆ ಮಾಡಿದ ಯತಿ; ಮತ್ತು ತನ್ಮೂಲಕ ಸಮಾಧಿಸ್ಥಿತಿಗೇರಿದವನು. ಅವನಿಗೆಲ್ಲಿ ಪಥ್ಯವಾಗಬೇಕು ಈ ಭಕ್ತಿಮಾರ್ಗ ? ಭಗವದ್ಭಕ್ತಿಯು ತೀವ್ರವಾದಂತೆಲ್ಲ ಅದು ಕ್ರಮೇಣ ಸಾಧಕನ ಸಂಸಾರಾಸಕ್ತಿಯನ್ನು ಇಂಗಿಸುತ್ತದೆ; ಸ್ವಾರ್ಥವನ್ನು ಕಳೆಯಲು ಕಲಿಸುತ್ತದೆ; ಕೊನೆಗೆ ಭಗವತ್ಸಾಕ್ಷಾತ್ಕಾರವನ್ನೇ ಕೊಡಿಸುತ್ತದೆ. ಪ್ರಾಮಾಣಿಕ ಸಾಧಕನ ಭಕ್ತಿಯು ಅವನನ್ನು ಕ್ರಮೇಣ ಬ್ರಹ್ಮಜ್ಞಾನವನ್ನು ಹೊಂದಲು ಸಮರ್ಥನನ್ನಾಗಿಸುತ್ತದೆ. ಆದ್ದರಿಂದ ಅಂತಹ ಪರಮಸಿದ್ಧಿಗೆ ಸಾಧನಗಳಾದ ಪೂಜೆ, ಕೀರ್ತನೆ, ಭಜನೆಗಳೆಲ್ಲ ಎಂದಿಗೂ ಕಡೆಗಣಿಸುವಂತಿಲ್ಲ. ಆದರೆ ಇದು ತೋತಾಪುರಿಗೆ ತಿಳಿದಿಲ್ಲ. ಸದಾ ಜ್ಞಾನಮಾರ್ಗದಲ್ಲೇ ಮನಸ್ಸನ್ನು ಹರಿಯಿಸಿದ ಅವನಿಗೆ, ವ್ಯಾಕುಲಪ್ರೇಮದಿಂದ ಕೂಡಿದ ಭಕ್ತಿಮಾರ್ಗವೂ ಕೂಡ ಸಾಧಕನನ್ನು ಅಷ್ಟೇ ವೇಗವಾಗಿ ಭಗವಂತನೆಡೆಗೆ ಕರೆದೊಯ್ಯಬಲ್ಲುದೆಂದು ಹೊಳೆದಿರಲಿಲ್ಲ. ಆದ್ದರಿಂದ ಅವನು ಭಕ್ತಿಯುತವಾದ ಕೀರ್ತನೆ ಭಜನೆಗಳನ್ನೆಲ್ಲ ಕೇವಲ ಅಸಂಬದ್ಧ ಪ್ರಲಾಪವೆಂದು ಮೂದಲಿಸುತ್ತಿದ್ದ. ಈ ವಿಷಯದಲ್ಲಿ ಅವನಿಗೂ ಶ್ರೀರಾಮಕೃಷ್ಣರಿಗೂ ಆಗಾಗ ವಾಗ್ವಾದ ನಡೆಯುವುದಿತ್ತು.

ಶ್ರೀರಾಮಕೃಷ್ಣರು ಮೊದಲಿನಿಂದಲೂ ಬೆಳಗ್ಗೆ ಸಂಜೆ ಎರಡೂ ಹೊತ್ತು ಕೈಚಪ್ಪಾಳೆ ತಟ್ಟಿಕೊಂಡು ಹರಿನಾಮ ಸಂಕೀರ್ತನೆ ಮಾಡುತ್ತಿದ್ದರು. 'ಹರಿ ಬೋಲ್, ಹರಿ ಬೋಲ್' ಎನ್ನುತ್ತಲೋ, 'ಹರಿಯೆನ್ನ ಪ್ರಾಣ ಗೋವಿಂದನೆನ್ನ ಜೀವನ' ಎನ್ನುತ್ತಲೋ, 'ಹರಿಗುರು, ಹರಿಗುರು' ಎನ್ನುತ್ತಲೋ, 'ಮನಸ್ಸೂ ಕೃಷ್ಣ ಪ್ರಾಣವೂ ಕೃಷ್ಣ, ಜ್ಞಾನವೂ ಕೃಷ್ಣ, ಧ್ಯಾನವೂ ಕೃಷ್ಣ, ಬೋಧೆಯೂ ಕೃಷ್ಣ, ಬುದ್ಧಿಯೂ ಕೃಷ್ಣ,' 'ಜಗತ್ತು ನೀನೇ ಆಗಿದ್ದೀಯೆ, ಜಗತ್ತು ನಿನ್ನಲ್ಲಿದೆ' 'ನಾನು ಯಂತ್ರ ನೀನದರ ಚಾಲಕ' ಎನ್ನುತ್ತಲೋ ಗಟ್ಟಿಯಾಗಿ ಉಚ್ಚರಿಸುತ್ತ ಕುಣಿದಾಡುತ್ತಿದ್ದರು. ವೇದಾಂತಸಾಧನೆ ಗೈದು ನಿರ್ವಿಕಲ್ಪ ಸಮಾಧಿಯನ್ನು ಹೊಂದಿದ ಮೇಲೂ ಅವರು ಹೀಗೆ ಭಜನೆ ಮಾಡುವುದನ್ನು ಮಾತ್ರ ಬಿಟ್ಟವರಲ್ಲ.

ಒಂದು ದಿನ ಅಪರಾಹ್ಣ ಪಂಚವಟಿಯ ಅಡಿಯಲ್ಲಿ ತೋತಾಪುರಿ ಅವರೊಂದಿಗೆ ಧರ್ಮವಿಷಯವಾಗಿ ಮಾತುಕತೆಯಾಡುತ್ತ ಕುಳಿತಿದ್ದ. ಹಾಗೆಯೇ ಸಂಜೆಯಾಯಿತು. ಆಗ ಶ್ರೀರಾಮಕೃಷ್ಣರು ಮಾತುಕತೆಯನ್ನು ಅಲ್ಲಿಗೇ ನಿಲ್ಲಿಸಿ ಕೈಚಪ್ಪಾಳೆ ತಟ್ಟುತ್ತ ಹರಿನಾಮಸಂಕೀರ್ತನೆಗೆ ತೊಡಗಿಯೇಬಿಟ್ಟರು. ಅದನ್ನು ಕಂಡು ತೋತಾಪುರಿಗೆ ಆಶ್ಚರ್ಯವೋ ಆಶ್ಚರ್ಯ! 'ಎಲಾ, ಇವನು ವೇದಾಂತಸಾಧನೆಗೆ

ಸಂಪೂರ್ಣ ಸಮರ್ಥನಾಗಿದ್ದು, ಕೇವಲ ಒಂದೇ ದಿನದಲ್ಲಿ ನಿರ್ವಿಕಲ್ಪ ಸಮಾಧಿಯನ್ನೂ ಪಡೆದವನು! ಇಂತಹ ಇವನು ಈ ಬಗೆಯ ಅನುಷ್ಠಾನಗಳನ್ನೆಲ್ಲ ಮಾಡುವುದೇತಕ್ಕೆ?' ಎಂದುಕೊಳ್ಳುತ್ತ ಶ್ರೀರಾಮಕೃಷ್ಣರನ್ನು ಗೇಲಿ ಮಾಡಿದ: "ಏನಯ್ಯ, ರೊಟ್ಟಿ ತಟ್ಟುತ್ತಿದ್ದೀಯಾ? (ಅರೇ, ಕ್ಯಾ ತುಮ್ ರೋಟೀ ಠೋಕತೇ ಹೊ?)"

ಶ್ರೀರಾಮಕೃಷ್ಣರು ನಗುನಗುತ್ತ ಹೇಳಿದರು:

"ಆಹಾ, ಒಳ್ಳೇ ಮನುಷ್ಯರು ನೀವು! ನಾನು ಚಪ್ಪಾಳೆ ತಟ್ಟಿಕೊಂಡು ಹರಿಭಜನೆ ಮಾಡುತ್ತಿದ್ದರೆ, ನೀವು 'ರೊಟ್ಟಿ ತಟ್ಟುತ್ತಿದ್ದೀಯಾ?' ಅಂತ ಕೇಳುವಿರಲ್ಲ!"

ಅವರು ಸರಳ ಬಾಲಕನಂತೆ ಉತ್ತರ ಕೊಟ್ಟ ಕ್ರಮವನ್ನು ನೋಡಿ ನ್ಯಾಂಗ್ಟಾ ಮನಸಾರೆ ನಕ್ಕ. ಆದರೆ ಆಮೇಲೆ ಅವನಿಗನ್ನಿಸಿತು: 'ಇವನು ಹೀಗೆ ಆನಂದದಿಂದ ಭಜನೆ ಮಾಡುವುದರ ಹಿನ್ನೆಲೆಯಲ್ಲಿ ನಿಜಕ್ಕೂ ಏನೋ ಅರ್ಥವಿರಬೇಕು. ಆದರೆ ನನಗೆ ಅದೆಲ್ಲ ರುಚಿಸದಿರುವುದರಿಂದ ಅದರ ಮಹತ್ವ ನನಗೆ ಅರಿವಾಗದೆಹೋಗಿರಬಹುದು. ಇರಲಿ; ನಾನು ನನಗೆ ತಿಳಿಯದ ವಿಷಯದ ಮೇಲೆ ಟೀಕೆ ಮಾಡುವುದು ಒಳ್ಳೆಯದಲ್ಲ.'

ಇನ್ನೊಂದು ದಿನ. ಸಂಜೆ ಸರಿದು ಕತ್ತಲಾಗುತ್ತಿತ್ತು. ತೋತಾಪುರಿ ಧುನಿಯನ್ನು ಪ್ರಜ್ವಲಗೊಳಿಸುತ್ತಿದ್ದ. ಶ್ರೀರಾಮಕೃಷ್ಣರು ಬಳಿಯಲ್ಲೇ ಕುಳಿತಿದ್ದರು. ಪರಬ್ರಹ್ಮದ ಕುರಿತಾದ ಮಾತುಕತೆ ನಡೆಯುತ್ತಿತ್ತು. ವಿಷಯ ಅತ್ಯಂತ ಗಹನವಾದದ್ದು ಹಾಗೂ ಉನ್ನತ ಮಟ್ಟದ್ದು. ಮಾತನಾಡುತ್ತ ಆಡುತ್ತ ಇಬ್ಬರ ಮನಸ್ಸೂ ಅತ್ಯುನ್ನತ ಸ್ತರಕ್ಕೇರಿತ್ತು. ಇಬ್ಬರೂ ಬ್ರಹ್ಮಾನಂದಮತ್ತರಾಗಿರುವಂತೆ ತೋರಿತು. ಅವರ ಮುಂದೆ ಧುನಿಯ ಅಗ್ನಿ ಧಗಧಗಿಸುವುದನ್ನು ಕಂಡರೆ, ಅದು ಆ ಋಷಿಗಳೀರ್ವರ ಆತ್ಮದಲ್ಲಿ ತಾನೂ ತಾದಾತ್ಮ್ಯಹೊಂದಿ ಆನಂದದಿಂದ ತನ್ನ ನೂರಾರು ನಾಲಿಗೆಗಳನ್ನು ಚಾಚಿ ನಗುತ್ತಿರುವಂತೆ ಭಾಸವಾಗುತ್ತಿತ್ತು. ಆ ವೇಳೆಗೆ ಅಲ್ಲಿಗೊಬ್ಬ ತೋಟದಾಳು ಬಂದ. ಅವನಿಗೆ ತನ್ನ ಗುಡುಗುಡಿಯನ್ನು ಹೊತ್ತಿಸಿಕೊಳ್ಳಲು ಬೆಂಕಿ ಬೇಕಾಗಿತ್ತು. ಅವನು ನೇರವಾಗಿ ಧುನಿಯ ಬಳಿಗೆ ಬಂದು, ಉರಿಯುತ್ತಿದ್ದ ಒಂದು ಕೊಳ್ಳಿಯನ್ನು ಕೈಗೆತ್ತಿಕೊಂಡ. ಶ್ರೀರಾಮಕೃಷ್ಣರೊಡನೆ ಮಾತನಾಡುತ್ತ ಬ್ರಹ್ಮಾನಂದದ ಮತ್ತಿನಲ್ಲಿದ್ದ ತೋತಾಪುರಿ ಆಳು ಬಂದದ್ದನ್ನು ಗಮನಿಸಿಯೇ ಇರಲಿಲ್ಲ. ಆದರೆ ಆಳು ಸಲೀಸಾಗಿ ಧುನಿಯ ಕೊಳ್ಳಿಯನ್ನು ತೆಗೆದುಕೊಂಡದ್ದು ಆತನ ಕಣ್ಣಿಗೆ ಬಿತ್ತು. ಒಡನೆಯೇ ಕೋಪವುಕ್ಕಿತು! ಕಾರಣ, ನಾಗಾ ಸಂಪ್ರದಾಯದವನಾದ ಅವನಿಗೆ ಧುನಿಯ ಅಗ್ನಿಯೆಂದರೆ ಪರಮ ಪವಿತ್ರವಾದದ್ದು. ಅಂತಹ ಧುನಿಯಿಂದ ಈ ಮೂರ್ಖ ತನ್ನ ಗುಡುಗುಡಿಗೆ ಬೆಂಕಿ ತೆಗೆದುಕೊಳ್ಳುವುದೆ! ಆಳನ್ನು ಚೆನ್ನಾಗಿ ಬೈಯತೊಡಗಿದ; ಚಿಮಟದಿಂದ ಹೊಡೆದೇಬಿಡುವನೋ ಎಂಬಂತೆ ಬೆದರಿಸಿದ.

ಶ್ರೀರಾಮಕೃಷ್ಣರು ಆಗ ಆನಂದೋನ್ಮತ್ತರಾಗಿ ಅರ್ಧಬಾಹ್ಯಾವಸ್ಥೆಯಲ್ಲಿದ್ದರು. ಆದರೂ, ತಮ್ಮ ಗುರುವಿನ ಈ ನಡೆವಳಿಕೆಯನ್ನು ಕಂಡಾಗ ನಗು ತಡೆಯಲಾಗಲಿಲ್ಲ. "ಅಯ್ಯೋ ಅವಿವೇಕವೆ! ಅಯ್ಯೋ ಮರೆವೆಯೆ!" ಎಂದು ಮತ್ತೆಮತ್ತೆ ಹೇಳುತ್ತ, ಗಹಗಹಿಸಿ ನಗುತ್ತ ನೆಲದ ಮೇಲೆ ಉರುಳಾಡತೊಡಗಿದರು. ಅವರು

ಹೀಗೆ ನಗುವುದನ್ನು ಕಂಡು ತೋತಾಪುರಿಗೆ ಆಶ್ಚರ್ಯ! ಕೇಳಿದ:

"ಅದೇಕಯ್ಯಾ ಅಷ್ಟು ನಗುತ್ತಿದ್ದೀಯೆ? ಅವನು ಮಾಡಿದ್ದು ತಪ್ಪಲ್ಲವೆ?"

ನಗುತ್ತಲೇ ಶ್ರೀರಾಮಕೃಷ್ಣರೆಂದರು:

"ಹೌದು ಹೌದು, ಅದೇನೋ ಸರಿಯೆ. ಆದರೆ ಅದರ ಜೊತೆಯಲ್ಲೇ ನಿಮ್ಮ ಬ್ರಹ್ಮಜ್ಞಾನದ ಆಳವನ್ನೂ ಕಂಡೆ! ನೀವು ಈಗತಾನೆ ಹೇಳುತ್ತಿರಲಿಲ್ಲವೆ, 'ಬ್ರಹ್ಮ ವಸ್ತುವಿನ ಹೊರತು ಬೇರೇನೂ ಇಲ್ಲ; ಪ್ರತಿಯೊಬ್ಬ ಜೀವಿಯೂ ಅದೇ ಪರಬ್ರಹ್ಮದ ಬೇರೆಬೇರೆ ಅಭಿವ್ಯಕ್ತಿ ಅಷ್ಟೆ' ಎಂದು? ಆದರೆ ಮರುಕ್ಷಣವೇ ಎಲ್ಲ ತತ್ತ್ವವನ್ನೂ ಮರೆತು ಆ ಮನುಷ್ಯನನ್ನು ಹೊಡೆಯಲು ಹೊರಟಿರಲ್ಲ? ಆದ್ದರಿಂದ ಈ ಮಾಯೆಯ ಪ್ರಭಾವ ಅದೆಷ್ಟು ಅಗಾಧ ಎಂದು ಭಾವಿಸಿ ನಗುತ್ತಿದ್ದೇನೆ."

ಈ ಮಾತನ್ನು ಕೇಳಿದೊಡನೆ ತೋತಾಪುರಿ ಗಂಭೀರವಾಗಿ ಸ್ವಲ್ಪ ಹೊತ್ತು ಮೌನತಾಳಿ ಕುಳಿತುಬಿಟ್ಟ. ಆಲೋಚಿಸಿ ನೋಡಿದಾಗ ಅವನಿಗೆ ತನ್ನಿಂದಾದ ಅವಿವೇಕ ಅರಿವಿಗೆ ಬಂತು. ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತ ಹೇಳಿದ:

"ನೀನು ಹೇಳಿದ್ದು ನಿಜ. ಈ ಹಾಳುಕೋಪದಿಂದಾಗಿ ಎಲ್ಲವನ್ನೂ ಮರೆತೇ ಬಿಟ್ಟಿದ್ದೆ. ಈ ಕೋಪ ಬಹಳ ಕೆಟ್ಟದ್ದು. ನಿನ್ನ ಮುಂದೆ ಹೇಳುತ್ತೇನೆ ಕೇಳು, ಇನ್ನು ಮುಂದೆ ನಾನು ಯಾವ ಕಾರಣಕ್ಕಾಗಿಯೂ ಕೋಪ ಮಾಡಿಕೊಳ್ಳುವುದಿಲ್ಲ. ಈ ಕ್ಷಣದಿಂದಲೇ ಕೋಪವನ್ನು ಬಿಟ್ಟೆ!"

ನಿಜಕ್ಕೂ, ಅಂದಿನಿಂದ ಅವನು ಕೋಪಗೊಂಡದ್ದನ್ನು ಕಂಡವರಿಲ್ಲ.

ಶ್ರೀರಾಮಕೃಷ್ಣರು ಮುಂದೆ ತಮ್ಮ ಶಿಷ್ಯನೊಬ್ಬನೊಡನೆ ಈ ಮಾಯೆಯ ಆಟದ ಕುರಿತು ತುಂಬ ಸ್ವಾರಸ್ಯವಾಗಿ ಹೀಗೆ ಹೇಳುತ್ತಾರೆ:

" 'ಪಂಚಭೂತಗಳ ಪಾಶಕ್ಕೆ ಸಿಕ್ಕಿ ಬ್ರಹ್ಮವೂ ನರಳುತ್ತದೆ' ಎಂದು ಒಂದು ಮಾತಿದೆ. ನೀನು ಸುಮ್ಮನೆ ಕಣ್ಣುಮುಚ್ಚಿಕೊಂಡು, 'ಮುಳ್ಳೂ ಇಲ್ಲ, ಚುಚ್ಚುವುದೂ ಇಲ್ಲ' ಎಂದು ಹೇಳುತ್ತಿದ್ದರೂ, ಕೈಗೆ ನಿಜವಾಗಿಯೂ ಮುಳ್ಳು ಚುಚ್ಚಿದಾಗ ಮಾತ್ರ ಕುಣಿದಾಡಬೇಕಾಗುತ್ತದೆ. ಹಾಗೆಯೇ ನೀನು, 'ನನಗೆ ಹುಟ್ಟೂ ಇಲ್ಲ, ಸಾವೂ ಇಲ್ಲ, ದುಃಖವೂ ಇಲ್ಲ, ಹಸಿವೂ ಇಲ್ಲ, ಬಾಯಾರಿಕೆಯೂ ಇಲ್ಲ; ನಿರ್ವಿಕಾರನಾದ ಸಚ್ಚಿದಾನಂದಸ್ವರೂಪನೇ ನಾನು' ಎಂದು ಹೇಳುತ್ತಿದ್ದರೂ ದೇಹಕ್ಕೆ ರೋಗ ತಗಲಿಕೊಂಡಾಗ ಮಾತ್ರ ನೀನಾಡುವ ಮಾತೇ ಬೇರೆಯಾಗಿ ಬಿಡುತ್ತದೆ! ವಿಷಯ ವಸ್ತುಗಳು ನಿನ್ನ ಕಣ್ಮುಂದೆ ಸುಳಿದು ಮನವನ್ನು ಕೆರಳಿಸಿದಾಗ ಅವು ನಿನ್ನಿಂದ ಒಂದಲ್ಲ ಒಂದು ಕೆಟ್ಟ ಕೆಲಸ ಮಾಡಿಸಿಯೇ ಬಿಟ್ಟಿರುತ್ತವೆ. ಆದ್ದರಿಂದ ಈ ಮಾಯೆಯಿಂದ ಪಾರಾಗುವ ಕೆಲಸ ಸುಲಭವೇನಲ್ಲ. ಭಗವಂತನೇ ಕೃಪೆಮಾಡಿ ಮಾಯೆಯ ಪೊರೆಯನ್ನು ಹರಿಯಬೇಕಾಗುತ್ತದೆ."

ತೋತಾಪುರಿಯ ಒಂದು ಭಾಗ್ಯವಿಶೇಷವೇನೆಂದರೆ ಅವನಿಗೆ ಅವನ ಜನ್ಮ ದಾರಭ್ಯ ಜಗನ್ಮಾತೆಯ ಕೃಪೆಯ ಶ್ರೀರಕ್ಷೆ ಇತ್ತು. ಸಾತ್ತ್ವಿಕವಾದ ಸಂಸ್ಕಾರಗಳು, ಸರಳ ಮನಸ್ಸು, ಸಾಧುಸಂತರ ಸಹವಾಸ, ಇವುಗಳೊಂದಿಗೆ ದೃಢವಾದ ಬಲಿಷ್ಠ ಶರೀರ — ಇವುಗಳೆಲ್ಲ ಅವನು ಹುಟ್ಟಿನಿಂದಲೇ ಪಡೆದುಕೊಂಡುಬಂದ ವರಗಳು. ಮಹಾ

ಮಾಯೆ ಅವನಿಗಿನ್ನೂ ತನ್ನ ನಿಜಸ್ವರೂಪದ ಪರಿಚಯ ಮಾಡಿಕೊಟ್ಟಿರಲಿಲ್ಲ. ಎಂದರೆ, ಅವನಿಗೆ ತನ್ನ ಕರಾಳ ರೂಪವನ್ನೂ ಕಾಣಿಸಿರಲಿಲ್ಲ, ಅವನನ್ನು ತನ್ನ ಭುವನಮೋಹಿನೀ ಪಾಶಕ್ಕೂ ಸಿಲುಕಿಸಿರಲಿಲ್ಲ. ಆದ್ದರಿಂದ ಅವನು ಆಧ್ಯಾತ್ಮಿಕ ಸಾಧನೆಯಲ್ಲಿ ನಿರಾತಂಕವಾಗಿ ಮುಂದುವರಿದು ನಿರ್ವಿಕಲ್ಪ ಸಮಾಧಿಯ ಶಿಖರ ವನ್ನೇರಲು ಸಾಧ್ಯವಾಯಿತು; ಅಪೂರ್ವ ಬ್ರಹ್ಮಾನುಭವ ದಕ್ಕಿತು. ಆದರೆ ಇಷ್ಟು ಸುಲಭವಾಗಿ ಆಧ್ಯಾತ್ಮಿಕ ಸಿದ್ಧಿಯಾಗಲು ಜಗನ್ಮಾತೆ ತನ್ನ ಕೈಯಾರೆ ಎಲ್ಲ ಪ್ರತಿಬಂಧಕ ಗಳನ್ನೂ ನಿವಾರಿಸಿದ್ದೇ ಕಾರಣ ಎಂಬ ಸತ್ಯವನ್ನು ಅವನು ಹೇಗೆ ತಾನೆ ಅರಿಯ ಬಲ್ಲ? ಆದರೆ ಆ ಸತ್ಯವನ್ನು ಅವನು ತಿಳಿಯಲೇಬೇಕು. ಅದಕ್ಕಾಗಿ ಈಗೊಂದು ಅವಕಾಶವನ್ನು ಕಲ್ಪಿಸಿದ್ದಾಳೆ ಜಗನ್ಮಾತೆ.

ತೋತಾಪುರಿಯ ಶರೀರ ಪಂಜಾಬು ಪ್ರಾಂತದ್ದು. ಆದ್ದರಿಂದ ಕಾಯಿಲೆ ಕಸಾಲೆ, ಅಜೀರ್ಣ, ಇವೆಲ್ಲ ಏನು ಎಂದು ಕೇಳುತ್ತಾನೆ ಅವನು. ತಿಂದದ್ದೆಲ್ಲ ಸಂಪೂರ್ಣ ಜೀರ್ಣ; ನೆಲಕ್ಕೆ ತಲೆ ಕೊಡುತ್ತಲೇ ಗಾಢ ನಿದ್ರೆ! ಈ ಭಾಗ್ಯವನ್ನು ಹೊಂದಿದ ಅವನಿಗೆ ರೋಗರುಜಿನಗಳ ಪರಿಚಯ ಹೇಗೆತಾನೆ ಇರಬೇಕು? ಆದರೆ ಕಲ್ಕತ್ತದ ತೇವಭರಿತ ಹವೆ, ರೋಗಾಣುಗಳಿಂದ ಕೂಡಿದ ನೀರು ಎಂಥಾ ದೃಢ ಕಾಯನನ್ನೂ ಸದೆಬಡಿಯಬಲ್ಲವು. ಶ್ರೀರಾಮಕೃಷ್ಣರ ಪ್ರೇಮದಿಂದ ಆಕರ್ಷಿತನಾಗಿ ಆ ಊರಲ್ಲಿ ತಿಂಗಳುಗಟ್ಟಲೆ ಉಳಿದುಕೊಂಡಾಗ ತೋತಾಪುರಿಯ ಶರೀರವೂ ಮೆಲ್ಲಗೆ ಆ ರೋಗಾಣುಗಳ ಆಕ್ರಮಣಕ್ಕೆ ಒಳಗಾಯಿತು. ಕೊನೆಗೊಂದು ದಿನ ಅವನಿಗೆ ಭಯಂಕರ ರಕ್ತಾತಿಸಾರ ತಗುಲಿಕೊಂಡೇ ಬಿಟ್ಟಿತು. ಹಗಲೂ ರಾತ್ರಿ ಹೊಟ್ಟೆನೋವು, ಕರುಳನ್ನೇ ಹಿಂಡುವಂತಹ ನೋವು! ಆ ನೋವು ಅವನನ್ನೇನೂ ಬಾಧಿಸಬೇಕಾಗಿರಲಿಲ್ಲ; ಏಕೆಂದರೆ ಅವನದು ಶರೀರಪ್ರಜ್ಞೆಯನ್ನು ಮೀರಿದ ಸಮಾಧಿಸ್ಥ ಮನಸ್ಸು. ಆದರೇನಂತೆ? 'ಪಂಚಭೂತಗಳ ಪಾಶಕ್ಕೆ ಸಿಕ್ಕಿ ಬ್ರಹ್ಮವೂ ನರಳುತ್ತದೆ!' ತೋತಾಪುರಿಯ ಸಮಾಧಿಸ್ಥ ಮನಸ್ಸೂ ಬ್ರಹ್ಮಭಾವದಿಂದ ಇಳಿದು ಶರೀರದ ಕಡೆಗೇ ಹರಿಯತೊಡಗಿತು. ಈಗ ಜಗನ್ಮಾತೆಯ ಕೃಪೆಯಲ್ಲದೆ ಬೇರೆ ದಾರಿಯಿಲ್ಲ.

ತೋತಾಪುರಿಯ ಪರಮ ಪರಿಶುದ್ಧ ಹಾಗೂ ಬ್ರಹ್ಮನಿಷ್ಠವಾದ ಮನಸ್ಸು ಕೆಲದಿನಗಳ ಹಿಂದೆಯೇ ಅವನಿಗೊಂದು ಸೂಚನೆ ಕೊಟ್ಟಿತ್ತು, ಇಲ್ಲಿ ಬಹಳ ದಿನ ಇರುವುದು ಒಳ್ಳೆಯದಲ್ಲ, ದೇಹಾರೋಗ್ಯ ಕೆಡುವ ಸಂಭವ ಇದೆ ಎಂದು. ಆದರೆ ಕೇವಲ ಕಾಯಿಲೆ ಬಿದ್ದೇನೆಂಬ ಒಂದೇ ಕಾರಣಕ್ಕಾಗಿ ಶ್ರೀರಾಮಕೃಷ್ಣರ ದಿವ್ಯಾದ್ಭುತ ಸಹವಾಸವನ್ನು ಬಿಟ್ಟು ಹೊರಟುಹೋಗುವುದುಂಟೇ? ಎಂತಿದ್ದರೂ ಈ ಶರೀರ ವೊಂದು ಮಾಂಸಮೂಳೆಗಳ ಪಂಜರ, ಸಾಲದ್ದಕ್ಕೆ ಇದರೊಳಗೆ ತುಂಬಿಕೊಂಡಿರುವ ಕ್ರಿಮಿಗಳಿಗೆ ಲೆಕ್ಕಪಕ್ಕವಿಲ್ಲ. ಅಲ್ಲದೆ ಇದು ನಾಲ್ಕುದಿನವಿದ್ದು ಬಿದ್ದುಹೋಗುವ ಶರೀರವೆಂದು ವೇದಾಂತಶಾಸ್ತ್ರ ಸದಾ ನೆನಪಿಸಿಕೊಡುತ್ತದೆ. ಇಂತಹ ಶರೀರದ ಮೇಲಿನ ಮಮತೆಗೆ ಕಟ್ಟುಬಿದ್ದು, ಸಹವಾಸಮಾತ್ರದಿಂದಲೇ ದಿವ್ಯಾನಂದವನ್ನು ನೀಡಬಲ್ಲ ಶ್ರೀರಾಮಕೃಷ್ಣರ ಸತ್ಸಂಗದಿಂದ ದೂರವಾಗುವುದೆ? ಈ ಶರೀರಕ್ಕೆ

ಕಾಯಿಲೆ ಬರಬೇಕೆಂದಿದ್ದರೆ ಅದು ಎಲ್ಲಿಗೆ ಹೋದರೂ ಬರಬಹುದು. ಜ್ಞಾನಿಯಾದ ತೋತಾಪುರಿಯಂಥವನು ಈ ಕಾಯಿಲೆಕಸಾಲೆಗೆಲ್ಲ ಹೆದರುವುದುಂಟೆ ಈ ಶರೀರಕ್ಕೆ ಹುಟ್ಟುವುದು, ಬೆಳೆಯುವುದು, ಕೊಳೆಯುವುದು, ಸಾಯುವುದು ಎಂಬ 'ಕಾಯಿಲೆ' ಕಟ್ಟಿಟ್ಟದ್ದು. ಅಂದಮೇಲೆ ಅಂಜಿಕೆಗೆಲ್ಲಿದೆ ಅವಕಾಶ? ತೋತಾಪುರಿ ಶರೀರದ ಬಂಧನದಿಂದ ಆತ್ಮವನ್ನು ಬೇರ್ಪಡಿಸಿಕೊಂಡವನು, ಆತ್ಮಜ್ಞಾನಿಯೆನಿಸಿದವನು. ದೇಹದ ಸಂಬಂಧ ಅವನಿಗಿನ್ನೆಲ್ಲಿ? ಆದ್ದರಿಂದ ಅವನು ಕೇವಲ ತನ್ನ ದೇಹವನ್ನು ಸುಖವಾಗಿಡುವುದಕ್ಕಾಗಿ ಶ್ರೀರಾಮಕೃಷ್ಣರ ಅಲೌಕಿಕ ಸಹವಾಸದಿಂದ ದೂರವಾಗಲು ಮನಸ್ಸು ಮಾಡಲಿಲ್ಲ. ಆದರೆ ಈಗ ಈ ಕಠೋರ ಕಾಯಿಲೆ ಅವನನ್ನು ಆಕ್ರಮಿಸಿಬಿಟ್ಟಿದೆ!

ಕಾಯಿಲೆ ಕ್ರಮೇಣ ಹೆಚ್ಚುತ್ತ ಬಂತು; ಈಗ ತೋತಾಪುರಿಗೆ ಆ ಸ್ಥಳವನ್ನು ಬಿಟ್ಟು ಹೊರಡುವ ಯೋಚನೆಯೂ ಬಂತು. ಈ ವಿಷಯವನ್ನು ಶ್ರೀರಾಮಕೃಷ್ಣರಿಗೆ ತಿಳಿಸುವುದಕ್ಕಾಗಿ ಅವರ ಬಳಿಗೆ ಹಲವಾರು ಬಾರಿ ಹೋದ. ಆದರೆ ಪ್ರತಿಬಾರಿಯೂ ಅವರೊಡನೆ ಆಧ್ಯಾತ್ಮಿಕ ವಿಷಯವಾಗಿ ಸಂಭಾಷಣೆ ನಡೆಸುತ್ತ ಆನಂದೋನ್ಮತ್ತನಾಗುತ್ತಿದ್ದ, ಬಂದ ಉದ್ದೇಶವನ್ನು ತಿಳಿಸಲು ಮರೆತೇಬಿಡುತ್ತಿದ್ದ. ಒಂದು ದಿನ, 'ಇಂದು ಖಂಡಿತ ತಿಳಿಸಿಯೇ ಬಿಡುತ್ತೇನೆ' ಎಂದುಕೊಂಡು ಶ್ರೀರಾಮಕೃಷ್ಣರ ಬಳಿಗೆ ಬಂದ. ಮಾತುಕತೆ ಮುಗಿದಮೇಲೆ ತಾನು ಹೇಳಬೇಕೆಂದಿದ್ದುದು ನೆನಪೂ ಆಯಿತು. ಆದರೆ ಹೇಳಲು ಬಾಯ್ತೆರೆದಾಗ ಮಾತ್ರ ಅವನೊಳಗಿಂದ ಯಾರೋ ಅವನ ಬಾಯಿಯನ್ನು ಒತ್ತಿಹಿಡಿದಂತಾಯಿತು. ಆದ್ದರಿಂದ ತೋತಾಪುರಿ ಮನದಲ್ಲೇ ಅಂದುಕೊಂಡ, 'ಇಂದು ಬೇಡ; ನಾಳೆ ಹೇಳಿದರಾಯಿತು.' ಎಂದು ಮತ್ತು ಶ್ರೀರಾಮಕೃಷ್ಣರೊಂದಿಗೆ ಆಧ್ಯಾತ್ಮಿಕ ಸಲ್ಲಾಪಾದಿಗಳನ್ನು ಮುಗಿಸಿಕೊಂಡು ಪಂಚವಟಿಗೆ ಹಿಂದಿರುಗಿದ. ಹೀಗೆಯೇ ಕಳೆಯಿತು ಹಲವು ದಿನ. ಕ್ರಮೇಣ, ಆತನ ಶರೀರ ದುರ್ಬಲವಾಗುತ್ತ ಬಂತು, ರೋಗ ಬಲಿಯುತ್ತಲೇ ಹೋಯಿತು. ಅವನ ಶರೀರ ದಿನೇದಿನೇ ಕೃಶವಾಗುತ್ತಿರುವುದನ್ನು ಕಂಡ ಶ್ರೀರಾಮಕೃಷ್ಣರು ಪ್ರಾರಂಭದಿಂದಲೂ ಅವನಿಗೆ ಔಷಧೋಪಚಾರಗಳ ವ್ಯವಸ್ಥೆಮಾಡಿದ್ದರು. ಆದರೆ ಅದರಿಂದೇನೂ ಹೆಚ್ಚು ಉಪಯೋಗವಾಗಲಿಲ್ಲ; ಅಷ್ಟೇ ಅಲ್ಲ, ಕಾಯಿಲೆ ವೃದ್ಧಿಯಾಗುತ್ತಲೇ ಹೋಯಿತು. ಆಗ ಅವರು ಮಥುರ ಬಾಬುವಿಗೆ ತಿಳಿಸಿ ವಿಶೇಷ ಚಿಕಿತ್ಸೆ ಮಾಡಿಸಿದರಲ್ಲದೆ ತಾವೇ ಅವನ ಸೇವೆಗೆ ನಿಂತರು. ಇಲ್ಲಿಯವರೆಗೂ, ಅಷ್ಟೊಂದು ಕಾಯಿಲೆಯಿದ್ದರೂ ಅದು ಅವನ ದೇಹಕ್ಕೆ ಮಾತ್ರ ಸೀಮಿತವಾಗಿತ್ತು, ಮನಸ್ಸು ಅವನ ಹತೋಟಿಯಲ್ಲೇ ಇತ್ತು. ಆದ್ದರಿಂದ ನೋವು ಅಧಿಕವಾದಾಗ ಮನಸ್ಸನ್ನು ಸಹಸ್ರಾರಕ್ಕೇರಿಸಿ ಶರೀರಪ್ರಜ್ಞೆಯನ್ನೇ ತೊರೆದು ಸಮಾಧಿಮಗ್ನನಾಗಿ ಕುಳಿತುಬಿಡುತ್ತಿದ್ದ. ಆಗ ಇತ್ತ ಶರೀರವು ಹೊಟ್ಟೆನೋವನ್ನು ಅನುಭವಿಸುತ್ತಿದ್ದರೆ ಅತ್ತ ಮನಸ್ಸು ಬ್ರಹ್ಮಾನಂದದಲ್ಲಿ ಲೀನವಾಗಿರುತ್ತಿತ್ತು!

ಒಂದು ರಾತ್ರಿ ಅವನ ಹೊಟ್ಟೆನೋವು ವಿಪರೀತ ಹೆಚ್ಚಾಗಿಬಿಟ್ಟಿತ್ತು. ಶಾಂತವಾಗಿ ಒರಗಿಕೊಳ್ಳೋಣವೆಂದರೆ ಅದೂ ಸಾಧ್ಯವಾಗಲಿಲ್ಲ, ಎದ್ದು ಕುಳಿತುಕೊಂಡ.

ಆದರೆ ಕುಳಿತುಕೊಂಡರಾದರೂ ಸುಖವಿದೆಯೆ? ಅದೂ ಇಲ್ಲ. ಈಗ ಅವನು ನಿಶ್ಚೈಸಿದ, 'ಈ ಶರೀರಕ್ಕೆ ಏನುಬೇಕಾದರೂ ಆಗಿಕೊಳ್ಳಲಿ, ಮನಸ್ಸನ್ನು ಸಮಾಧಿಯಲ್ಲಿ ಮುಳುಗಿಸಿ ಶಾಂತವಾಗಿ ಇದ್ದುಬಿಡುತ್ತೇನೆ' ಎಂದು. ಆದರೆ ಶರೀರದಲ್ಲಿ ಹರಡಿಕೊಂಡ ಮನಸ್ಸನ್ನು ಮೆಲ್ಲನೆ ಹಿಂದಕ್ಕೆಳೆದು ಸಹಸ್ರಾರದತ್ತ ಏರಿಸಲೆತ್ನಿಸಿದನೊ ಇಲ್ಲವೊ, ಥಟಕ್ಕನೆ ಮನಸ್ಸು ಕೆಳಗಿಳಿದು ಹೊಟ್ಟೆನೋವಿನತ್ತ ಧಾವಿಸಿತು! ಈಗ ಅವನು ಬಲವಾದ ಇಚ್ಛಾಶಕ್ತಿಯನ್ನುಪಯೋಗಿಸಿ ಮತ್ತೊಮ್ಮೆ ಪ್ರಯತ್ನಿಸಿದ; ಆದರೆ ಆಗಲೂ ಹಾಗೆಯೇ ಆಯಿತು. ಹೀಗೆ ಎಷ್ಟು ಬಾರಿ ಪ್ರಯತ್ನಿಸಿದರೂ ಮತ್ತೆ ಮತ್ತೆ ಅದೇ ಗತಿ. ಒಟ್ಟಿನಲ್ಲಿ, ಅವನ ಮನಸ್ಸಿಗೆ ನಿರ್ವಿಕಲ್ಪ ಸಮಾಧಿಯ ಆನಂದದ ಸೆಳೆತಕ್ಕಿಂತ ಕ್ಷುದ್ರವಾದ ಹೊಟ್ಟೆನೋವಿನ ಎಳೆತವೇ ಅಧಿಕವಾಗಿಬಿಟ್ಟಿತು! ಈಗ ತೋತಾಪುರಿಗೆ ತನ್ನ ಶರೀರದ ಮೇಲೆ ವೈರಾಗ್ಯಹುಟ್ಟಿತು. 'ಕ್ಷುಲ್ಲಕವಾದ ಈ ಮಾಂಸಮೂಳೆಗಳ ಹಂದರ ಇಷ್ಟೊಂದು ಹಗರಣ ಮಾಡುತ್ತಿದೆಯಲ್ಲ! ದೀರ್ಘ ಕಾಲ ತರಬೇತಿ ಕೊಟ್ಟು ಸ್ವಾಧೀನಪಡಿಸಿಕೊಂಡಿರುವ ಈ ನನ್ನ ಮನಸ್ಸು ಇಂದು ನನ್ನ ಮಾತನ್ನೇ ಕೇಳುತ್ತಿಲ್ಲವಲ್ಲ! ಹಾಳಾಗಿಹೋಗಲಿ ಈ ಶರೀರ! ನಾನು ಶರೀರವಲ್ಲ, ಅಮರ ಆತ್ಮ ಅಮೃತಾತ್ಮ ಎಂಬುದನ್ನು ಚೆನ್ನಾಗಿ ಅರಿತವನು ನಾನು. ಇನ್ನು ನಾನು ಈ ಶರೀರವನ್ನು ಕಟ್ಟಿಕೊಂಡು ಯಾಕೆ ನರಳಬೇಕು? ಈ ಶರೀರ ಇದ್ದರೆಷ್ಟು, ಹೋದರೆಷ್ಟು? ಇಂದೇ ಈ ಗಾಢ ರಾತ್ರಿಯಲ್ಲಿ ಗಂಗೆಗಿಳಿದು ಶರೀರವನ್ನು ಮುಳುಗಿಸಿಬಿಡುತ್ತೇನೆ, ಯಾತನೆಯನ್ನು ಮುಗಿಸಿಬಿಡುತ್ತೇನೆ.'

ಹೀಗೆಂದು ಭಾವಿಸಿದ ತೋತಾಪುರಿ ಪ್ರಯತ್ನಪೂರ್ವಕವಾಗಿ ಮನಸ್ಸನ್ನು ಬ್ರಹ್ಮಚಿಂತನದಲ್ಲಿ ನೆಲೆಗೊಳಿಸಿ, ಎದ್ದು ಗಂಗೆಯತ್ತ ನಡೆದ. ಮೆಲ್ಲಗೆ ನೀರಿಗಿಳಿದ; ಹಾಗೇ ಮುನ್ನಡೆದ. ಮತ್ತೂ ಆಳವಾದ ನೀರಿನತ್ತ ಸಾಗಿದ. ಆದರೆ ಆಶ್ಚರ್ಯ! ಎಷ್ಟು ದೂರ ಹೋದರೂ ಮೊಣಕಾಲು ಮುಳುಗುವಷ್ಟಾದರೂ ನೀರಿರಬೇಕಲ್ಲ! ಇಂಥಾ ಆಳವಾದ ಬಾಗೀರಥಿ ಇಂದು ಬತ್ತಿಯೇ ಹೋಗಿರುವಳೇ ಹೇಗೆ? ತೋತಾಪುರಿ ಮುಂದೆ ಮುಂದೆ ನಡೆದ; ನಡೆದು ನಡೆದು ಆಚೆ ದಡಕ್ಕೆ ಬಂದುಬಿಟ್ಟ! ಆದರೆ ಎಲ್ಲೂ ಅವನಿಗೆ ಮುಳುಗಿ ಸಾಯಲು ಸಾಕಾಗುವಷ್ಟು ನೀರು ಸಿಗಲಿಲ್ಲ! ನದಿಯ ಆಚೆ ದಡದ ಮೇಲೆ ಮನೆಗಳು ಮರಗಳು ಆ ಕರೀ ರಾತ್ರಿಯಲ್ಲಿ ನೆರಳಿನೋಪಾದಿಯಲ್ಲಿ ಕಂಡವು; ಇನ್ನು ಮುಂದೆ ಹೋಗಲು ನದಿಯೇ ಇಲ್ಲ! ತೋತಾಪುರಿ ಅಚ್ಚರಿಗೊಂಡು ಉದ್ಗರಿಸಿದ: "ಇದೆಂಥ ದೈವೀ ಮಾಯೆ! ಇಂದು ಮುಳುಗಿ ಸಾಯಲು ಕೂಡ ನದಿಯಲ್ಲಿ ನೀರಿಲ್ಲವಲ್ಲ! ಇದೆಂಥಾ ಲೀಲೆಯಪ್ಪ ಪರಬ್ರಹ್ಮನದು!"

ಆಗ ಇದ್ದಕ್ಕಿದ್ದಂತೆ ಅವನ ಒಳಗಿಂದ ಪರದೆಯೊಂದನ್ನು ಸರಿಸಿದಂತಾಯಿತು. ಆಗ ಮಿಂಚಿತೊಂದು ಉಜ್ವಲ ಪ್ರಕಾಶ! ಅದರಿಂದ ಬೆರಗುಗೊಂಡ ತೋತಾಪುರಿ ನೋಡುತ್ತಾನೆ—ಮಾತೆ! ಮಾತೆ! ಎಲ್ಲೆಲ್ಲೂ ಮಾತೆ! ಜಗಜ್ಜನನಿ ಮಾತೆ! ಅಚಿಂತ್ಯ ಶಕ್ತಿರೂಪಿಣಿ ಮಾತೆ! ಗಂಗಾಜಲವೂ ಮಾತೆಯೆ! ಭೂಮಿಯೂ ಮಾತೆಯೆ! ದೇಹವೂ ಮಾತೆಯೆ! ಮನಸ್ಸೂ ಮಾತೆಯೆ! ರೋಗವೂ

ಮಾತೆಯೆ! ನಿರೋಗವೂ ಮಾತೆಯೆ! ಜ್ಞಾನವೂ ಮಾತೆಯೆ! ವಿಜ್ಞಾನವೂ ಮಾತೆಯೆ! ಜೀವನವೂ ಮಾತೆಯೆ! ಮರಣವೂ ಮಾತೆಯೆ! ತಾನು ಕಾಣುವುದು, ಕೇಳುವುದು, ಕಲ್ಪಿಸುವುದು ಎಲ್ಲವೂ ಮಾತೆಯೆ! ಅವಳು ಇರುವುದನ್ನು ಇಲ್ಲದಂತೆ ಮಾಡುತ್ತಾಳೆ, ಇಲ್ಲದಿರುವುದನ್ನು ಇರುವಂತೆ ಮಾಡುತ್ತಾಳೆ. ಈ ಶರೀರದಲ್ಲಿರುವವರೆಗೆ, ಅವಳ ಇಚ್ಛೆಯಿಲ್ಲದೆ, ಅವಳ ಹಿಡಿತದಿಂದ ಬಿಡಿಸಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ; ಅಷ್ಟೇ ಅಲ್ಲ, ಸಾಯಲೂ ಕೂಡ ಸಾಧ್ಯವಿಲ್ಲ! ಅಲ್ಲದೆ, ಶರೀರ ಮನಸ್ಸು ಬುದ್ಧಿ ಇವುಗಳಿಗೆ ಅತೀತವಾಗಿ ಇರುವವಳೂ ಮಾತೆಯೇ! ಜಾಗೃತ್, ಸ್ವಪ್ನ, ಸುಷುಪ್ತಿಯನ್ನು ದಾಟಿದ ತುರೀಯಾವಸ್ಥೆಯೂ ಮಾತೆಯೆ! ಇಲ್ಲಿಯವರೆಗೆ ತಾನು ಯಾವುದರ ಉಪಾಸನೆ ಮಾಡಿ ತನ್ನ ಹೃತ್ಪೂರ್ವಕವಾದ ಶ್ರದ್ಧಾಭಕ್ತಿಗಳನ್ನು ಸಮರ್ಪಿಸಿದನೋ ಆ ನಿರ್ಗುಣ ನಿರಾಕಾರ ಬ್ರಹ್ಮವೂ ಮಾತೆಯೆ! ಹರ-ಪಾರ್ವತಿಯರ ರೂಪದಲ್ಲಿ ನೆಲೆಸಿರುವ ಶಿವ-ಶಕ್ತಿಯರು ಬೇರೆಬೇರಲ್ಲ, ಒಂದೇ! ಬ್ರಹ್ಮವೂ ಬ್ರಹ್ಮದ ಶಕ್ತಿಯೂ ಬೇರೆಬೇರಲ್ಲ, ಒಂದೇ!

ತೋತಾಪುರಿಗೆ ಇಂತಹ ವಿಶಿಷ್ಟ ಬಗೆಯ ವಿರಾಡ್ರೂಪದ ದರ್ಶನವಾಯಿತು. ಆ ಕಡು ರಾತ್ರಿಯಲ್ಲಿ ಅವನಿಗೆ ಜಗನ್ಮಾತೆಯೇ ಸರ್ವತ್ರ ವ್ಯಾಪಿಸಿರುವಳೆಂಬ ಸತ್ಯದ ಸ್ಪಷ್ಟ ಅನುಭವವಾಯಿತು. ಈಗ ಅವನಿಗೆ ನಾಲ್ಕೂ ದಿಕ್ಕುಗಳಿಂದ ಕೇಳಿಬರುತ್ತಿದೆ—ಅಮ್ಮಾ ಅಮ್ಮಾ ಎಂಬ ಮಧುರನಿನಾದ. ಈಗ ಅವನೆದೆಯಲ್ಲಿ ಜಗನ್ಮಾತೆಯ ಮೇಲಿನ ಭಕ್ತಿ ತಾನೇತಾನಾಗಿದೆ. ತೋತಾಪುರಿ ಆನಂದದಿಂದ ಹಿಂದಿರುಗಿದ. ಸಾಯಲು ಹೋದವನು ಬದುಕಿ ಬಂದ. ಅವನ ಹೊಟ್ಟೆನೋವು ಈಗಲೂ ಇದೆ, ಆದರೆ ನೋವಿನ ಅನುಭವ ಮಾತ್ರ ಇಲ್ಲ! ಏಕೆಂದರೆ ಆನಂದಮಯಿಯಾದ ಜಗನ್ಮಾತೆಯ ಸಗುಣ–ಸಾಕಾರದ ಅನುಭವದಿಂದ ಮನಸ್ಸು ಉನ್ಮತ್ತವಾಗಿದೆ. ಭಕ್ತಿಭಾವದಿಂದ ಮೆಲ್ಲಮೆಲ್ಲನೆ ಹೆಜ್ಜೆಹಾಕುತ್ತ ಪಂಚವಟಿಗೆ ಬಂದ; ಧುನಿಯ ಬಳಿಯಲ್ಲಿ ಕುಳಿತ; ಉಳಿದ ರಾತ್ರಿಯೆಲ್ಲ ಜಗನ್ಮಾತೆಯ ಧ್ಯಾನದಲ್ಲೇ ನಿರತನಾದ.

ಮರುದಿನ ಮುಂಜಾನೆ ಎಂದಿನಂತೆ ಶ್ರೀರಾಮಕೃಷ್ಣರು ತೋತಾಪುರಿಯ ಯೋಗಕ್ಷೇಮ ವಿಚಾರಿಸಲು ಬಂದಾಗ ನೋಡುತ್ತಾರೆ, ಆತ ಸಂಪೂರ್ಣ ಬೇರೆಯೇ ಮನುಷ್ಯನಾಗಿ ಕಾಣುತ್ತಿದ್ದಾನೆ; ಅವನ ಇಡೀ ಮುಖಮಂಡಲ ದಿವ್ಯಾನಂದದಿಂದ ಪ್ರಫುಲ್ಲವಾಗಿದೆ! ತುಟಿಗಳಲ್ಲಿ ಮಂದಹಾಸ ಮಿನುಗುತ್ತಿದೆ! ಶರೀರದಲ್ಲಿ ಕಾಯಿಲೆಯ ಛಾಯೆಯೇ ಕಾಣುತ್ತಿಲ್ಲ! ತನ್ನ ಪಕ್ಕದಲ್ಲಿ ಬಂದು ಕುಳಿತುಕೊಳ್ಳುವಂತೆ ಅವನು ಶಿಷ್ಯನಿಗೆ ಸನ್ನೆ ಮಾಡಿದ. ಬಳಿಕ ಸಾವಕಾಶವಾಗಿ, ರಾತ್ರಿ ನಡೆದ ಘಟನೆಗಳನ್ನೆಲ್ಲ ಒಂದೊಂದಾಗಿ ವಿವರಿಸಿ, ಕೊನೆಗೆ ಹೇಳಿದ:

"ಈ ಕಾಯಿಲೆ ನನ್ನ ಪಾಲಿನ ಸ್ನೇಹಿತನಾಗಿಯೇ ಬಂದಿತೆನ್ನಬೇಕು. ನಿನ್ನೆ ರಾತ್ರಿ ನನಗೆ ಅತ್ಯದ್ಭುತ ರೀತಿಯಲ್ಲಿ ಜಗನ್ಮಾತೆಯ ದರ್ಶನವಾಯಿತು! ಮತ್ತು ಅವಳ ಕೃಪೆಯಿಂದ ಕಾಯಿಲೆ ಕಣ್ಮರೆಯಾಗಿಬಿಟ್ಟಿತು! ಇಷ್ಟು ದಿನವೂ ನಾನು ಅದೆಷ್ಟು ಮಂದಮತಿಯಾಗಿದ್ದೆ!

"ಅದಿರಲಿ; ನೀನೀಗ ನನಗೊಂದು ಕೆಲಸ ಮಾಡಿಕೊಡುವೆಯಾ? ನಿನ್ನ

ತಾಯಿಗೆ ಹೇಳಿ ನನಗಿಲ್ಲಿಂದ ಹೊರಡಲು ಅನುಮತಿ ಕೊಡಿಸಬೇಕು. ನಾನು ಎಲ್ಲಿಯೂ ಮೂರು ದಿನಕ್ಕಿಂತ ಹೆಚ್ಚು ನಿಲ್ಲುತ್ತಿದ್ದವನಲ್ಲ ಎಂಬುದು ನಿನಗೆ ತಿಳಿದೇ ಇದೆ. ಆದರೆ ನನಗೆ ಈ ಒಂದು ವಿಶಿಷ್ಟವಾದ ಪಾಠವನ್ನು ಕಲಿಸುವುದಕ್ಕಾಗಿಯೇ ತಾಯಿ ನನ್ನನ್ನು ಇಲ್ಲಿ ಹಿಡಿದಿಟ್ಟಿದ್ದಳು ಅಂತ ನನಗೆ ಈಗ ಅನ್ನಿಸುತ್ತಿದೆ. ಇದು ಹೀಗಲ್ಲದೆ ಬೇರೇನೂ ಅಲ್ಲವೇ ಅಲ್ಲ. ಏಕೆಂದರೆ ಈ ಹಿಂದೆಯೇ ಇಲ್ಲಿಂದ ಹೊರಡಲು ನಿರ್ಧರಿಸಿ ನಿನಗದನ್ನು ತಿಳಿಸುವ ಸಲುವಾಗಿ ಹಲವು ಸಲ ಬಂದೆ. ಆದರೆ ಪ್ರತಿ ಸಲವೂ ನನ್ನೊಳಗಿಂದ ಯಾವುದೋ ಒಂದು ಶಕ್ತಿ ನನ್ನ ಬಾಯಿಯನ್ನು ಒತ್ತಿ ಹಿಡಿದಂತಾಗಿ ಹೇಳಲೇ ಆಗುತ್ತಿರಲಿಲ್ಲ; ನಾನು ಹೇಳಬೇಕಾದ್ದನ್ನು ಹೇಳಗೊಡದೆ ಆ ಶಕ್ತಿಯು ಇನ್ನೇನೋ ಹೇಳುವಂತೆ ಮಾಡಿಬಿಡುತ್ತಿತ್ತು!"

ಶ್ರೀರಾಮಕೃಷ್ಣರು ಮುಗುಳ್ನಗುತ್ತ ಹೇಳಿದರು, "ನೋಡಿ, ನೀವು ಹಿಂದೆ ಜಗನ್ಮಾತೆಯನ್ನು ಒಪ್ಪುತ್ತಿರಲಿಲ್ಲ. ನಾನು ಚಪ್ಪಾಳೆ ತಟ್ಟಿಕೊಂಡು ನಾಮಸಂಕೀರ್ತನೆ ಮಾಡುತ್ತಿದ್ದರೆ ನೀವು, 'ರೊಟ್ಟಿ ತಟ್ಟುತ್ತಿದ್ದೀಯಾ ?' ಎಂದುಬಿಟ್ಟಿರಿ. ನಿಮ್ಮ ತರ್ಕದ ಮೂಲಕ ದೈವಶಕ್ತಿಯನ್ನು ಅಲ್ಲಗಳೆದಿರಿ. ಈಗ ನೀವು ದೇವಿಯನ್ನು ಕಣ್ಣಾರೆ ಕಂಡಿರಲ್ಲ! ಈಗ ನಿಮ್ಮ ಸಂದೇಹ ಪರಿಹಾರವಾಯಿತಲ್ಲವೆ ? ಅಗ್ನಿಯೂ ಅದರ ಸುಡುವ ಶಕ್ತಿಯೂ ಹೇಗೆ ಬೇರೆಬೇರಲ್ಲವೊ ಹಾಗೆಯೇ ಬ್ರಹ್ಮವೂ ಅದರ ಶಕ್ತಿಯೂ ಬೇರೆಬೇರಲ್ಲ ಎಂಬ ಸತ್ಯವನ್ನು ಅವಳು ನನಗೆ ಹಿಂದೆಯೇ ತಿಳಿಸಿಕೊಟ್ಟಿದ್ದಳು."

ತೋತಾಪುರಿಯ ಮುಖದಲ್ಲಿ ಸಂತೃಪ್ತಿಯ ಮುಗುಳ್ನಗೆ ಮಿನುಗಿತು.

ಈ ವೇಳೆಗೆ ದೇವಾಲಯದ ವಾದ್ಯಕುಟೀರದಿಂದ ಮಂಜುಳವಾದ ವಾದ್ಯ ನಿನಾದ ಅಲೆಅಲೆಯಾಗಿ ಹೊಮ್ಮಿತು. ಶಿವ-ರಾಮರಂತೆ ಗುರು-ಶಿಷ್ಯ ಸಂಬಂಧದಿಂದ ಬದ್ಧರಾದ ಮಹಾಪುರುಷರಿಬ್ಬರೂ ಜಗನ್ಮಾತೆಯ ದರ್ಶನಕ್ಕಾಗಿ ಮಂದಿರದತ್ತ ತೆರಳಿದರು. ಅಲ್ಲಿ ಜಗನ್ಮಾತೆಯ ಚಿನ್ಮಯ ಮೂರ್ತಿಯ ಮುಂದೆ ಇಬ್ಬರೂ ಬಾಗಿ ನಮಿಸಿದರು.

ಈಗ ತೋತಾಪುರಿ ಹೇಳಿದ: "ನಿನ್ನ ಬಾಯಿಂದ ತಾಯಿಯ ಮೇಲೆ ಒಂದೆರಡು ಹಾಡು ಕೇಳಬೇಕೆಂಬಾಸೆಯಾಗುತ್ತಿದೆ. ನನಗಾಗಿ ಹಾಡುವೆಯಾ ?"

ಶ್ರೀರಾಮಕೃಷ್ಣರು ಸಂತೋಷದಿಂದ ಒಪ್ಪಿ, ಅಲ್ಲೇ ಭವತಾರಿಣಿಯ ಮುಂದೆ ಕುಳಿತು ಹಾಡಲಾರಂಭಿಸಿದರು:

**ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು!**
**ಆರು ದರುಶನ ವೇದಶಾಸ್ತ್ರ ಪುರಾಣವರಿಯದು ಅವಳನು...**

ಶ್ರೀರಾಮಕೃಷ್ಣರ ದೇವದುರ್ಲಭ ಕಂಠದಿಂದ ಹೊಮ್ಮಿದ ಭಕ್ತಿರಸಪೂರ್ಣ ಗಾನವನ್ನು ಕೇಳುತ್ತ ಜ್ಞಾನಿ ತೋತಾಪುರಿ ಭಕ್ತನಾಗಿಬಿಟ್ಟ. ಕಣ್ಣುಗಳಲ್ಲಿ ಪ್ರೇಮಾಶ್ರು! ಹಾಡು ಮುಗಿದ ಕೂಡಲೇ ಇಬ್ಬರೂ ಮತ್ತೊಮ್ಮೆ ಜಗನ್ಮಾತೆಗೆ ಪ್ರಣಾಮ ಸಲ್ಲಿಸಿದರು. ಆಗ ಅವರಿಬ್ಬರ ಹೃದಯಗಳಲ್ಲೂ ಒಂದು ಸಮಾನ ಅನುಭವವಾಯಿತು—ಜಗನ್ಮಾತೆ ಅತ್ಯಂತ ಸಂತುಷ್ಟಳಾಗಿದ್ದಾಳೆ, ತೋತಾಪುರಿಗೆ ಅಲ್ಲಿಂದ ಹೊರಡಲು ಸಂತೋಷದಿಂದ ಅನುಮತಿ ನೀಡಿದ್ದಾಳೆ ಎಂದು.

ಇದಾದ ಕೆಲದಿನಗಳ ಬಳಿಕ ತೋತಾಪುರಿ ತನ್ನ ಪರಮಶಿಷ್ಯನಿಂದ ಬೀಳ್ಕೊಳ್ಳಲು ಬಂದ. ಶ್ರೀರಾಮಕೃಷ್ಣರು ತಮ್ಮಿಂದ ಕೊನೆಯದಾಗಿ ಅಗಲಲಿರುವ ಪ್ರಿಯ ಗುರುವಿನ ಮುಖವನ್ನೇ ದಿಟ್ಟಿಸುತ್ತ ನಿಂತರು. ಪ್ರಿಯ ಶಿಷ್ಯನ ಸಹವಾಸ ದಿಂದ ಪರಮಾನಂದ ಹೊಂದಿದ ಗುರುವು ಶ್ರೀರಾಮಕೃಷ್ಣರ ತೇಜಃಪುಂಜ ವದನಾರವಿಂದವನ್ನೇ ನೋಡುತ್ತ ನಿಂತ. ಅವರೀರ್ವರ ಆ ಭಾವಪೂರ್ಣ ನಯನ ಗಳು ಪರಸ್ಪರ ಏನನ್ನು ಮಾತನಾಡಿಕೊಂಡವೊ ಹೇಳಬಲ್ಲವರಾರು ? ಆ ಕ್ಷಣದಲ್ಲಿ ಅವರೀರ್ವರ ಹೃದಯಗಳಲ್ಲಿ ಎಂತಹ ಭಾವಲಹರಿಗಳೆದ್ದವೊ ಅರಿಯಬಲ್ಲವ ರಾರು ? ಈಗ ಶ್ರೀರಾಮಕೃಷ್ಣರು ಆಧ್ಯಾತ್ಮಿಕ ಜೀವನದ ಅತ್ಯುನ್ನತ ಅನುಭವ ಮಾಡಿಸಿಕೊಟ್ಟ ಗುರುವಿಗೆ ಭಕ್ತಿಯಿಂದ ಬಾಗಿ ನಮಿಸಿದರು. ವೇದವೇದಾಂತಗಳ ಸಾರವನ್ನು ಸತ್ಪಾತ್ರವೊಂದರಲ್ಲಿ ಸುರಿದು ಕೃತಾರ್ಥನಾದ ಗುರು ತನ್ನ ಶಿಷ್ಯನನ್ನು ಪರಮ ಪ್ರೀತಿಯಿಂದ ಆಲಿಂಗಿಸಿದ. ಬಳಿಕ ಪ್ರಿಯ ಶಿಷ್ಯನಿಂದ ಬೀಳ್ಕೊಂಡು, ದಕ್ಷಿಣೇಶ್ವರದ ಅಧಿಷ್ಠಾತೃ ದೇವತೆಯಾದ ಭವತಾರಿಣಿಗೆ ವಂದಿಸಿ ಮೆಲ್ಲನೆ ಪಶ್ಚಿಮಾಭಿಮುಖವಾಗಿ ನಡೆದ.

## ಅನುಬಂಧ–೧ ಬಂಗಾಳದ ಹೆಸರುಗಳು

ಚಟರ್ಜಿ, ಮುಖರ್ಜಿ, ಬ್ಯಾನರ್ಜಿ—ಇವು ಬಂಗಾಳದ ಕೆಲವು ಬ್ರಾಹ್ಮಣ ಮನೆತನಗಳು; ಕ್ರಮವಾಗಿ ಇವು ಚಟ್ಟೋಪಾಧ್ಯಾಯ, ಮುಖ್ಯೋಪಾಧ್ಯಾಯ (ಮುಖೋಪಾಧ್ಯಾಯ) ಮತ್ತು ವಂದ್ಯೋಪಾಧ್ಯಾಯ ಎಂಬುದರ ಹ್ರಸ್ವರೂಪ ಗಳು. ಭಟ್ಟಾಚಾರ್ಯ ಎನ್ನುವುದು ಮತ್ತೊಂದು ಬ್ರಾಹ್ಮಣ ಮನೆತನದ ಹೆಸರು. ಆದರೆ ಎಲ್ಲ ಬ್ರಾಹ್ಮಣರನ್ನೂ 'ಭಟ್ಟಾಚಾರ್ಯ' ಎಂದು ಸಂಬೋಧಿಸುವುದು ವಾಡಿಕೆ.

'ಪುಕುರ' ಎಂಬುದು 'ಪುಷ್ಕರ'ದ ತದ್ಭವ; ಅರ್ಥಾತ್ ಕೆರೆ ಅಥವಾ ಕೊಳ. 'ಕಾಮಾರ್‌ಪುಕುರ' ಎಂದರೆ ಕಮ್ಮಾರರ ಕೆರೆ. ಆ ಊರಿನಲ್ಲಿ ಕಮ್ಮಾರರು ಬಹು ಸಂಖ್ಯೆಯಲ್ಲಿದ್ದುದರಿಂದ ಆ ಹೆಸರು. ಮತ್ತು ಕೆರೆಯು ಹೆಸರಿನಿಂದ ಊರಿನ ಹೆಸರು ಬಂದಿದೆ—'ತಾವರೆಕೆರೆ' 'ತರೀಕೆರೆ' ಮೊದಲಾದುವಿದ್ದಂತೆ.

ಹೂದೋಟ, ಉದ್ಯಾನ ಎಂಬರ್ಥದ 'ವಾಟಿ' ಅಥವಾ 'ವಾಟಿಕೆ'ಯಿಂದ ಬಂಗಾಳದ 'ಬಾಟಿ' ಉದ್ಭವಿಸಿದೆ. ಬಂಗಾಳಿಯಲ್ಲಿ 'ವ'ಕಾರ 'ಬ'ಕಾರಗಳು ಬೇರೆಯಲ್ಲ, ಎಲ್ಲವೂ 'ಬ'ಕಾರವೇ. ಆದ್ದರಿಂದ 'ಜಯರಾಮ ವಾಟಿ'ಯನ್ನು 'ಜಯರಾಂಬಾಟಿ' ಎನ್ನುತ್ತಾರೆ. 'ಅ'ಕಾರವು ಸ್ವಲ್ಪ ಮಟ್ಟಿಗೆ 'ಒ'ಕಾರವಾಗುವುದ ರಿಂದ 'ವರಾಹನಗರ'ವು 'ಬಾರಾನಾಗೋರ್' ಆಗುತ್ತದೆ. 'ಯ' ಬದಲಿಗೆ 'ಜ' ಎನ್ನುವುದರಿಂದ 'ಯತಿ' ಎನ್ನುವಾಗ 'ಜತಿ' ಎನ್ನುತ್ತಾರೆ.

'ಹಾಲ್ದಾರ' ಎಂಬುದು ನಮ್ಮಲ್ಲಿನ 'ಇನಾಂದಾರ'ನಿಗೆ ಸಮನಾದ ಒಂದು ಸ್ಥಾನ, ಬಿರುದು. ಅವನ ಹೆಸರಿನ ಕೆರೆಯೇ 'ಹಾಲ್ದಾರ ಪುಕುರ'.

'ಹಲಧಾರಿ'ಗೂ (ಬಲರಾಮ) 'ಹಾಲ್ದಾರ'ನಿಗೂ ಸಂಬಂಧವಿಲ್ಲ.

'ಕ್ಷ' ಎಂಬುದನ್ನು 'ಖ' ಎಂದು ಉಚ್ಚರಿಸುವುದರಿಂದ 'ಕ್ಷುದಿರಾಮ'ನು 'ಖುದಿರಾಮ' ಎನ್ನಿಸಿಕೊಳ್ಳುತ್ತಾನೆ. 'ಕ್ಷುದಿ' ಎಂಬುದು ಬಂದದ್ದು 'ಹಸಿವು' ಎಂಬರ್ಥದ ಧಾತುವಿನಿಂದ. ಹುಟ್ಟಿದ ಮಕ್ಕಳಾವುವೂ ಉಳಿದುಕೊಳ್ಳದೆ ಎಳೆತನ ದಲ್ಲೇ ತೀರಿಹೋಗುತ್ತಿದ್ದರೆ, ಅವುಗಳಿಗೆ 'ಕಲ್ಲಪ್ಪ' 'ತಿಪ್ಪೇಸ್ವಾಮಿ' ಎಂಬ ಹೆಸರು ಗಳನ್ನಿಡುವ ರೂಢಿ ನಮ್ಮಲ್ಲಿರುವಂತೆಯೇ ಬಂಗಾಳದಲ್ಲೂ ಇದೆ. 'ಕ್ಷುದಿರಾಮ'ನ ಹೆಸರಿನ ಮೂಲ ಇದೇ ಇರಬೇಕು ಎಂಬುದೊಂದು ಊಹೆ.

'ಕನ್ಹೈಯಾ' 'ಕನ್ಹಾಯ್'—ಇವು ಉತ್ತರಭಾರತದಲ್ಲಿ ಶ್ರೀಕೃಷ್ಣನನ್ನು ಮುದ್ದಿ ನಿಂದ ಕರೆಯುವ ಹೆಸರುಗಳು.

## ಅನುಬಂಧ–೨ ಶ್ರೀಚೈತನ್ಯ ಮಹಾಪ್ರಭು

ಇವನು ಉತ್ತರಭಾರತದಲ್ಲಿ, ಅದರಲ್ಲೂ ಮುಖ್ಯವಾಗಿ ಬಂಗಾಳದಲ್ಲಿ, ಭಕ್ತಿಪಂಥದ ಪ್ರವರ್ತಕ; ಹರಿನಾಮ ಸಂಕೀರ್ತನೆಯನ್ನು ಅತ್ಯಂತ ಜನಪ್ರಿಯ ಗೊಳಿಸಿ ಹೊಸ ಸಾಮಾಜಿಕ ಚಳವಳಿಯನ್ನೇ ಹುಟ್ಟು ಹಾಕಿದ ಸಂತ.

೧೪೮೫ ರಲ್ಲಿ ಬಂಗಾಳದ ನವದ್ವೀಪ ಎಂಬಲ್ಲಿ ಈತನ ಜನನ. ಈತನ ಅಣ್ಣ ವಿಶ್ವರೂಪ ಎಂಬವನು, ಚಿಕ್ಕಂದಿನಲ್ಲಿಯೇ ದಕ್ಷಿಣ ಭಾರತದ ಮಠವೊಂದಕ್ಕೆ ಸೇರಿ ಸಂನ್ಯಾಸಿಯಾದ. ಶ್ರೀಚೈತನ್ಯನ ಬಾಲ್ಯದ ಹೆಸರು ವಿಶ್ವಂಭರ. 'ನಿಮಾಯ್' ಎಂಬುದು ಮುದ್ದಿನ ಹೆಸರು. ಈತನ ಸ್ವರ್ಣವರ್ಣದಿಂದಾಗಿ ಗೌರ, ಗೌರಾಂಗ ಎಂಬ ಹೆಸರುಗಳೂ ಬಂದುವು.

ಚೈತನ್ಯನು (ಆಗ 'ನಿಮಾಯ್ ಪಂಡಿತ') ಚಿಕ್ಕವಯಸ್ಸಿನಲ್ಲೇ ತರ್ಕ-ವ್ಯಾಕರಣಗಳಲ್ಲಿ ಅತಿಶಯ ಪಾಂಡಿತ್ಯವನ್ನು ಗಳಿಸಿ ನವದ್ವೀಪದಲ್ಲಿ ಪಾಠಶಾಲೆ ಯೊಂದನ್ನು ಪ್ರಾರಂಭಿಸಿದ. ಅವನ ಕೀರ್ತಿ ಹರಡಿ ನೂರಾರು ಜನ ಆತನ ಶಿಷ್ಯರಾದರು. ಅವನು ಸಂಸ್ಕೃತ ವ್ಯಾಕರಣದ ಮೇಲೆ ಬರೆದ ಒಂದು ಪುಸ್ತಕ ತುಂಬ ಜನಪ್ರಿಯವಾಯಿತು.

ಅವನು ತನ್ನ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಗಯೆಗೆ ಯಾತ್ರೆ ಹೋಗಿದ್ದಾಗ ಅವನಲ್ಲೊಂದು ಅದ್ಭುತ ಪರಿವರ್ತನೆಯುಂಟಾಯಿತು. ಅಲ್ಲಿ ವಿಷ್ಣುಪಾದವನ್ನು ಪೂಜಿಸುತ್ತಿದ್ದಾಗ ಆತ ಶ್ರೀಹರಿಯ ದರ್ಶನಾನುಭವ ಪಡೆದ. ಇದೇ ಸಮಯದಲ್ಲಿ ಗಯೆಗೆ ಬಂದಿದ್ದ ಈಶ್ವರಪುರಿ ಎಂಬ ಸಂನ್ಯಾಸಿಯಿಂದ ಅವನು ಕೃಷ್ಣಪೂಜಾವಿಧಾನ ದಲ್ಲಿ ದೀಕ್ಷಿತನಾದ.

ನವದ್ವೀಪಕ್ಕೆ ಮರಳಿದ ಶ್ರೀಚೈತನ್ಯನು ತನ್ನ ಸರ್ವಸ್ವವನ್ನೂ ತ್ಯಜಿಸಿ ಶ್ರೀಹರಿ ಸಂಕೀರ್ತನೆಯಲ್ಲಿ ಮುಳುಗಿಬಿಟ್ಟ. ಕೇಶವಭಾರತಿ ಎಂಬ ಗುರುವಿನಿಂದ ಸಂನ್ಯಾಸ ವನ್ನು ಸ್ವೀಕರಿಸಿದ. ಆತನ ಅದ್ಭುತ ಕೃಷ್ಣಪ್ರೇಮ, ಅಸಾಧಾರಣ ಕರುಣೆ, ಎಂತಹ ದುಷ್ಟರನ್ನೂ ಕ್ಷಣಾರ್ಧದಲ್ಲಿ ಪರಿವರ್ತನೆಗೊಳಿಸುವ ಅಪೂರ್ವ ಶಕ್ತಿ–ಇವೆಲ್ಲವೂ ಆತ ಅವತಾರಪುರುಷನೆಂಬುದನ್ನು ಸಾಬೀತುಮಾಡಿದುವು. ಶ್ರೀಚೈತನ್ಯನು ಏಕ ಶರೀರದಲ್ಲಿ ರಾಧಾಕೃಷ್ಣರ ಸಮ್ಮಿಲನದ ಪ್ರತೀಕವಾದ. ಆತನ ಖ್ಯಾತಿ ಪಸರಿಸಿ ಹಲವಾರು ಭಕ್ತಸಹಚರರು—ಶಿಷ್ಯರು ಆತನನ್ನು ಸೇರಿಕೊಂಡರು. ನಿತ್ಯಾನಂದ, ಅದ್ವೈತ ಗೋಸ್ವಾಮಿ—ಇವರಿಬ್ಬರು ಆತನ ಪ್ರಮುಖ ಸಹಚರರು.

ತನ್ನ ಜೀವನದ ಕಡೆಯ ಹನ್ನೆರಡು ವರ್ಷಗಳ ಕಾಲ ಶ್ರೀಚೈತನ್ಯನು ಹೆಚ್ಚುಕಡಮೆ ಸದಾ ಸಮಾಧಿಸ್ಥಿತಿಯಲ್ಲಿ ಮುಳುಗಿಬಿಟ್ಟಿದ್ದ. ಕೃಷ್ಣಪ್ರೇಮದಿಂದ ಮತ್ತನಾಗಿ ಹುಚ್ಚನಂತೆ ನರ್ತಿಸುತ್ತಿದ್ದ. ಆತ ತನ್ನ ಕೊನೆಯ ದಿನಗಳನ್ನು ಕಳೆದದ್ದು ಪುರೀಕ್ಷೇತ್ರದಲ್ಲಿ. ಆತನ ಅಂತ್ಯ ಹೇಗಾಯಿತೆಂಬುದು ನಿಗೂಢವಾಗಿಯೇ ಇದೆ.

ದೇವಾಲಯವೊಂದನ್ನು ಪ್ರವೇಶಿಸಿದ ಅವನು ಹೊರಕ್ಕೇ ಬರಲಿಲ್ಲವೆಂದು ಐತಿಹ್ಯ ಹೇಳುತ್ತದೆ. ಪುರೀಕ್ಷೇತ್ರ ಇಂದಿಗೂ ಶ್ರೀಚೈತನ್ಯ ಮಹಾಪ್ರಭುವಿನ ದಿವ್ಯಪ್ರಭಾವದ ತರಂಗಗಳಿಂದ ಸ್ಪಂದಿಸುತ್ತಿದೆಯೆನ್ನಬಹುದು.

ಶ್ರೀಚೈತನ್ಯನ ದಿವ್ಯಪ್ರೇಮದಿಂದ ಶ್ರೀರಾಮಕೃಷ್ಣರು ತುಂಬ ಪ್ರಭಾವಿತ ರಾಗಿದ್ದರು. ಭಗವದ್ಭಾವದ ಅನುಭವಗಳಿಗೆ ಸಂಬಂಧಿಸಿದಂತೆ ಆತನ ಜೀವನಕ್ಕೂ ಶ್ರೀರಾಮಕೃಷ್ಣರ ಜೀವನಕ್ಕೂ ಹಲವು ಸಾಮ್ಯಗಳಿರುವುದನ್ನು ಗುರುತಿಸಬಹುದು.

* * * *

## ಗ್ರಂಥಋಣ

*Sri Ramakrishna–The Great Master (Vol.1 & 2)*
– (Tr.) Swami Jagadananda

*Life of Sri Ramakrishna*
– Advaita Ashrama

*Sri Ramakrishna and His Disciples*
– Christopher Isherwood

*First Meetings with Sri Ramakrishna*
– Swami Prabhananda

*ಶ್ರೀರಾಮಕೃಷ್ಣ ಲೀಲಾಪ್ರಸಂಗ (ಭಾಗಗಳು ೧-೫)*
– (ಅನು.) ಸ್ವಾಮಿ ಪ್ರಣವೇಶಾನಂದ

*ಶ್ರೀರಾಮಕೃಷ್ಣರು ಮತ್ತು ಅವರ ಶಿಷ್ಯರು*
– (ಅನು.) ಸ. ವೆಂಕಟಾಚಲಪತಿ

*ಶ್ರೀಶಾರದಾದೇವೀ ಜೀವನಗಂಗಾ*
– ಸ್ವಾಮಿ ಪುರುಷೋತ್ತಮಾನಂದ

ಶ್ರೀರಾಮಕೃಷ್ಣರಿಗೆ ವೇದಾಂತವಾಗಲಿ ತಾತ್ತ್ವಿಕ ಸಿದ್ಧಾಂತಗಳಾಗಲಿ ಗೊತ್ತಿರಲಿಲ್ಲ . ಆ ಮಹಾಜೀವನವನ್ನು ನಡೆಸುವುದಷ್ಟೇ ಅವರಿಗೆ ಬೇಕಿತ್ತು . ಅದನ್ನು ವಿವರಿಸುವ ಕೆಲಸವನ್ನು ಅವರು ಇತರರಿಗೆ ಬಿಟ್ಟರು.

ಪ್ರತಿಯೊಬ್ಬ ವ್ಯಕ್ತಿಗೂ ನಾವು ಅವನದ್ದೇ ಆದ 'ಭಾಷೆ'ಯಲ್ಲಿ ಬೋಧಿಸಬೇಕು ಎಂದು ಹೇಳಬಲ್ಲ ಎದೆಗಾರಿಕೆಯಿದ್ದ ಏಕೈಕ ವ್ಯಕ್ತಿಯೆಂದರೆ ರಾಮಕೃಷ್ಣ ಪರಮಹಂಸರು.

ಧರ್ಮದಲ್ಲಿನ ಎಲ್ಲ ಭ್ರಷ್ಟಾಚಾರವನ್ನೂ ನಿವಾರಣೆ ಮಾಡಲು ಸ್ವಯಂ ಭಗವಂತನೇ ಈ ಯುಗದಲ್ಲಿ ಶ್ರೀರಾಮಕೃಷ್ಣ ಶರೀರಿಯಾಗಿ ಇಳೆಗವತರಿಸಿದ್ದಾನೆ. ಅವರು ಕರುಣಿಸಿದ ವಿಶ್ವವಿಶಾಲ ಬೋಧನೆಗಳನ್ನು ವಿಶ್ವದಾದ್ಯಂತ ಹರಡಿದಲ್ಲಿ ಆದರಿಂದ ಮಾನವತೆಗೂ ವಿಶ್ವಕ್ಕೂ ಒಳಿತಾಗುತ್ತದೆ. ಅಷ್ಟೊಂದು ಮಹಿಮಾನ್ವಿತನೂ ಅದ್ಭುತನೂ ಆದ ಸಮನ್ವಯಾಚಾರ್ಯನನ್ನು ಭಾರತವು ಎಷ್ಟೋ ಶತಮಾನಗಳಿಂದಲೂ ನಿರ್ಮಾಣ ಮಾಡಿರಲಿಲ್ಲ .

- ಸ್ವಾಮಿ ವಿವೇಕಾನಂದ

ಶ್ರೀರಾಮಕೃಷ್ಣ ಆಶ್ರಮ, ಬೆಂಗಳೂರು